ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ನಂ. ೩೯

ಶ್ರೀ ವೇದವ್ಯಾಸರಿಂದ ರಚಿತವಾದ

# ನಾರದೀಯ ಮಹಾಪುರಾಣ

(ಕನ್ನಡ ಅರ್ಥಾನುವಾದ ವಿವರಣೆಗಳ ಸಹಿತ)

ಭಾಗ—೨

(೧೭—೪೧ ಅಧ್ಯಾಯಗಳು)



ಮಹಾವಿದ್ವಾನ್, ವಿದ್ವನ್ಮಣಿ,

**ದೊಡ್ಡಬಳ್ಳಾಪುರಂ ವಾಸುದೇವಾಚಾರ್ಯ,**

ಅನುವಾದಕ.

ಮೈಸೂರು

ಶ್ರೀ ಚಾಮುಂಡೇಶ್ವರೀ ಎಲೆಕ್ಟ್ರಿಕ್ ಪ್ರೆಸ್

೧೯೪೬

# ಒಂದು ಮಾತು

ಪುರಾಣಗಳ ಉದ್ದೇಶ ಮೊದಲಾದುವುಗಳನ್ನು ಮೊದಲನೆಯ ಸಂಪುಟದ ಆದಿಯಲ್ಲಿ ವಿವರಿಸಿದೆ. ಅಲ್ಲಿ ಹೇಳಿರುವಂತೆ ಈ ಸಂಪುಟದಲ್ಲಿ ಸಂಸಾರದ ತಿರಳು, ಅದರ ಕಾರಣ, ಅದನ್ನು ಹೋಗಲಾಡಿಸಿಕೊಳ್ಳುವ ಉಪಾಯ, ಹರಿಯ ಅನುಗ್ರಹದಿಂದ ಭಕ್ತರಿಗೆ ಲಭಿಸುವ ಮೋಕ್ಷ, ಅದಕ್ಕೆ ಸಾಧನವಾದ ಕರ್ಮ, ಜ್ಞಾನ, ಭಕ್ತಿ, ನಾನಾವಿಧವ್ರತ ಮುಂತಾದ ಬಹು ಮುಖ್ಯ ವಿಷಯ ಗಳು ಅನೇಕ ಇತಿಹಾಸಗಳ ಉದಾಹರಣೆಯಿಂದ ಮನಸ್ಸಿಗೆ ನಾಟುವಂತೆ ವಿವರಿಸಲ್ಪಟ್ಟಿವೆ.

೩೨ನೆಯ ಅಧ್ಯಾಯದಲ್ಲಿ ಮನುಷ್ಯಜನ್ಮ ಬರುವುದಕ್ಕೆ ಹಿಂದೆ ಜೀವನಿಗೆ ನಾನಾವಿಧ ಜನ್ಮಗಳು ಬರುವರೀತಿ, ಮಾನವಜನ್ಮದಲ್ಲಿ ಗರ್ಭವಾಸದ ಬಗೆ, ಹುಟ್ಟಿದಮೇಲಿನ ನಡೆವಳಿಕೆಗಳು ಬಹುಚೆನ್ನಾಗಿ ಚಿತ್ರಿಸಲ್ಪಟ್ಟಿವೆ. ಮುಂದಿನ ಅಧ್ಯಾಯಗಳಲ್ಲಿ ಯಮಮಾರ್ಗ, ನರಕಯಾತನೆ ಮುಂತಾದುವನ್ನೂ ಕೊನೆಯ ಅಧ್ಯಾಯದಲ್ಲಿ ಕಲಿಯುಗದ ಜೀವನವೈಖರಿಯನ್ನೂ ಸ್ವಾರಸ್ಯವಾಗಿ ವಿವರಿಸಿದೆ. ಇವುಗಳನ್ನು ಓದುವವರು ಬದುಕಿನ ಸ್ವರೂಪವನ್ನು ಚೆನ್ನಾಗಿ ಮನಗಂಡು ಧರ್ಮಮಾರ್ಗದಲ್ಲಿ ಪ್ರವೃತ್ತರಾಗಿ ಶ್ರೇಯಸ್ಸನ್ನು ಪಡೆಯುವರು.

ಈ ಸಂಪುಟದಲ್ಲಿ ೧೭ನೆಯ ಅಧ್ಯಾಯದಿಂದ ೪೧ನೆಯ ಅಧ್ಯಾಯ ಪೂರ್ತಿ ಯಾಗಿ ೨೫ ಅಧ್ಯಾಯಗಳು ಅಡಕವಾಗಿವೆ. ಇಲ್ಲಿಗೆ ಪೂರ್ವಭಾಗದ ಪ್ರಥಮ ಪಾದವು ಮುಗಿಯಿತು.

ಸಂಸ್ಕೃತಭಾಷೆಯಲ್ಲಿ ಗಂಭೀರವಾಗಿರುವ ಪುರಾಣವನ್ನು ದೇಶಭಾಷೆಯಲ್ಲಿ ಬರೆಯಿಸಿ ಪರಮಶ್ರೇಯಸ್ಸಿಗೆ ಸಾಧಕವಾದ ಜ್ಞಾನಜ್ಯೋತಿಯು ಕನ್ನಡನಾಡಿನ ಲ್ಲೆಲ್ಲಾ ಬೆಳಗುವಂತೆ ಮಾಡಿರುವ ಆಳುವ ಮಹಾಸ್ವಾಮಿಯವರಾದ **ಶ್ರೀ ಜಯ ಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ. ಸಿ. ಎಸ್ .ಐ.** ರವರ ಸನ್ನಿಧಾನದಲ್ಲಿ ಕೃತಜ್ಞತೆಯನ್ನರ್ಪಿಸಿ ಮಹಾಸ್ವಾಮಿಯವರ ಘನವಾದ ಉದ್ದೇಶವನ್ನು ಪ್ರಜೆಗಳು ಸಾರ್ಥಕಗೊಳಿಸಲೆಂದು ಹಾರೈಸಿ, ನಮ್ಮ ಮಹಾಪ್ರಭು ಗಳಿಗೆ ಭಗವಂತನು ಆಯುರಾರೋಗ್ಯಸತ್ಸಂತಾನಾದಿಗಳನ್ನನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು,
ವ್ಯಯಸಂ॥ ಮಾರ್ಗಶೀರ್ಷ ಕೃಷ್ಣದ್ವಾದಶೀ,
೨೦-೧೨-೧೯೪೬.

ಅನುವಾದಕ,
ಮಹಾವಿದ್ವಾನ್ ವಿದ್ವನ್ಮಣಿ,
**ದೊಡ್ಡಬಳ್ಳಾಪುರಂ ವಾಸುದೇವಾಚಾರ್ಯ**

# ವಿಷಯಾನುಕ್ರಮಣಿಕೆ

ಪುಟಸಂಖ್ಯೆ

**ಹದಿನೇಳನೆಯ ಅಧ್ಯಾಯವು**—
ಮಾರ್ಗಶೀರ್ಷ ಕೃಷ್ಣ ದ್ವಾದಶಿಯಿಂದ ಪ್ರತಿ ತಿಂಗಳಿನ ಶುಕ್ಲ ದ್ವಾದಶಿಗಳಲ್ಲಿ ಮಾಡಬೇಕಾದ ವ್ರತಗಳ ವಿಧಾನ, ಫಲ, ಮಾಹಾತ್ಮ್ಯ, ಉದ್ಯಾಪನೆ ಮುಂತಾದುವುಗಳು. 1-25

**ಹದಿನೆಂಟನೆಯ ಅಧ್ಯಾಯವು**—
ಮಾರ್ಗಶೀರ್ಷ ಪೂರ್ಣಿಮೆಯಿಂದ ಹನ್ನೆರಡು ಮಾಸಗಳ ಪೂರ್ಣಿಮೆಗಳಲ್ಲಿ ಮಾಡಬೇಕಾದ ಲಕ್ಷ್ಮೀನಾರಾಯಣ ವ್ರತ, ವಿಧಾನ ಮತ್ತು ಉದ್ಯಾಪನೆ ಮುಂತಾದುವುಗಳು. 26-32

**ಹತ್ತೊಂಭತ್ತನೆಯ ಅಧ್ಯಾಯವು**—
ವಿಷ್ಣುದೇವಾಲಯದಲ್ಲಿ ಕಾರ್ತಿಕ ಶುಕ್ಲ ದಶಮಿಯ ದಿನ ಮಾಡಬೇಕಾದ ಧ್ವಜಾರೋಪಣವ್ರತವಿಧಾನಾದಿಗಳು. 33-43

**ಇಪ್ಪತ್ತನೆಯ ಅಧ್ಯಾಯವು**—
ಚಂದ್ರವಂಶದ ಸುಮತಿರಾಜನ ಚರಿತ್ರೆ.
ಆ ರಾಜನು ವಿಭಾಂಡಕಮುನಿಗೆ ತನ್ನ ಪೂರ್ವ ಜನ್ಮವೃತ್ತಾಂತವನ್ನು ಹೇಳಿ ಧ್ವಜಾರೋಪಣವ್ರತದ ಮಹಿಮಾತಿಶಯವನ್ನು ವರ್ಣಿಸಿರುವುದು. 44-62

**ಇಪ್ಪತ್ತೊಂದನೆಯ ಅಧ್ಯಾಯವು**—
ಮಾರ್ಗಶೀರ್ಷ ಶುಕ್ಲಪಕ್ಷ ಏಕಾದಶಿಯಿಂದ ಪೂರ್ಣಿಮೆಯ ವರೆಗೆ ಐದು ದಿನಗಳಲ್ಲಿ ಮಾಡುವ ವಿಷ್ಣುಪಂಚಕವ್ರತ ವಿಧಾನಾದಿಗಳು. 63-68

**ಇಪ್ಪತ್ತೆರಡನೆಯ ಅಧ್ಯಾಯವು**—
ಮಾಸೋಪವಾಸವ್ರತವಿಧಾನಾದಿಗಳು. 69-75

ಪುಟಸಂಖ್ಯೆ

**ಇಪ್ಪತ್ತಮೂರನೆಯ ಅಧ್ಯಾಯವು—**

ಏಕಾದಶೀವ್ರತದ ಮಹಿಮೆ, ಅದರ ವಿಧಾನ.

ಗಾಲವಮುನಿ ಭದ್ರಶೀಲರ ಸಂವಾದ. 76-97

**ಇಪ್ಪತ್ತನಾಲ್ಕನೆಯ ಅಧ್ಯಾಯವು—**

ವರ್ಣಾಶ್ರಮಧರ್ಮ.

ಆಪದ್ಧರ್ಮ. 98-105

**ಇಪ್ಪತ್ತೈದನೆಯ ಅಧ್ಯಾಯವು—**

ದ್ವಿಜರಿಗೆ ಗರ್ಭಾಧಾನಾದಿ ಸಂಸ್ಕಾರ, ಅವಕ್ಕೆ ವಿಹಿತ ಕಾಲ, ಅವುಗಳ ವಿಧಾನ.

ಗೌಣಮುಖ್ಯೋಪನಯನಕ್ರಮ.

ಬ್ರಹ್ಮಚಾರಿಯು ಮಾಡಬೇಕಾದ ಗುರುಕುಲವಾಸಾದಿ ವಿವರಣೆ. 106-120

**ಇಪ್ಪತ್ತಾರನೆಯ ಅಧ್ಯಾಯವು—**

ವಿವಾಹಯೋಗ್ಯ ಕನ್ಯೆಯ ಲಕ್ಷಣ.

ವಿವಾಹಪ್ರಭೇದ, ಅವುಗಳ ತಾರತಮ್ಯ.

ಗೃಹಸ್ಥಧರ್ಮ. 121-131

**ಇಪ್ಪತ್ತೇಳನೆಯ ಅಧ್ಯಾಯವು—**

ಗೃಹಸ್ಥ ವಾನಪ್ರಸ್ಥ ಯತಿಗಳ ಧರ್ಮನಿರೂಪಣೆ. 132-155

**ಇಪ್ಪತ್ತೆಂಟನೆಯ ಅಧ್ಯಾಯವು—**

ಶ್ರಾದ್ಧವಿಧಾನಾದಿಗಳು. 156-175

**ಇಪ್ಪತ್ತೊಂಭತ್ತನೆಯ ಅಧ್ಯಾಯವು—**

ಶ್ರೌತಸ್ಮಾರ್ತವ್ರತದಾನಾದಿಗಳಿಗೆ ಪ್ರಶಸ್ತವಾದ ತಿಥಿಗಳ ನಿರ್ಣಯ.

ಹನ್ನೆರಡು ಸಂಕ್ರಮಣಗಳ ಪರ್ವಕಾಲ.

ದಶಮ್ಯಾದಿ ದಿನತ್ರಯ ಕರ್ತವ್ಯಾದಿಗಳು 176-189

ಪುಟಸಂಖ್ಯೆ

**ಮೂವತ್ತನೆಯ ಅಧ್ಯಾಯವು—**

ಪಂಚಮಹಾಪಾತಕಗಳಿಗೆ ಪ್ರಾಯಶ್ಚಿತ್ತ.
ಸುವರ್ಣಮುಂತಾದ ಅಳತೆಗಳ ವಿವರಣೆ.
ಗೋಹತ್ಯಾದಿಗಳಿಗೆ ಪ್ರಾಯಶ್ಚಿತ್ತ.
ಭಕ್ತಿಪೂರ್ವಕ ಹರಿಪೂಜೆಯ ಮಹಿಮೆ.
ಮಾನವನ ಕರ್ತವ್ಯ. 190–214

**ಮೂವತ್ತೊಂದನೆಯ ಅಧ್ಯಾಯವು—**

ಯಮಮಾರ್ಗವಿವರಣೆ.
ಅಲ್ಲಿ ಪುಣ್ಯವಂತರು ಮತ್ತು ಪಾಪಿಗಳಿಗೆ ಆಗುವ ಸುಖದುಃಖಗಳು, ಯಮಧರ್ಮರ ಸ್ವರೂಪ, ಶಿಕ್ಷೆಯ ರೀತಿ ಮುಂತಾದುವುಗಳು. 215–230

**ಮೂವತ್ತೆರಡನೆಯ ಅಧ್ಯಾಯವು—**

ಜೀವರಿಗೆ ನಾನಾಜನ್ಮಗಳು ಅನಂತರ ಮನುಷ್ಯಜನ್ಮ ಇವುಗಳು ಬರುವ ಬಗೆ.
ಆಯಾಯಾ ಜನ್ಮಗಳಲ್ಲಿ ಆಗುವ ಅನುಭವ.
ಮರಣಕಾಲದಲ್ಲಿ ಆಗುವ ಯಾತನೆ.
ಸಂಸಾರನಿವೃತ್ತ್ಯುಪಾಯವು. 231–248

**ಮೂವತ್ತಮೂರನೆಯ ಅಧ್ಯಾಯವು—**

ಸಂಸಾರಿಗಳು ಮುಕ್ತರಾಗುವ ಬಗೆ;
ಕರ್ಮ, ಜ್ಞಾನ, ಭಕ್ತಿಯೋಗಗಳ ವಿವರಣೆ.
ಪ್ರಣವಸ್ವರೂಪ, ಅದರ ಅರ್ಥ ಇತ್ಯಾದಿ. 249–284

**ಮೂವತ್ತನಾಲ್ಕನೆಯ ಅಧ್ಯಾಯವು—**

ಭಕ್ತಿಯ ಲಕ್ಷಣ ಅದರ ನಾನಾಪ್ರಕಾರಗಳು, ಫಲ ಮುಂತಾದುವುಗಳು. 285–301

**ಮೂವತ್ತೈದನೆಯ ಅಧ್ಯಾಯವು—**

ವೇದಮಾಲಿಯೆಂಬ ದ್ವಿಜನ ಚರಿತ್ರೆಯು. 302–318

ಪುಟಸಂಖ್ಯೆ

**ಮೂವತ್ತಾರನೆಯ ಅಧ್ಯಾಯವು—**

ಯಜ್ಞಮಾಲಿ ಸುಮಾಲಿಗಳ ಚರಿತ್ರೆ, ವಿಷ್ಣುಸೇವೆಯ ಪ್ರಭಾವದಿಂದ ಅವರು ಸದ್ಗತಿಯನ್ನು ಹೊಂದಿದುದು. 319–332

**ಮೂವತ್ತೇಳನೆಯ ಅಧ್ಯಾಯವು—**

ಗುಳಿಕನೆಂಬ ಬೇಡನ ಚರಿತ್ರೆಯು.

ಅವನಿಗೆ ಉತ್ತಂಕಮುನಿಯು ಮಾಡಿದ ತತ್ವೋಪದೇಶ ಮತ್ತು ಅವರಿಂದ ಗುಳಿಕನಿಗಾದ ಸದ್ಗತಿ. 333–348

**ಮೂವತ್ತೆಂಟನೆಯ ಅಧ್ಯಾಯವು—**

ಉತ್ತಂಕಮುನಿಯು ಮಾಡಿದ ಹರಿಸ್ತೋತ್ರ.

ಅವರಿಗಾದ ಹರಿಯದರ್ಶನ, ಬದರಿಗೆ ಪ್ರಯಾಣ ಮತ್ತು ಸದ್ಗತಿ ಮುಂತಾದುವು. 349–364

**ಮೂವತ್ತೊಂಭತ್ತನೆಯ ಅಧ್ಯಾಯವು—**

ಹರಿಮಂದಿರದಲ್ಲಿ ಸಂಮಾರ್ಜನೆಮಾಡಿ, ದೀಪವನ್ನು ಹಚ್ಚುವುದರಲ್ಲಿ ಆಸಕ್ತನಾದ ಜಯಧ್ವಜರಾಜನ ಚರಿತ್ರೆ.

ಸಾಲಗ್ರಾಮ ಮತ್ತು ತುಳಸಿಯ ಮಹಿಮೆ ಮುಂತಾದುವು. 365–380

**ನಲವತ್ತನೆಯ ಅಧ್ಯಾಯವು—**

ಇಂದ್ರ ಬೃಹಸ್ಪತಿಗಳ ಸಂವಾದ.

ಸುಧರ್ಮನು ಇಂದ್ರನಿಗೆ ಹೇಳಿದ ಮನ್ವಂತರಾದಿಗಳ ವಿವರಣೆ.

ಸುಧರ್ಮನ ಪೂರ್ವಜನ್ಮದ ವೃತ್ತಾಂತ. 381–394

**ನಲವತ್ತೊಂದನೆಯ ಅಧ್ಯಾಯವು—**

ನಾಲ್ಕು ಯುಗಗಳ ಧರ್ಮಸಂಗ್ರಹ.

ಕಲಿಯುಗಸ್ಥಿತಿಯ ವಿವರಣೆ.

ಕಲಿಯುಗದಲ್ಲಿ ಸದ್ಗತಿಗೆ ಹರಿನಾಮಸಂಕೀರ್ತನೆಯೇ ಮುಖ್ಯ ಸಾಧನವೆಂಬುದು.

ಸನಕಮುನಿಯ ಉಪದೇಶಸಮಾಪ್ತಿ. 395–420



॥ ಶ್ರೀಃ ॥

# ನಾರದೀಯ ಮಹಾಪುರಾಣಂ

## ಸಪ್ತದಶೋಽಧ್ಯಾಯಃ

---

**ಋಷಯ ಊಚುಃ**

**ಸಾಧು ಸೂತ ಮಹಾಭಾಗ ತ್ವಯಾಽತಿಕರುಣಾತ್ಮನಾ ।**
**ಶ್ರಾವಿತಂ ಸರ್ವಪಾಪಘ್ನಂ ಗಂಗಾಮಾಹಾತ್ಮ್ಯಮುತ್ತಮಂ ॥ ೧ ॥**

**ಶ್ರುತ್ವಾ ತು ಗಂಗಾಮಾಹಾತ್ಮ್ಯಂ ನಾರದೋ ದೇವದರ್ಶನಃ ।**
**ಕಿಂ ಪಪ್ರಚ್ಛ ಪುನಃ ಸೂತ ಸನಕಂ ಮುನಿಸತ್ತಮಂ ॥ ೨ ॥**

**ಸೂತ ಉವಾಚ**

**ಶೃಣುಧ್ವಂ ಋಷಯಃ ಸರ್ವೇ ನಾರದೇನ ಸುರರ್ಷಿಣಾ ।**
**ಪೃಷ್ಟಂ ಪುನರ್ಯಥಾ ಪ್ರಾಹ ಪ್ರವಕ್ಷ್ಯಾಮಿ ತಥೈವ ತತ್ ॥ ೩ ॥**

---

### ಹದಿನೇಳನೆಯ ಅಧ್ಯಾಯ

೧. ಋಷಿಗಳು ಹೇಳಿದರು—ಒಳ್ಳೆಯದು, ಧನ್ಯನಾದ ಸೂತನೇ! ದಯಾಶಾಲಿಯಾದ ನಿನ್ನಿಂದ ಸಕಲ ಪಾಪಪರಿಹಾರಕವು, ಉತ್ಕೃಷ್ಟವೂ ಆದ ಗಂಗಾಮಾಹಾತ್ಮೆಯು ಶ್ರವಣ ಮಾಡಲ್ಪಟ್ಟಿತು.

೨. ಸೂತನೇ! ದೇವರನ್ನು ಸಾಕ್ಷಾತ್ಕರಿಸಿಕೊಂಡಿರುವ ನಾರದನು ಗಂಗೆಯ ಮಹಿಮೆಯನ್ನು ಶ್ರವಣಮಾಡಿ ಮುನಿವರ್ಯನಾದ ಸನಕನನ್ನು ಏನು ಕೇಳಿದನು?

೩. ಸೂತನು ಹೇಳಿದನು—ಋಷಿಗಳಿರಾ! ದೇವಋಷಿಯಾದ ನಾರದನು ಪುನಃ ಸನಕನನ್ನು ಕೇಳಿದ ಪ್ರಕಾರವನ್ನು ಯಥಾವತ್ತಾಗಿ ಹೇಳುವೆನು ಕೇಳಿರಿ.

ನಾನಾಖ್ಯಾನೇತಿಹಾಸಾಢ್ಯಂ ಗಂಗಾಮಾಹಾತ್ಮ್ಯಮುತ್ತಮಂ ।
ಶ್ರುತ್ವಾ ಧರ್ಮಸುತೋ ಭೂಯಃ ಪೃಷ್ಟವಾನಿದಮಾದರಾತ್ ॥ ೪ ॥

ನಾರದ ಉವಾಚ

ಅಹೋಽತಿಧನ್ಯಂ ಸುಕೃತೈಕ ಸಾರಂ
ಶ್ರುತಂ ಮಯಾ ಪುಣ್ಯಮಸಂವೃತಾರ್ಥಂ ।
ಗಾಂಗೇಯಮಾಹಾತ್ಮ್ಯಮಘಪ್ರಣಾಶಿ
ತ್ವತ್ತೋ ಮುನೇ ಕಾರುಣಿಕಾದಭೀಷ್ಟಂ । ॥ ೫ ॥

ಯೇ ಸಾಧವಃ ಸಾಧು ಭಜಂತಿ ವಿಷ್ಣುಂ
ಸ್ವಾರ್ಥಂ ಪರಾರ್ಥಂ ಚ ಯತಂತ ಏವ ।
ನಾನೋಪದೇಶೈಃ ಸುವಿಮುಗ್ಧಚಿತ್ತಂ
ಪ್ರಬೋಧಯಂತಿ ಪ್ರಸಭಂ ಪ್ರಪನ್ನಂ ॥ ೬ ॥

---

೪. ನಾರದನು ಅನೇಕ ಉಪಾಖ್ಯಾನ, ಇತಿಹಾಸಗಳಿಂದ ಕೂಡಿದ ಉತ್ತಮವಾದ ಗಂಗಾಮಹಿಮೆಯನ್ನು ಕೇಳಿ ವಿಶ್ವಾಸಪೂರ್ವಕವಾಗಿ ಪುನಃ ಈ ರೀತಿ ಕೇಳಿದನು.

೫. ನಾರದನು ಹೇಳಿದನು—ಸನಕಮುನಿಯೇ! ಅತ್ಯಂತ ದಯಾಳುವಾದ ನಿನ್ನ ಅನುಗ್ರಹದಿಂದ ಧನ್ಯವು, ಸಾರವಾದ ಮುಖ್ಯ ಸುಕೃತವು, ಪುಣ್ಯಪ್ರದವು, ಪಾಪಪರಿಹಾರಕವು, ಇಷ್ಟವೂ ಆದ ಗಂಗಾಮಹಿಮೆಯನ್ನು ಕೇಳಿದೆನು.

೬. ಸಜ್ಜನರು ವಿಷ್ಣುವನ್ನು ಚೆನ್ನಾಗಿ ಭಜಿಸುತ್ತಾರೆ. ಸ್ವಾರ್ಥವಾಗಿ ಮತ್ತು ಪರಾರ್ಥವಾಗಿಯೂ ಪ್ರಯತ್ನಿಸುತ್ತಾರೆ. ವಿರುದ್ಧವಾದ ಉಪದೇಶಗಳಿಂದ ಅತ್ಯಂತ ಮೋಹಿತಮನಸ್ಕನಾಗಿ ಶರಣಾಗತನಾದವನನ್ನು ಅವರು ಬಲಾತ್ಕಾರದಿಂದ ಮೇಲಕ್ಕೆತ್ತುತ್ತಾರೆ.

ತತಃ ಸಮಾಖ್ಯಾಹಿ ಹರೇರ್ವ್ರತಾನಿ
ಕೃತೈಶ್ಚ ಯೈಃ ಪ್ರೀತಿಮುಪೈತಿ ವಿಷ್ಣುಃ ।
ದದಾತಿ ಭಕ್ತಿಂ ಭಜತಾಂ ದಯಾಲು
ರ್ಮುಕ್ತಿಸ್ತು ತಸ್ಯಾ ವಿದಿತಾ ಹಿ ದಾಸೀ ॥ ೭ ॥

ದದಾತಿ ಮುಕ್ತಿಂ ಭಜತಾಂ ಮುಕುಂದೋ
ವ್ರತಾರ್ಚನಧ್ಯಾನಪರಾಯಣಾನಾಂ ।
ಭಕ್ತ್ಯಾನುಸೇವಾಸು ಮಹಾಪ್ರಯಾಸಂ
ವಿಮೃಶ್ಯ ಕಸ್ಯಾಪಿ ನ ಭಕ್ತಿಯೋಗಂ ॥ ೮ ॥

ಪ್ರವೃತ್ತಂ ಚ ನಿವೃತ್ತಂ ಚ ಯತ್ಕರ್ಮ ಹರಿತೋಷಣಂ ।
ತದಾಖ್ಯಾಹಿ ಮುನಿಶ್ರೇಷ್ಠ ವಿಷ್ಣುಭಕ್ತೋಽಸಿ ಮಾನದ ॥ ೯ ॥

ಸನಕ ಉವಾಚ

ಸಾಧು ಸಾಧು ಮುನಿಶ್ರೇಷ್ಠ ಭಕ್ತಸ್ತ್ವಂ ಪುರುಷೋತ್ತಮೇ ।
ಭೂಯೋ ಭೂಯೋ ಯತಃ ಪೃಚ್ಛೇಶ್ಚರಿತ್ರಂ ಶಾರ್ಙ್ಗಧನ್ವನಃ ॥ ೧೦ ॥

---

೭. ಆದಕಾರಣ ವಿಷ್ಣುಪ್ರೀತಿಸಂಪಾದಕಗಳಾದ ಹರಿವ್ರತಗಳನ್ನು ಉಪದೇಶಿಸು. ದಯಾಳುವಾದ ವಿಷ್ಣುವು ತನ್ನನ್ನು ಭಜಿಸುವವರಿಗೆ ಮೋಕ್ಷ ಸಾಧಕವಾದ ಭಕ್ತಿಯನ್ನು ಕೊಡುತ್ತಾನೆ.

೮. ವ್ರತ, ಪೂಜೆ, ಧ್ಯಾನ ಇವುಗಳಲ್ಲಿ ಆಸಕ್ತರಾಗಿ ಭಗವದ್ಭಜನೆ ಮಾಡುವವರಿಗೆ ಮುಕುಂದನು ಮೋಕ್ಷವನ್ನು ಕೊಡುತ್ತಾನೆ. ಭಕ್ತಿಪೂರ್ವಕ ನಾದ ಸೇವೆಗಳು ಬಹುಶ್ರಮಸಾಧ್ಯವೆಂದು ತಿಳಿಯುವವನಿಗೆ ಆತನು ಭಕ್ತಿಯೋ ಗವನ್ನು ಅನುಗ್ರಹಿಸುವುದಿಲ್ಲ.

೯. ಜ್ಞಾನದಾತನೇ! ನೀನು ವಿಷ್ಣುಭಕ್ತನಾದ ಮುನಿವರ್ಯನಾಗಿರುವೆ. ಪ್ರವೃತ್ತ ಅಥವಾ ನಿವೃತ್ತಗಳಲ್ಲಿ ಯಾವುದೇ ಕರ್ಮವಾಗಲೀ, ಹರಿಪ್ರೀತಿಸಂಪಾ ದಕವಾದ ಅಂತಹ ಕರ್ಮವನ್ನು ಉಪದೇಶಿಸು.

೧೦. ಸನಕನು ಹೇಳಿದನು—ಮುನಿಶ್ರೇಷ್ಠನೇ! ಒಳ್ಳೆಯದು, ಒಳ್ಳೆ ಯದು, ನೀನು ನಾರಾಯಣನ ಚರಿತ್ರೆಯನ್ನು ಪುನಃಪುನಃ ಕೇಳುತ್ತಿರುವುದ ರಿಂದ ನಿಜವಾದ ಪುರುಷೋತ್ತಮಭಕ್ತನು.

ವ್ರತಾನಿ ತೇ ಪ್ರವಕ್ಷ್ಯಾಮಿ ಲೋಕೋಪಕೃತಿಮಂತಿ ಚ ।
ಪ್ರಸೀದತಿ ಹರಿರ್ಯೈಸ್ತು ಪ್ರಯಚ್ಛತ್ಯಭಯಂ ತಥಾ ॥ ೧೧ ॥

ಯಸ್ಯ ಪ್ರಸನ್ನೋ ಭಗವಾನ್ಯಜ್ಞಲಿಂಗೋ ಜನಾರ್ದನಃ ।
ಇಹಾಮುತ್ರ ಸುಖಂ ತಸ್ಯ ತಪೋವೃದ್ಧಿಶ್ಚ ಜಾಯತೇ ॥ ೧೨ ॥

ಯೇನ ಕೇನಾಪ್ಯುಪಾಯೇನ ಹರಿಪೂಜಾಪರಾಯಣಾಃ ।
ಪ್ರಯಾಂತಿ ಪರಮಂ ಸ್ಥಾನಮಿತಿ ಪ್ರಾಹುರ್ಮಹರ್ಷಯಃ ॥ ೧೩ ॥

ಮಾರ್ಗಶೀರ್ಷೇ ಸಿತೇಪಕ್ಷೇ ದ್ವಾದಶ್ಯಾಂ ಜಲಶಾಯಿನಂ ।
ಉಪೋಷಿತೋರ್ಚಯೇತ್ಸಮ್ಯಙ್ನರಃ ಶ್ರದ್ಧಾಸಮನ್ವಿತಃ ॥ ೧೪ ॥

ಸ್ನಾತ್ವಾ ಶುಕ್ಲಾಂಬರಧರೋ ದಂತಧಾವನಪೂರ್ವಕಂ ।
ಗಂಧಪುಷ್ಪಾಕ್ಷತೈರ್ಧೂಪೈರ್ದೀಪೈರ್ನೈವೇದ್ಯಪೂರ್ವಕೈಃ ॥ ೧೫ ॥

---

೧೧. ಹರಿಯ ಪ್ರಸಾದವನ್ನುಂಟುಮಾಡುವ ಮತ್ತು ಅಭಯವನ್ನು ಕೊಡುವ, ಲೋಕೋಪಕಾರವಾಗುವ ವ್ರತಗಳನ್ನು ನಿನಗೆ ಹೇಳುತ್ತೇನೆ.

೧೨. ಯಜ್ಞನಾಮಕನಾದ ಜನಾರ್ದನಭಗವಂತನ ಅನುಗ್ರಹಕ್ಕೆ ಪಾತ್ರನಾದವನಿಗೆ ಇಹಪರಗಳಲ್ಲಿ ಸುಖವೂ, ತಪಸ್ಸವೃದ್ಧಿಯೂ ಉಂಟಾಗುತ್ತದೆ.

೧೩. ಯಾವಕಾರಣದಿಂದಲಾದರೂ ಆಗಲಿ ಹರಿಪೂಜೆಯಲ್ಲಿ ನಿರತರಾದವರು ಪರಮಪದವಿಯನ್ನು ಹೊಂದುತ್ತಾರೆಂದು ಮಹರ್ಷಿಗಳು ಹೇಳುತ್ತಾರೆ.

೧೪. ಮಾರ್ಗಶೀರ್ಷಮಾಸ ಶುಕ್ಲಪಕ್ಷ ದ್ವಾದಶಿಯದಿವಸ ಉಪವಾಸ ಮಾಡಿದ ಮನುಷ್ಯನು ಭಕ್ತಿಪೂರ್ವಕವಾಗಿ ಜಲಶಾಯಿಯಾದ ಪರಮಾತ್ಮನನ್ನು ಚೆನ್ನಾಗಿ ಪೂಜಿಸಬೇಕು.

೧೫-೧೬. ಮುನಿಶ್ರೇಷ್ಠನೇ! ಹಲ್ಲುಜ್ಜಿಕೊಂಡು, ಸ್ನಾನಮಾಡಿ ಬಿಳಿಯಬಟ್ಟೆಯನ್ನು ಧರಿಸಿ ವಾಙ್ನಿಯಮಯುಕ್ತನಾಗಿ, ಗಂಧ, ಹೂವು, ಅಕ್ಷತೆ ಧೂಪ, ದೀಪ ಇವುಗಳಿಂದ, ನೈವೇದ್ಯಪೂರ್ವಕವಾಗಿ ಭಕ್ತಿಯಿಂದ ಹರಿಯನ್ನು

ವಾಗ್ಯತೋ ಭಕ್ತಿಭಾವೇನ ಮುನಿಶ್ರೇಷ್ಠಾರ್ಚಯೇದ್ಧರಿಂ ।
ಕೇಶವಾಯ ನಮಸ್ತುಭ್ಯಮಿತಿ ವಿಷ್ಣುಂ ಚ ಪೂಜಯೇತ್ ॥ ೧೬ ॥

ಅಷ್ಟೋತ್ತರಶತಂ ಹುತ್ವಾ ವಹ್ನೌ ಘೃತತಿಲಾಹುತೀಃ ।
ರಾತ್ರೌ ಜಾಗರಣಂ ಕುರ್ಯಾತ್ಸಾಲಗ್ರಾಮಸಮೀಪತಃ ॥ ೧೭ ॥

ಸ್ನಾಪಯೇತ್ಪ್ರಸ್ಥಪಯಸಾ ನಾರಾಯಣಮನಾಮಯಂ ।
ಗೀತೈರ್ವಾದ್ಯೈಶ್ಚ ನೈವೇದ್ಯೈರ್ಭಕ್ಷ್ಯಭೋಜ್ಯೈಶ್ಚ ಕೇಶವಂ ॥ ೧೮ ॥

ತ್ರಿಕಾಲಂ ಪೂಜಯೇದ್ಭಕ್ತ್ಯಾ ಮಹಾಲಕ್ಷ್ಮ್ಯಾ ಸಮನ್ವಿತಂ ।
ಪುನಃ ಕಾಲೇ ಸಮುತ್ಥಾಯ ಕೃತ್ವಾ ಕರ್ಮ ಯಥೋಚಿತಂ ॥ ೧೯ ॥

ಪೂರ್ವವತ್ಪೂಜಯೇದ್ದೇವಂ ವಾಗ್ಯತೋ ನಿಯತಃ ಶುಚಿಃ ।
ಪಾಯಸಂ ಘೃತಸಂಮಿಶ್ರಂ ನಾಲಿಕೇರಫಲಾನ್ವಿತಂ ॥ ೨೦ ॥

---

ಪೂಜಿಸಬೇಕು. ಕೇಶವನೇ! ನಿನಗೆ ನಮಸ್ಕಾರ ಎಂದು ವಿಷ್ಣುವನ್ನು ಪೂಜಿಸಬೇಕು.

೧೭. ಅಗ್ನಿಯಲ್ಲಿ ತುಪ್ಪ ಮತ್ತು ಎಳ್ಳುಗಳ ನೂರೆಂಟು ಆಹುತಿಗಳನ್ನು ಸಮರ್ಪಿಸಿ, ಸಾಲಗ್ರಾಮದ ಸನ್ನಿಧಿಯಲ್ಲಿ ರಾತ್ರಿಯೆಲ್ಲಾ ಜಾಗರಣೆಯನ್ನು ಮಾಡಬೇಕು.

೧೮-೧೯. ದೋಷರಹಿತನಾದ ನಾರಾಯಣನಿಗೆ ಒಂದು ಬಳ್ಳ ಹಾಲಿನಿಂದ ಅಭಿಷೇಕಮಾಡಬೇಕು. ಗಾನ ಮತ್ತು ವಾದ್ಯಗಳಿಂದ ಭಕ್ಷ್ಯಭೋಜ್ಯಗಳ ನೈವೇದ್ಯಪೂರ್ವಕವಾಗಿ ಮಹಾಲಕ್ಷ್ಮೀದೇವಿಯಿಂದ ಸಹಿತನಾದ ಕೇಶವನನ್ನು ಭಕ್ತಿಯಿಂದ ಪ್ರಾತರ್ಮಧ್ಯಾಹ್ನ ಸಾಯಂಕಾಲಗಳಲ್ಲಿ ಪೂಜಿಸಬೇಕು.

೧೯-೨೦. ಪುನಃ ಉಷಃಕಾಲದಲ್ಲಿ ಎದ್ದು ಸ್ನಾನಾದಿಗಳಿಂದ ಪರಿಶುದ್ಧನಾಗಿ ಯಥಾಯೋಗ್ಯವಾದ ನಿತ್ಯಕರ್ಮವನ್ನನುಷ್ಠಾನಮಾಡಿಕೊಂಡು ವಾಙ್ನಿಯಮಯುಕ್ತನಾಗಿ ಹಿಂದಿನಂತೆ ಶ್ರೀಹರಿಯನ್ನು ಪೂಜಿಸಬೇಕು.

**ಮಂತ್ರೇಣಾನೇನ ವಿಪ್ರಾಯ ದದ್ಯಾದ್ಭಕ್ತ್ಯಾ ಸದಕ್ಷಿಣಂ ।**
**ಕೇಶವಃ ಕೇಶಿಹಾ ದೇವಃ ಸರ್ವಸಂಪತ್ಪ್ರದಾಯಕಃ ॥ ೨೧ ॥**

**ಪರಮಾನ್ನಪ್ರದಾನೇನ ಮಮ ಸ್ಯಾದಿಷ್ಟದಾಯಕಃ ।**
**ಬ್ರಾಹ್ಮಣಾನ್ಭೋಜಯೇತ್ಪಶ್ಚಾಚ್ಛಕ್ತಿತೋ ಬಂಧುಭಿಃ ಸಹ ॥ ೨೨ ॥**

**ನಾರಾಯಣಪರೋ ಭೂತ್ವಾ ಸ್ವಯಂ ಭುಂಜೀತ ವಾಗ್ಯತಃ ।**
**ಇತಿ ಯಃ ಕುರುತೇ ಭಕ್ತ್ಯಾ ಕೇಶವಾರ್ಚನಮುತ್ತಮಂ ॥ ೨೩ ॥**

**ಸ ಪೌಂಡರೀಕಯಜ್ಞಸ್ಯ ಫಲಮಷ್ಟಗುಣಂ ಲಭೇತ್ ।**
**ಪೌಷಮಾಸೇ ಸಿತೇಪಕ್ಷೇ ದ್ವಾದಶ್ಯಾಂ ಸಮುಪೋಷಿತಃ ॥ ೨೪ ॥**

**ನಮೋ ನಾರಾಯಣಾಯೇತಿ ಪೂಜಯೇತ್ಪ್ರಯತೋ ಹರಿಂ ।**
**ಪಯಸಾ ಸ್ನಾಪ್ಯ ನೈವೇದ್ಯಂ ಪಾಯಸಂ ಚ ಸಮರ್ಪಯೇತ್ ॥ ೨೫ ॥**

---

೨೦-೨೧. ಪಾಯಸ, ತುಪ್ಪ, ತೆಂಗಿನಕಾಯಿ ಇವುಗಳನ್ನು ದಕ್ಷಿಣೆಯ ಸಹಿತವಾಗಿ ಈ ಮಂತ್ರಹೇಳಿ, ಬ್ರಾಹ್ಮಣನಿಗೆ ದಾನಕೊಡಬೇಕು. ಮುಂದಿನ ಶ್ಲೋಕವೇ ಆ ಮಂತ್ರವು.

೨೧–೨೨. ಸಕಲೈಶ್ವರ್ಯಪ್ರದಾಯಕನಾದ, ಕೇಶಿ ಎಂಬ ದೈತ್ಯನನ್ನು ಸಂಹರಿಸಿದ, ಕೇಶವದೇವನು ಈ ಪರಮಾನ್ನದಾನದಿಂದ ಪ್ರೀತನಾಗಿ ನನಗೆ ಅಭೀಷ್ಟವನ್ನು ಕೊಡುವವನಾಗಲಿ.

೨೨-೨೪. ತರುವಾಯ ತನ್ನ ಶಕ್ತ್ಯನುಸಾರ ಬ್ರಾಹ್ಮಣಭೋಜನ ಮಾಡಿಸಿ ನಾರಾಯಣಧ್ಯಾನನಿರತನಾಗಿ ಬಂಧುಗಳೊಡನೆ ನಿಯಮದಿಂದ ತಾನು ಭೋಜನಮಾಡಬೇಕು. ಈ ಪ್ರಕಾರ ಭಕ್ತಿಪೂರ್ವಕವಾಗಿ ಉತ್ತಮವಾದ ಕೇಶವಪೂಜೆಯನ್ನು ಮಾಡುವವನು ಪೌಂಡರೀಕಯಾಗಫಲದ ಎಂಟರಷ್ಟು ಫಲವನ್ನು ಹೊಂದುವನು.

೨೪-೨೫. ಉಪವಾಸಮಾಡಿರುವವನು ಪುಷ್ಯಮಾಸದ ಶುಕ್ಲಪಕ್ಷ ದ್ವಾದಶೀ ದಿನದಲ್ಲಿ ನಿಯಮಯುಕ್ತನಾಗಿ 'ನಮೋನಾರಾಯಣಾಯ' ಎಂಬ ಮಂತ್ರದಿಂದ ವಿಷ್ಣುವನ್ನು ಪೂಜಿಸಬೇಕು.

ರಾತ್ರೌ ಜಾಗರಣಂ ಕುರ್ಯಾತ್ತ್ರಿಕಾಲಾರ್ಚನತತ್ಪರಃ ।
ಧೂಪೈರ್ದೀಪೈಶ್ಚ ನೈವೇದ್ಯೈರ್ಗಂಧೈಃ ಪುಷ್ಪೈರ್ಮನೋರಮೈಃ ॥ ೨೬ ॥

ನೃತ್ಯೈಶ್ಚ ಗೀತವಾದ್ಯಾದ್ಯೈಃ ಸ್ತೋತ್ರೈಶ್ಚಾಪ್ಯರ್ಚಯೇದ್ಧರಿಂ ।
ಕೃಶರಾನ್ನಂ ಚ ವಿಪ್ರಾಯ ದದ್ಯಾತ್ಸಘೃತದಕ್ಷಿಣಂ ॥ ೨೭ ॥

ಸರ್ವಾತ್ಮಾ ಸರ್ವಲೋಕೇಶಃ ಸರ್ವವ್ಯಾಪೀ ಸನಾತನಃ ।
ನಾರಾಯಣಃ ಪ್ರಸನ್ನಃ ಸ್ಯಾತ್ ಕೃಶರಾನ್ನ ಪ್ರದಾನತಃ ॥ ೨೮ ॥

ಮಂತ್ರೇಣಾನೇನ ವಿಪ್ರಾಯ ದತ್ವಾ ವೈ ದಾನಮುತ್ತಮಂ ।
ದ್ವಿಜಾಂಶ್ಚ ಭೋಜಯೇದ್ಭಕ್ತ್ಯಾ ಸ್ವಯಮದ್ಯಾತ್ಸಬಾಂಧವಃ ॥ ೨೯ ॥

ಏವಂ ಸಂಪೂಜಯೇದ್ಭಕ್ತ್ಯಾ ದೇವಂ ನಾರಾಯಣಂ ಪ್ರಭುಂ ।
ಅಗ್ನಿಷ್ಟೋಮಾಷ್ಟಕಫಲಂ ಸ ಸಂಪೂರ್ಣಮವಾಪ್ನುಯಾತ್ ॥ ೩೦ ॥

---

೨೫–೨೭. ಕ್ಷೀರಾಭಿಷೇಕಮಾಡಿ ಪಾಯಸವನ್ನು ನಿವೇದನಮಾಡಬೇಕು. ತ್ರಿಕಾಲಪೂಜೆಯಲ್ಲಿ ನಿರತನಾಗಿ ರಾತ್ರಿ ಜಾಗರಣೆಯನ್ನು ಮಾಡಬೇಕು. ಧೂಪ, ದೀಪ, ನೈವೇದ್ಯ, ಗಂಧ, ಮನೋಹರವಾದ ಹೂವು, ನರ್ತನ, ಗಾನ ವಾದ್ಯ ಮುಂತಾದುವುಗಳು ಮತ್ತು ಸ್ತೋತ್ರಪಾಠ ಇವುಗಳಿಂದ ಶ್ರೀಹರಿಯನ್ನು ಪೂಜಿಸಬೇಕು. ಕೃಶರಾನ್ನವನ್ನು ತುಪ್ಪ ಮತ್ತು ದಕ್ಷಿಣೆಗಳೊಡನೆ ಬ್ರಾಹ್ಮಣನಿಗೆ ದಾನಮಾಡಬೇಕು.

೨೮–೨೯. ಸರ್ವಾಂತರ್ಗತನು, ಸರ್ವಲೋಕನಿಯಾಮಕನು, ಸರ್ವವ್ಯಾಪಕನು, ಪುರಾತನನೂ ಆಗಿರುವ ನಾರಾಯಣನು ಈ ಕೃಶರಾನ್ನದಾನದಿಂದ ಪ್ರಸನ್ನನಾಗಲಿ ಎಂಬ ಮಂತ್ರದಿಂದ ದಾನಮಾಡಿ, ಆದರದಿಂದ ಬ್ರಾಹ್ಮಣಭೋಜನ ಮಾಡಿಸಿ, ಬಂಧುಗಳಿಂದ ಸಹಿತನಾಗಿ ತಾನೂ ಭೋಜನಮಾಡಬೇಕು.

೩೦. ಈ ಪ್ರಕಾರ ಸ್ವಾಮಿಯಾದ ನಾರಾಯಣದೇವನನ್ನು ಭಕ್ತಿಯಿಂದ ಪೂಜಿಸಿದರೆ ಎಂಟು ಅಗ್ನಿಷ್ಟೋಮಯಾಗಗಳ ಫಲವು ಸಮಗ್ರವಾಗಿ ಬರುತ್ತದೆ.

**ಮಾಘಸ್ಯ ಶುಕ್ಲದ್ವಾದಶ್ಯಾಂ ಪೂರ್ವವತ್ಸಮುಪೋಷಿತಃ ।**
**ನಮಸ್ತೇ ಮಾಧವಾಯೇತಿ ಹುತ್ವಾಷ್ಟೌ ಚ ಘೃತಾಹುತೀಃ ॥ ೩೧ ॥**

**ಪೂರ್ವಮಾನೇನ ಪಯಸಾ ಸ್ನಾಪಯೇನ್ಮಾಧವಂ ತದಾ ।**
**ಪುಷ್ಪಗಂಧಾಕ್ಷತೈರರ್ಚೇತ್ಸಾವಧಾನೇನ ಚೇತಸಾ ॥ ೩೨ ॥**

**ರಾತ್ರೌ ಜಾಗರಣಂ ಕುರ್ಯಾತ್ಪೂರ್ವವದ್ಭಕ್ತಿಸಂಯುತಃ ।**
**ಕಲ್ಯಕರ್ಮ ಚ ನಿರ್ವರ್ತ್ಯ ಮಾಧವಂ ಪುನರರ್ಚಯೇತ್ ॥ ೩೩ ॥**

**ಪ್ರಸ್ಥಂ ತಿಲಾನಾಂ ವಿಪ್ರಾಯ ದದ್ಯಾದ್ವೈ ಮಂತ್ರಪೂರ್ವಕಂ ।**
**ಸದಕ್ಷಿಣಂ ಸವಸ್ತ್ರಂ ಚ ಸರ್ವಪಾಪವಿಮುಕ್ತಯೇ ॥ ೩೪ ॥**

**ಮಾಧವಃ ಸರ್ವಭೂತಾತ್ಮಾ ಸರ್ವಕರ್ಮಫಲಪ್ರದಃ ।**
**ತಿಲದಾನೇನ ಮಹತಾ ಸರ್ವಾನ್ಕಾಮಾನ್ಪ್ರಯಚ್ಛತು ॥ ೩೫ ॥**

---

೩೧-೩೨. ಮಾಘಶುಕ್ಲ ದ್ವಾದಶೀ ದಿನದಲ್ಲಿ ಹಿಂದಿನಂತೆ ಉಪವಾಸ ಮಾಡಿದವನಾಗಿ "ನಮಸ್ತೇಮಾಧವಾಯ" ಎಂಬ ಮಂತ್ರದಿಂದ ಎಂಟು ಆಜ್ಯಾಹುತಿಗಳನ್ನು ಹೋಮಮಾಡಿ, ಆಗ ಒಂದು ಬಳ್ಳ ಹಾಲಿನಿಂದ ಮಾಧವನಿಗೆ ಅಭಿಷೇಕಮಾಡಬೇಕು. ಬಳಿಕ ಸಾವಧಾನಚಿತ್ತನಾಗಿ ಹೂವು, ಗಂಧಾಕ್ಷತೆಗಳಿಂದ ಪೂಜಿಸಬೇಕು.

೩೩. ಹಿಂದಿನಂತೆ ಭಕ್ತಿಯಿಂದ ರಾತ್ರಿ ಜಾಗರಣೆ ಮಾಡಬೇಕು. ಉಷಃ ಕಾಲದಲ್ಲಿ ಎದ್ದು ಆಗಿನ ಕರ್ತವ್ಯಕರ್ಮಗಳನ್ನು ಮಾಡಿ ಪುನಃ ಮಾಧವನನ್ನು ಪೂಜಿಸಬೇಕು.

೩೪. ಸಕಲ ಪಾಪಪರಿಹಾರಕ್ಕಾಗಿ ದಕ್ಷಿಣೆ ಮತ್ತು ವಸ್ತ್ರಸಹಿತವಾಗಿ ಒಂದುಬಳ್ಳ ಎಳ್ಳನ್ನು ಬ್ರಾಹ್ಮಣನಿಗೆ ಮಂತ್ರಪೂರ್ವಕವಾಗಿ ದಾನಮಾಡಬೇಕು-

೩೫. ಸರ್ವಪ್ರಾಣಿಗಳಿಗೂ ಸ್ವಾಮಿಯು, ಎಲ್ಲಾ ಕರ್ಮಗಳಿಗೂ ಫಲಪ್ರದನೂ ಆಗಿರುವ ಮಾಧವನು ಮಹತ್ತಾದ ಈ ತಿಲದಾನದಿಂದ ಪ್ರೀತನಾಗಿ ಸಕಲ ಇಷ್ಟಾರ್ಥಗಳನ್ನೂ ಕೊಡಲಿ.

ಮಂತ್ರೇಣಾನೇನ ವಿಪ್ರಾಯ ದತ್ವಾ ಭಕ್ತಿಸಮನ್ವಿತಃ ।
ಬ್ರಾಹ್ಮಣಾನ್ಭೋಜಯೇಚ್ಛಕ್ತ್ಯಾ ಸಂಸ್ಮರನ್ಮಾಧವಂ ಪ್ರಭುಂ ॥ ೩೬ ॥

ಏವಂ ಯಃ ಕುರುತೇ ಭಕ್ತ್ಯಾ ತಿಲದಾನವ್ರತಂ ದ್ವಿಜಃ ।
ವಾಜಪೇಯಶತಸ್ಯಾಸೌ ಸಂಪೂರ್ಣಂ ಫಲಮಾಪ್ನುಯಾತ್ ॥ ೩೭ ॥

ಫಾಲ್ಗುನಸ್ಯ ಸಿತೇ ಪಕ್ಷೇ ದ್ವಾದಶ್ಯಾಂ ಸಮುಪೋಷಿತಃ ।
ಗೋವಿಂದಾಯ ನಮಸ್ತುಭ್ಯಮಿತಿ ಸಂಪೂಜಯೇದ್ವ್ರತೀ ॥ ೩೮ ॥

ಅಷ್ಟೋತ್ತರಶತಂ ಹುತ್ವಾ ಘೃತಮಿಶ್ರತಿಲಾಹುತೀಃ ।
ಪೂರ್ಣಮಾನೇನ ಪಯಸಾ ಗೋವಿಂದಂ ಸ್ನಾಪಯೇಚ್ಛುಚಿಃ ॥ ೩೯ ॥

ರಾತ್ರೌ ಜಾಗರಣಂ ಕುರ್ಯಾತ್ತ್ರಿಕಾಲಂ ಪೂಜಯೇತ್ತಥಾ ।
ಪ್ರಾತಃಕೃತ್ಯಂ ಸಮಾಪ್ಯಾಥ ಗೋವಿಂದಂ ಪೂಜಯೇತ್ಪುನಃ ॥ ೪೦ ॥

---

೩೬. ಎಂಬೀ ಮಂತ್ರಾನುಸಂಧಾನದಿಂದ ಭಕ್ತಿಸಮನ್ವಿತನಾಗಿ ಬ್ರಾಹ್ಮಣನಿಗೆ ತಿಲದಾನಮಾಡಿ, ತನ್ನ ಶಕ್ತ್ಯನುಸಾರವಾಗಿ ಬ್ರಾಹ್ಮಣಭೋಜನಮಾಡಿಸಿ ಮಾಧವಸ್ವಾಮಿಯನ್ನು ಸ್ಮರಿಸುತ್ತಾ ತಾನು ಭೋಜನಮಾಡಬೇಕು.

೩೭. ಈ ಪ್ರಕಾರ ಭಕ್ತಿಯಿಂದ ತಿಲದಾನವ್ರತವನ್ನುಮಾಡುವ ದ್ವಿಜನು ಒಂದುನೂರು ವಾಜಪೇಯಯಾಗಗಳ ಸಂಪೂರ್ಣ ಫಲವನ್ನು ಹೊಂದುವನು.

೩೮. ಫಾಲ್ಗುಣಮಾಸದ ಶುಕ್ಲಪಕ್ಷದ ದ್ವಾದಶಿಯ ದಿನದಲ್ಲಿ ಉಪವಾಸ ಮಾಡಿದವನಾಗಿ "ಗೋವಿಂದಾಯ ನಮಸ್ತುಭ್ಯಂ" ಗೋವಿಂದನೇ ! ನಿನಗೆ ನಮಸ್ಕಾರ ಎಂಬ ಮಂತ್ರದಿಂದ ವ್ರತಕರ್ತನು ಪೂಜೆಮಾಡಬೇಕು.

೩೯. ಸ್ನಾನಾದಿಗಳಿಂದ ಪರಿಶುದ್ಧನಾಗಿ ಒಂದುನೂರೆಂಟು ಆಜ್ಯಮಿಶ್ರಿತ ತಿಲಾಹುತಿಗಳನ್ನು ಹೋಮಮಾಡಿ ಒಂದು ಬಳ್ಳ ಹಾಲಿನಿಂದ ಗೋವಿಂದನಿಗೆ ಅಭಿಷೇಕಮಾಡಬೇಕು.

೪೦. ರಾತ್ರಿಯಲ್ಲಿ ಜಾಗರಣೆಮಾಡಬೇಕು. ಹಾಗೆಯೇ ತ್ರಿಕಾಲದಲ್ಲಿಯೂ ಪೂಜೆಯನ್ನು ಮಾಡಬೇಕು. ಪುನಃ ಬೆಳಗ್ಗೆ ಎದ್ದು ಸ್ನಾನಮಾಡಿ ನಿತ್ಯಕರ್ಮವನ್ನು ಮುಗಿಸಿಕೊಂಡು ಗೋವಿಂದನನ್ನು ಯಥಾಪೂರ್ವವಾಗಿ ಪೂಜಿಸಬೇಕು.

ಪ್ರೀಹ್ಯಾಢಕಂ ಚ ವಿಪ್ರಾಯ ದದ್ಯಾದ್ವಸ್ತ್ರಂ ಸದಕ್ಷಿಣಂ ।
ನಮೋ ಗೋವಿಂದ ಸರ್ವೇಶ ಗೋಪಿಕಾಜನವಲ್ಲಭ ॥ ४೧ ॥

ಅನೇನ ಧಾನ್ಯದಾನೇನ ಪ್ರೀತೋ ಭವ ಜಗದ್ಗುರೋ ।
ಏವಂ ಕೃತ್ವಾ ವ್ರತಂ ಸಮ್ಯಕ್ಸರ್ವಪಾಪವಿವರ್ಜಿತಃ ॥ ४೨ ॥

ಗೋಮೇಧಮುಖಜಂ ಪುಣ್ಯಂ ಸಂಪೂರ್ಣಂ ಲಭತೇ ನರಃ ।
ಚೈತ್ರಮಾಸೇ ಸಿತೇ ಪಕ್ಷೇ ದ್ವಾದಶ್ಯಾಂ ಸಮುಪೋಷಿತಃ ॥ ४೩ ॥

ನಮೋಽಸ್ತು ವಿಷ್ಣವೇ ತುಭ್ಯಮಿತಿ ಪೂರ್ವವದರ್ಚಯೇತ್ ।
ಕ್ಷೀರೇಣ ಸ್ನಾಪಯೇದ್ವಿಷ್ಣುಂ ಪೂರ್ವಮಾನೇನ ಶಕ್ತಿತಃ ॥ ४४ ॥

ತಥೈವ ಸ್ನಾಪಯೇದ್ವಿಪ್ರ ಘೃತಪ್ರಸ್ಥೇನ ಸಾದರಂ ।
ಕೃತ್ವಾ ಜಾಗರಣಂ ರಾತ್ರೌ ಪೂಜಯೇತ್ಪೂರ್ವವದ್ವ್ರತೀ ॥ ४೫ ॥

---

४೧-४೨. ಒಂದು ಆಢಕಪರಿಮಾಣ ಭತ್ತವನ್ನು ವಸ್ತ್ರ, ದಕ್ಷಿಣೆಗಳ ಸಹಿತವಾಗಿ ಬ್ರಾಹ್ಮಣನಿಗೆ ದಾನಮಾಡಬೇಕು. ಆಗ ಹೇಳುವ ಮಂತ್ರ— "ಸರ್ವೇಶ್ವರನು, ಗೋಪಿಕಾಸ್ತ್ರೀಯರ ಪ್ರಿಯನು, ಜಗದ್ಗುರುವೂ ಆಗಿರುವ ಗೋವಿಂದನೇ ನಿನಗೆ ನಮಸ್ಕಾರ, ಈ ಧಾನ್ಯ ದಾನದಿಂದ ಸುಪ್ರೀತನಾಗು" ಎಂಬ ಮಂತ್ರವನ್ನು ಹೇಳಿ ದಾನಮಾಡಬೇಕು.

४೨-४೩. ಈ ವ್ರತವನ್ನು ಭಕ್ತಿಯಿಂದ ಅನುಷ್ಠಾನಮಾಡುವ ಮನುಷ್ಯನು ಸಕಲ ಪಾಪಗಳನ್ನೂ ಪರಿಹರಿಸಿಕೊಂಡು ಯಜ್ಞಫಲವನ್ನು ಸಂಪೂರ್ಣವಾಗಿ ಪಡೆಯುವನು.

४४-४೫. ಚೈತ್ರಮಾಸದ ಶುಕ್ಲಪಕ್ಷ ದ್ವಾದಶಿಯಲ್ಲಿ ಉಪವಾಸವಿದ್ದವನಾಗಿ ವಿಷ್ಣುವೇ! ನಿನಗೆ ನಮಸ್ಕಾರ ಎಂದು ಹಿಂದಿನಂತೆ ಪೂಜಿಸಬೇಕು. ಒಂದು ಬಳ್ಳಹಾಲಿನಿಂದ ವಿಷ್ಣುವಿಗೆ ಅಭಿಷೇಕಮಾಡಿ ಯಥಾಶಕ್ತಿ ಒಂದುಬಳ್ಳ ತುಪ್ಪದಿಂದ ಭಕ್ತಿಪೂರ್ವಕವಾಗಿ ಅಭಿಷೇಕ ಮಾಡಬೇಕು.

**ತತಃ ಕಲ್ಯೇ ಸಮುತ್ಥಾಯ ಪ್ರಾತಃಕೃತ್ಯಂ ಸಮಾಪ್ಯ ಚ ।**
**ಅಷ್ಟೋತ್ತರಶತಂ ಹುತ್ವಾ ಮಧ್ವಾಜ್ಯತಿಲಮಿಶ್ರಿತಂ ॥ ೪೬ ॥**

**ಸದಕ್ಷಿಣಂ ಚ ವಿಪ್ರಾಯ ದದ್ಯಾದ್ವ್ರೈ ತಂಡುಲಾಢಕಂ ।**
**ಪ್ರಾಣರೂಪೀ ಮಹಾವಿಷ್ಣುಃ ಪ್ರಾಣದಃ ಸರ್ವವಲ್ಲಭಃ ॥ ೪೭ ॥**

**ತಂಡುಲಾಢಕದಾನೇನ ಪ್ರೀಯತಾಂ ಮೇ ಜನಾರ್ದನಃ ।**
**ಏವಂ ಕೃತ್ವಾ ನರೋ ಭಕ್ತ್ಯಾ ಸರ್ವಪಾಪವಿವರ್ಜಿತಃ ॥ ೪೮ ॥**

**ಅತ್ಯಗ್ನಿಷ್ಟೋಮಯಜ್ಞಸ್ಯ ಫಲಮಷ್ಟಗುಣಂ ಲಭೇತ್ ।**
**ವೈಶಾಖಶುಕ್ಲದ್ವಾದಶ್ಯಾಮುಪೋಷ್ಯ ಮಧುಸೂದನಂ ॥ ೪೯ ॥**

**ದ್ರೋಣಕ್ಷೀರೇಣ ದೇವೇಶಂ ಸ್ನಾಪಯೇದ್ಭಕ್ತಿಸಂಯುತಃ ।**
**ಜಾಗರಂ ತತ್ರ ಕರ್ತವ್ಯಂ ತ್ರಿಕಾಲಾರ್ಚನಸಂಯುತಂ ॥ ೫೦ ॥**

---

೪೫-೪೭. ಈ ವ್ರತವನ್ನಾಚರಿಸುವವನು ರಾತ್ರಿ ಜಾಗರಣೆಮಾಡಿ ಉಷಃ ಕಾಲದಲ್ಲಿ ಎದ್ದು ಪ್ರಾತಃಕಾಲ ಕರ್ತವ್ಯಕರ್ಮಗಳನ್ನು ಮುಗಿಸಿಕೊಂಡು ಪೂಜಿಸಬೇಕು. ಜೇನುತುಪ್ಪ, ತಿಲ ಇವುಗಳನ್ನು ಸೇರಿಸಿ ಒಂದುನೂರೆಂಟುಸಾರಿ ಹೋಮಮಾಡಿ, ಒಂದು ಆಢಕ ಅಕ್ಕಿಯನ್ನು ದಕ್ಷಿಣೆಸಹಿತವಾಗಿ ಬ್ರಾಹ್ಮಣನಿಗೆ ದಾನಮಾಡಬೇಕು-

೪೭-೪೯. ಮುಖ್ಯಪ್ರಾಣಾಂತರ್ಗತನು, ಜೀವನಪ್ರದನು, ಸರ್ವಪ್ರಿಯನು ಜನಾರ್ದನನಾಮಕನೂ ಆಗಿರುವ ಮಹಾವಿಷ್ಣುವು ಈ ತಂಡುಲಾಢಕ ದಾನದಿಂದ ನನಗೆ ಪ್ರಸನ್ನನಾಗಲಿ ಎಂದು ಪ್ರಾರ್ಥಿಸಬೇಕು. ಮನುಷ್ಯನು ಭಕ್ತಿಯಿಂದ ಈಪ್ರಕಾರ ಮಾಡಿದರೆ ಸರ್ವಪಾಪರಹಿತನಾಗಿ ಅತ್ಯಗ್ನಿಷ್ಟೋಮಯಜ್ಞದ ಎಂಟರಷ್ಟು ಫಲವನ್ನು ಪಡೆಯುವನು.

೪೯-೫೦. ವೈಶಾಖ ಶುಕ್ಲ ದ್ವಾದಶಿಯಲ್ಲಿ ಉಪವಾಸದಿಂದ ದೇವೇಶ್ವರನಾದ ಮಧುಸೂದನನಿಗೆ ಕೊಳಗ ಹಾಲಿನಿಂದ ಭಕ್ತಿಪೂರ್ವಕವಾಗಿ ಅಭಿಷೇಕ ಮಾಡಬೇಕು.

ನಮಸ್ತೇ ಮಧುಹಂತ್ರೇ ಚ ಜುಹುಯಾಚ್ಛಕ್ತಿತೋ ಘೃತಂ ।
ಅಷ್ಟೋತ್ತರಶತಂ ಪ್ರಾರ್ಚ್ಯ ವಿಧಿವನ್ಮಧುಸೂದನಂ ॥ ೫೧ ॥

ವಿಪಾಪೋ ಹ್ಯಶ್ವಮೇಧಾನಾಮಷ್ಟಾನಾಂ ಫಲಮಾಪ್ನುಯಾತ್ ।
ಜ್ಯೇಷ್ಠಮಾಸೇ ಸಿತೇ ಪಕ್ಷೇ ದ್ವಾದಶ್ಯಾಮುಪವಾಸಕೃತ್ ॥ ೫೨ ॥

ಕ್ಷೀರೇಣಾಢಕಮಾನೇನ ಸ್ನಾಪಯೇದ್ಯಸ್ತ್ರಿವಿಕ್ರಮಂ ।
ನಮಸ್ತ್ರಿವಿಕ್ರಮಾಯೇತಿ ಪೂಜಯೇದ್ಭಕ್ತಿಸಂಯುತಃ ॥ ೫೩ ॥

ಜುಹುಯಾತ್ಪಾಯಸೇನೈವ ಹ್ಯಷ್ಟೋತ್ತರಶತಾಹುತೀಃ ।
ಕೃತ್ವಾ ಜಾಗರಣಂ ರಾತ್ರೌ ಪುನಃ ಪೂಜಾಂ ಪ್ರಕಲ್ಪಯೇತ್ ॥ ೫೪ ॥

ಅಪೂಪವಿಂಶತಿಂ ದತ್ವಾ ಬ್ರಾಹ್ಮಣಾಯ ಸದಕ್ಷಿಣಂ ।
ದೇವ ದೇವ ಜಗನ್ನಾಥ ಪ್ರಸೀದ ಪರಮೇಶ್ವರ ॥ ೫೫ ॥

---

೫೦-೫೨. ತ್ರಿಕಾಲಪೂಜೆ, ಜಾಗರ, ಇವುಗಳನ್ನು ಮಾಡಿ ಮಧು ನಾಮಕ ದೈತ್ಯಸಂಹಾರಕನಾದವನಿಗೆ ನಮಸ್ಕಾರ ಎಂಬುದಾಗಿ ಹೇಳುತ್ತಾ ತನ್ನ ಶಕ್ತ್ಯನುಸಾರವಾಗಿ ಘೃತಹೋಮಮಾಡಬೇಕು. ವಿಧಾನೋಕ್ತಪ್ರಕಾರ ಮಧು ಸೂದನನಿಗೆ ನೂರೆಂಟು ಅರ್ಚನೆ ಮಾಡಿದರೆ ಪಾಪ ಪರಿಹಾರವಾಗಿ ಎಂಟು ಅಶ್ವಮೇಧ ಯಜ್ಞಗಳ ಫಲ ಬರುತ್ತದೆ.

೫೨-೫೩. ಜೇಷ್ಠಮಾಸದ ಶುಕ್ಲಪಕ್ಷ ದ್ವಾದಶಿಯಲ್ಲಿ ಉಪವಾಸ ಮಾಡಿ ದವನು ಆಢಕಪರಿಮಿತವಾದ ಹಾಲಿನಿಂದ ತ್ರಿವಿಕ್ರಮರೂಪಿಯಾದ ಭಗ ವಂತನನ್ನು ಭಕ್ತಿಯಿಂದ ತ್ರಿವಿಕ್ರಮನಿಗೆ ನಮಸ್ಕಾರ ಎಂದು ಹೇಳುತ್ತಾ ಪೂಜಿಸಬೇಕು.

೫೪. ಪಾಯಸದಿಂದಲೇ ನೂರೆಂಟು ಹೋಮ ಮಾಡಬೇಕು. ರಾತ್ರಿ ಜಾಗರಣೆಮಾಡಿ ಪ್ರಾತಃಕಾಲ ಪುನಃಪೂಜೆ ಮಾಡಬೇಕು.

೫೫-೫೬. ಬ್ರಾಹ್ಮಣನಿಗೆ ಇಪ್ಪತ್ತು ಅಪೂಪಗಳನ್ನು ದಕ್ಷಿಣೆಸಹಿತವಾಗಿ ದಾನಮಾಡಿ, ದೇವತೆಗಳಿಗೂ ಉತ್ತಮದೇವನು, ಜಗದೊಡೆಯನೂ ಆಗಿರುವ ಪರಮೇಶ್ವರನೇ ! ಉಪಾಯನವನ್ನು ಸ್ವೀಕರಿಸಿ ನನ್ನ ಇಷ್ಟಾರ್ಥವನ್ನು ಕೊಡು

ಉಪಾಯನಂ ಚ ಸಂಗೃಹ್ಯ ಮಮಾಭೀಷ್ಟಪ್ರದೋ ಭವ ।
ಬ್ರಾಹ್ಮಣಾನ್ಭೋಜಯೇಚ್ಛಕ್ತ್ಯಾ ಸ್ವಯಂ ಭುಂಜೀತ ವಾಗ್ಯತಃ ॥ ೫೬ ॥

ಏವಂ ಯಃ ಕುರುತೇ ವಿಪ್ರ ವ್ರತಂ ತ್ರೈವಿಕ್ರಮಂ ಪರಂ ।
ಸೋಽಷ್ಟಾನಾಂ ನರಮೇಧಾನಾಂ ವಿಪಾಪಃ ಫಲಮಾಪ್ನುಯಾತ್ ॥ ೫೭ ॥

ಆಷಾಢಶುಕ್ಲದ್ವಾದಶ್ಯಾಮುಪವಾಸೀ ಜಿತೇಂದ್ರಿಯಃ ।
ವಾಮನಂ ಪೂರ್ವಮಾನೇನ ಸ್ನಾಪಯೇತ್ಪಯಸಾ ವ್ರತೀ ॥ ೫೮ ॥

ನಮಸ್ತೇ ವಾಮನಾಯೇತಿ ದೂರ್ವಾಜ್ಯಾಷ್ಟೋತ್ತರಂ ಶತಂ ।
ಹುತ್ವಾ ಚ ಜಾಗರಂ ಕುರ್ಯಾದ್ವಾಮನಂ ಚಾರ್ಚಯೇತ್ಪುನಃ ॥ ೫೯ ॥

ಸದಕ್ಷಿಣಂ ಚ ದಧ್ಯನ್ನಂ ನಾಲಿಕೇರಫಲಾನ್ವಿತಂ ।
ಭಕ್ತ್ಯಾ ಪ್ರದದ್ಯಾದ್ವಿಪ್ರಾಯ ವಾಮನಾರ್ಚನಶಾಲಿನೇ ॥ ೬೦ ॥

---

ವನಾಗು ಎಂದು ಪ್ರಾರ್ಥಿಸಿ ಶಕ್ತ್ಯನುಸಾರ ಬ್ರಾಹ್ಮಣ ಭೋಜನಮಾಡಿಸಿ ನಿಯಮದಿಂದ ತಾನು ಭೋಜನಮಾಡಬೇಕು.

೫೭. ಈರೀತಿಯಾಗಿ ಉತ್ತಮವಾದ ತ್ರಿವಿಕ್ರಮನ ವ್ರತವನ್ನು ಮಾಡುವವನು ಪಾಪವನ್ನು ಕಳೆದುಕೊಂಡು ಎಂಟು ನರಮೇಧಯಾಗಗಳ ಫಲವನ್ನು ಹೊಂದುವನು.

೫೮. ಉಪವಾಸಮಾಡಿರುವವನು, ಜಿತೇಂದ್ರಿಯನೂ ಆದ ವ್ರತಕರ್ತನು ಆಷಾಢ ಶುಕ್ಲ ದ್ವಾದಶಿಯಲ್ಲಿ ವಾಮನರೂಪಿಯಾದ ಪರಮಾತ್ಮನಿಗೆ ಒಂದು ಬಳ್ಳ ಹಾಲಿನಿಂದ ಅಭಿಷೇಕ ಮಾಡಬೇಕು.

೫೯. ವಾಮನರೂಪಿಯಾದ ನಿನಗೆ ನಮಸ್ಕಾರವೆಂದು ಹೇಳುತ್ತಾ ಗರಿಕೆ ಮತ್ತು ತುಪ್ಪಗಳಿಂದ ನೂರೆಂಟು ಹೋಮಮಾಡಿ, ರಾತ್ರಿ ಜಾಗರಣೆ ಮಾಡಬೇಕು. ತರುವಾಯ ವಾಮನನನ್ನು ಪುನಃ ಪೂಜಿಸಬೇಕು.

೬೦. ವಾಮನದೇವನ ಪೂಜೆಯನ್ನು ಮಾಡುತ್ತಿರುವ ಬ್ರಾಹ್ಮಣನಿಗೆ ಭಕ್ತಿಯಿಂದ ತೆಂಗಿನಕಾಯಿ, ದಧ್ಯೋದನ, ದಕ್ಷಿಣೆ ಇವುಗಳನ್ನು ಕೊಡಬೇಕು.

ವಾಮನೋ ಬುದ್ಧಿದೋ ಹೋತಾ ದ್ರವ್ಯಸ್ಥೋ ವಾಮನಃ ಸದಾ ।
ವಾಮನಸ್ತಾರಕೋऽಸ್ಮಾಚ್ಚ ವಾಮನಾಯ ನಮೋನಮಃ ॥ ೬೧ ॥

ಅನೇನ ದತ್ವಾ ದಧ್ಯನ್ನಂ ಶಕ್ತಿತೋ ಭೋಜಯೇದ್ದ್ವಿಜಾನ್ ।
ಕೃತ್ವೈವಮಗ್ನಿಷ್ಟೋಮಾನಾಂ ಸ ತಸ್ಯಫಲಮಾಪ್ನುಯಾತ್ ॥ ೬೨ ॥

ಶ್ರಾವಣಸ್ಯ ಸಿತೇ ಪಕ್ಷೇ ದ್ವಾದಶ್ಯಾಮುಪವಾಸಕೃತ್ ।
ಕ್ಷೀರೇಣ ಮಧುಮಿಶ್ರೇಣ ಸ್ನಾಪಯೇಚ್ಛ್ರೀಧರಂ ವ್ರತೀ ॥ ೬೩ ॥

ನಮೋऽಸ್ತು ಶ್ರೀಧರಾಯೇತಿ ಗಂಧಾದ್ಯೈಃ ಪೂಜಯೇತ್ಕ್ರಮಾತ್ ।
ಜುಹುಯಾತ್ಪೃಷದಾಜ್ಯೇನ ಶತಮಷ್ಟೋತ್ತರಂ ಮುನೇ ॥ ೬೪ ॥

ಕೃತ್ವಾ ಚ ಜಾಗರಂ ರಾತ್ರೌ ಪುನಃ ಪೂಜಾಂ ಪ್ರಕಲ್ಪಯೇತ್ ।
ದಾತವ್ಯಂ ಚೈವ ವಿಪ್ರಾಯ ಕ್ಷೀರಾಢಕಮನುತ್ತಮಂ ॥ ೬೫ ॥

---

೬೧. ವಾಮನನು ಬುದ್ಧಿಪ್ರದನು. ಹೋತೃಸ್ಥನಾಗಿ ಹೋತೃ ಎನಿಸುವನು ದ್ರವ್ಯಸ್ಥನೂ ಅವನೇ. ವಾಮನನೇ ಈ ಸಂಸಾರ ಸಾಗರವನ್ನು ದಾಟಿಸುವವನು. ಆದುದರಿಂದ ವಾಮನನಿಗೆ ನಮಸ್ಕಾರ, ನಮಸ್ಕಾರ.

೬೨. ಎಂಬುದಾಗಿ ಹೇಳುತ್ತಾ ಯಥಾಶಕ್ತಿ ಬ್ರಾಹ್ಮಣ ಭೋಜನ ಮಾಡಿಸಬೇಕು. ಈರೀತಿ ವ್ರತವನ್ನಾಚರಿಸುವವನಿಗೆ ಅಗ್ನಿಷ್ಟೋಮ ಯಾಗಗಳ ಫಲ ಬರುತ್ತದೆ.

೬೩. ಶ್ರಾವಣಮಾಸದ ಶುಕ್ಲಪಕ್ಷ ದ್ವಾದಶಿಯಲ್ಲಿ ಉಪವಾಸಮಾಡಿದ ವ್ರತಕರ್ತನು ಶ್ರೀಧರಸ್ವಾಮಿಗೆ ಜೇನುತುಪ್ಪದಿಂದ ಸಹಿತವಾದ ಹಾಲಿನಿಂದ ಅಭಿಷೇಕಮಾಡಬೇಕು.

೬೪. ಶ್ರೀಧರಸ್ವಾಮಿಗೆ ನಮಸ್ಕಾರ ಎಂದು ಹೇಳಿ ಗಂಧ, ಪುಷ್ಪಾದಿಗಳಿಂದ ಪೂಜಿಸಬೇಕು. ನಾರದಮುನಿಯೇ! ಮೊಸರು, ತುಪ್ಪ ಇವುಗಳನ್ನು ಸೇರಿಸಿ ಅದರಿಂದ ನೂರೆಂಟಾವರ್ತಿ ಹೋಮ ಮಾಡಬೇಕು.

೬೫. ರಾತ್ರಿ ಜಾಗರಮಾಡಿ ಪ್ರಾತಃಕಾಲ ಪೂಜೆ ಮಾಡಬೇಕು. ಉತ್ತಮವಾದ ಹಾಲನ್ನು ಬ್ರಾಹ್ಮಣನಿಗೆ ಆಢಕದಷ್ಟು ದಾನಮಾಡಬೇಕು.

ದಕ್ಷಿಣಾಂ ಚ ಸವಸ್ತ್ರಾಂ ವೈ ಪ್ರದದ್ಯಾದ್ಧೇಮಕುಂಡಲೇ ।
ಮಂತ್ರೇಣಾನೇನ ವಿಪ್ರೇಂದ್ರ ಸರ್ವಕಾಮಾರ್ಥಸಿದ್ಧಯೇ ॥ ೬೬ ॥

ಕ್ಷೀರಾಬ್ಧಿಶಾಯಿನ್ದೇವೇಶ ರಮಾಕಾಂತ ಜಗತ್ಪತೇ ।
ಕ್ಷೀರದಾನೇನ ಸುಪ್ರೀತೋ ಭವ ಸರ್ವಸುಖಪ್ರದಃ ॥ ೬೭ ॥

ಸುಖಪ್ರದತ್ವಾದ್ವಿಪ್ರಾಂಶ್ಚ ಭೋಜಯೇಚ್ಛಕ್ತಿತೋ ವ್ರತೀ ।
ಏವಂ ಕೃತ್ವಾಶ್ವಮೇಧಾನಾಂ ಸಹಸ್ರಸ್ಯ ಫಲಂ ಲಭೇತ್ ॥ ೬೮ ॥

ಮಾಸಿ ಭಾದ್ರಪದೇ ಶುಕ್ಲೇ ದ್ವಾದಶ್ಯಾಂ ಸಮುಪೋಷಿತಃ ।
ಸ್ನಾಪಯೇದ್ರೋಣಪಯಸಾ ಹೃಷೀಕೇಶಂ ಜಗದ್ಗುರುಂ ॥ ೬೯ ॥

ಹೃಷೀಕೇಶ ನಮಸ್ತುಭ್ಯಮಿತಿಸಂಪೂಜಯೇನ್ನರಃ ।
ಚರುಣಾ ಮಧುಯುಕ್ತೇನ ಜುಹುಯಾಚ್ಛಕ್ತಿತೋ ವ್ರತೀ ॥ ೭೦ ॥

---

೬೬. ಎರಡು ಬಂಗಾರದ ಕಡಕುಗಳನ್ನು ವಸ್ತ್ರದಕ್ಷಿಣೆಸಹಿತವಾಗಿ ಸಕಲೇಷ್ಟಾರ್ಥಸಿದ್ಧಿಗೋಸ್ಕರ ಮುಂದಿನ ಮಂತ್ರದಿಂದ ಬ್ರಾಹ್ಮಣನಿಗೆ ದಾನ ಮಾಡಬೇಕು.

೬೭. ಮಂತ್ರ—ಕ್ಷೀರಸಾಗರಶಾಯಿಯೂ, ದೇವೇಶ್ವರನೂ, ಲಕ್ಷ್ಮೀ ಪತಿಯೂ ಜಗದೊಡೆಯನೂ ಆದ ಶ್ರೀಧರಸ್ವಾಮಿಯೇ! ನೀನು ಈ ಕ್ಷೀರದಾನ ದಿಂದ ಸಂತುಷ್ಟನಾಗಿ, ಎಲ್ಲರಿಗೂ ಸುಖದಾಯಕನಾಗು.

೬೮. ವ್ರತಾನುಷ್ಠಾತೃವು ತನ್ನ ಶಕ್ತ್ಯನುಸಾರವಾಗಿ ಬ್ರಾಹ್ಮಣರಿಗೆ ಭೋಜನಮಾಡಿಸಬೇಕು. ಅದರಿಂದ ಸುಖವುಂಟಾಗುತ್ತದೆ ಮತ್ತು ಸಾವಿರ ಅಶ್ವ ಮೇಧಯಜ್ಞಗಳ ಫಲವು ಬರುವುದು.

೬೯. ಭಾದ್ರಪದಮಾಸದ ಶುಕ್ಲಪಕ್ಷದ ದ್ವಾದಶಿಯಲ್ಲಿ ಉಪವಾಸ ಮಾಡಿ ದವನಾಗಿ ಜಗದ್ಗುರುವಾದ ಹೃಷೀಕೇಶನನ್ನು ಒಂದು ಬಳ್ಳ ಹಾಲಿನಿಂದ ಸ್ನಾನ ಮಾಡಿಸಬೇಕು.

೭೦. ಹೃಷೀಕೇಶನೇ! ನಿನಗೆ ನಮಸ್ಕಾರ ಎಂದು ಹೇಳುತ್ತಾ ಪೂಜಿಸ ಬೇಕು. ಮಧು ಸಹಿತವಾದ ಅನ್ನದಿಂದ ತನ್ನ ಶಕ್ತ್ಯನುಸಾರವಾಗಿ ವ್ರತಕರ್ತನು ಹೋಮಮಾಡಬೇಕು.

ಜಾಗರಾದೀನಿ ನಿರ್ವರ್ತ್ಯ ದದ್ಯಾದಾತ್ಮವಿದೇ ತತಃ ।
ಸಾರ್ಧಾಢಕಂ ಚ ಗೋಧೂಮಂ ದಕ್ಷಿಣಾಂ ಹೇಮಶಕ್ತಿತಃ ॥ ೭೧ ॥

ಹೃಷೀಕೇಶ ನಮಸ್ತುಭ್ಯಂ ಸರ್ವಲೋಕೈಕಹೇತವೇ ।
ಮಹ್ಯಂ ಸರ್ವಸುಖಂ ದೇಹಿ ಗೋಧೂಮಸ್ಯ ಪ್ರದಾನತಃ ॥ ೭೨ ॥

ಭೋಜಯೇದ್ಬ್ರಾಹ್ಮಣಾನ್ ಶಕ್ತ್ಯಾ ಸ್ವಯಂ ಚಾಶ್ನೀತ ವಾಗ್ಯತಃ ।
ಸರ್ವಪಾಪವಿನಿರ್ಮುಕ್ತೋ ಬ್ರಹ್ಮಮೇಧಫಲಂ ಲಭೇತ್ ॥ ೭೩ ॥

ಆಶ್ವಿನೇ ಮಾಸಿ ಶುಕ್ಲಾಯಾಂ ದ್ವಾದಶ್ಯಾಂ ಸಮುಪೋಷಿತಃ ।
ಪದ್ಮನಾಭಂ ಚ ಪಯಸಾ ಸ್ನಾಪಯೇದ್ಭಕ್ತಿತಃ ಶುಚಿಃ ॥ ೭೪ ॥

---

೭೧. ಜಾಗರಾದಿಗಳನ್ನು ಮಾಡಿದಮೇಲೆ ಅಧ್ಯಾತ್ಮಜ್ಞಾನಿಯಾದ ಬ್ರಾಹ್ಮಣನಿಗೆ ಒಂದೂವರೆ ಆಢಕ ಗೋಧಿಯನ್ನೂ, ಸುವರ್ಣ ದಕ್ಷಿಣೆಯನ್ನೂ ಸಹ ಯಥಾಶಕ್ತಿ ಕೊಡಬೇಕು.

೭೨. ತರುವಾಯ ಸಕಲ ಲೋಕಗಳಿಗೂ ಮುಖ್ಯ ಕಾರಣನಾದ ಹೃಷೀಕೇಶನಿಗೆ ನಮಸ್ಕಾರ, ಈ ಗೋಧಿಯ ದಾನದಿಂದ ನನಗೆ ಸುಖವನ್ನು ಕೊಡು ಎಂದು ಪ್ರಾರ್ಥಿಸಬೇಕು.

೭೩. ತನ್ನ ವಿಭವಾನುಗುಣವಾಗಿ ಬ್ರಾಹ್ಮಣರಿಗೆ ಭೋಜನಮಾಡಿಸಿ ನಿಯಮದಿಂದ ತಾನೂ ಭೋಜನಮಾಡಬೇಕು. ಹೀಗೆ ಈ ವ್ರತವನ್ನಾಚರಿಸುವವನು ಸಕಲ ಪಾಪಗಳನ್ನು ಕಳೆದುಕೊಂಡು ಬ್ರಹ್ಮಮೇಧವೆಂಬ ಯಜ್ಞಫಲವನ್ನು ಪಡೆಯುವನು.

೭೪. ಆಶ್ವಯುಜಮಾಸ ಶುಕ್ಲಪಕ್ಷದ ದ್ವಾದಶಿಯಲ್ಲಿ ಉಪವಾಸವಿದ್ದು ಸ್ನಾನಾದಿಗಳಿಂದ ಶುದ್ಧನಾದ ಮನುಷ್ಯನು ಭಕ್ತಿಯಿಂದ ಪದ್ಮನಾಭನಿಗೆ ಹಾಲಿನಿಂದ ಅಭಿಷೇಕಮಾಡಬೇಕು.

ನಮಸ್ತೇ ಪದ್ಮನಾಭಾಯ ಹೋಮಂ ಕುರ್ಯಾತ್ಸ್ವಶಕ್ತಿತಃ ।
ತಿಲವ್ರೀಹಿಯವಾಜ್ಯೈಶ್ಚ ಪೂಜಯೇಚ್ಚ ವಿಧಾನತಃ ॥ ೭೫ ॥

ಜಾಗರಂ ನಿಶಿ ನಿರ್ವರ್ತ್ಯ ಪುನಃ ಪೂಜಾಂ ಸಮಾಚರೇತ್ ।
ದದ್ಯಾದ್ವಿಪ್ರಾಯ ಕುಡವಂ ಮಧುನಸ್ತು ಸದಕ್ಷಿಣಂ ॥ ೭೬ ॥

ಪದ್ಮನಾಭ ನಮಸ್ತುಭ್ಯಂ ಸರ್ವಲೋಕಪಿತಾಮಹ ।
ಮಧುದಾನೇನ ಸುಪ್ರೀತೋ ಭವ ಸರ್ವಸುಖಪ್ರದಃ ॥ ೭೭ ॥

ಏವಂ ಯಃ ಕುರುತೇ ಭಕ್ತ್ಯಾ ಪದ್ಮನಾಭವ್ರತಂ ಸುಧೀಃ ।
ಬ್ರಹ್ಮಮೇಧಸಹಸ್ರಸ್ಯ ಫಲಮಾಪ್ನೋತಿ ನಿಶ್ಚಿತಂ ॥ ೭೮ ॥

ದ್ವಾದಶ್ಯಾಂ ಕಾರ್ತಿಕೇ ಶುಕ್ಲೇ ಉಪವಾಸೀ ಜಿತೇಂದ್ರಿಯಃ ।
ಕ್ಷೀರೇಣಾಢಕಮಾನೇನ ದಧ್ನಾ ವಾಽಽಜ್ಯೇನ ತಾವತಾ ॥ ೭೯ ॥

---

೭೫. ಪದ್ಮನಾಭಸ್ವಾಮಿಯಾದ ನಿನಗೆ ನಮಸ್ಕಾರವೆಂದು ಹೇಳುತ್ತಾ ಎಳ್ಳು, ಭತ್ತ, ಯವ ಮತ್ತು ತುಪ್ಪ ಇವುಗಳಿಂದ ಶಕ್ತ್ಯನುಸಾರವಾಗಿ ಹೋಮ ಮಾಡಬೇಕು. ವಿಧಾನೋಕ್ತಪ್ರಕಾರ ಪೂಜೆಯನ್ನು ಮಾಡಬೇಕು.

೭೬. ರಾತ್ರಿಯಲ್ಲಿ ಜಾಗರಣೆಮಾಡಿ ನಂತರ ಪುನಃ ಪೂಜೆಯನ್ನು ಮಾಡಬೇಕು. ಪೂಜೆಯಾದಮೇಲೆ ದಕ್ಷಿಣೆಸಹಿತವಾಗಿ ಒಂದು ಪಾವು ಜೇನು ತುಪ್ಪವನ್ನು ಬ್ರಾಹ್ಮಣನಿಗೆ ದಾನಮಾಡಬೇಕು.

೭೭. ದಾನ ಕೊಡುವಾಗ "ಸಕಲಲೋಕಕ್ಕೂ ಪಿತಾಮಹನಾದ ಪದ್ಮನಾಭನೇ! ನಿನಗೆ ನಮಸ್ಕಾರ, ಜೇನುತುಪ್ಪದ ದಾನದಿಂದ ಸಂತುಷ್ಟನಾಗಿ ಸಕಲ ವಿಷಯಗಳಲ್ಲಿಯೂ ಸುಖಪ್ರದನಾಗಬೇಕು" ಎಂದು ಹೇಳಬೇಕು.

೭೮. ಈರೀತಿ ಭಕ್ತಿಯಿಂದ ಪದ್ಮನಾಭವ್ರತವನ್ನಾಚರಿಸುವವನಿಗೆ ನಿಜವಾಗಿಯೂ ಒಂದು ಸಾವಿರ ಬ್ರಹ್ಮಮೇಧಗಳ ಫಲವು ಲಭಿಸುತ್ತದೆ.

೭೯-೮೦. ಉಪವಾಸಮಾಡಿದ, ಜಿತೇಂದ್ರಿಯನಾದ, ಮನುಷ್ಯನು ಕಾರ್ತಿಕಮಾಸದ ಶುಕ್ಲಪಕ್ಷದ್ವಾದಶಿಯಲ್ಲಿ ಆಢಕಪರಿಮಿತವಾದ ಹಾಲು ಅಥವಾ

**ನಮೋ ದಾಮೋದರಾಯೇತಿ ಸ್ನಾಪಯೇದ್ಭಕ್ತಿಭಾವತಃ ।**
**ಅಷ್ಟೋತ್ತರಶತಂ ಹುತ್ವಾ ಮಧ್ವಾಜ್ಯಾಕ್ತತಿಲಾಹುತೀಃ ॥ ೮೦ ॥**

**ಜಾಗರಂ ನಿಯತಃ ಕುರ್ಯಾತ್ತ್ರಿಕಾಲಾರ್ಚನತತ್ಪರಃ ।**
**ಪ್ರಾತಃ ಸಂಪೂಜಯೇದ್ದೇವಂ ಪದ್ಮಪುಷ್ಪೈರ್ಮನೋರಮೈಃ ॥ ೮೧ ॥**

**ಪುನರಷ್ಟೋತ್ತರಶತಂ ಜುಹುಯಾತ್ಸಘೃತೈಸ್ತಿಲೈಃ ।**
**ಪಂಚಭಕ್ಷ್ಯಯುತಂ ಚಾನ್ನಂ ದದ್ಯಾದ್ವಿಪ್ರಾಯ ಭಕ್ತಿತಃ ॥ ೮೨ ॥**

**ದಾಮೋದರ ಜಗನ್ನಾಥ ಸರ್ವಕಾರಣಕಾರಣ ।**
**ತ್ರಾಹಿ ಮಾಂ ಕೃಪಯಾ ದೇವ ಶರಣಾಗತಪಾಲಕ ॥ ೮೩ ॥**

**ಅನೇನ ದತ್ವಾ ದಾನಂ ಚ ಶ್ರೋತ್ರಿಯಾಯ ಕುಟುಂಬಿನೇ ।**
**ದಕ್ಷಿಣಾಂ ಚ ಯಥಾಶಕ್ತ್ಯಾ ಬ್ರಾಹ್ಮಣಾಂಶ್ಚಾಪಿ ಭೋಜಯೇತ್ ॥ ೮೪ ॥**

---

ಮೊಸರು ಇಲ್ಲವೆ ಅಷ್ಟು ತುಪ್ಪ ಇವುಗಳಿಂದ "ದಾಮೋದರನಿಗೆ ನಮುಸ್ಕಾರ" ಎಂದು ಹೇಳುತ್ತಾ ಭಕ್ತಿಪೂರ್ವಕವಾಗಿ ದಾಮೋದರಸ್ವಾಮಿಗೆ ಅಭಿಷೇಕ ಮಾಡಬೇಕು.

೮೦-೮೧. ಜೇನುತುಪ್ಪ ಮತ್ತು ತುಪ್ಪ ಇವುಗಳಿಂದ ಮಿಶ್ರಿತವಾದ ಎಳ್ಳಿನಿಂದ ನೂರೆಂಟಾವರ್ತಿ ಹೋಮಮಾಡಿ ಕಾಲತ್ರಯದಲ್ಲಿಯೂ ಪೂಜೆಯಲ್ಲಿ ನಿರತನಾಗಿ ನಿಯಮದಿಂದ ಜಾಗರಣೆಯನ್ನು ಮಾಡಬೇಕು. ತರುವಾಯ ಬೆಳಗ್ಗೆ ಮನೋಹರವಾದ ಕಮಲಪುಷ್ಪಗಳಿಂದ ದೇವರನ್ನು ಪೂಜಿಸಬೇಕು.

೮೨. ಪುನಃ ನೂರೆಂಟಾವರ್ತಿ ಘೃತಮಿಶ್ರಿತವಾದ ಎಳ್ಳಿನಿಂದ ಹೋಮ ಮಾಡಬೇಕು. ಐದು ಭಕ್ಷ್ಯಸಹಿತವಾದ ಅನ್ನವನ್ನು ಭಕ್ತಿಯಿಂದ ಬ್ರಾಹ್ಮಣನಿಗೆ ದಾನಮಾಡಬೇಕು.

೮೩. ಜಗದೊಡೆಯನು, ಲೋಕಸಿದ್ಧವಾದ ಕಾರಣಗಳಿಗೆ ಶಕ್ತಿಪ್ರದನು, ಶರಣಾಗತರಕ್ಷಕನೂ ಆಗಿರುವ ದಾಮೋದರದೇವನೇ ! ದಯೆಯಿಂದ ನನ್ನನ್ನು ರಕ್ಷಿಸು.

೮೪. ಎಂದು ಪ್ರಾರ್ಥಿಸುತ್ತಾ, ಶ್ರೋತ್ರಿಯನು, ಕುಟುಂಬಿಯೂ ಆದ ಬ್ರಾಹ್ಮಣನಿಗೆ ದಕ್ಷಿಣೆಯನ್ನೂ ಭಕ್ಷ್ಯಸಹಿತ ಅನ್ನವನ್ನೂ ದಾನಮಾಡಿ, ತನ್ನ ಶಕ್ತ್ಯನುಸಾರವಾಗಿ ಬ್ರಾಹ್ಮಣ ಭೋಜನ ಮಾಡಿಸಬೇಕು.

ಏವಂ ಕೃತ್ವಾ ವ್ರತಂ ಸಮ್ಯಗಶ್ನೀಯಾದ್ಬಂಧುಭಿಃ ಸಹ ।
ಅಶ್ವಮೇಧಸಹಸ್ರಾಣಾಂ ದ್ವಿಗುಣಂ ಫಲಮುಶ್ನುತೇ ॥ ೮೫ ॥

ಏವಂ ಕುರ್ಯಾದ್ವ್ರತೀಯಸ್ತು ದ್ವಾದಶೀವ್ರತಮುತ್ತಮಂ ।
ಸಂವತ್ಸರಂ ಮುನಿಶ್ರೇಷ್ಠ ಸ ಯಾತಿ ಪರಮಂ ಪದಂ ॥ ೮೬ ॥

ಏಕಮಾಸೇ ದ್ವಿಮಾಸೇ ವಾ ಯಃ ಕುರ್ಯಾದ್ಭಕ್ತಿತತ್ಪರಃ ।
ತತ್ತತ್ಫಲಮವಾಪ್ನೋತಿ ಪ್ರಾಪ್ನೋತಿ ಚ ಹರೇಃ ಪದಂ ॥ ೮೭ ॥

ಪೂರ್ಣಂ ಸಂವತ್ಸರಂ ಕೃತ್ವಾ ಕುರ್ಯಾದುದ್ಯಾಪನಂ ವ್ರತೀ ।
ಮಾರ್ಗಶೀರ್ಷೇ ಸಿತೇ ಪಕ್ಷೇ ದ್ವಾದಶ್ಯಾಂ ಚ ಮುನೀಶ್ವರ ॥ ೮೮ ॥

ಸ್ನಾತ್ವಾ ಪ್ರಾತರ್ಯಥಾಚಾರಂ ದಂತಧಾವನಪೂರ್ವಕಂ ।
ಶುಕ್ಲಮಾಲ್ಯಾಂಬರಧರಃ ಶುಕ್ಲಗಂಧಾನುಲೇಪನಃ ॥ ೮೯ ॥

---

೮೫. ಈರೀತಿ ಚೆನ್ನಾಗಿ ವ್ರತವನ್ನಾಚರಿಸಿ ಬಂಧುಗಳೊಡನೆ ತಾನು ಭೋಜನಮಾಡಬೇಕು. ಹೀಗೆ ಮಾಡಿದರೆ ಸಹಸ್ರ ಅಶ್ವಮೇಧಗಳ ಫಲಕ್ಕೆ ದ್ವಿಗುಣಫಲವುಂಟಾಗುತ್ತದೆ.

೮೬. ಮುನಿಶ್ರೇಷ್ಠನೇ! ಉಕ್ತರೀತಿಯಿಂದ ಉತ್ತಮವಾದ ದ್ವಾದಶೀ ವ್ರತವನ್ನು ಒಂದುವರ್ಷ ಮಾಡಿದವನು ಪರಮಪದವಿ (ಮೋಕ್ಷ) ಯನ್ನು ಹೊಂದುತ್ತಾನೆ.

೮೭. ಒಂದು ತಿಂಗಳು ಅಥವಾ ಎರಡು ತಿಂಗಳು ಭಕ್ತಿಯಿಂದ ಈ ವ್ರತವನ್ನಾಚರಿಸುವವನು ಆಯಾಯಾ ವ್ರತಕ್ಕೆ ವಿಹಿತವಾದ ಫಲವನ್ನು ಹೊಂದಿ ಹರಿಪದವನ್ನು ಸೇರುತ್ತಾನೆ.

೮೮-೯೧. ಸಂಪೂರ್ಣವಾಗಿ ಒಂದುವರ್ಷ ಈ ವ್ರತವನ್ನು ಮಾಡಿ ಉದ್ಯಾಪನೆಯನ್ನು ಮಾಡಬೇಕು. ಮುನೀಶ್ವರನೇ! ಉದ್ಯಾಪನೆಯ ವಿಧಾನ ವನ್ನು ಹೇಳುವೆನು—ಮಾರ್ಗಶಿರಮಾಸದ ಶುಕ್ಲ ದ್ವಾದಶಿಯಲ್ಲಿ ಪದ್ಧತಿಯಂತೆ ಬೆಳಗ್ಗೆ ದಂತಧಾವನವನ್ನು ಮಾಡಿಕೊಂಡು ಸ್ನಾನಮಾಡಿದಮೇಲೆ ಪರಿಶುದ್ಧ ವಾದ ವಸ್ತ್ರ ಮತ್ತು ಮಾಲಿಕೆಯನ್ನು ಧರಿಸಿ ಬಿಳಿಯ ಗಂಧವನ್ನು ಹಚ್ಚಿಕೊಂಡು

ಮಂಡಪಂ ಕಾರಯೇದ್ದಿವ್ಯಂ ಚತುರಸ್ರಂ ಸುಶೋಭನಂ ।
ಘಂಟಾಚಾಮರಸಂಯುಕ್ತಂ ಕಿಂಕಿಣೀರವಶೋಭಿತಂ । ॥ ೯೦ ॥

ಅಲಂಕೃತಂ ಪುಷ್ಪಮಾಲ್ಯೈರ್ವಿತಾನಧ್ವಜರಾಜಿತಂ ।
ಛಾದಿತಂ ಶುಕ್ಲವಸ್ತ್ರೇಣ ದೀಪಮಾಲಾವಿಭೂಷಿತಂ ॥ ೯೧ ॥

ತನ್ಮಧ್ಯೇ ಸರ್ವತೋಭದ್ರಂ ಕುರ್ಯಾತ್ಸಮ್ಯಗಲಂಕೃತಂ ।
ತಸ್ಯೋಪರಿ ನ್ಯಸೇತ್ಕುಂಭಾನ್ದ್ವಾದಶಾಂಬುಪ್ರಪೂರಿತಾನ್ ॥ ೯೨ ॥

ಏಕೇನ ಶುಕ್ಲವಸ್ತ್ರೇಣ ಸಮ್ಯಕ್ಸಂಶೋಧಿತೇನ ಚ ।
ಸರ್ವಾನಾಚ್ಛಾದಯೇತ್ಕುಂಭಾನ್ಪಂಚರತ್ನಸಮನ್ವಿತಾನ್ ॥ ೯೩ ॥

ಲಕ್ಷ್ಮೀನಾರಾಯಣಂ ದೇವಂ ಕಾರಯೇದ್ಭಕ್ತಿಮಾನ್ವ್ರತೀ ।
ಹೇಮ್ನಾ ವಾ ರಜತೇನಾಪಿ ತಥಾ ತಾಮ್ರೇಣ ವಾ ದ್ವಿಜ ॥ ೯೪ ॥

---

ಚದರವೂ, ಮಂಗಳಕರವೂ, ಘಂಟೆ, ಚಾಮರ ಇವುಗಳಿಂದ ಯುಕ್ತವಾದುದು, ಕಿಂಕಿಣೀಶಬ್ದದಿಂದ ಶೋಭಾಯಮಾನವಾದುದು, ಪುಷ್ಪಮಾಲಿಕೆಗಳಿಂದ ಅಲಂಕರಿಸಲ್ಪಟ್ಟುದು, ತೋರಣ ಮತ್ತು ಪತಾಕೆಗಳಿಂದ ಪ್ರಕಾಶಮಾನವಾಗಿರುವುದು, ಬಿಳಿಯುಬಟ್ಟೆಯಿಂದಾಚ್ಛಾದಿತವು, ದೀಪಮಾಲಿಕೆಯಿಂದಲಂಕೃತವೂ ಆಗಿರುವ ದಿವ್ಯ ಮಂಟಪವನ್ನು ರಚಿಸಬೇಕು.

೯೨. ಆ ಮಂಟಪದ ಮಧ್ಯಭಾಗದಲ್ಲಿ ಚೆನ್ನಾಗಿ ಅಲಂಕರಿಸಲ್ಪಟ್ಟ ಸರ್ವತೋಭದ್ರವೆಂಬ ಮಂಡಲವನ್ನು ರಚಿಸಬೇಕು. ಅದರಮೇಲೆ ಉದಕಪೂರ್ಣವಾದ ಹನ್ನೆರಡು ಕಲಶ (ತಂಬಿಗೆ) ಗಳನ್ನು ಸ್ಥಾಪನೆ ಮಾಡಬೇಕು.

೯೩. ಶುಭ್ರವಾದ ಒಂದು ಬಿಳಿಯ ಬಟ್ಟೆಯಿಂದ ಪಂಚರತ್ನಗಳಿಂದ ಕೂಡಿದ ಸಕಲ ಕಲಶಗಳನ್ನೂ ಹೊದಿಸಬೇಕು.

೯೪. ದ್ವಿಜನೇ! ವ್ರತಕರ್ತನು ಬಂಗಾರ ಅಥವಾ ಬೆಳ್ಳಿ ಅಥವಾ ತಾಮ್ರ ಇವುಗಳಿಂದ ಲಕ್ಷ್ಮೀನಾರಾಯಣ ಪ್ರತಿಮೆಯನ್ನು ಭಕ್ತಿಯಿಂದ ಮಾಡಿಸಬೇಕು.

ಸ್ಥಾಪಯೇತ್ಪ್ರತಿಮಾಂ ತಾಂ ಚ ಕುಂಭೋಪರಿ ಸುಸಂಯಮೀ ।
ತನ್ಮೂಲ್ಯಂ ವಾ ದ್ವಿಜಶ್ರೇಷ್ಠ ಕಾಂಚನಂ ಚ ಸ್ವಶಕ್ತಿತಃ ॥ ೯೫ ॥

ಸರ್ವವ್ರತೇಷು ಮತಿಮಾನ್ವಿತ್ತಶಾಠ್ಯಂ ನ ಕಾರಯೇತ್ ।
ಯದಿ ಕುರ್ಯಾತ್ ಕ್ಷಯಂ ಯಾತಿ ತಸ್ಯಾಯುರ್ಧನಸಂಪದಃ ॥ ೯೬ ॥

ಅನಂತಶಾಯಿನಂ ದೇವಂ ನಾರಾಯಣಮನಾಮಯಂ ।
ಪಂಚಾಮೃತೇನ ಪ್ರಥಮಂ ಸ್ನಾಪಯೇದ್ಭಕ್ತಿಸಂಯುತಃ ॥ ೯೭ ॥

ನಾಮಭಿಃ ಕೇಶವಾದ್ಯೈಶ್ಚ ಹ್ಯುಪಚಾರಾನ್ಪ್ರಕಲ್ಪಯೇತ್ ।
ರಾತ್ರೌ ಜಾಗರಣಂ ಕುರ್ಯಾತ್ಪುರಾಣಶ್ರವಣಾದಿಭಿಃ ॥ ೯೮ ॥

ಜಿತನಿದ್ರೋ ಭವೇತ್ಸಮ್ಯಕ್ಸೋಪವಾಸೋ ಜಿತೇಂದ್ರಿಯಃ ।
ತ್ರಿಕಾಲಮರ್ಚಯೇದ್ದೇವಂ ಯಥಾವಿಭವವಿಸ್ತರಂ ॥ ೯೯ ॥

---

೯೫. ನಿಗೃಹೀತೇಂದ್ರಿಯನಾಗಿ ವ್ರತಕರ್ತನು ಆ ಪ್ರತಿಮೆಯನ್ನು ಕಲಶದಮೇಲೆ ಇಡಬೇಕು. ಅಥವಾ ಪ್ರತಿಮೆಯ ಕ್ರಯದಷ್ಟು ಬಂಗಾರವನ್ನಾದರೂ ತನ್ನ ವಿಭವಾನುಗುಣವಾಗಿ ಕಲಶದಲ್ಲಿಡಬೇಕು.

೯೬. ಬದ್ಧಿವಂತನು ಸಕಲವ್ರತಗಳಲ್ಲಿಯೂ ದ್ರವ್ಯಲೋಭವನ್ನು ಮಾಡಬಾರದು. ಒಂದುವೇಳೆ ಲೋಭಮಾಡಿದರೆ ಅಂತಹವನ ಆಯುಸ್ಸು, ಹಣ, ಐಶ್ವರ್ಯ ಇವುಗಳೆಲ್ಲವೂ ಕ್ಷೀಣವಾಗುತ್ತವೆ.

೯೭. ಶೇಷಶಾಯಿಯು, ನಿರ್ದೋಷನೂ ಆದ ನಾರಾಯಣ ದೇವನನ್ನು ಪಂಚಾಮೃತದಿಂದ ಭಕ್ತಿಪೂರ್ವಕವಾಗಿ ಸ್ನಾನಮಾಡಿಸಬೇಕು.

೯೮. ಕೇಶವಾದಿನಾಮಗಳಿಂದ ಪುಷ್ಪಗಂಧಾದ್ಯುಪಚಾರಗಳನ್ನು ಸಮರ್ಪಿಸಭೇಕು. ಪುರಾಣ ಹರಿಕಥೆ ಮುಂತಾದುವುಗಳ ಶ್ರವಣದಿಂದ ರಾತ್ರಿ ಜಾಗರಣೆ ಮಾಡಬೇಕು.

೯೯. ಇಂದ್ರಿಯನಿಗ್ರಹಮಾಡಿಕೊಂಡು, ಉಪವಾಸದಿಂದ ನಿದ್ರೆಯಿಲ್ಲದೆ ರಾತ್ರಿಯನ್ನು ಕಳೆಯಬೇಕು. ಹೀಗೆ ತನ್ನ ಐಶ್ವರ್ಯಾನುಗುಣವಾಗಿ ಕಾಲತ್ರಯದಲ್ಲಿಯೂ ದೇವರನ್ನು ಪೂಜಿಸಬೇಕು.

**ತತಃ ಪ್ರಾತಃ ಸಮುತ್ಥಾಯ ಪ್ರಾತಃಕೃತ್ಯಂ ಸಮಾಪ್ಯ ಚ ।**
**ತಿಲಹೋಮಾನ್ವ್ಯಾಹೃತಿಭಿಃ ಸಹಸ್ರಂ ಕಾರಯೇದ್ದ್ವಿಜೈಃ ॥ ೧೦೦ ॥**

**ತತಃ ಸಂಪೂಜಯೇದ್ದೇವಂ ಗಂಧಪುಷ್ಪಾದಿಭಿಃಕ್ರಮಾತ್ ।**
**ದೇವಸ್ಯ ಪುರತಃ ಕುರ್ಯಾತ್ಪುರಾಣಶ್ರವಣಂ ತತಃ ॥ ೧೦೧ ॥**

**ದದ್ಯಾದ್ದ್ವಾದಶವಿಪ್ರೇಭ್ಯೋ ದಧ್ಯನ್ನಂ ಪಾಯಸಂ ತಥಾ ।**
**ಅಪೂಪೈರ್ದಶಭಿರ್ಯುಕ್ತಂ ಸಘೃತಂ ಚ ಸದಕ್ಷಿಣಂ ॥ ೧೦೨ ॥**

**ದೇವದೇವ ಜಗನ್ನಾಥ ಭಕ್ತಾನುಗ್ರಹವಿಗ್ರಹ ।**
**ಗೃಹಾಣೋಪಾಯನಂ ಕೃಷ್ಣ ಸರ್ವಾಭೀಷ್ಟಪ್ರದೋ ಭವ ॥ ೧೦೩ ॥**

**ಅನೇನೋಪಾಯನಂ ದತ್ವಾ ಪ್ರಾರ್ಥಯೇತ್ಪ್ರಾಂಜಲಿಃ ಸ್ಥಿತಃ ।**
**ಆಧಾಯ ಜಾನುನೀ ಭೂಮೌ ವಿನಯಾವನತೋ ವ್ರತೀ ॥ ೧೦೪ ॥**

---

೧೦೦. ಆಮೇಲೆ ಬೆಳಗ್ಗೆ ಎದ್ದು ಪ್ರಾತಃಕಾಲ ಕರ್ತವ್ಯವಾದ ನಿತ್ಯ ಕರ್ಮವನ್ನು ಮುಗಿಸಿ, ವ್ಯಾಹೃತಿಮಂತ್ರಗಳಿಂದ ಒಂದುಸಾವಿರ ತಿಲಹೋಮುಗಳನ್ನು ಬ್ರಾಹ್ಮಣರಿಂದ ಮಾಡಿಸಬೇಕು.

೧೦೧. ಅನಂತರ ಗಂಧ, ಹೂವು ಮುಂತಾದವುಗಳಿಂದ ಕ್ರಮವಾಗಿ ದೇವರ ಪೂಜೆಯನ್ನು ಮಾಡಬೇಕು. ಆಮೇಲೆ ದೇವರ ಸನ್ನಿಧಿಯಲ್ಲಿ ಪುರಾಣ ಶ್ರವಣ ಮಾಡಬೇಕು.

೧೦೨. ಮೊಸರನ್ನ, ಪಾಯಸ, ಹತ್ತು ಅಪೂಪಗಳು, ತುಪ್ಪ ಮತ್ತು ದಕ್ಷಿಣೆ ಇವುಗಳನ್ನು ಹನ್ನೆರಡುಜನ ಬ್ರಾಹ್ಮಣರಿಗೆ ಕೊಡಬೇಕು.

೧೦೩. ದೇವದೇವೋತ್ತಮನು, ಜಗದೊಡೆಯನು, ಭಕ್ತರಿಗೆ ಅನುಗ್ರಹಮಾಡುವ ಮೂರ್ತಿಯೂ ಆಗಿರುವ ಕೃಷ್ಣನೇ! ಈ ಕಾಣಿಕೆಯನ್ನು ಸ್ವೀಕರಿಸು, ಸಕಲೇಷ್ಟಾರ್ಥಗಳನ್ನೂ ದಯಪಾಲಿಸು ಎಂಬ ಮಂತ್ರವನ್ನು ಮೇಲ್ಕಂಡ ದಾನ ಕೊಡುವಾಗ ಹೇಳಬೇಕು.

೧೦೪. ವ್ರತಕರ್ತನು ಉಕ್ತಮಂತ್ರದಿಂದ ಕಾಣಿಕೆಯನ್ನು ಕೊಟ್ಟು ಭೂಮಿಯಲ್ಲಿ ಮೊಣಕಾಲನ್ನೂರಿ, ವಿನಯದಿಂದ ಬಗ್ಗಿ, ಕೈಮುಗಿದುಕೊಂಡವನಾಗಿ ಪ್ರಾರ್ಥನೆಮಾಡಬೇಕು.

ನಮೋ ನಮಸ್ತೇ ಸುರರಾಜರಾಜ
ನಮೋಸ್ತು ತೇ ದೇವ ಜಗನ್ನಿವಾಸ ।
ಕುರುಷ್ವ ಸಂಪೂರ್ಣಫಲಂ ಮಮಾದ್ಯ
ನಮೋಸ್ತು ತುಭ್ಯಂ ಪುರುಷೋತ್ತಮಾಯ ॥ ೧೦೫ ॥

ಇತಿ ಸಂಪ್ರಾರ್ಥಯೇದ್ವಿಪ್ರಾನ್ದೇವಂ ಚ ಪುರುಷೋತ್ತಮಂ ।
ದದ್ಯಾದರ್ಘ್ಯಂ ಚ ದೇವಾಯ ಮಹಾಲಕ್ಷ್ಮೀಯುತಾಯ ವೈ ॥ ೧೦೬ ॥

ಲಕ್ಷ್ಮೀಪತೇ ನಮಸ್ತುಭ್ಯಂ ಕ್ಷೀರಾರ್ಣವನಿವಾಸಿನೇ ।
ಅರ್ಘ್ಯಂ ಗೃಹಾಣ ದೇವೇಶ ಲಕ್ಷ್ಮ್ಯಾ ಚ ಸಹಿತಃ ಪ್ರಭೋ ॥ ೧೦೭ ॥

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪೋಯಜ್ಞಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಂ ॥ ೧೦೮ ॥

---

೧೦೫. ದೇವದೇವೋತ್ತಮರಾದ ಬ್ರಹ್ಮಾದಿಗಳಿಗೆ ಪ್ರಭುವಾದ ನಿನಗೆ ನಮಸ್ಕಾರ, ಜಗದಂತರ್ಯಾಮಿಯಾದ ದೇವನೇ! ನಿನಗೆ ನಮಸ್ಕಾರ, ನಮಸ್ಕಾರ, ನನ್ನ ವ್ರತವು ಸಂಪೂರ್ಣಫಲಪ್ರದವಾಗುವಂತೆ ಅನುಗ್ರಹಿಸು, ಪುರುಷೋತ್ತಮನಾದ ನಿನಗೆ ನಮಸ್ಕಾರ.

೧೦೬-೧೦೭. ಹೀಗೆ ಬ್ರಾಹ್ಮಣರನ್ನು ಮತ್ತು ಪುರುಷೋತ್ತಮದೇವನನ್ನೂ ಪ್ರಾರ್ಥಿಸಬೇಕು. ಆಮೇಲೆ ಲಕ್ಷ್ಮೀಪತಿಯೇ! ನಿನಗೆ ನಮಸ್ಕಾರ, ಕ್ಷೀರಸಾಗರಶಯನನೇ! ನಿನಗೆ ನಮಸ್ಕಾರ, ಲಕ್ಷ್ಮೀದೇವಿಯರಿಂದ ಸಹಿತನಾದ ಪ್ರಭುದೇವನೇ! ಅರ್ಘ್ಯವನ್ನು ಸ್ವೀಕರಿಸು ಎಂದು ಹೇಳುತ್ತಾ ಅರ್ಘ್ಯ ಕೊಡಬೇಕು.

೧೦೮. ಯಾವ ಭಗವಂತನ ನಾಮಸ್ಮರಣೆ ಮತ್ತು ಸಂಕೀರ್ತನೆಯಿಂದ ತಪಸ್ಸು, ಯಜ್ಞಕರ್ಮ ಮುಂತಾದುವುಗಳಲ್ಲಿ ಸಂಭವಿಸಿದ ನ್ಯೂನತೆಯು ಹೋಗಿ ಸಂಪೂರ್ಣತ್ವವು ಲಭಿಸುತ್ತದೆಯೋ ಅಂತಹ ನಾರಾಯಣನನ್ನು ನಮಸ್ಕರಿಸುತ್ತೇನೆ.

ಇತಿ ವಿಜ್ಞಾಪ್ಯ ದೇವೇಶಂ ತತ್ಸರ್ವಂ ಸಂಯಮೀ ವ್ರತೀ ।
ಪ್ರತಿಮಾಂ ದಕ್ಷಿಣಾಯುಕ್ತಾಮಾಚಾರ್ಯಾಯ ನಿವೇದಯೇತ್ ॥ ೧೦೯ ॥

ಬ್ರಾಹ್ಮಣಾನ್ಭೋಜಯೇತ್ಪಶ್ಚಾಚ್ಛಕ್ತ್ಯಾ ದದ್ಯಾಚ್ಚ ದಕ್ಷಿಣಾಂ ।
ಭುಂಜೀತ ವಾಗ್ಯತಃ ಪಶ್ಚಾತ್ಸ್ವಯಂ ಬಂಧುಜನೈರ್ವೃತಃ ॥ ೧೧೦ ॥

ಆಸಾಯಂ ಶ್ರುಣುಯಾದ್ವಿಷ್ಣೋಃ ಕಥಾಂ ವಿದ್ವಜ್ಜನೈಸ್ಸಹ ।
ಇತ್ಯೇವಂ ಕುರುತೇ ಯಸ್ತು ಮನುಜೋ ದ್ವಾದಶೀವ್ರತಂ ॥ ೧೧೧ ॥

ಸರ್ವಾನ್ಕಾಮಾನ್ಸ ಆಪ್ನೋತಿ ಪರತ್ರೇಹ ಚ ನಾರದ ।
ತ್ರಿಸಪ್ತಕುಲಸಂಯುಕ್ತಃ ಸರ್ವಪಾಪವಿವರ್ಜಿತಃ ॥ ೧೧೨ ॥

---

೧೦೯. ನಿಯಮದಿಂದ ವ್ರತವನ್ನಾಚರಿಸುವವನು ಉಕ್ತರೀತಿಯಾಗಿ ದೇವೇಶ್ವರನಲ್ಲಿ ಎಲ್ಲವನ್ನೂ ವಿಜ್ಞಾಪಿಸಿ, ಪ್ರತಿಮೆಯನ್ನು ದಕ್ಷಿಣೆ ಸಹಿತವಾಗಿ ಆಚಾರ್ಯರಿಗೆ ಸಮರ್ಪಿಸಬೇಕು.

೧೧೦. ಆಮೇಲೆ ಬ್ರಾಹ್ಮಣರಿಗೆ ಭೋಜನಮಾಡಿಸಿ ಯಥಾಶಕ್ತಿ ದಕ್ಷಿಣೆ ಕೊಡಬೇಕು. ಅನಂತರ ನಿಯಮಯುಕ್ತನಾಗಿ ಬಂಧುಜನರೊಡನೆ ತಾನು ಭೋಜನಮಾಡಬೇಕು.

೧೧೧-೧೧೨. ಸಾಯಂಕಾಲವಾಗುವವರೆಗೂ ಪಂಡಿತರ ಸಹಿತವಾಗಿ ವಿಷ್ಣುಚರಿತ್ರೆಯನ್ನು ಶ್ರವಣಮಾಡಬೇಕು. ಈಪ್ರಕಾರ ದ್ವಾದಶೀವ್ರತವನ್ನು ಆಚರಿಸುವ ಮನುಷ್ಯನು ಈಲೋಕ ಪರಲೋಕಗಳಲ್ಲಿ ಸಕಲ ಇಷ್ಟಾರ್ಥಗಳನ್ನೂ ಹೊಂದುವನು. ನಾರದನೇ ! ಅಷ್ಟೇ ಅಲ್ಲ, ಸಕಲ ಪಾಪಗಳನ್ನೂ ಪರಿಹರಿಸಿ ಕೊಂಡು, ಇಪ್ಪತ್ತೊಂದು ಕುಲಸಹಿತವಾಗಿ ದುಃಖಸಂಬಂಧವಿಲ್ಲದ ವಿಷ್ಣುಲೋಕ ವನ್ನು ಪಡೆಯುವನು.

**ಪ್ರಯಾತಿ ವಿಷ್ಣುಭವನಂ ಯತ್ರ ಗತ್ವಾ ನ ಶೋಚತಿ ।**
**ಯ ಇದಂ ಶೃಣಯಾದ್ವಿಪ್ರ ದ್ವಾದಶೀವ್ರತಮುತ್ತಮಂ ।**
**ವಾಚಯೇದ್ವಾಽಪಿ ಸ ನರೋ ವಾಜಪೇಯಫಲಂ ಲಭೇತ್ ॥ ೧೧೩ ॥**

**ಇತಿ ಶ್ರೀ ಬೃಹನ್ನಾರದೀಯಪುರಾಣೇ ಪೂರ್ವಭಾಗೇ ಪ್ರಥಮಪಾದೇ ವ್ರತಾಖ್ಯಾನೇ ಮಾರ್ಗಶೀರ್ಷಶುಕ್ಲದ್ವಾದಶೀವ್ರತಕಥನಂ ನಾಮ ಸಪ್ತದಶೋಽಧ್ಯಾಯಃ**

---

೧೧೩. ಈ ದ್ವಾದಶೀವ್ರತದ ಉತ್ತಮವಾದ ಮಹಿಮೆ, ವಿಧಾನ ಮುಂತಾದುವನ್ನು ಶ್ರವಣಮಾಡುವ ಅಥವಾ ಶ್ರವಣ ಮಾಡಿಸುವ ಮನುಷ್ಯನು ವಾಜಪೇಯಯಾಗದ ಫಲವನ್ನು ಹೊಂದುವನು.

ಇಂತು ಶ್ರೀ ಬೃಹನ್ನಾರದೀಯ ಪುರಾಣದೊಳು ಪೂರ್ವಭಾಗ ಪ್ರಥಮಪಾದದ ವ್ರತಾಖ್ಯಾನವೆಂಬ ಪ್ರಕರಣದಲ್ಲಿ ಮಾರ್ಗಶೀರ್ಷ ಶುಕ್ಲ ದ್ವಾದಶೀ ವ್ರತಕಥನ ವೆಂಬ ಹದಿನೇಳನೆಯ ಅಧ್ಯಾಯವು ಸಮಾಪ್ತವಾದುದು.

## ಕಥಾಸಾರಾಂಶ

ಈ ಅಧ್ಯಾಯದಲ್ಲಿ ಸನಕನು ಮಾರ್ಗಶೀರ್ಷ ಶುಕ್ಲ ದ್ವಾದಶೀ ಮೊದಲು ಪ್ರತಿತಿಂಗಳಿನ ಶುಕ್ಲ ದ್ವಾದಶಿಯಲ್ಲಿಯೂ ಕರ್ತವ್ಯವ್ರತಗಳನ್ನು, ಅವುಗಳ ವಿಧಾನ, ಫಲ, ಮಾಹಾತ್ಮ್ಯ ಮುಂತಾದುವುಗಳಿಂದ ಸಹಿತವಾಗಿ ನಾರದನಿಗೆ ಹೇಳಿ ಒಂದುವರ್ಷವಾದ ನಂತರ ಮಾರ್ಗಶೀರ್ಷ ಶುಕ್ಲ ದ್ವಾದಶಿಯದಿವಸ ಉದ್ಯಾಪನೆಯನ್ನು ಮಾಡಬೇಕೆಂದು ವಿಧಿಸಿ ಅದರ ಪ್ರಕಾರವನ್ನೆಲ್ಲಾ ವಿಸ್ತಾರವಾಗಿ ಉಪದೇಶಿಸಿರುತ್ತಾನೆ. ಕೊನೆಯಲ್ಲಿ ಈ ಉಪಾಖ್ಯಾನದ ಶ್ರವಣ, ಪಠನ ಫಲವೂ ಸಹ ನಿರೂಪಿತವಾಗಿದೆ.



# ಅಷ್ಟಾದಶೋಽಧ್ಯಾಯಃ

ಸನಕ ಉವಾಚ

ಅನ್ಯದ್ವ್ರತವರಂ ವಕ್ಷ್ಯೇ ಶೃಣುಷ್ವ ಮುನಿಸತ್ತಮ ।
ಸರ್ವಪಾಪಹರಂ ಪುಣ್ಯಂ ಸರ್ವದುಃಖನಿಬರ್ಹಣಂ ॥ ೧ ॥

ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಯೋಷಿತಾಂ ತಥಾ ।
ಸಮಸ್ತಕಾಮಫಲದಂ ಸರ್ವವ್ರತಫಲಪ್ರದಂ ॥ ೨ ॥

ದುಃಸ್ವಪ್ನನಾಶನಂ ಧರ್ಮ್ಯಂ ದುಷ್ಟಗ್ರಹನಿವಾರಣಂ ।
ಸರ್ವಲೋಕೇಷು ವಿಖ್ಯಾತಂ ಪೂರ್ಣಿಮಾವ್ರತಮುತ್ತಮಂ ।
ಯೇನ ಚೀರ್ಣೇನ ಪಾಪಾನಾಂ ರಾಶಿಕೋಟಿಃ ಪ್ರಶಾಮ್ಯತಿ ॥ ೩ ॥

ಮಾರ್ಗಶೀರ್ಷೇ ಸಿತೇ ಪಕ್ಷೇ ಪೂರ್ಣಾಯಾಂ ನಿಯತಃ ಶುಚಿಃ ।
ಸ್ನಾನಂ ಕುರ್ಯಾದ್ಯಥಾಚಾರಂ ದಂತಧಾವನಪೂರ್ವಕಂ ॥ ೪ ॥

---

## ಹದಿನೆಂಟನೆಯ ಅಧ್ಯಾಯವು.

೧-೩. ಸನಕನು ಮಾತನಾಡಿದನು—ಮುನಿವರನೇ ! ಸಕಲ ಪಾಪಪರಿಹಾರಕವು, ಸಕಲ ದುಃಖನಾಶಕವು, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಮತ್ತು ಹೆಂಗಸರು ಇವರಿಗೆ ಎಲ್ಲಾ ಇಷ್ಟಾರ್ಥಗಳಿಗೂ ಸಾಧಕವು, ಸಕಲ ವ್ರತಗಳಿಗೂ ಸಾಫಲ್ಯಸಂಪಾದಕವು, ಕೆಟ್ಟ ಸ್ವಪ್ನಗಳಾಗದಂತೆ ಮಾಡುವುದು, ಧರ್ಮಸಾಧನವು, ದುಷ್ಟಗ್ರಹಾದಿಗಳಿಗೆ ನಿವಾರಕವು, ಸಕಲ ಲೋಕಪ್ರಸಿದ್ಧವು, ಕೋಟ್ಯಂತರ ಪಾಪರಾಶಿಗಳಿಗೆ ಪರಿಹಾರಕವು, ಮತ್ತು ಶ್ರೇಷ್ಠವೂ ಆಗಿರುವ ಪೂರ್ಣಿಮಾವ್ರತವೆಂಬ ಇನ್ನೊಂದು ಅತ್ಯುತ್ತಮ ವ್ರತವನ್ನು ಹೇಳುತ್ತೇನೆ ಕೇಳು.

೪. ಮಾರ್ಗಶೀರ್ಷಮಾಸದ ಶುಕ್ಲಪಕ್ಷ ಪೂರ್ಣಿಮಾ ದಿನದಲ್ಲಿ ವರ್ಣಾಶ್ರಮ ಪದ್ಧತಿಯ ಪ್ರಕಾರ ದಂತಧಾವನವನ್ನು ಮಾಡಿಕೊಂಡು ನಿಯಮದಿಂದ ಪರಿಶುದ್ಧನಾಗಿ ಸ್ನಾನಮಾಡಬೇಕು.

**ಶುಕ್ಲಾಂಬರಧರಃ ಶುದ್ಧೋ ಗೃಹಮಾಗತ್ಯ ವಾಗ್ಯತಃ ।**
**ಪ್ರಕ್ಷಾಲ್ಯ ಪಾದಾವಾಚಮ್ಯ ಸ್ಮರನ್ನಾರಾಯಣಂ ಪ್ರಭುಂ ॥ ೫ ॥**

**ನಿತ್ಯಂ ದೇವಾರ್ಚನಂ ಕೃತ್ವಾ ಪಶ್ಚಾತ್ಸಂಕಲ್ಪಪೂರ್ವಕಂ ।**
**ಲಕ್ಷ್ಮೀನಾರಾಯಣಂ ದೇವಮರ್ಚಯೇದ್ಭಕ್ತಿಭಾವತಃ ॥ ೬ ॥**

**ಆವಾಹನಾಸನಾದ್ಯೈಶ್ಚ ಗಂಧಪುಷ್ಪಾದಿಭಿಃ ವ್ರತೀ ।**
**ನಮೋ ನಾರಾಯಣಾಯೇತಿ ಪೂಜಯೇದ್ಭಕ್ತಿತತ್ಪರಃ ॥ ೭ ॥**

**ಗೀತೈರ್ವಾದ್ಯೈಶ್ಚ ನೃತ್ಯೈಶ್ಚ ಪುರಾಣಪಠನಾದಿಭಿಃ ।**
**ಸ್ತೋತ್ರೈರ್ವಾರಾಧಯೇದ್ದೇವಂ ವ್ರತಕೃತ್ಸುಸಮಾಹಿತಃ ॥ ೮ ॥**

**ದೇವಸ್ಯ ಪುರತಃ ಕೃತ್ವಾ ಸ್ಥಂಡಿಲಂ ಚತುರಸ್ರಕಂ ।**
**ಅರತ್ನಿಮಾತ್ರಂ ತತ್ರಾಗ್ನಿಂ ಸ್ಥಾಪಯೇದ್ಗೃಹ್ಯಮಾರ್ಗತಃ ॥ ೯ ॥**

---

೫-೬. ಸ್ನಾನದಿಂದ ಪರಿಶುದ್ಧನಾಗಿ, ಬಿಳಿಯಬಟ್ಟೆಯನ್ನುಟ್ಟು, ಮನೆಗೆ ಬಂದು ಕಾಲುತೊಳೆದುಕೊಂಡು, ಆಚಮನಮಾಡಿ, ನಾರಾಯಣಸ್ವಾಮಿಯನ್ನು ಸ್ಮರಿಸುತ್ತಾ, ನಿತ್ಯದೇವತಾರ್ಚನೆಯ್ನು ಮುಗಿಸಿಕೊಂಡು, ಅನಂತರ ಸಂಕಲ್ಪ ಪುರಸ್ಸರವಾಗಿ, ಭಕ್ತಿಭಾವದಿಂದ ಲಕ್ಷ್ಮೀನಾರಾಯಣನನ್ನು ಪೂಜಿಸಬೇಕು.

೭. ವ್ರತಕರ್ತನು ಆವಾಹನೆ, ಆಸನ ಮುಂತಾದ ಷೋಡಶೋಪಚಾರಗಳಿಂದ, ಭಕ್ತಿನಿರತನಾಗಿ ನಾರಾಯಣನಿಗೆ ನಮಸ್ಕಾರ (ನಮೋನಾರಾಯಣಾಯ) ಎಂದು ಹೇಳುತ್ತಾ ಗಂಧ ಪುಷ್ಪಾದಿಗಳಿಂದ ಪೂಜಿಸಬೇಕು.

೮. ವ್ರತಕರ್ತನು ಸಮಾಧಾನಚಿತ್ತನಾಗಿ, ಗಾನ, ವಾದ್ಯ, ನರ್ತನ, ಪುರಾಣಪಠನಾದಿಗಳು, ಮತ್ತು ಸ್ತೋತ್ರಪಾಠ ಇವುಗಳಿಂದ ಸ್ವಾಮಿಯನ್ನು ಆರಾಧಿಸಬೇಕು.

೯. ದೇವರ ಮುಂಭಾಗದಲ್ಲಿ ಚೌಕವಾಗಿ ಅಕ್ಕಿಹಿಟ್ಟಿನಿಂದ ಗೇಣುದ್ದ ವೇದಿಕೆಯನ್ನು ರಚಿಸಿ, ಗೃಹ್ಯಸೂತ್ರೋಕ್ತ ವಿಧಾನದಿಂದ ಅದರಲ್ಲಿ ಅಗ್ನಿಯನ್ನು ಸ್ಥಾಪಿಸಬೇಕು.

**ಆಜ್ಯಭಾಗಾಂತಪರ್ಯಂತಂ ಕೃತ್ವಾ ಪುರುಷಸೂಕ್ತತಃ |**
**ಚರುಣಾ ಚ ತಿಲೈಶ್ಚಾಪಿ ಘೃತೇನ ಜುಹುಯಾತ್ತಥಾ ॥ ೧೦ ॥**

**ಏಕವಾರಂ ದ್ವಿವಾರಂ ವಾ ತ್ರಿವಾರಂ ವಾಽಪಿ ಶಕ್ತಿತಃ |**
**ಹೋಮಂ ಕುರ್ಯಾತ್ಪ್ರಯತ್ನೇನ ಸರ್ವಪಾಪನಿವೃತ್ತಯೇ ॥ ೧೧ ॥**

**ಪ್ರಾಯಶ್ಚಿತ್ತಾದಿಕಂ ಸರ್ವಂ ಸ್ವಗೃಹ್ಯೋಕ್ತವಿಧಾನತಃ |**
**ಸಮಾಪ್ಯ ಹೋಮಂ ವಿಧಿವಚ್ಛಾಂತಿಸೂಕ್ತಂ ಜಪೇದ್ಬುಧಃ ॥ ೧೨ ॥**

**ಪಶ್ಚಾದೇವ ಸಮಾಗತ್ಯ ಪುನಃ ಪೂಜಾಂ ಪ್ರಕಲ್ಪಯೇತ್ ಃ**
**ತಥೋಪವಾಸಂ ದೇವಾಯ ಹ್ಯರ್ಪಯೇದ್ಭಕ್ತಿಸಂಯುತಃ ॥ ೧೩ ॥**

**ಪೌರ್ಣಮಾಸ್ಯಾಂ ನಿರಾಹಾರಃ ಸ್ಥಿತ್ವಾ ದೇವ ತವಾಜ್ಞಯಾ।**
**ಭೋಕ್ಷ್ಯಾಮಿ ಪುಂಡರೀಕಾಕ್ಷ ಪರೇಽಹ್ನಿ ಶರಣಂ ಭವ ॥ ೧೪ ॥**

---

೧೦. ಪುರುಷಸೂಕ್ತದಿಂದ ಆಜ್ಯಭಾಗಾಂತವಾದ ಅಂಗಕರ್ಮಕಲಾಪ ಗಳನ್ನು ಮಾಡಿ, ಅನ್ನ, ಎಳ್ಳು, ತುಪ್ಪ ಇವುಗಳಿಂದ ಹೋಮಮಾಡಬೇಕು.

೧೧. ತಾನು ಮಾಡಿದ ಸಕಲ ಪಾಪಗಳನ್ನೂ ಪರಿಹಾರಮಾಡಿಕೊಳ್ಳು ವುದಕ್ಕೋಸ್ಕರ ತನ್ನ ಶಕ್ತ್ಯನುಸಾರವಾಗಿ ಒಂದು ಅಥವಾ ಎರಡು ಅಥವಾ ಮೂರಾವರ್ತಿ ಪ್ರಯತ್ನಪೂರ್ವಕವಾಗಿ ಹೋಮಮಾಡಬೇಕು.

೧೨. ಪಂಡಿತನು ತನ್ನ ಶಾಖೆಗೆ ಸಂಬಂಧಿಸಿದ ಗೃಹ್ಯಸೂತ್ರೋಕ್ತ ವಿಧಾನಪೂರ್ವಕವಾಗಿ ಹೋಮವನ್ನು ಮುಗಿಸಿ, ವಿಧಿವತ್ತಾಗಿ ಶಾಂತಿಸೂಕ್ತ ವನ್ನು ಜಪಿಸಬೇಕು.

೧೩. ಅನಂತರ ಬಂದು ಪುನಃಪೂಜೆಯನ್ನು ಮಾಡಬೇಕು. ಹಾಗೆಯೇ ತಾನುಮಾಡಿದ ಉಪವಾಸವನ್ನು ಭಕ್ತಿಯಿಂದ ದೇವರಿಗೂ ಸಮರ್ಪಣೆ ಮಾಡ ಬೇಕು.

೧೪. ಹೇ ದೇವನೇ! ನಿನ್ನ ಪ್ರೇರಣೆಯಿಂದ ಪೂರ್ಣಿಮಾದಿನದಲ್ಲಿ ಉಪವಾಸವಿದ್ದು ಮಾರನೆಯ ದಿವ ಭೋಜನಮಾಡುತ್ತೇನೆ. ಪುಂಡರೀಕಾಕ್ಷ! ರಕ್ಷಿಸು.

ಇತಿ ವಿಜ್ಞಾಪ್ಯ ದೇವಾಯ ಹ್ಯರ್ಘ್ಯಂ ದದ್ಯಾತ್ತಥೇಂದವೇ ।
ಜಾನುಭ್ಯಾಮವನೀಂ ಗತ್ವಾ ಶುಕ್ಲಪುಷ್ಪಾಕ್ಷತಾನ್ವಿತಃ ॥ ೧೫ ॥

ಕ್ಷೀರೋದಾರ್ಣವಸಂಭೂತ ಅತ್ರಿಗೋತ್ರಸಮುದ್ಭವ ।
ಗೃಹಾಣಾರ್ಘ್ಯಂ ಮಯಾ ದತ್ತಂ ರೋಹಿಣೀನಾಯಕ ಪ್ರಭೋ ॥ ೧೬ ॥

ಏವಮರ್ಘ್ಯಂ ಪ್ರದಾಯೇಂದೋಃ ಪ್ರಾರ್ಥಯೇತ್ಪ್ರಾಂಜಲಿಸ್ತತಃ ।
ತಿಷ್ಠನ್ಪೂರ್ವಮುಖೋ ಭೂತ್ವಾ ಪಶ್ಯನ್ನಿಂದುಂ ಚ ನಾರದ ॥ ೧೭ ॥

ನಮಃ ಶುಕ್ಲಾಂಶವೇ ತುಭ್ಯಂ ದ್ವಿಜರಾಜಾಯ ತೇ ನಮಃ ।
ರೋಹಿಣೀಪತಯೇ ತುಭ್ಯಂ ಲಕ್ಷ್ಮೀಭ್ರಾತ್ರೇ ನಮೋಸ್ತು ತೇ ॥ ೧೮ ॥

ತತಶ್ಚ ಜಾಗರಂ ಕುರ್ಯಾತ್ಪುರಾಣಶ್ರವಣಾದಿಭಿಃ ।
ಜಿತೇಂದ್ರಿಯಶ್ಚ ಸಂಶುದ್ಧಃ ಪಾಷಂಡಾಲೋಕವರ್ಜಿತಃ ॥ ೧೯ ॥

ತತಃ ಪ್ರಾತಃ ಪ್ರಕುರ್ವೀತ ಸ್ವಾಚಾರಂ ಚ ಯಥಾವಿಧಿ ।
ಪುನಃ ಸಂಪೂಜಯೇದ್ದೇವಂ ಯಥಾವಿಭವವಿಸ್ತರಂ ॥ ೨೦ ॥

---

೧೫. ಈ ಪ್ರಕಾರ ದೇವರಿಗೆ ವಿಜ್ಞಾಪಿಸಿ, ಮೊಣಕಾಲುಗಳನ್ನು ನೆಲದಲ್ಲಿ ಊರಿಕೊಂಡು, ಬಿಳಿಯ ಹೂವು ಮತ್ತು ಅಕ್ಷತೆಗಳನ್ನು ತೆಗೆದುಕೊಂಡು ಚಂದ್ರನಿಗ ಅರ್ಘ್ಯಯನ್ನು ಕೊಡಬೇಕು.

೧೬. ಕ್ಷೀರಸಾಗರಜಾತನು, ಅತ್ರಿಋಷಿಗಳ ಕುಲೋದ್ಭವನು, ರೋಹಿಣೀ ಪತಿಯು, ಆಗಿರುವ ಚಂದ್ರಪ್ರಭುವೇ! ನಾನು ಕೊಡುವ ಅರ್ಘ್ಯವನ್ನು ದಯಮಾಡಿ ಸ್ವೀಕರಿಸಬೇಕು ಎಂಬುದಾಗಿ ಹೇಳುತ್ತಾ ಅರ್ಘ್ಯ ಕೊಡಬೇಕು.

೧೭-೧೮. ಈರೀತಿಯಾಗಿ ಅರ್ಘ್ಯಪ್ರದಾನಮಾಡಿದಮೇಲೆ ಪೂರ್ವಾಭಿಮುಖನಾಗಿ ನಿಂತು, ಕೈಮುಗಿದು ಚಂದ್ರನನ್ನು ನೋಡುತ್ತಾ, ಶುಕ್ಲ ಕಿರಣವುಳ್ಳ ಚಂದ್ರನೇ ನಿನಗೆ ನಮಸ್ಕಾರ. ನಕ್ಷತ್ರಪತಿಯಾದ ನಿನಗೆ ನಮಸ್ಕಾರ. ಲಕ್ಷ್ಮೀಸಹೋದರನೇ ನಿನಗೆ ನಮಸ್ಕಾರ ಎಂಬುದಾಗಿ ಚಂದ್ರನನ್ನು ಪ್ರಾರ್ಥಿಸಬೇಕು.

೧೯. ಬಳಿಕ ಜಿತೇಂದ್ರಿಯನೂ, ಪರಿಶುದ್ಧನೂ ಆಗಿ ಪಾಷಂಡದರ್ಶನ ಮಾಡದಂತೆ ಪುರಾಣಶ್ರವಣಾದಿಗಳಿಂದ ರಾತ್ರಿಯೆಲ್ಲಾ ಜಾಗರಮಾಡಬೇಕು.

೨೦. ಅನಂತರ ಪ್ರಾತಃಕಾಲದಲ್ಲಿ ವಿಧಾನೋಕ್ತಪ್ರಕಾರ ವರ್ಣಾಶ್ರಮ

ಬ್ರಾಹ್ಮಣಾನ್ಭೋಜಯೇಚ್ಛಕ್ತ್ಯಾ ತತಶ್ಚ ಪ್ರಯತೋ ನರಃ ।
ಬಂಧುಭೃತ್ಯಾದಿಭಿಃ ಸಾರ್ಧಂ ಸ್ವಯಂ ಭುಂಜೀತ ವಾಗ್ಯತಃ ॥ ೨೧ ॥

ಏವಂ ಪೌಷಾದಿಮಾಸೇಷು ಪೂರ್ಣಮಾಸ್ಯಾಮುಪೋಷಿತಃ ।
ಅರ್ಚಯೇದ್ಭಕ್ತಿಸಂಯುಕ್ತೋ ನಾರಾಯಣಮನಾಮಯಂ ॥ ೨೨ ॥

ಏವಂ ಸಂವತ್ಸರಂ ಕೃತ್ವಾ ಕಾರ್ತಿಕ್ಯಾಂ ಪೂರ್ಣಿಮಾದಿನೇ ।
ಉದ್ಯಾಪನಂ ಪ್ರಕುರ್ವೀತ ತದ್ವಿಧಾನಂ ವದಾಮಿ ತೇ ॥ ೨೩ ॥

ಮಂಟಪಂ ಕಾರಯೇದ್ದಿವ್ಯಂ ಚತುರಸ್ರಂ ಸುಮಂಗಲಂ ।
ಶೋಭಿತಂ ಪುಷ್ಪಮಾಲಾಭಿರ್ವಿತಾನಧ್ವಜರಾಜಿತಂ ॥ ೨೪ ॥

ಬಹುದೀಪಸಮಾಕೀರ್ಣಂ ಕಿಂಕಿಣೀಜಾಲಶೋಭಿತಂ ।
ದರ್ಪಣೈಶ್ಚಾಮರೈಶ್ಚೈವ ಕಲಶೈಶ್ಚ ಸಮಾವೃತಂ ॥ ೨೫ ॥

---

ವಿಹಿತ ಧರ್ಮವನ್ನಾಚರಿಸಬೇಕು, ಆಮೇಲೆ ತನ್ನ ಐಶ್ವರ್ಯಾನುಗುಣವಾಗಿ ಪುನಃ ದೇವರಪೂಜೆ ಮಾಡಬೇಕು.

೨೧. ಅನಂತರ ಬ್ರಾಹ್ಮಣರಿಗೆ ಭೋಜನಮಾಡಿಸಬೇಕು, ಆಮೇಲೆ ಬಂಧುಭೃತ್ಯಾದಿಗಳೊಡನೆ ನಿಯಮಯುಕ್ತನಾಗಿ ತಾನೂ ಭೋಜನಮಾಡಬೇಕು.

೨೨. ಇದೇರೀತಿಯಾಗಿ ಪುಷ್ಯ ಮುಂತಾದ ಮಾಸಗಳಲ್ಲಿಯೂ ಪೂರ್ಣಿಮೆಯದಿನ ಉಪವಾಸಮಾಡಿ ನಿರ್ದೋಷನಾದ ನಾರಾಯಣನನ್ನು ಭಕ್ತಿಯಿಂದ ಪೂಜಿಸಬೇಕು

೨೩. ಈ ಪ್ರಕಾರ ಒಂದುವರ್ಷಪರ್ಯಂತವಾಗಿ ವ್ರತಾನುಷ್ಠಾನಮಾಡಿ ಕಾರ್ತಿಕಮಾಸದ ಪೂರ್ಣಿಮಾದಿನದಲ್ಲಿ ಉದ್ಯಾಪನೆ ಮಾಡಬೇಕು. ಅದರ ವಿಧಾನವನ್ನು ನಿನಗಾಗಿ ಹೇಳುತ್ತೇನೆ ಕೇಳು.

೨೪-೨೫. ಮಂಗಳಕರವು, ಹೂವಿನ ಮಾಲಿಕೆಗಳಿಂದ ಅಲಂಕೃತವು, ತೋರಣ ಪತಾಕೆಗಳಿಂದ ವಿರಾಜಮಾನವೂ ಅದ, ಬಹುದೀಪಗಳಿಂದ ತುಂಬಿರುವ, ಕಿರುಘಂಟೆಗಳ ಸಮೂಹದಿಂದಲಂಕರಿಸಲ್ಪಟ್ಟ, ಕನ್ನಡಿ, ಚಾಮರ ಮತ್ತು ಕಲಶ ಇವುಗಳಿಂದ ಕೂಡಿರುವ ದಿವ್ಯಮಂಟಪವನ್ನು ರಚಿಸಬೇಕು.

ತನ್ಮಧ್ಯೇ ಸರ್ವತೋಭದ್ರಂ ಪಂಚವರ್ಣವಿರಾಜಿತಂ ।
ಜಲಪೂರ್ಣಂ ತತಃ ಕುಂಭಂ ನ್ಯಸೇತ್ತಸ್ಯೋಪರಿ ದ್ವಿಜ ॥ ೨೬ ॥

ಪಿಧಾಯ ಕುಂಭಂ ವಸ್ತ್ರೇಣ ಸುಸೂಕ್ಷ್ಮೇಣಾತಿಶೋಭಿತಂ ।
ಹೇಮ್ನಾ ವಾ ರಜತೇನಾಽಪಿ ತಥಾ ತಾಮ್ರೇಣ ವಾ ದ್ವಿಜ ॥ ೨೭ ॥

ಲಕ್ಷ್ಮೀನಾರಾಯಣಂ ದೇವಂ ಕೃತ್ವಾ ತಸ್ಯೋಪರಿ ನ್ಯಸೇತ್ ।
ಪಂಚಾಮೃತೇನ ಸಂಸ್ನಾಪ್ಯಾಭ್ಯರ್ಚ್ಯ ಗಂಧಾದಿಭಿಃ ಕ್ರಮಾತ್ ॥ ೨೮ ॥

ಭಕ್ಷ್ಯೈರ್ಭೋಜ್ಯಾದಿನೈವೇದ್ಯೈರ್ಭಕ್ತಿತಃ ಸಂಯುತೇಂದ್ರಿಯಃ ।
ಜಾಗರಂ ಚ ತಥಾ ಕುರ್ಯಾತ್ಸಮ್ಯಕ್ಶ್ರದ್ಧಾಸಮನ್ವಿತಃ ॥ ೨೯ ॥

ಪರೇಽಹ್ನಿ ಪ್ರಾತರ್ವಿಧಿವತ್ಪೂರ್ವವದ್ವಿಷ್ಣುಮರ್ಚಯೇತ್ ।
ಆಚಾರ್ಯಾಯ ಪ್ರದಾತವ್ಯಾ ಪ್ರತಿಮಾ ದಕ್ಷಿಣಾನ್ವಿತಾ ॥ ೩೦ ॥

---

೨೬. ಅದರ ಮಧ್ಯಭಾಗದಲ್ಲಿ ಐದು ಬಣ್ಣಗಳಿಂದ ಪ್ರಕಾಶಮಾನವಾದ ಸರ್ವತೋಭದ್ರಮಂಡಲವನ್ನು ಚಿತ್ರಿಸಿ ಅದರಮೇಲೆ ನೀರು ತುಂಬಿದ ಕಲಶವನ್ನು ಸ್ಥಾಪಿಸಬೇಕು.

೨೭. ದ್ವಿಜನೇ! ಅತ್ಯಂತವಾಗಿ ಅಲಂಕೃತವಾದ ಕಲಶವನ್ನು ಸೂಕ್ಷ್ಮವಸ್ತ್ರದಿಂದ ಮುಚ್ಚಿ, ಭಂಗಾರ, ಅಥವಾ ಬೆಳ್ಳಿ, ಇಲ್ಲವೇ ತಾಮ್ರ ಇವುಗಳಿಂದ ಲಕ್ಷ್ಮೀನಾರಾಯಣ ಪ್ರತಿಮೆಯನ್ನು ಮಾಡಿಸಿ, ಆ ಕಲಶದಮೇಲೆ ಇಡಬೇಕು.

೨೮-೨೯. ಅದಕ್ಕೆ ಪಂಚಾಮೃತಾಭಿಷೇಕಮಾಡ್ಸಿಗಂಧ ಪುಷ್ಪಾದಿಗಳು, ಭಕ್ಷ್ಯಭೋಜ್ಯಾದಿ ನೈವೇದ್ಯ ಇವುಗಳಿಂದ ಕ್ರಮವಾಗಿ, ಭಕ್ತಿಯುಕ್ತನಾಗಿ ಪೂಜೆ ಮಾಡಿ, ಇಂದ್ರಿಯನಿಗ್ರಹದಿಂದ, ಸಮೀಚೀನ ಶ್ರದ್ಧಾಪೂರ್ವಕವಾಗಿ ಜಾಗರಣೆಯನ್ನು ಮಾಡಬೇಕು. ಮಾರನೆಯದಿನ ಪ್ರಾತಃಕಾಲದಲ್ಲಿ ವಿಧಾನೋಕ್ತಪ್ರಕಾರ ಪೂರ್ವದಂತೆ ವಿಷ್ಣುವನ್ನು ಭಜಿಸಬೇಕು.

೩೦. ದಕ್ಷಿಣೆಸಹಿತವಾಗಿ ಪ್ರತಿಮೆಯನ್ನು ಆಚಾರ್ಯರಿಗೆ ದಾನಮಾಡಬೇಕು. ತನ್ನ ಶಕ್ತಿ ಮತ್ತು ಐಶ್ವರ್ಯ ಇವುಗಳಿಗನುಗುಣವಾಗಿ ಬ್ರಾಹ್ಮಣ ಭೋಜನಮಾಡಿಸಬೇಕು.

**ಬ್ರಾಹ್ಮಣಾನ್ಭೋಜಯೇಚ್ಛಕ್ತ್ಯಾ ಯಥಾವಿಭವಮಾತಃ ।**
**ತಿಲದಾನಂ ಪ್ರಕುರ್ವೀತ ಯಥಾಶಕ್ತ್ಯಾಸಮಾಹಿತಃ ॥ ೩೦ ॥**

**ಕುರ್ಯಾದಗ್ನೌ ಚ ವಿಧಿವತ್ತಿಲಹೋಮಂ ವಿಚಕ್ಷಣಃ ।**
**ಏವಂ ಕೃತ್ವಾ ನರಃ ಸಮ್ಯಗ್ಲಕ್ಷ್ಮೀನಾರಾಯಣವ್ರತಂ ॥ ೩೧ ॥**

**ಇಹ ಭುಕ್ತ್ವಾ ಮಹಾಭೋಗಾನ್ಪುತ್ರಪೌತ್ರಸಮನ್ವಿತಃ ।**
**ಸರ್ವಪಾಪವಿನಿರ್ಮುಕ್ತಃ ಕುಲಾಯುತಸಮನ್ವಿತಃ**
**ಪ್ರಯಾತಿ ವಿಷ್ಣುಸದನಂ ಯೋಗಿನಾಮಪಿ ದುರ್ಲಭಂ ॥ ೩೩ ॥**

**ಇತಿ ಶ್ರೀ ಬೃಹನ್ನಾರದೀಯಪುರಾಣೇ ಪೂರ್ವಭಾಗೇ ಪ್ರಥಮಪಾದೇ ವ್ರತಾಖ್ಯಾನೇ ಮಾರ್ಗಶೀರ್ಷಪೌರ್ಣಮಾಯಾಂ ಲಕ್ಷ್ಮೀನಾರಾಯಣ ವ್ರತಂ ನಾಮಾಷ್ಟಾದಶೋಽಧ್ಯಾಯಃ**

---

೩೧. ಸಮಾಧಾನಚಿತ್ತನಾಗಿ ತನ್ನ ಶಕ್ತಿಯನ್ನನುಸರಿಸಿ ತಿಲದಾನಮಾಡಬೇಕು ಮತ್ತು ವಿವೇಕಿಯಾದವನು ಅಗ್ನಿಯಲ್ಲಿ ತಿಲಹೋಮವನ್ನುಮಾಡಬೇಕು.

೩೨-೩೩. ಈರೀತಿ ಲಕ್ಷ್ಮೀನಾರಾಯಣ ವ್ರತವನ್ನು ಚೆನ್ನಾಗಿ ಆಚರಿಸುವ ಮನುಷ್ಯನು ಈ ಲೋಕದಲ್ಲಿ ಪುತ್ರ ಪೌತ್ರ ಸಹಿತನಾಗಿ ಮಹಾಭೋಗಗಳನ್ನನುಭವಿಸಿ ಸಕಲ ಪಾಪಗಳನ್ನು ಪರಿಹರಿಸಿಕೊಂಡು ಯೋಗಿಗಳಿಗೂ ಹೊಂದಲಶಕ್ಯವಾದ ವಿಷ್ಣುಲೋಕವನ್ನು ಹತ್ತು ಸಹಸ್ರ ಕುಲಸಹಿತನಾಗಿ ಪಡೆಯುತ್ತಾನೆ.

ಇಂತು ಶ್ರೀಬೃಹನ್ನಾರದೀಯ ಪುರಾಣದೊಳು ಪೂರ್ವಭಾಗ ಪ್ರಥಮ ಪಾದದಲ್ಲಿ ವ್ರತಾಖ್ಯಾನಪ್ರಕರಣದಲ್ಲಿ ಮಾರ್ಗಶೀರ್ಷ ಪೂರ್ಣಿಮಾ ದಿನದಲ್ಲಿ ಕರ್ತವ್ಯವಾದ ಲಕ್ಷ್ಮೀನಾರಾಯಣ ವ್ರತಕಥನವೆಂಬ ಹದಿನೆಂಟನೆಯ ಅಧ್ಯಾಯವು ಮುಗಿದುದು.

---

**ಕಥಾಸಾರಾಂಶ**

**ಈ ಅಧ್ಯಾಯದಲ್ಲಿ ಮಾರ್ಗಶೀರ್ಷ ಪೂರ್ಣಿಮಾಮೊದಲು ಹನ್ನೆರಡು ಮಾಸಗಳ ಪೂರ್ಣಿಮೆಯಲ್ಲಿ ಕರ್ತವ್ಯವಾದ ಲಕ್ಷ್ಮೀನಾರಾಯಣ ವ್ರತವನ್ನು ಸಪರಿಕರವಾಗಿ ನಿರೂಪಿಸಿ ಅದರ ಉದ್ಯಾಪನೆವಿಧಾನ ಮತ್ತು ಫಲ ಇವುಗಳು ನಿರೂಪಿತವಾಗಿವೆ.**

# ಏಕೋನವಿಂಶೋಽಧ್ಯಾಯಃ

---

**ಸನಕ ಉವಾಚ**

ಅನ್ಯದ್ವ್ರತಂ ಪ್ರವಕ್ಷ್ಯಾಮಿ ಧ್ವಜಾರೋಪಣಸಂಜ್ಞಿತಂ ।
ಸರ್ವಪಾಪಹರಂ ಪುಣ್ಯಂ ವಿಷ್ಣುಪ್ರೀಣನಕಾರಣಂ ॥ ೧ ॥

ಯಃ ಕುರ್ಯಾದ್ವಿಷ್ಣುಭವನೇ ಧ್ವಜಾರೋಪಣಮುತ್ತಮಂ ।
ಸಂಪೂಜ್ಯತೇ ವಿರಿಂಚಾದ್ಯೈಃ ಕಿಮನ್ಯೈರ್ಬಹುಭಾಷಿತೈಃ ॥ ೨ ॥

ಹೇಮಭಾರಸಹಸ್ರಂ ತು ಯೋ ದದಾತಿ ಕುಟುಂಬಿನೇ ।
ತತ್ಫಲಂ ತುಲ್ಯಮಾತ್ರಂ ಸ್ಯಾದ್ಧ್ವಜಾರೋಪಣಕರ್ಮಣಃ ॥ ೩ ॥

ಧ್ವಜಾರೋಪಣತುಲ್ಯಂ ಸ್ಯಾದ್ಗಂಗಾಸ್ನಾನಮನುತ್ತಮಂ ।
ಅಥವಾ ತುಲಸೀಸೇವಾ ಶಿವಲಿಂಗಪ್ರಪೂಜನಂ ॥ ೪ ॥

---

## ಹತ್ತೊಂಭತ್ತನೆಯ ಅಧ್ಯಾಯವು

೧. ಸನಕನು ಹೇಳಿದನು—ಸಕಲ ಪಾಪಪರಿಹಾರಕವು, ಪುಣ್ಯಕರವು, ವಿಷ್ಣುಪ್ರಸಾದವನ್ನುಂಟುಮಾಡುವುದೂ ಆಗಿರುವ ಧ್ವಜಾರೋಪಣವೆಂಬ ಇನ್ನೊಂದು ವ್ರತದ ವಿಧಾನಾದಿಗಳನ್ನು ಹೇಳುತ್ತೇನೆ.

೨. ವಿಷ್ಣ್ವಾಲಯದಲ್ಲಿ ಉತ್ತಮವಾದ ಧ್ವಜಾರೋಪಣ ಮಾಡಿಸುವವನು ಚತುರ್ಮುಖಾದಿಗಳಿಂದ ಸತ್ಕರಿಸಲ್ಪಡುತ್ತಾನೆ. ಅಧಿಕೋಕ್ತಿಗಳಿಂದೇನು ಫಲ ?

೩. ಒಂದುಸಾವಿರಭಾರ ಸುವರ್ಣವನ್ನು ಸಂಸಾರಿಯಾದ ಬ್ರಾಹ್ಮಣನಿಗೆ ದಾನ ಕೊಡುವುದರ ಫಲವು ಧ್ವಜಾರೋಪಣಕರ್ಮಫಲಕ್ಕೆ ಸಮಾನವು.

೪. ಉತ್ತಮವಾದ ಗಂಗಾನದಿಯಸ್ನಾನ ಅಥವಾ ತುಲಸೀಸೇವೆ ಅಥವಾ ಶಿವಲಿಂಗ ಪೂಜೆ ಇವುಗಳೆಲ್ಲವೂ ಧ್ವಜಾರೋಪಣಕ್ಕೆ ಸದೃಶವಾದುದು.

**ಅಹೋऽಪೂರ್ವಮಹೋऽಪೂರ್ವಮಹೋऽಪೂರ್ವಮಿದಂ ದ್ವಿಜ ।**
**ಸರ್ವಪಾಪಹರಂ ಕರ್ಮ ಧ್ವಜಾರೋಪಣಸಂಜ್ಞಿತಂ ॥ ೫ ॥**

**ಸಂತಿ ವೈ ಯಾನಿ ಕಾರ್ಯಾಣಿ ಧ್ವಜಾರೋಪಣಕರ್ಮಣಿ ।**
**ತಾನಿ ಸರ್ವಾಣಿ ವಕ್ಷ್ಯಾಮಿ ಶ್ರುಣುಷ್ವ ಗದತೋ ಮಮ ॥ ೬ ॥**

**ಕಾರ್ತಿಕಸ್ಯ ಸಿತೇ ಪಕ್ಷೇ ದಶಮ್ಯಾಂ ಪ್ರಯತೋ ನರಃ ।**
**ಸ್ನಾನಂ ಕುರ್ಯಾತ್ಪ್ರಯತ್ನೇನ ದಂತಧಾವನಪೂರ್ವಕಂ ॥ ೭ ॥**

**ಏಕಾಶೀ ಬ್ರಹ್ಮಚಾರೀ ಚ ಸ್ವಪೇನ್ನಾರಾಯಣಂ ಸ್ಮರನ್ ।**
**ಧೌತಾಂಬರಧರಃ ಶುದ್ಧೋ ವಿಪ್ರ ನಾರಾಯಣಾಗ್ರತಃ ॥ ೮ ॥**

**ತತಃ ಪ್ರಾತಃ ಸಮುತ್ಥಾಯ ಸ್ನಾತ್ವಾऽಚಮ್ಯ ಯಥಾವಿಧಿ ।**
**ನಿತ್ಯಕರ್ಮಾಣಿ ನಿರ್ವರ್ತ್ಯ ಪಶ್ಚಾದ್ವಿಷ್ಣುಂ ಸಮರ್ಚಯೇತ್ ॥ ೯ ॥**

---

೫. ಸಕಲ ಪಾಪಪರಿಹಾರಕವಾದ ಈ ಧ್ವಜಾರೋಪಣವೆಂಬ ಕರ್ಮವು ಅಪೂರ್ವ ಮತ್ತು ಆಶ್ಚರ್ಯಕರ.

೬. ಧ್ವಜಾರೋಪಣ ಕರ್ಮದ ಅಂಗವಾಗಿ ಕರ್ತವ್ಯವಾದ ಎಲ್ಲಾ ಕರ್ಮಗಳನ್ನೂ ಹೇಳುತ್ತೇನೆ ಸಾವಧಾನವಾಗಿ ಕೇಳು.

೭. ಕಾರ್ತಿಕಮಾಸದ ಶುಕ್ಲಪಕ್ಷ ದಶಮಿದಿನದಲ್ಲಿ ಶ್ರದ್ಧೆಯುಳ್ಳ ಮನುಷ್ಯನು ದಂತಧಾವನವನ್ನು ಮಾಡಿಕೊಂಡು ಪ್ರಯತ್ನಪೂರ್ವಕವಾಗಿ ಸ್ನಾನ ಮಾಡಬೇಕು.

೮. ಸ್ನಾನದಿಂದ ಶುದ್ಧನಾಗಿ ಒಗೆದ ಬಟ್ಟೆಯನ್ನುಟ್ಟು ಒಪ್ಪತ್ತು ಭೋಜನಮಾಡಿ, ಬ್ರಾಹ್ಮಣ ಮತ್ತು ನಾರಾಯಣರ ಸನ್ನಿಧಾನದಲ್ಲಿ ನಾರಾಯಣನನ್ನು ಸ್ಮರಿಸುತ್ತಾ ಬ್ರಹ್ಮಚರ್ಯದಿಂದ ಮಲಗಬೇಕು.

೯. ಬೆಳಗ್ಗೆ ಎದ್ದಮೇಲೆ ಸ್ನಾನಮಾಡಿ ಆಚಮನಮಾಡಿದನಂತರ ವಿಧ್ಯುಕ್ತಪ್ರಕಾರ ನಿತ್ಯ ಕರ್ಮಗಳನ್ನು ಮುಗಿಸಿದಬಳಿಕ ವಿಷ್ಣುವನ್ನರ್ಚಿಸಬೇಕು.

ಚತುರ್ಭಿಃ ಬ್ರಾಹ್ಮಣೈಃ ಸಾರ್ಧಂ ಕೃತ್ವಾ ಚ ಸ್ವಸ್ತಿವಾಚನಂ ।
ನಾಂದೀಶ್ರಾದ್ಧಂ ಪ್ರಕುರ್ವೀತ ಧ್ವಜಾರೋಪಣಕರ್ಮಣಿ ॥ ೧೦ ॥

ಧ್ವಜಸ್ತಂಭೌ ಚ ಗಾಯತ್ರ್ಯಾ ಪ್ರೋಕ್ಷಯೇದ್ವಸ್ತ್ರಸಂಯುತೌ ।
ಸೂರ್ಯಂ ಚ ವೈನತೇಯಂ ಚ ಹಿಮಗಾಂಶುಂ ತತ್ಪರೋಽರ್ಚಯೇತ್ ೧೧॥

ಧಾತಾರಂ ಚ ವಿಧಾತಾರಂ ಪೂಜಯೇದ್ಧ್ವಜದಂಡಕೇ ।
ಹರಿದ್ರಾಕ್ಷತಗಂಧಾದ್ಯೈಃ ಶುಕ್ಲಪುಷ್ಪೈರ್ವಿಶೇಷತಃ ॥ ೧೨ ॥

ತತೋ ಗೋಚರ್ಮಮಾತ್ರಂ ತು ಸ್ಥಂಡಿಲಂ ಚೋಪಲಿಪ್ಯ ವೈ ।
ಆಧಾಯಾಗ್ನಿಂ ಸ್ವಗೃಹ್ಯೋಕ್ತ್ಯಾ ಹ್ಯಾಜ್ಯಭಾಗಾದಿಕಂ ಕ್ರಮಾತ್ ॥ ೧೩ ॥

ಜುಹುಯಾತ್ಪಾಯಸಂ ಚೈವ ಸಾಜ್ಯಮಷ್ಟೋತ್ತರಂ ಶತಂ ।
ಪ್ರಥಮಂ ಪೌರುಷಂ ಸೂಕ್ತಂ ವಿಷ್ಣೋರ್ನುಕಮಿರಾವತೀಂ ॥ ೧೪ ॥

---

೧೦. ನಾಲ್ಕುಜನ ಬ್ರಾಹ್ಮಣರೊಡನೆ, ಸ್ವಸ್ತಿವಾಚನವನ್ನು ಮಾಡಿ, ಧ್ವಜಾರೋಪಣಕರ್ಮಾಂಗವಾಗಿ ನಾಂದೀಶ್ರಾದ್ಧವನ್ನಾಚರಿಸಬೇಕು.

೧೧. ಬಟ್ಟೆಯನ್ನು ಹೊದಿಸಿರುವ ಧ್ವಜ ಮತ್ತು ಸ್ತಂಭಗಳನ್ನು ಗಾಯತ್ರೀ ಮಂತ್ರದಿಂದ ಪ್ರೋಕ್ಷಿಸಬೇಕು. ಅನಂತರ ಸೂರ್ಯ, ಗರುಡ ಮತ್ತು ಚಂದ್ರ ಇವರನ್ನು ಭಕ್ತಿಪೂರ್ವಕವಾಗಿ ಪೂಜಿಸಬೇಕು.

೧೨. ಧ್ವಜದಂಡದಲ್ಲಿ ಬ್ರಹ್ಮ ಮತ್ತು ವಿಷ್ಣುವನ್ನು ಅರಿಸಿನದ ಮಂತ್ರಾಕ್ಷತೆ, ಗಂಧ ಮುಂತಾದುವುಗಳಿಂದ ವಿಶೇಷವಾಗಿ ಬಿಳಿಯ ಹೂವುಗಳಿಂದ ಪೂಜಿಸಬೇಕು.

೧೩. ಅನಂತರ ಗೋಚರ್ಮಪರಿಮಿತವಾದ ಪ್ರದೇಶದಲ್ಲಿ ಅಕ್ಕಿಹಿಟ್ಟನ್ನು ಹರಡಿ, ತನ್ನ ಶಾಖೆಗೆ ಸಂಬಂಧಿಸಿದ ಗೃಹ್ಯಸೂತ್ರೋಕ್ತಪ್ರಕಾರ ಅಗ್ನಿಯನ್ನು ಸ್ಥಾಪನೆಮಾಡಿ ಕ್ರಮವಾಗಿ ಆಜ್ಯಭಾಗಪರ್ಯಂತ ಕರ್ಮವನ್ನಾಚರಿಸಬೇಕು.

೧೪. ಮೊದಲು ಪುರುಷಸೂಕ್ತ, ಆಮೇಲೆ ವಿಷ್ಣೋರ್ನುಕ, ತರುವಾಯ ಇರಾವತೀ ಎಂಬೀ ಮುಂತಾದ ಮಂತ್ರಗಳನ್ನು ಪಠನಮಾಡುತ್ತಾ, ಘೃತಸಹಿತವಾದ ಪಾಯಸದಿಂದ ನೂರೆಂಟಾವರ್ತಿ ಹೋಮಮಾಡಬೇಕು.

ತತಶ್ಚ ವೈನತೇಯಾಯ ಸ್ವಾಹೇತ್ಯಷ್ಟಾಹುತೀಸ್ತಥಾ ।
ಸಾವಿಾಧೇನುಸ್ವಾಹಾ ಪಂಚ ಜುಹುಯಾತ್ಪ್ರಯತೋ ದ್ವಿಜ ॥ ೧೫ ॥

ಸೌರಮಂತ್ರಾನ್ಜಪೇತ್ತತ್ರ ಶಾಂತಿಸೂಕ್ತಾನಿ ಶಕ್ತಿತಃ ।
ರಾತ್ರೌ ಜಾಗರಣಂ ಕುರ್ಯಾದುಪಕಂಠಂ ಹರೇಃ ಶುಚಿಃ ॥ ೧೬ ॥

ತತಃ ಪ್ರಾತಃ ಸಮುತ್ಥಾಯ ನಿತ್ಯಕರ್ಮ ಸಮಾಪ್ಯ ಚ ।
ಗಂಧಪುಷ್ಪಾದಿಭಿರ್ದೇವಮರ್ಚಯೇತ್ಪೂರ್ವವತ್ಕ್ರಮಾತ್ ॥ ೧೭ ॥

ತತೋ ಮಂಗಲವಾದ್ಯೈಶ್ಚ ಸೂಕ್ತಪಾಠೈಶ್ಚ ಶೋಭನಂ ।
ನೃತ್ಯೈಶ್ಚ ಸ್ತೋತ್ರಪಠನೈರ್ನಯೇದ್ವಿಷ್ಣ್ವಾಲಯೇ ಧ್ವಜಂ ॥ ೧೮ ॥

ದೇವಸ್ಯ ದ್ವಾರದೇಶೇ ವಾ ಶಿಖರೇ ವಾ ಮುದಾನ್ವಿತಃ ।
ಸುಸ್ಥಿರಂ ಸ್ಥಾಪಯೇದ್ವಿಪ್ರ ಧ್ವಜಂ ಸುಸ್ತಂಭಸಂಯುತಂ ॥ ೧೯ ॥

---

೧೫. ತರುವಾಯ "ವೈನತೇಯಾಯ ಸ್ವಾಹಾ" ಎಂಬುದಾಗಿ ಹೇಳುತ್ತಾ ಎಂಟಾವರ್ತಿ ಅಗ್ನಿಯಲ್ಲಿ ಹೋಮಮಾಡಬೇಕು. "ಸಾವಿಾಧೇನುಸ್ವಾಹಾ" ಎಂಬ ಮಂತ್ರದಿಂದ ಐದಾವರ್ತಿ ಹೋಮಮಾಡಬೇಕು.

೧೬. ಆ ಸನ್ನಿವೇಶದಲ್ಲಿ ಸೌರಮಂತ್ರಗಳನ್ನು ಜಪಿಸಬೇಕು. ಯಥಾಶಕ್ತಿ ಶಾಂತಿಸೂಕ್ತಗಳನ್ನು ಪಠನಮಾಡಬೇಕು. ಪರಿಶುದ್ಧನಾಗಿ ಹರಿಕೀರ್ತನೆ ಪೂರ್ವಕವಾಗಿ ರಾತ್ರಿ ಜಾಗರಣೆ ಮಾಡಬೇಕು.

೧೭. ಅನಂತರ ಬೆಳಗ್ಗೆ ಎದ್ದು ನಿತ್ಯಕರ್ಮಗಳನ್ನು ಮುಗಿಸಿಕೊಂಡು ಪೂರ್ವದಿನದಲ್ಲಿ ಮಾಡಿದಂತೆ ಗಂಧ, ಹೂವು ಮುಂತಾದುವುಗಳಿಂದ ದೇವರನ್ನು ಪೂಜಿಸಬೇಕು.

೧೮. ತರುವಾಯ ಮಂಗಳವಾದ್ಯ, ಸೂಕ್ತಪಾಠ, ನರ್ತನ, ಸ್ತ್ರೋತ್ರಪಠನೆ ಇವುಗಳನ್ನು ಮಾಡುತ್ತಾ ಮಂಗಳಕರವಾದ ಧ್ವಜವನ್ನು ವಿಷ್ಣ್ವಾಲಯಕ್ಕೆ ಒಯ್ಯಬೇಕು.

೧೯. ದೇವಾಲಯದ ಬಾಗಿಲು ಅಥವಾ ಶಿಖರ ಇವುಗಳಲ್ಲಿ ಸಮಿಾಚೀನವಾದ ಕಂಬದಮೇಲೆ ಧ್ವಜವನ್ನು (ಪತಾಕೆ) ಸಂತೋಷದಿಂದ ಸ್ಥಿರವಾಗಿರುವಂತೆ ಭದ್ರವಾಗಿ ಸ್ಥಾಪಿಸಬೇಕು.

**ಗಂಧಪುಷ್ಪಾಕ್ಷತೈರ್ದೀಪೈಃ ಧೂಪೈರ್ದೀಪೈರ್ಮನೋಹರೈಃ ।**
**ಭಕ್ಷ್ಯಭೋಜ್ಯಾದಿಸಂಯುಕ್ತೈಃ ನೈರ್ವೇದ್ಯೈಶ್ಚ ಹರಿಂ ಯಜೇತ್ ॥ ೨೦ ॥**

**ಏವಂ ದೇವಾಲಯೇ ಸ್ಥಾಪ್ಯ ಶೋಭನಂ ಧ್ವಜಮುತ್ತಮಂ ।**
**ಪ್ರದಕ್ಷಿಣಮನುವ್ರಜ್ಯ ಸ್ತೋತ್ರಮೇತದುದೀರಯೇತ್ ॥ ೨೧ ॥**

**ನಮಸ್ತೇ ಪುಂಡರೀಕಾಕ್ಷ ನಮಸ್ತೇ ವಿಶ್ವಭಾವನ ।**
**ನಮಸ್ತೇಽಸ್ತು ಹೃಷೀಕೇಶ ಮಹಾಪುರುಷಪೂರ್ವಜ ॥ ೨೨ ॥**

**ಯೇನೇದಮಖಿಲಂ ಜಾತಂ ಯತ್ರ ಸರ್ವಂ ಪ್ರತಿಷ್ಠಿತಂ ।**
**ಲಯಮೇಷ್ಯತಿ ಯತ್ರೈವಂ ತಂ ಪ್ರಪನ್ನೋಽಸ್ಮಿ ಕೇಶವಂ ॥ ೨೩ ॥**

**ನ ಜಾನಂತಿ ಪರಂ ಭಾವಂ ಯಸ್ಯ ಬ್ರಹ್ಮಾದಯಃ ಸುರಾಃ ।**
**ಯೋಗಿನೋ ಯಂ ನ ಪಶ್ಯಂತಿ ತಂ ವಂದೇ ಜ್ಞಾನರೂಪಿಣಂ ॥ ೨೪ ॥**

---

೨೦. ಧ್ವಜಸ್ಥಾಪನಾನಂತರ ಮನೋಹರವಾದ ಗಂಧ, ಹೂವು, ಅಕ್ಷತೆಗಳಿಂದಲೂ, ಧೂಪದೀಪಗಳಿಂದಲೂ, ಭಕ್ಷ್ಯಭೋಜ್ಯಾದಿಗಳಿಂದ ಯುಕ್ತವಾದ ನೈವೇದ್ಯಗಳಿಂದಲೂ ವಿಷ್ಣುದೇವನನ್ನು ಆರಾಧಿಸಬೇಕು.

೨೧. ಈ ರೀತಿ ದೇವಸ್ಥಾನದಲ್ಲಿ ಮಂಗಳಕರವು ಮತ್ತು ಉತ್ತಮವೂ ಆದ ಧ್ವಜವನ್ನು ಸ್ಥಾಪಿಸಿ, ಪ್ರದಕ್ಷಿಣೆಮಾಡಿ ಮುಂದೆ ಹೇಳುವ ಸ್ತೋತ್ರವನ್ನು ಪಠನಮಾಡಬೇಕು.

೨೨. ಪುಂಡರೀಕಾಕ್ಷ! ನಿನಗೆ ನಮಸ್ಕಾರ, ಜಗಜ್ಜನ್ಮಾದಿಕರ್ತನೇ! ನಿನಗೆ ನಮಸ್ಕಾರ. ಮಹಾಪುರುಷನು, ಪೂರ್ವದಲ್ಲಿಯೇ ಸ್ವತಃ ಆವಿರ್ಭವಿಸಿದವನೂ ಆದ ಹೃಷೀಕೇಶನೇ! ನಿನಗೆ ನಮಸ್ಕಾರ.

೨೩-೨೪. ಸಕಲ ಜಗತ್ತಿನ ಉತ್ಪತ್ತಿ, ಸ್ಥಿತಿ, ಲಯಗಳಿಗೆ ಕಾರಣನಾದ ಕೇಶವನನ್ನು ಭಜಿಸುತ್ತೇನೆ. ಬ್ರಹ್ಮಾದಿದೇವತೆಗಳೂ ಅರಿಯದ ಪರಮೈಶ್ವರ್ಯವುಳ್ಳ, ಯೋಗಿಗಳೂ ಸಹ ನೋಡಲು ಸಾಧ್ಯವಲ್ಲದ, ಜ್ಞಾನರೂಪಿಯಾದ, ಆ ಭಗವಂತನನ್ನು ನಮಸ್ಕರಿಸುತ್ತೇನೆ.

ಅಂತರಿಕ್ಷಂ ತು ಯನ್ನಾಭಿರ್ದ್ಯೌರ್ಮೂರ್ಧಾ ಯಸ್ಯ ಚೈವ ಹಿ ।
ಪಾದೋಽಭೂದ್ಯಸ್ಯ ಪೃಥಿವೀ ತಂ ವಂದೇ ವಿಶ್ವರೂಪಿಣಂ ॥ ೨೫ ॥

ಯಸ್ಯ ಶ್ರೋತ್ರೇ ದಿಶಃ ಸರ್ವಾ ಯಚ್ಚಕ್ಷುರ್ದಿನಕೃಚ್ಛಶೀ ।
ಋಕ್ಸಾಮಯಜುಷೀ ಯೇನ ತಂ ವಂದೇ ಬ್ರಹ್ಮರೂಪಿಣಂ ॥ ೨೬ ॥

ಯನ್ಮುಖಾದ್ಬ್ರಾಹ್ಮಣಾ ಜಾತಾ ಯದ್ಬಾಹೋರಭವನ್ನೃಪಾಃ ।
ವೈಶ್ಯಾ ಯಸ್ಯೋರುತೋ ಜಾತಾಃ ಪದ್ಭ್ಯಾಂ ಶೂದ್ರೋ ವ್ಯಜಾಯತ ॥೨೭॥

ಮಾಯಾಸಂಗಮಮಾತ್ರೇಣ ವದಂತಿ ಪುರುಷಂ ತು ಯಂ ।
ಸ್ವಭಾವವಿಮಲಂ ಶುದ್ಧಂ ನಿರ್ವಿಕಾರಂ ನಿರಂಜನಂ ॥ ೨೮ ॥

ಕ್ಷೀರಾಬ್ಧಿಶಾಯಿನಂ ದೇವಮನಂತಮಪರಾಜಿತಂ ।
ಸದ್ಭಕ್ತವತ್ಸಲಂ ವಿಷ್ಣುಂ ಭಕ್ತಿಗಮ್ಯಂ ನಮಾಮ್ಯಹಂ ॥ ೨೯ ॥

---

೨೫. ಅಂತರಿಕ್ಷವೇ ನಾಭಿಯಾಗಿವುಳ್ಳ, ದ್ಯುಲೋಕವೇ ಶಿರಸ್ಸಾಗಿರುವ ಭೂಲೋಕವನ್ನೇ ಪಾದವನ್ನಾಗಿ ಮಾಡಿಕೊಂಡಿರುವ, ವಿಶ್ವರೂಪಿಯಾದ ನಾರಾಯಣನನ್ನು ನಮಸ್ಕರಿಸುತ್ತೇನೆ.

೨೬. ಸಕಲ ದಿಕ್ಕುಗಳೂ ಯಾರ ಶ್ರೋತ್ರಗಳೋ, ಸೂರ್ಯಚಂದ್ರರೇ ಯಾರ ನೇತ್ರಗಳೋ, ಋಗ್ವೇದ, ಸಾಮವೇದ, ಯಜುರ್ವೇದಗಳು ಯಾರಿಂದ ಉಪದೇಶಿಸಲ್ಪಟ್ಟವೋ, ಅಂತಹ, ಬ್ರಹ್ಮಪದವಾಚ್ಯನಾದ ಪರಮಾತ್ಮನನ್ನು ನಮಸ್ಕರಿಸುತ್ತೇನೆ.

೨೭–೨೯. ಯಾರ ಮುಖದಿಂದ ಬ್ರಾಹ್ಮಣರು, ಬಾಹುಗಳಿಂದ ಕ್ಷತ್ರಿಯರು, ತೊಡೆಗಳಿಂದ ವೈಶ್ಯರು, ಕಾಲುಗಳಿಂದ ಶೂದ್ರರೂ ಹುಟ್ಟಿದರೋ ಯಾರನ್ನು ಪ್ರಕೃತಿಯಲ್ಲಿ ಸನ್ನಿಹಿತನಾಗುವ ಮಾತ್ರದಿಂದ ಪುರುಷನೆಂದು ಹೇಳುವರೋ, ಅಂತಹವನು, ನಿರ್ಮಲ ಸ್ವಭಾವವುಳ್ಳವನು, ಪರಮಪವಿತ್ರನು, ವಿಕಾರಶೂನ್ಯನು, ದೋಷರಹಿತನು, ಕ್ಷೀರಸಾಗರಶಾಯಿಯು, ಅಜೇಯನು, ದೇಶಕಾಲ ಗುಣಾಪರಿಚ್ಛಿನ್ನನು, ಭಕ್ತಜನರಲ್ಲಿ ಪ್ರೀತಿಮಾಡುವವನು ಮತ್ತು ಭಕ್ತಿಗಮ್ಯನೂ ಆದ ವಿಷ್ಣುವನ್ನು ನಮಸ್ಕರಿಸುತ್ತೇನೆ.

ಪೃಥಿವ್ಯಾದೀನಿ ಭೂತಾನಿ ತನ್ಮಾತ್ರಾಣೀಂದ್ರಿಯಾಣಿ ಚ ।
ಸೂಕ್ಷ್ಮಾಸೂಕ್ಷ್ಮಾಣಿ ಯೇನಾಸಂಸ್ತಂ ವಂದೇ ಸರ್ವತೋಮುಖಂ ॥ ೩೦ ॥

ಯದ್ಬ್ರಹ್ಮ ಪರಮಂ ಧಾಮ ಸರ್ವಲೋಕೋತ್ತಮೋತ್ತಮಂ ।
ನಿರ್ಗುಣಂ ಪರಮಂ ಸೂಕ್ಷ್ಮಂ ಪ್ರಣತೋಽಸ್ಮಿ ಪುನಃ ಪುನಃ ॥ ೩೧ ॥

ಅವಿಕಾರಮಜಂ ಶುದ್ಧಂ ಸರ್ವತೋ ಬಾಹುಮೀಶ್ವರಂ ।
ಯಮಾಮನಂತಿ ಯೋಗೀಂದ್ರಾಃ ಸರ್ವಕಾರಣಕಾರಣಂ ॥ ೩೨ ॥

ಯೋ ದೇವಃ ಸರ್ವಭೂತಾನಾಮಂತರಾತ್ಮಾ ಜಗನ್ಮಯಃ ।
ನಿರ್ಗುಣಃ ಪರಮಾತ್ಮಾ ಚ ಸ ಮೇ ವಿಷ್ಣುಃ ಪ್ರಸೀದತು ॥ ೩೩ ॥

---

೩೦. ಪೃಥಿವೀ, ಜಲ, ತೇಜಸ್ಸು, ವಾಯು ಮತ್ತು ಆಕಾಶವೆಂಬ ಪಂಚಭೂತಗಳು, ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧವೆಂಬ ಪಂಚತನ್ಮಾತ್ರಗಳು, ಇಂದ್ರಿಯಗಳು ಮತ್ತು ಅಣು ಮಹತ್ತಾದ ಪದಾರ್ಥಗಳೆಲ್ಲವೂ ಯಾರಿಂದ ಸೃಷ್ಟಿಸಲ್ಪಟ್ಟವೋ ಅಂತಹ ಸರ್ವತೋಮುಖನಾದ ನಾರಾಯಣನನ್ನು ನಮಸ್ಕರಿಸುತ್ತೇನೆ.

೩೧. ಉತ್ತಮನು, ತೇಜೋಮಯನು, ಸಕಲಲೋಕೋತ್ತಮರಾದ ಬ್ರಹ್ಮಾದಿಗಳಿಗಿಂತಲೂ ಉತ್ತಮನು, ಪ್ರಾಕೃತಗುಣವಿಲ್ಲದವನು, ಅತ್ಯಂತ ಸೂಕ್ಷ್ಮನೂ ಆಗಿರುವ ಪರಬ್ರಹ್ಮನನ್ನು ಪುನಃಪುನಃ ನಮಸ್ಕರಿಸುತ್ತೇನೆ.

೩೨–೩೩. ನಿರ್ವಿಕಾರನು, ಉತ್ಪತ್ತಿರಹಿತನು, ನಿರ್ದೋಷನು, ಪೂರ್ಣ ಬಾಹುಗಳುಳ್ಳವನು, ಸಕಲ ಕಾರಣಗಳಿಗೂ ಸಾಮರ್ಥ್ಯಪ್ರದನೂ ಆದ ಯಾವ ಈಶ್ವರನನ್ನು ಯೋಗೀಶ್ವರರು ತಿಳಿಯುತ್ತಾರೆಯೋ, ಯಾವ ದೇವನು ಸಕಲ ಪ್ರಾಣಿಗಳಿಗೂ ಅಂತರ್ಯಾಮಿಯೂ, ಜಗನ್ನಿಯಾಮಕನೂ, ಲೌಕಿಕ ಗುಣರಹಿತನೂ, ಆಗಿರುವನೋ, ಅಂತಹ ವಿಷ್ಣುಪರಮಾತ್ಮನು ನನಗೆ ಪ್ರಸನ್ನನಾಗಲಿ.

**ಹೃದಯಸ್ಥೋಽಪಿ ದೂರಸ್ಥೋ ಮಾಯಯಾ ಮೋಹಿತಾತ್ಮನಾಂ ।**
**ಜ್ಞಾನಿನಾಂ ಸರ್ವಗೋ ಯಸ್ತು ಸ ಮೇ ವಿಷ್ಣುಃ ಪ್ರಸೀದತು ॥ ೩೪ ॥**

**ಚತುರ್ಭಿಶ್ಚ ಚತುರ್ಭಿಶ್ಚ ದ್ವಾಭ್ಯಾಂ ಪಂಚಭಿರೇವ ಚ ।**
**ಹೂಯತೇ ಚ ಪುನರ್ದ್ವಾಭ್ಯಾಂ ಸ ಮೇ ವಿಷ್ಣುಃ ಪ್ರಸೀದತು ॥ ೩೫ ॥**

**ಜ್ಞಾನಿನಾಂ ಕರ್ಮಿಣಾಂ ಚೈವ ತಥಾ ಭಕ್ತಿಮತಾಂ ನೃಣಾಂ ।**
**ಗತಿದಾತಾ ವಿಶ್ವಸೃಗ್ಯಃ ಸ ಮೇ ವಿಷ್ಣುಃ ಪ್ರಸೀದತು ॥ ೩೬ ॥**

**ಜಗದ್ಧಿತಾರ್ಥಂ ಯೇ ದೇಹಾಃ ಧ್ರಿಯಂತೇ ಲೀಲಯಾ ಹರೇಃ ।**
**ತಾನರ್ಚಯಂತಿ ವಿಬುಧಾಃ ಸ ಮೇ ವಿಷ್ಣುಃ ಪ್ರಸೀದತು ॥ ೩೭ ॥**

**ಯಮಾಮನಂತಿ ವೈ ಸಂತಃ ಸಚ್ಚಿದಾನಂದವಿಗ್ರಹಂ ।**
**ನಿರ್ಗುಣಂ ಚ ಗುಣಾಧಾರಂ ಸ ಮೇ ವಿಷ್ಣುಃ ಪ್ರಸೀದತು ॥ ೩೮ ॥**

---

೩೪. ಸಕಲ ಪ್ರಾಣಿಗಳ ಹೃದಯದಲ್ಲಿದ್ದಾಗ್ಯೂ ಅವಿದ್ಯೆಯಿಂದ ಮೋಹಿತರಾದವರಿಗೆ ದೂರದಲ್ಲಿರುವವನಂತೆ ತೋರುವ, ಜ್ಞಾನಿಗಳಿಗೆ ಎಲ್ಲಾ ಕಡೆಯಲ್ಲಿಯೂ ಗೋಚರನಾಗುವ ವಿಷ್ಣುವು ನನಗೆ ಪ್ರಸನ್ನನಾಗಲಿ.

೩೫. ನಾಲ್ಕು ಅಕ್ಷರಗಳುಳ್ಳ ಎರಡು ಮಂತ್ರಗಳು (ಆಶ್ರಾವಯ, ಅಸ್ತು ಶ್ರೌಷಟ್) ಎರಡು ಅಕ್ಷರಗಳ ಒಂದು ಮಂತ್ರ (ಯಜ) ಐದು ಅಕ್ಷರಗಳುಳ್ಳ ಒಂದು ಮಂತ್ರ (ಯೇಯಜಾಮಹೆ) ಪುನಃ ಎರಡು ಅಕ್ಷರಗಳುಳ್ಳ ಒಂದು ಮಂತ್ರ (ಶ್ರೌಷಟ್) ಇವುಗಳಿಂದ ಮಾಡುವ ಹೋಮದಲ್ಲಿ ಉದ್ದೇಶಿಸಲ್ಪಡುವ ವಿಷ್ಣುವು ನನಗೆ ಪ್ರಸನ್ನನಾಗಲಿ.

೩೬. ಜ್ಞಾನಿಗಳು, ಕರ್ಮಯೋಗಿಗಳು, ಭಕ್ತರೂ ಆಗಿರುವ ಮನುಷ್ಯರಿಗೆ ಸದ್ಗತಿಯನ್ನು ಕೊಡುವ, ಸಮಸ್ತಜನಗಳೂ ಅಪರೋಕ್ಷಕ್ಕಾಗಿ ಹುಡುಕುತ್ತಿರುವ ಆ ವಿಷ್ಣುವು ನನಗೆ ಪ್ರಸನ್ನನಾಗಲಿ.

೪೭. ಲೋಕೋದ್ಧಾರಕ್ಕಾಗಿ ಲೀಲೆಯಿಂದ ಸ್ವೀಕರಿಸುವ ವಿಷ್ಣುವಿನ ಯಾವ ಅವತಾರರೂಪಗಳನ್ನು ಜ್ಞಾನಿಗಳು ಪೂಜಿಸುತ್ತಾರೆಯೋ ಅಂತಹ ವಿಷ್ಣುವು ನನಗೆ ಪ್ರಸನ್ನನಾಗಲಿ.

೩೮. ಸದ್ಜ್ಞಾನಾನಂದದೇಹನು, ಪ್ರಾಕೃತಗುಣರಹಿತನು ಮತ್ತು

ಇತಿ ಸ್ತುತ್ವಾ ನಮೇದ್ವಿಷ್ಣುಂ ಬ್ರಾಹ್ಮಣಾಂಶ್ಚ ಪ್ರಪೂಜಯೇತ್ ।
ಆಚಾರ್ಯಂ ಪೂಜಯೇತ್ಪಶ್ಚಾದ್ದಕ್ಷಿಣಾಚ್ಛಾದನಾದಿಭಿಃ ॥ ೩೯ ॥

ಬ್ರಾಹ್ಮಣಾನ್ಭೋಜಯೇಚ್ಛಕ್ತ್ಯಾ ಭಕ್ತಿಭಾವಸಮನ್ವಿತಃ ।
ಪುತ್ರಮಿತ್ರಕಲತ್ರಾದ್ಯೈಃ ಸ್ವಯಂ ಚ ಸಹ ಬಂಧುಭಿಃ ॥ ೪೦ ॥

ಕುರ್ವೀತ ಪಾರಣಂ ವಿಪ್ರ ನಾರಾಯಣಪರಾಯಣಃ ।
ಯಸ್ತ್ವೇತತ್ಕರ್ಮ ಕುರ್ವೀತ ಧ್ವಜಾರೋಪಣಮುತ್ತಮಂ ॥ ೪೧ ॥

ತಸ್ಯ ಪುಣ್ಯಫಲಂ ವಕ್ಷ್ಯೇ ಶೃಣುಷ್ವ ಸುಸಮಾಹಿತಃ ।
ಪಟೋ ಧ್ವಜಸ್ಯ ವಿಪ್ರೇಂದ್ರ ಯಾವಚ್ಚಲತಿ ವಾಯುನಾ ।
ತಾವಂತಿ ಪಾಪಜಾಲಾನಿ ನಶ್ಯಂತ್ಯೇವ ನ ಸಂಶಯಃ ॥ ೪೨ ॥

---

ಅಪ್ರಾಕೃತ ಗುಣವಂತನು ಎಂದು ಸಾಧುಗಳು ತಿಳಿಯುವ ವಿಷ್ಣುವು ನನಗೆ ಪ್ರಸನ್ನನಾಗಲಿ.

೩೯. ಈ ಪ್ರಕಾರ ಸ್ತುತಿಸಿ, ವಿಷ್ಣುವನ್ನು ನಮಸ್ಕರಿಸಿ, ಬ್ರಾಹ್ಮಣರು ಮತ್ತು ಆಚಾರ್ಯರನ್ನು ದಕ್ಷಿಣೆ ವಸ್ತ್ರ ಮುಂತಾದುವುಗಳಿಂದ ಸತ್ಕರಿಸಬೇಕು.

೪೦–೪೧. ಬ್ರಾಹ್ಮಣನಾದ ನಾರದನೇ! ತರುವಾಯ ಭಕ್ತಿಭಾವಯುತನಾಗಿ ಬ್ರಾಹ್ಮಣ ಭೋಜನಮಾಡಿಸಿ, ಮಕ್ಕಳು, ಸ್ನೇಹಿತರು, ಹೆಂಡತಿ ಮತ್ತು ಬಂಧುಗಳು ಇವರುಗಳಿಂದ ಸಹಿತನಾಗಿ ನಾರಾಯಣನನ್ನು ಸ್ಮರಿಸುತ್ತಾ ಪಾರಣೆಯನ್ನು ಮಾಡಬೇಕು.

೪೧-೪೨. ಈ ರೀತಿಯಾಗಿ ಉತ್ತಮವಾದ ಧ್ವಜಾರೋಪಣ ಕರ್ಮವನ್ನು ಮಾಡುವವನಿಗುಂಟಾಗುವ ಪುಣ್ಯಫಲವನ್ನು ಹೇಳುತ್ತೇನೆ. ಸಮಾಧಾನಚಿತ್ತನಾಗಿ ಕೇಳು. ಧ್ವಜದ ಬಟ್ಟೆಯು ಗಾಳಿಯಿಂದ ಎಷ್ಟಾವರ್ತಿ ಚಲಿಸುತ್ತದೆಯೋ ಅಷ್ಟು ಪಾಪರಾಶಿಗಳು ಖಂಡಿತವಾಗಿ ಪರಿಹಾರವಾಗುತ್ತವೆ, ಸಂದೇಹವಿಲ್ಲ.

**ಮಹಾಪಾತಕಯುಕ್ತೋ ವಾ ಯುಕ್ತೋ ವಾ ಸರ್ವಪಾತಕೈಃ ।**
**ಧ್ವಜಂ ವಿಷ್ಣುಗೃಹೇ ಕೃತ್ವಾ ಮುಚ್ಯತೇ ಸರ್ವಪಾತಕೈಃ ॥ ೪೩ ॥**

**ಯಾವದ್ದಿನಾನಿ ತಿಷ್ಠೇ ದ್ಧ್ವಜೋ ವಿಷ್ಣುಗೃಹೇ ದ್ವಿಜ ।**
**ತಾವದ್ಯುಗಸಹಸ್ರಾಣಿ ಹರಿಸಾರೂಪ್ಯಮಶ್ನುತೇ ॥ ೪೪ ॥**

**ಆರೋಪಿತಂ ಧ್ವಜಂ ದೃಷ್ಟ್ವಾ ಯೇಽಭಿನಂದಂತಿ ಧಾರ್ಮಿಕಾಃ ।**
**ತೇಽಪಿ ಸರ್ವೇ ಪ್ರಮುಚ್ಯಂತೇ ಮಹಾಪಾತಕಕೋಟಿಭಿಃ ॥ ೪೫ ॥**

**ಆರೋಪಿತೋ ಧ್ವಜೋ ವಿಷ್ಣುಗೃಹೇ ಧುನ್ವನ್ಪಟಂ ಸ್ವಕಂ ।**
**ಕರ್ತುಃ ಸರ್ವಾಣಿ ಪಾಪಾನಿ ಧುನೋತಿ ನಿಮಿಷಾರ್ಧತಃ ॥ ೪೬ ॥**

---

೪೩. ಪಂಚಮಹಾಪಾತಕಗಳನ್ನು ಮಾಡಿದವನಾಗಲಿ ಅಥವಾ ಸಕಲ ಪಾಪಗಳನ್ನೂ ಮಾಡಿದವನಾಗಲಿ, ವಿಷ್ಣುದೇವಾಲಯದಲ್ಲಿ ಧ್ವಜಾರೋಪಣವನ್ನು ಮಾಡಿಸಿದರೆ ಅವನು ಸಕಲ ಪಾಪಗಳಿಂದಲೂ ಮುಕ್ತನಾಗುತ್ತಾನೆ.

೪೪. ವಿಷ್ಣುದೇವಾಲಯದಲ್ಲಿ ಧ್ವಜವು ಎಷ್ಟು ದಿನಗಳಿರುತ್ತದೆಯೋ ಅಷ್ಟು ಸಾವಿರ ಯುಗಗಳಕಾಲ ಹರಿಸಾರೂಪ್ಯವನ್ನು ಅನುಭವಿಸುವನು.

೪೫. ದೇವಸ್ಥಾನದಲ್ಲಿ ಸ್ಥಾಪಿಸಿದ ಧ್ವಜವನ್ನು ನೋಡಿ ಅಭಿನಂದಿಸುವ ಧಾರ್ಮಿಕರೆಲ್ಲರೂ ಕೋಟ್ಯಂತರ ಮಹಾಪಾಪಗಳಿಂದ ಬಿಡುಗಡೆಯನ್ನು ಹೊಂದುವರು.

೪೬. ವಿಷ್ಣುದೇವಾಲಯದಲ್ಲಿ ಆರೋಪಿಸಲ್ಪಟ್ಟ ಧ್ವಜವು ತನ್ನ ಪಟವನ್ನು ಹಾರಿಸುತ್ತಾ ಧ್ವಜಸ್ಥಾಪಕನ ಸಕಲ ಪಾಪಗಳನ್ನೂ ನಿಮಿಷಾರ್ಧದಲ್ಲಿ ಹಾರಿಹೋಗುವಂತೆ ಮಾಡುತ್ತದೆ.

**ಯಸ್ತ್ವಾರೋಪ್ಯ ಗೃಹೇ ವಿಷ್ಣೋ ರ್ಧ್ವಜಂ ನಿತ್ಯಮುಪಾಚರೇತ್ ।**
**ಸ ದೇವಯಾನೇನ ದಿವಂ ಯಾತೀವ ಸುಮತಿರ್ನೃಪಃ　　　　॥ ೪೭ ॥**

**ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ ಪ್ರಥಮಪಾದೇ ವ್ರತಾಖ್ಯಾನೇ ಧ್ವಜಾರೋಪಣನ್ನಾಮೈಕೋನವಿಂಶೋಽಧ್ಯಾಯಃ**

---

೪೭. ವಿಷ್ಣುದೇವಾಲಯದಲ್ಲಿ ಧ್ವಜವನ್ನು ಸ್ಥಾಪಿಸಿ, ಯಾವಾಗಲೂ ಅದನ್ನು ಕೆಡದಂತೆ ನೋಡಿಕೊಳ್ಳುವವನು ಸುಮತಿಯೆಂಬ ದೊರೆಯಂತೆ ವಿಮಾನದಲ್ಲಿ ಕುಳಿತು ದೇವಲೋಕಕ್ಕೆ ಹೋಗುವನು.

ಇಂತು ಶ್ರೀಬೃಹನ್ನಾರದೀಯ ಪುರಾಣದಲ್ಲಿ ಪೂರ್ವಭಾಗದ ಪ್ರಥಮಪಾದದೊಳು ವ್ರತನಿರೂಪಣ ಪ್ರಕರಣದಲ್ಲಿ ಧ್ವಜಾರೋಪಣವ್ರತಕಥನವೆಂಬ ಹತ್ತೊಂಭತ್ತ ನೆಯ ಅಧ್ಯಾಯವು ಮುಗಿದುದು.



**ಕಥಾಸಾರಾಂಶ**

ಈ ಅಧ್ಯಾಯದಲ್ಲಿ ಧ್ವಜಾರೋಪಣವೆಂಬ ವ್ರತವನ್ನು ಮಾಡುವ ಕ್ರಮ ಅದರ ಫಲ ಮುಂತಾದುವನ್ನು ಸಪರಿಕರವಾಗಿ ನಿರೂಪಿಸಿದೆ.



# ವಿಂಶೋಽಧ್ಯಾಯಃ

ನಾರದ ಉವಾಚ

ಭಗವನ್ಸರ್ವಧರ್ಮಜ್ಞ ಸರ್ವಶಾಸ್ತ್ರಾರ್ಥಪಾರಗ ।
ಸರ್ವಕರ್ಮವರಿಷ್ಠಂ ಚ ತ್ವಯೋಕ್ತಂ ಧ್ವಜಧಾರಣಂ ॥ ೧ ॥

ಯಸ್ತು ವೈ ಸುಮತಿರ್ನಾಮ ಧ್ವಜಾರೋಪಪರೋ ಮುನೇ ।
ತ್ವಯೋಕ್ತಸ್ತಸ್ಯ ಚರಿತಂ ವಿಸ್ತರೇಣ ಮಮಾದಿಶ ॥ ೨ ॥

ಸನಕ ಉವಾಚ

ಶೃಣುಷ್ವೈಕಮನಾಃ ಪುಣ್ಯಮಿತಿಹಾಸಂ ಪುರಾತನಂ ।
ಬ್ರಹ್ಮಣಾ ಕಥಿತಂ ಮಹ್ಯಂ ಸರ್ವಪಾಪಪ್ರಣಾಶನಂ ॥ ೩ ॥

ಆಸೀತ್ಪುರಾ ಕೃತಯುಗೇ ಸುಮತಿರ್ನಾಮ ಭೂಪತಿಃ ।
ಸೋಮವಂಶೋದ್ಭವಃ ಶ್ರೀಮಾನ್ಸಪ್ತದ್ವೀಪೈಕನಾಯಕಃ ॥ ೪ ॥

---

## ಇಪ್ಪತ್ತನೆಯ ಅಧ್ಯಾಯವು

೧. ನಾರದನು ಮಾತನಾಡಿದನು—ಸಕಲಧರ್ಮಜ್ಞಾನಿಯು, ಸಕಲ ಶಾಸ್ತ್ರಪಾರಂಗತನೂ ಆಗಿರುವ ಪೂಜ್ಯ ಸನಕನೇ! ಕರ್ಮಗಳಲ್ಲಿ ಶ್ರೇಷ್ಠವಾದ ಧ್ವಜಧಾರಣವೆಂಬ ಕರ್ಮವು ನಿನ್ನಿಂದ ಉಪದೇಶಿಸಲ್ಪಟ್ಟಿತು.

೨. ನೀನು ಹೇಳಿದ ಧ್ವಜಧಾರಣವ್ರತವನ್ನು ಆಚರಿಸಿದ ಸುಮತಿ ಎಂಬ ದೊರೆ ಯಾರು? ಆತನ ಚರಿತ್ರೆಯನ್ನು ವಿಸ್ತಾರವಾಗಿ ನನಗೆ ತಿಳಿಸು ಎಂದು ಪ್ರಾರ್ಥನೆ ಮಾಡಿದನು.

೩. ಸನಕನು ಹೇಳಿದನು—ಚತುರ್ಮುಖನು ನನಗೆ ಹೇಳಿದ, ಸಕಲ ಪಾಪಗಳನ್ನು ಪರಿಹರಿಸುವ, ಪುಣ್ಯಕರವಾದ, ಪುರಾತನೇತಿಹಾಸವನ್ನು ಹೇಳುತ್ತೇನೆ, ಏಕಾಗ್ರಚಿತ್ತನಾಗಿ ಕೇಳು.

೪–೭. ಪೂರ್ವಕಾಲದಲ್ಲಿ ಕೃತಯುಗದಲ್ಲಿ ಚಂದ್ರಕುಲೋತ್ಪನ್ನನು, ಶ್ರೀಮಂತನು, ಏಳು ದ್ವೀಪಗಳಿಗೂ ಮುಖ್ಯನಾಯಕನು, ಧರ್ಮಶೀಲನು, ಸತ್ಯವಕ್ತೃವು, ಶುದ್ಧವಂಶಜಾತನು, ಅತಿಥಿಗಳಿಗೆ ಪ್ರಿಯನು, ಸಕಲಸಲ್ಲಕ್ಷಣಸಹಿತನು,

**ಧರ್ಮಾತ್ಮಾ ಸತ್ಯಸಂಪನ್ನಃ ಶುಚಿವಂಶ್ಯೋऽತಿಥಿಪ್ರಿಯಃ ।**
**ಸರ್ವಲಕ್ಷಣಸಂಪನ್ನಃ ಸರ್ವಸಂಪದ್ವಿಭೂಷಿತಃ ॥ ೫ ॥**

**ಸದಾ ಹರಿಕಥಾಸೇವೀ ಹರಿಪೂಜಾಪರಾಯಣಃ ।**
**ಹರಿಭಕ್ತಿಪರಾಣಾಂ ಚ ಶುಶ್ರೂಷುರ್ನಿರಹಂಕೃತಿಃ ॥ ೬ ॥**

**ಪೂಜ್ಯಪೂಜಾರತೋ ನಿತ್ಯಂ ಸಮದರ್ಶೀ ಗುಣಾನ್ವಿತಃ ।**
**ಸರ್ವಭೂತಹಿತಃ ಶಾಂತಃ ಕೃತಜ್ಞಃ ಕೀರ್ತಿಮಾಂಸ್ತಥಾ ॥ ೭ ॥**

**ತಸ್ಯ ಭಾರ್ಯಾ ಮಹಾಭಾಗ ಸರ್ವಲಕ್ಷಣಸಂಯುತಾ ।**
**ಪತಿವ್ರತಾ ಪತಿಪ್ರಾಣಾ ನಾಮ್ನಾ ಸತ್ಯಮತಿರ್ಮುನೇ ॥ ೮ ॥**

**ತಾವುಭೌ ದಂಪತೀ ನಿತ್ಯಂ ಹರಿಪೂಜಾಪರಾಯಣೌ ।**
**ಜಾತಿಸ್ಮರೌ ಮಹಾಭಾಗೌ ಸತ್ಯಜ್ಞೌ ಸತ್ಪರಾಯಣೌ ॥ ೯ ॥**

---

ಸಕಲೈಶ್ವರ್ಯದಿಂದ ತುಂಬಿರುವವನು, ಯಾವಾಗಲೂ ಹರಿಕಥೆಯನ್ನು ಕೇಳುತ್ತಿರುವವನು, ವಿಷ್ಣುಪೂಜೆಯಲ್ಲಿ ಆಸಕ್ತನು, ಹರಿಭಕ್ತರನ್ನು ಸೇವಿಸುವವನು, ಅಹಂಕಾರವಿಲ್ಲದವನು, ಯಾವಾಗಲೂ ಪೂಜ್ಯರ ಪೂಜೆಯನ್ನು ಆಸಕ್ತಿಯಿಂದ ಮಾಡುತ್ತಿರುವವನು, ಎಲ್ಲಾ ಪ್ರಜೆಗಳಲ್ಲಿಯೂ ಸಮದೃಷ್ಟಿಯುಳ್ಳವನು, ಸುಗುಣಶಾಲಿಯು, ಸರ್ವಪ್ರಾಣಿಗಳಿಗೂ ಉಪಕಾರಮಾಡುವವನು, ಶಾಂತಿಸಂಪನ್ನನು, ಕೃತಜ್ಞನು ಮತ್ತು ಯಶಸ್ವಿಯೂ ಆಗಿದ್ದ ಸುಮತಿಯೆಂಬ ದೊರೆಯಿದ್ದನು.

೮. ಆ ಸುಮತಿಗೆ ಸಕಲ ಲಕ್ಷಣಗಳಿಂದ ಯುಕ್ತಳಾದ, ತನ್ನ ಪ್ರಾಣದಂತೆ ಪತಿಯನ್ನು ಎಣಿಸುತ್ತಿದ್ದ, ಪತಿವ್ರತೆಯಾದ ಸತ್ಯಮತಿಯೆಂಬ ಹೆಂಡತಿಯಿದ್ದಳು.

೯-೧೦. ಸರ್ವದಾ ಹರಿಪೂಜೆಯಲ್ಲಿ ನಿರತರು, ಜನ್ಮಾಂತರಸ್ಮರಣೆಯುಳ್ಳವರು, ಧನ್ಯರು, ಸತ್ಯಜ್ಞಾನಿಗಳು, ಭಗವಂತನನ್ನೇ ಧ್ಯಾನಿಸುತ್ತಿರುವವರು, ಅನ್ನದಾನನಿರತರು, ಯಾವಾಗಲೂ ಉದಕದಾನ ಮಾಡವುದರಲ್ಲಿ ಆಸಕ್ತರೂ

ಅನ್ನದಾನರತೌ ನಿತ್ಯಂ ಜಲದಾನಪರಾಯಣೌ ।
ತಡಾಗಾರಾಮವಪ್ರಾದೀನಸಂಖ್ಯಾತಾನ್ವಿತೇನತುಃ ॥ ೧೦ ॥

ಸಾ ತು ಸತ್ಯಮತಿರ್ನಿತ್ಯಂ ಶುಚಿರ್ವಿಷ್ಣುಗೃಹೇ ಸತೀ ।
ನೃತ್ಯತ್ಯತ್ಯಂತಸಂತುಷ್ಟಾ ಮನೋಜ್ಞಾ ಮಂಜುವಾದಿನೀ ॥ ೧೧ ॥

ಸೋಽಪಿ ರಾಜಾ ಮಹಾಭಾಗೋ ದ್ವಾದಶೀ ದ್ವಾದಶೀದಿನೇ ।
ಧ್ವಜಾಮಾರೋಪಯತ್ಯೇವ ಮನೋಜ್ಞಂ ಬಹುವಿಸ್ತರಂ ॥ ೧೨ ॥

ಏವಂ ಹರಿಪರಂ ನಿತ್ಯಂ ರಾಜಾನಂ ಧರ್ಮಕೋವಿದಂ ।
ಪ್ರಿಯಾಂ ಸತ್ಯಮತಿಂ ಚಾಸ್ಯ ದೇವಾ ಅಪಿ ಸದಾऽಸ್ತುವನ್ ॥ ೧೩ ॥

ತ್ರಿಲೋಕೇ ವಿಶ್ರುತೌ ಜ್ಞಾತ್ವಾ ದಂಪತೀ ಧರ್ಮಕೋವಿದೌ ।
ಆಯಯೌ ಬಹುಭಿಃ ಶಿಷ್ಯೈರ್ದ್ರಷ್ಟುಕಾಮೋ ವಿಭಾಂಡಕಃ ॥ ೧೪ ॥

---

ಆಗಿದ್ದ ಆ ದಂಪತಿಗಳು ಅಸಂಖ್ಯಾತವಾದ ಕೆರೆ, ತೋಟ, ಅರವಟ್ಟಿಗೆಮುಂತಾದುವುಗಳನ್ನು ಮಾಡಿಸಿದರು.

೧೧. ಮನೋಹರಳು, ಒಳ್ಳೆಯಮಾತನಾಡುವವಳೂ ಆದ ಆ ಸತ್ಯಮತಿಯು ಪ್ರತಿನಿತ್ಯವೂ ಸ್ನಾನಾದಿಗಳಿಂದ ಪರಿಶುದ್ಧಳಾಗಿ ವಿಷ್ಣುದೇವಾಲಯದಲ್ಲಿ ಅತ್ಯಂತ ಸಂತೋಷಡಿಂದ ಕುಣಿಯುತ್ತಿದ್ದಳು.

೧೨. ಧನ್ಯನಾದ ಆ ಸುಮತಿಮಹಾರಾಜನೂ ಸಹ ಪ್ರತಿ ದ್ವಾದಶೀ ದಿನದಲ್ಲಿಯೂ ಮನೋಹರವು ಮತ್ತು ಬಹು ವಿಶಾಲವೂ ಆದ ಧ್ವಜವನ್ನು ಸ್ಥಾಪಿಸುತ್ತಿದ್ದನು.

೧೩. ಈರೀತಿಯಾಗಿ ಸರ್ವದಾ ಹರಿಪೂಜಾನಿರತನೂ, ಧರ್ಮತತ್ತ್ವಜ್ಞಾನಿಯೂ ಆದ ರಾಜನನ್ನು ಮತ್ತು ಅವನ ಹೆಂಡತಿಯಾದ ಸತ್ಯಮತಿಯನ್ನೂ ಸಹ ದೇವತೆಗಳೂ ಕೂಡ ಯಾವಾಗಲೂ ಸ್ತೋತ್ರಮಾಡುತ್ತಿದ್ದರು.

೧೪. ಧರ್ಮಕುಶಲರಾದ ಈ ದಂಪತಿಗಳು ಮೂರು ಲೋಕಗಳಲ್ಲಿಯೂ ಪ್ರಸಿದ್ಧರಾಗಿದ್ದುದನ್ನು ತಿಳಿದು ಅವರನ್ನು ನೋಡಬೇಕೆಂಬ ಅಭಿಲಾಷೆಯಿಂದ ವಿಭಾಂಡಕನೆಂಬ ಮುನಿಯು ಬಹು ಶಿಷ್ಯರಿಂದ ಸಹಿತನಾಗಿ ಬಂದನು.

ತಮಾಯಾತಂ ಮುನಿಂ ಶ್ರುತ್ವಾ ಸ ತು ರಾಜಾ ವಿಭಾಂಡಕಂ ।
ಪ್ರತ್ಯುದ್ಯಯೌ ಸಪತ್ನೀಕಃ ಪೂಜಾಭಿರ್ಬಹುವಿಸ್ತರಂ ॥ ೧೫ ॥

ಕೃತಾತಿಥ್ಯಕ್ರಿಯಂ ಶಾಂತಂ ಕೃತಾಸನಪರಿಗ್ರಹಂ ।
ನೀಚಾಸನಸ್ಥಿತೋ ಭೂಪಃ ಪ್ರಾಂಜಲಿರ್ಮುನಿಮಬ್ರವೀತ್ ॥ ೧೬ ॥

ರಾಜೋವಾಚ

ಭಗವನ್ಕೃತಕೃತ್ಯೋಽಸ್ಮಿ ತ್ವದಭ್ಯಾಗಮನೇನ ವೈ ।
ಸತಾಮಾಗಮನಂ ಸಂತಃ ಪ್ರಶಂಸಂತಿ ಸುಖಾವಹಂ ॥ ೧೭ ॥

ಯತ್ರ ಸ್ಯಾನ್ಮಹತಾಂ ಪ್ರೇಮ ತತ್ರ ಸ್ಯುಃ ಸರ್ವಸಂಪದಃ ।
ತೇಜಃ ಕೀರ್ತಿರ್ಧನಂ ಪುತ್ರಾ ಇತಿ ಪ್ರಾಹುರ್ವಿಪಶ್ಚಿತಃ ॥ ೧೮ ॥

ತತ್ರ ವೃದ್ಧಿಮುಪಾಯಾಂತಿ ಶ್ರೇಯಾಂಸ್ಯನುದಿನಂ ಮುನೇ ।
ಯತ್ರ ಸಂತಃ ಪ್ರಕುರ್ವಂತಿ ಮಹತೀಂ ಕರುಣಾಂ ಪ್ರಭೋ ॥ ೧೯ ॥

---

೧೫. ವಿಭಾಂಡಕಮುನಿಯು ಬರುವ ವರ್ತಮಾನವನ್ನು ಕೇಳಿ ಆ ರಾಜನು ಸಪತ್ನೀಕನಾಗಿ ಅನೇಕವಿಧ ಸತ್ಕಾರಗಳಿಂದ ಎದುರುಗೊಂಡು ವಿಭಾಂಡಕನನ್ನು ಕರೆದುಕೊಂಡು ಬಂದನು.

೧೬. ರಾಜನು ಮುನಿಗೆ ಆತಿಥ್ಯವನ್ನು ಮಾಡಿ ಆಸನದಲ್ಲಿ ಕುಳ್ಳಿರಿಸಿದ ಮೇಲೆ ತಾನು ಕೆಳಗೆ ನಿಂತು ಕೈಮುಗಿದುಕೊಂಡು ಶಾಂತಿಸಂಪನ್ನನಾದ ಮುನಿಯನ್ನು ಕುರಿತು ಮಾತನಾಡಿದನು.

೧೭. ರಾಜನು ಹೇಳಿದನು—ಪೂಜ್ಯರೇ! ನೀವು ದಯಮಾಡಿಸಿದುದರಿಂದ ಕೃತಕೃತ್ಯನಾಗಿದ್ದೇನೆ. ಸಾಧುಗಳು, ಸತ್ಪುರುಷರ ಆಗಮನವುಶುಭದಾಯಕವೆಂದು ಪ್ರಶಂಸಿಸುತ್ತಾರೆ.

೧೮. ದೊಡ್ಡವರ ವಿಶ್ವಾಸವಿರುವೆಡೆಯಲ್ಲಿ ಸಕಲ ಸಂಪತ್ತುಗಳು, ತೇಜಸ್ಸು, ಕೀರ್ತಿ, ಹಣ, ಪುತ್ರರು ಇವುಗಳು ನೆಲೆಸುತ್ತವೆಂದು ಜ್ಞಾನಿಗಳು ಹೇಳುತ್ತಾರೆ.

೧೯. ಸ್ವಾಮಿಯೆ! ಸಾಧುಗಳು ಮಹತ್ತಾದ ದಯೆಯನ್ನು ಮಾಡುವ ಸ್ಥಳವಲ್ಲಿ ಪ್ರತಿದಿನವೂ ಶ್ರೇಯಸ್ಸು ಅಭಿವೃದ್ಧಿಯನ್ನು ಹೊಂದುತ್ತದೆ.

ಯೋ ಮೂರ್ಧ್ನಿ ಧಾರಯೇದ್ಬ್ರಹ್ಮನ್ಮಹತ್ಪಾದಜಲಂ ರಜಃ ।
ಸ ಸ್ನಾತಃ ಸರ್ವತೀರ್ಥೇಷು ಪುಣ್ಯಾತ್ಮಾ ನಾತ್ರ ಸಂಶಯಃ ೨೦ ॥

ಮಮ ಪುತ್ರಾಶ್ಚ ದಾರಾಶ್ಚ ಸಂಪತ್ತ್ವಯಿ ಸಮರ್ಪಿತಾಃ ।
ಮಾಮಾಜ್ಞಾಪಯ ವಿಪ್ರೇಂದ್ರ ಕಿಂ ಪ್ರಿಯಂ ಕರವಾಣಿ ತೇ ॥ ೨೧ ॥

ವಿನಯಾವನತಂ ಭೂಪಂ ಸ ನಿರೀಕ್ಷ್ಯ ಮುನೀಶ್ವರಃ ।
ಸ್ಪೃಶನ್ಕರೇಣ ತಂ ಪ್ರೀತ್ಯಾ ಪ್ರತ್ಯುವಾಚಾತಿಹರ್ಷಿತಃ ॥ ೨೨ ॥

ಋಷಿರುವಾಚ

ರಾಜನ್ಯದುಕ್ತಂ ಭವತಾ ತತ್ಸರ್ವಂ ತ್ವತ್ಕುಲೋಚಿತಂ ।
ವಿನಯಾವನತಃ ಸರ್ವೋ ಬಹು ಶ್ರೇಯೋ ಲಭೇದಿಹ ॥ ೨೩ ॥

ಧರ್ಮಶ್ಚಾರ್ಥಶ್ಚ ಕಾಮಶ್ಚ ಮೋಕ್ಷಶ್ಚ ನೃಪಸತ್ತಮ ।
ವಿನಯಾಲ್ಲಭತೇ ಸರ್ವಂ ವಿನಯಾತ್ಕಿಂ ನ ಸಾಧ್ಯತೇ ॥ ೨೪ ॥

---

೨೦. ಮಹಾತ್ಮರ ಪಾದೋದಕ ಮತ್ತು ಪಾದಧೂಳಿಗಳನ್ನು ತಲೆಯ ಮೇಲೆ ಧರಿಸಿದರೆ ಖಂಡಿತವಾಗಿಯೂ ಸಕಲತೀರ್ಥಗಳಲ್ಲಿ ಸ್ನಾನಮಾಡಿದ ಪುಣ್ಯ ಬರುತ್ತದೆ, ಸಂದೇಹವಿಲ್ಲ.

೨೧. ವಿಪ್ರಶ್ರೇಷ್ಠನೇ! ನನ್ನ ಮಕ್ಕಳು ಹೆಂಡತಿ ಮತ್ತು ಐಶ್ವರ್ಯ ಇವುಗಳೆಲ್ಲವನ್ನೂ ನಿನಗೆ ಸಮರ್ಪಿಸಿದ್ದೇನೆ. ನಿನಗೆ ಪ್ರಿಯವಾದ ಯಾವ ಕಾರ್ಯ ವನ್ನು ಮಾಡಲಿ? ಅಪ್ಪಣೆಮಾಡು.

೨೨. ಎಂದು ಪ್ರಾರ್ಥಿಸಿ ವಿನಯದಿಂದ ಬಗ್ಗಿ ನಮಸ್ಕರಿಸಿದ ರಾಜ ನನ್ನು ನೋಡಿ ಅತ್ಯಂತ ಸಂತುಷ್ಟನಾಗಿ, ಹಸ್ತದಿಂದ ಅವನನ್ನು ಮುಟ್ಟಿ ಪ್ರೀತಿ ಪೂರ್ವಕವಾಗಿ ಉತ್ತರವನ್ನು ಹೇಳಿದನು.

೨೩. ಮುನಿಯು ಮಾತನಾಡಿದನು—ದೊರೆಯೇ! ನೀನು ಹೇಳಿದು ದೆಲ್ಲವೂ ನಿನ್ನ ವಂಶಕ್ಕನುಗುಣವಾದ ಮಾತು- ವಿನಯದಿಂದ ತಗ್ಗಿ ನಡೆಯುವ ವರೆಲ್ಲರೂ ಈ ಲೋಕದಲ್ಲಿ ಬಹು ಶ್ರೇಯಸ್ಸನ್ನು ಪಡೆಯುವರು.

೨೪. ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಇವುಗಳೆಲ್ಲವೂ ವಿನಯ ದಿಂದ ಲಭಿಸುತ್ತದೆ. ದೊರೆಯೇ! ವಿನಯದಿಂದ ಯಾವುದನ್ನು ತಾನೇ ಸಾಧಿಸಲಾಗದು?

ಪ್ರೀತೋಽಸ್ಮಿ ತವ ಭೂಪಾಲ ಸನ್ಮಾರ್ಗಪರಿವರ್ತಿನಃ ।
ಸ್ವಸ್ತಿ ತೇ ಸತತಂ ಭೂಯಾದ್ಯತ್ಪೃಚ್ಛಾಮಿ ತದುಚ್ಯತಾಂ ॥ ೨೫ ॥

ಪೂಜಾ ಬಹುವಿಧಾಃ ಸಂತಿ ಹರಿತುಷ್ಟಿವಿಧಾಯಕಾಃ ।
ತಾಸು ನಿತ್ಯಂ ಧ್ವಜಾರೋಪೇ ವರ್ತಸೇ ತ್ವಂ ಸದೋದ್ಯತಃ ॥ ೨೬ ॥

ಭಾರ್ಯಾಽಪಿ ತವ ಸಾಧ್ವೀಯಂ ನಿತ್ಯಂ ನೃತ್ಯಪರಾಯಣಾ ।
ಕಿಮರ್ಥಮೇತದ್ವೃತ್ತಾಂತಂ ಯಥಾವದ್ವಕ್ತುಮರ್ಹಸಿ ॥ ೨೭ ॥

ರಾಜೋವಾಚ

ಶೃಣುಷ್ವ ಭಗವನ್ಸರ್ವಂ ಯತ್ಪೃಚ್ಛಸಿ ವದಾಮಿ ತತ್ ।
ಆಶ್ಚರ್ಯಭೂತಂ ಲೋಕಾನಾಮಾವಯೋಶ್ಚರಿತಂ ತ್ವಿಹ ॥ ೨೮ ॥

ಅಹಮಾಸಂ ಪುರಾ ಶೂದ್ರೋ ಮಾಲಿನಿರ್ನಾಮ ಸತ್ತಮ ।
ಕುಮಾರ್ಗನಿರತೋ ನಿತ್ಯಂ ಸರ್ವಲೋಕಾಹಿತೇ ರತಃ ॥ ೨೯ ॥

---

೨೫. ದೊರೆಯೇ! ಸನ್ಮಾರ್ಗದಲ್ಲಿ ವರ್ತಿಸುತ್ತಿರುವ ನಿನ್ನ ವಿಷಯದಲ್ಲಿ ಸಂತುಷ್ಟನಾಗಿರುತ್ತೇನೆ, ನಿನಗೆ ಯಾವಾಗಲೂ ಮಂಗಳವಾಗಲಿ, ನಾನು ಕೇಳುವುದನ್ನು ಹೇಳು.

೨೬. ಹರಿಪ್ರಸಾದಸಾಧನವಾದ ಪೂಜೆಗಳು ಅನೇಕವಿಧವಾಗಿವೆ, ಅವುಗಳಲ್ಲಿ ಧ್ವಜಾರೋಪಣಕರ್ಮದಲ್ಲಿಯೇ ನೀನು ಸರ್ವದಾ ಉದ್ಯುಕ್ತನಾಗಿರುವೆ.

೨೭. ಸಾಧ್ವೀಮಣಿಯಾದ ನಿನ್ನ ಹೆಂಡತಿಯೂ ಸಹ ಯಾವಾಗಲೂ ನರ್ತನಕಾರ್ಯದಲ್ಲಿ ನಿರತಳಾಗಿದ್ದಾಳೆ, ನೀವಿಬ್ಬರೂ ಏಕೆ ಹೀಗೆ ವರ್ತಿಸುತ್ತಿರುವಿರಿ? ನಿಜವಾದ ವೃತ್ತಾಂತವನ್ನು ಹೇಳು ಎಂಬುದಾಗಿ ಮುನಿಯು ಕೇಳಿದನು.

೨೮. ಪೂಜ್ಯರೇ! ನೀವು ಕೇಳಿದುದನ್ನೆಲ್ಲಾ ಹೇಳುತ್ತೇನೆ, ಕೇಳಿರಿ, ಈ ನಮ್ಮಿಬ್ಬರ ವರ್ತನವು ಎಲ್ಲರಿಗೂ ಆಶ್ಚರ್ಯಕರವು ಮುಂತಾಗಿ ರಾಜನು ಹೇಳಿದನು-

೨೯-೩೩. ಸಾಧುಶ್ರೇಷ್ಠನೇ! ನಾನು ಹಿಂದಿನ ಜನ್ಮದಲ್ಲಿ ಮಾಲಿನಿ ಯೆಂಬ ಹೆಸರಿನಿಂದ ಶೂದ್ರನಾಗಿ ಹುಟ್ಟಿದ್ದೆನು. ಆಗ ನಾನು ದುರ್ಮಾರ್ಗನಿರತನು,

ಪಿಶುನೋ ಧರ್ಮವಿದ್ವೇಷೀ ದೇವದ್ರವ್ಯಾಪಹಾರಕಃ ।
ಗೋಘ್ನಶ್ಚ ಬ್ರಹ್ಮಹಾ ಚೋರಃ ಸರ್ವಪ್ರಾಣಿವಧೇ ರತಃ ॥ ೩೦ ॥

ನಿತ್ಯಂ ನಿಷ್ಠುರವಕ್ತಾ ಚ ಪಾಪೀ ವೇಶ್ಯಾಪರಾಯಣಃ ।
ಏವಂ ಸ್ಥಿತಃ ಕಿಯತ್ಕಾಲಮನಾದೃತ್ಯ ಮಹದ್ವಚಃ ॥ ೩೧ ॥

ಸರ್ವಬಂಧುಪರಿತ್ಯಕ್ತೋ ದುಃಖೀ ವನಮುಪಾಗತಃ ।
ಮೃಗಮಾಂಸಾಶನೋ ನಿತ್ಯಂ ತಥಾ ಪಾಂಥವಿಲುಂಪಕಃ ॥ ೩೨ ॥

ಏಕಾಕೀ ದುಃಖಬಹುಲೋ ನ್ಯವಸನ್ನಿರ್ಜನೇ ವನೇ ।
ಏಕದಾ ಕ್ಷುತ್ಪರಿಶ್ರಾಂತೋ ನಿದಾಘಾಂತೇ ಪಿಪಾಸಿತಃ ॥ ೩೩ ॥

ಜೀರ್ಣಂ ದೇವಾಲಯಂ ವಿಷ್ಣೋರಪಶ್ಯಂ ವಿಜನೇ ವನೇ ।
ಹಂಸಕಾರಂಡವಾಕೀರ್ಣಂ ತತ್ಸಮೀಪೇ ಮಹತ್ಸರಃ ॥ ೩೪ ॥

---

ಸರ್ವದಾ ಲೋಕಕ್ಕೆ ಅಹಿತವನ್ನು ಮಾಡುವವನು, ಚಾಡಿಹೇಳುವವನು, ಧರ್ಮ ದ್ವೇಷಿಯು, ದೇವದ್ರವ್ಯವನ್ನು ಅಪಹರಿಸುವವನು, ಗೋಹತ್ಯೆ, ಬ್ರಹ್ಮಹತ್ಯೆ ಗಳನ್ನು ಮಾಡುವವನು, ಕಳ್ಳನು, ಸಕಲಪ್ರಾಣಿಸಂಹಾರ ಮಾಡುವುದರಲ್ಲಿ ಆಸಕ್ತನು, ಸರ್ವದಾ ನಿಷ್ಠುರಭಾಷಿಯು, ಸೂಳೆಯರ ಸಹವಾಸ ಮಾಡುವವನೂ ಆಗಿ ಬಹುಕಾಲಪರ್ಯಂತವಾಗಿದ್ದು, ದೊಡ್ಡವರ ಮಾತನ್ನು ಮೀರಿ ನನ್ನ ಬಂಧು ಜನರಿಂದ ಪರಿತ್ಯಾಗ ಮಾಡಿಸಿಕೊಳ್ಳಲ್ಪಟ್ಟವನಾಗಿ, ದುಃಖವನ್ನು ಅನುಭವಿ ಸುತ್ತಾ, ಕಾಡಿಗೆ ಹೋದೆನು- ಅಲ್ಲಿ ಮೃಗಗಳ ಮಾಂಸವನ್ನು ತಿನ್ನುವವನು, ಪ್ರಯಾಣಿಕರನ್ನು ಹಿಂಸಿಸಿ ಅವರ ಸ್ವತ್ತನ್ನು ಅಪಹರಿಸುವವನು, ಏಕಾಕಿಯೂ ಆಗಿ ನಿರ್ಜನವಾದ ಕಾಡಿನಲ್ಲಿ ಬಹು ಕಷ್ಟದಿಂದ ವಾಸಿಸುತ್ತಿದ್ದೆನು.

೩೩-೩೪. ಗ್ರೀಷ್ಮಕಾಲದಲ್ಲಿ ಒಂದುದಿನ ಹಸಿವಿನಿಂದ ಬಳಲಿ ಬಾಯಾರಿಕೆಯಿಂದ ಬೆಂಡಾಗಿ, ಜನರಹಿತವಾದ ಕಾಡಿನಲ್ಲಿ ಒಂದು ವಿಷ್ಣುವಿನ ಹಳೆಯ ದೇವಾಲಯವನ್ನು ನೋಡಿದೆನು.

ಪರ್ಯಂತವನಪುಷ್ಪೌಘಛಾದಿತಂ ತನ್ಮುನೀಶ್ವರ ।
ಅಪಿಬಂ ತತ್ರ ಪಾನೀಯಂ ತತ್ತೀರೇ ವಿಗತಶ್ರಮಃ ॥ ೩೫ ॥

ಫಲಾನಿ ಜಗ್ಧ್ವಾ ಶೀರ್ಣಾನಿ ಸ್ವಯಂ ಕ್ಷುಚ್ಚ ನಿವಾರಿತಾ ।
ತಸ್ಮಿನ್ನೀರ್ಣಾಲಯೇ ವಿಷ್ಣೋರ್ನಿವಾಸಂ ಕೃತವಾನಹಂ ॥ ೩೬ ॥

ಜೀರ್ಣಸ್ಫುಟಿತಸಂಧಾನಂ ತಸ್ಯ ನಿತ್ಯಮಕಾರಿಷಂ ।
ಪರ್ಣೈಸ್ತೃಣೈಶ್ಚ ಕಾಷ್ಠೈಶ್ಚ ಗೃಹಂ ಸಮ್ಯಕ್ಪ್ರಕಲ್ಪಿತಂ ॥ ೩೭ ॥

ಸ್ವಸುಖಾರ್ಥಂ ತು ತದ್ಭೂಮಿರ್ಮಯಾ ಲಿಪ್ತಾ ಮುನೀಶ್ವರ ।
ತತ್ರಾಹಂ ವ್ಯಾಧವೃತ್ತಿಸ್ಥೋ ಹತ್ವಾ ಬಹುವಿಧಾನ್ಮೃಗಾನ್ ॥ ೩೮ ॥

ಆಜೀವಂ ವರ್ತನಂ ಕೃತ್ವಾ ವತ್ಸರಾಣಾಂ ಚ ವಿಂಶತಿಂ ।
ಅಥೇಯಮಾಗತಾ ಸಾಧ್ವೀ ವಿಂಧ್ಯದೇಶಸಮುದ್ಭವಾ ॥ ೩೯ ॥

---

೩೪-೩೬. ಅದರ ಹತ್ತಿರ ಹಂಸಪಕ್ಷಿ ಮತ್ತು ನೀರುಕೋಳಿಗಳಿಂದ ಆವರಿಸಲ್ಪಟ್ಟ, ದಡದವರೆಗೂ ವನಪುಷ್ಪಗಳಿಂದ ಆಚ್ಛಾದಿತವಾದ, ದೊಡ್ಡ ಸರೋವರವನ್ನು ನೋಡಿ ಅದರಲ್ಲಿ ನೀರು ಕುಡಿದು, ಆದರ ದಡದಲ್ಲಿ ಶ್ರಮಪರಿಹಾರ ಮಾಡಕೊಂಡು, ಅಲ್ಲಿ ಬಿದ್ದಿದ್ದ ಹಣ್ಣುಗಳನ್ನು ತಿಂದು ಹಸಿವನ್ನು ಹೋಗಲಾಡಿಸಿಕೊಂಡು ಆ ಹಳೆಯ ವಿಷ್ಣುದೇವಾಲಯದಲ್ಲಿಯೇ ನಾನು ವಾಸಮಾಡಿದೆನು.

೩೭. ಆ ದೇವಸ್ಥಾನದಲ್ಲಿ, ಬಿದ್ದುಹೋಗಿದ್ದ ಭಾಗಗಳನ್ನು ಪುನಃ ಸರಿಪಡಿಸುತ್ತಿದ್ದೆನು. ಅಲ್ಲಿಯೇ ಹುಲ್ಲು, ಎಲೆ, ಕಟ್ಟಿಗೆ ಮುಂತಾದುವುಗಳಿಂದ ಒಂದು ಮನೆಯನ್ನು ಕಲ್ಪಿಸಿಕೊಂಡೆನು.

೩೮-೩೯. ಮುನೀಶ್ವರನೇ! ಆ ಮನೆಯನ್ನು ನಾನು ಸುಖವಾಗಿ ವಾಸಮಾಡಲು ಉಪಯೋಗಿಸಿಕೊಂಡು, ಬೇಡರ ವೃತ್ತಿಯನ್ನು ಅವಲಂಭಿಸಿದವನಾಗಿ ನಾನಾವಿಧ ಮೃಗಗಳನ್ನು ಸಂಹರಿಸಿ, ಅದರಿಂದ ಜೀವಿಸುತ್ತಾ ಅಲ್ಲಿ ಇಪ್ಪತ್ತು ವರ್ಷಗಳ ಕಾಲ ಕಳೆದೆನು.

ನಿಷಾದಕುಲಸಂಭೂತಾ ನಾಮ್ನಾ ಕೋಕಿಲಿನೀ ಸ್ಮೃತಾ ।
ಬಂಧುವರ್ಗಪರಿತ್ಯಕ್ತಾ ದುಃಖಿತಾ ಜೀರ್ಣವಿಗ್ರಹಾ ॥ ೪೦ ॥

ಕ್ಷುತ್ತೃಡ್ಘರ್ಮಪರಿಶ್ರಾಂತಾ ಶೋಚಂತೀ ಸ್ವಕೃತಂ ಹ್ಯಘಂ ।
ದೈವಯೋಗಾತ್ಸಮಾಯಾತಾ ಭ್ರಮಂತೀ ವಿಜನೇ ವನೇ ॥ ೪೧ ॥

ಗ್ರೀಷ್ಮತಾಪಾರ್ದಿತಾ ಬಾಹ್ಯೇ ಸ್ವಾಂತೇ ಚಾಧಿನಿಪೀಡಿತಾ ।
ಇಮಾಂ ದುಃಖಾರ್ದಿತಾಂ ದೃಷ್ಟ್ವಾ ಜಾತಾ ಮೇ ವಿಪುಲಾದಯಾ ॥ ೪೨ ॥

ದತ್ತಂ ಮಯಾ ಜಲಂ ಚಾಸ್ಯೈ ಮಾಂಸಂ ವನ್ಯಫಲಾನಿ ಚ ।
ಗತಶ್ರಮಾತ್ವಿಯಂ ಬ್ರಹ್ಮನ್ಮಯಾ ಪೃಷ್ಟಾ ಯಥಾತಥಂ ॥ ೪೩ ॥

ಅವೇದಯತ್ಸ್ವವೃತ್ತಾಂತಂ ತಚ್ಛೃಣುಷ್ವ ಮಹಾಮುನೇ ।
ನಾಮ್ನಾ ಕೋಕಿಲಿನೀ ಚಾಹಂ ನಿಷಾದಕುಲಸಂಭವಾ ॥ ೪೪ ॥

---

೩೯-೪೧. ಅನಂತರ ವಿಂಧ್ಯದೇಶದಲ್ಲಿ ಹುಟ್ಟಿದ, ಬೆಸ್ತರ ಜಾತಿಯ ಕೋಕಿಲಿನೀ ಎಂಬ ಹೆಸರುಳ್ಳ ಈ ಸಾಧ್ವಿಯು ಬಂಧುಜನರಿಂದ ಬಿಡಲ್ಪಟ್ಟವಳಾಗಿ, ದುಃಖದಿಂದ ಶಿಥಿಲ ಶರೀರಳಾಗಿ ಹಸಿವು ಬಾಯಾರಿಕೆ ಮತ್ತು ಬೆವರು ಇವುಗಳಿಂದ ಆಯಾಸಪಟ್ಟು ತಾನು ಮಾಡಿದ ಪಾಪವನ್ನು ಕುರಿತು ದುಃಖಿಸುತ್ತಾ ನಿರ್ಜನವಾದ ಕಾಡಿನಲ್ಲಿ ಸಂಚರಿಸುವವಳಾಗಿ ಅದೃಷ್ಟವಶದಿಂದ ನಾನಿದ್ದೆಡೆಗೆ ಬಂದಳು.

೪೨. ಬಾಹ್ಯದಲ್ಲಿ ಗ್ರೀಷ್ಮಕಾಲದ ತಾಪದಿಂದ ಬಳಲಿ ಅಂತಃ ಮನೋವ್ಯಥೆಯಿಂದ ಪೀಡಿತಳಾಗಿ ದುಃಖಯುಕ್ತಳಾಗಿದ್ದ ಈಕೆಯನ್ನು ನೋಡಿ ನನಗೆ ಬಹಳ ದಯೆಯುಂಟಾಯಿತು.

೪೩. ಈಕೆಗೆ ನಾನು ನೀರು, ಮಾಂಸ, ಕಾಡಿನಲ್ಲಿ ಬೆಳೆದ ಹಣ್ಣು ಇವುಗಳನ್ನು ಕೊಟ್ಟೆನು. ಅದರಿಂದ ಶ್ರಮಪರಿಹಾರಮಾಡಿಕೊಂಡಳು. ಆಮೇಲೆ ಉಚಿತವಾದ ಪ್ರಶ್ನೆಗಳನ್ನು ಮಾಡಿದೆನು.

೪೪-೪೫. ಇವಳು ತನ್ನ ವೃತ್ತಾಂತವನ್ನೆಲ್ಲಾ ಹೇಳಿದಳು. ಮುನಿಯೇ! ಅದನ್ನು ಹೇಳುತ್ತೇನೆ, ಕೇಳು. ನನ್ನ ಹೆಸರು ಕೋಕಿಲಿನಿ, ನಿಷಾದ (ಬೆಸ್ತ)

ದಾರುಕಸ್ಯ ಸುತಾ ಚಾಹಂ ವಿಂಧ್ಯಪರ್ವತವಾಸಿನೀ ।
ಪರಸ್ವಹಾರಿಣೀ ನಿತ್ಯಂ ಸದಾ ಪೈಶುನ್ಯವಾದಿನೀ　　॥ ೪೫ ॥

ಪುಂಶ್ಚಲೀತ್ಯೇವ ಮುಕ್ತ್ವಾ ತು ಬಂಧುವರ್ಗೈಃ ಸಮುಜ್ಝಿತಾ ।
ಕಿಯತ್ಕಾಲಂ ತತಃ ಪತ್ಯಾ ಭೃತಾsಹಂ ಲೋಕನಿಂದಿತಾ　　॥ ೪೬ ॥

ದೈವಾತ್ಸೋsಪಿ ಗತೋ ಲೋಕಂ ಯಮಸ್ಯಾತ್ರ ವಿಹಾಯ ಮಾಂ ।
ಕಾಂತಾರೇ ವಿಜನೇ ಚೈಕಾ ಭ್ರಮಂತೀ ದುಃಖಪೀಡಿತಾ　　॥ ೪೭ ॥

ದೈವಾತ್ತ್ವತ್ಸನಿಧಂ ಪ್ರಾಪ್ತಾ ಜೀವಿತಾsಹಂ ತ್ವಯಾsಧುನಾ ।
ಇತ್ಯೇವಂ ಸ್ವಕೃತಂ ಕರ್ಮ ಮಹ್ಯಂ ಸರ್ವಂ ನ್ಯವೇದಯತ್　　॥ ೪೮ ॥

ತತೋ ದೇವಾಲಯೇ ತಸ್ಮಿನ್ದಂಪತೀಭಾವಮಾಶ್ರಿತೌ ।
ಸ್ಥಿತೌ ವರ್ಷಾಣಿ ದಶ ಚ ಆವಾಂ ಮಾಂಸಫಲಾಶಿನೌ　　॥ ೪೯ ॥

---

ವಂಶದಲ್ಲಿ ನಾನು ಹುಟ್ಟಿದವಳು, ದಾರುಕನ ಮಗಳು, ವಿಂಧ್ಯಪರ್ವತವಾಸಿಯು. ಸರ್ವದಾ ಪರಸ್ವತ್ತನ್ನು ಅಪಹರಿಸುವುದು, ಚಾಡಿಹೇಳುವುದೂ ಸಹ ನನ್ನ ಕೃತ್ಯವು.

೪೬. ಪುಂಶ್ಚಲೀ ಎಂದರೆ ಪರಪುರುಷಸಂಗ ಮಾಡುವವಳೆಂದು ಬಂಧು ಜನರಿಂದ ಪರಿತ್ಯಕ್ತಳು, ಲೋಕನಿಂದಿತಳೂ ಆಗಿ ಸ್ವಲ್ಪಕಾಲಮಾತ್ರ ಪತಿ ಯಿಂದ ಪೋಷಿಸಲ್ಪಟ್ಟೆನು.

೪೭-೪೮. ನನ್ನ ದುರದೃಷ್ಟದಿಂದ ಅವನೂ ಸಹ ನನ್ನನ್ನು ಬಿಟ್ಟು ಯಮಲೋಕಕ್ಕೆ ಹೋದನು (ಸತ್ತನು). ಹೀಗೆ ದುಃಖಪಡುತ್ತಾ ನಿರ್ಜನವಾದ ಅರಣ್ಯದಲ್ಲಿ ಸಂಚರಿಸುವವಳಾಗಿ ಅದೃಷ್ಟದಿಂದ ನಿನ್ನ ಸನ್ನಿಧಿಗೆ ಬಂದಿದ್ದೇನೆ. ಈಗ ನಿನ್ನಿಂದ ಪ್ರಾಣವು ಉಳಿಯಿತು. ಈಪ್ರಕಾರವಾಗಿ ತಾನು ಮಾಡಿದ ಸಕಲಕರ್ಮಗಳನ್ನೂ ನನಗೆ ಹೇಳಿದಳು.

೪೯. ತರುವಾಯ ನಾವಿಬ್ಬರೂ ಆ ದೇವಾಲಯದಲ್ಲಿಯೇ ಮಾಂಸ ಮತ್ತು ಫಲಗಳನ್ನು ತಿನ್ನುತ್ತಾ, ದಾಂಪತ್ಯಭಾವವನ್ನಾಶ್ರಯಿಸಿ ಹತ್ತುವರ್ಷ ಗಳಿದ್ದೆವು.

ಏಕದಾ ಮದ್ಯಪಾನೇನ ಪ್ರಮತ್ತೌ ನಿರ್ಭರಂ ಮುನೇ ।
ತತ್ರ ದೇವಾಲಯೇ ರಾತ್ರೌ ಮುದಿತೌ ಮಾಂಸಭೋಜನಾತ್ ॥ ೫೦ ॥

ತನುವಸ್ತ್ರಾಪರಿಜ್ಞಾನೌ ನೃತ್ಯಂ ಚಕ್ರುವ ಮೋಹಿತೌ ।
ಪ್ರಾರಬ್ಧಕರ್ಮಭೋಗಾಂತಮಾವಾಂ ಯುಗಪದಾಗತೌ ॥ ೫೧ ॥

ಯಮದೂತಾಸ್ತದಾಽಽಯಾತಾಃ ಪಾಶಹಸ್ತಾ ಭಯಂಕರಾಃ ।
ನೇತುಮಾವಾಂ ನೃತ್ಯರತೌ ಸುಘೋರಾಂ ಯಮಯಾತನಾಂ ॥ ೫೨ ॥

ತತಃ ಪ್ರಸನ್ನೋ ಭಗವಾನ್ಕರ್ಮಣಾ ಮಮ ಮಾನದಃ ।
ದೇವಾವಸಥಸಂಸ್ಕಾರಸಂಜ್ಞಿತೇನ ಕೃತೇನ ನಃ ॥ ೫೩ ॥

ಸ್ವದೂತಾನ್ಪ್ರೇಷಯಾಮಾಸ ಸ್ವಭಕ್ತಾವನತತ್ಪರಃ ।
ತೇ ದೂತಾ ದೇವದೇವಸ್ಯ ಶಂಖಚಕ್ರಗದಾಧರಾಃ ॥ ೫೪ ॥

---

೫೦-೫೧. ಮುನಿಯೇ! ಒಂದು ದಿನ ಅದೇ ದೇವಾಲಯದಲ್ಲಿಯೇ ಹೆಚ್ಚಾಗಿ ಮದ್ಯಪಾನಮಾಡಿದುದರಿಂದ ಮತ್ತರೂ, ಮಾಂಸಭೋಜನದಿಂದ ತೃಪ್ತರೂ ಆಗಿ ಪ್ರಜ್ಞೆಯಿಲ್ಲದೆ ಮೋಹಿತರಾಗಿ, ಮೈಮೇಲೆ ಬಟ್ಟೆಯಿದೆಯೋ ಇಲ್ಲವೋ ಎಂಬ ಪರಿಜ್ಞಾನವೂ ಇಲ್ಲದೆ ನರ್ತನಮಾಡುತ್ತಾ ಪ್ರಾರಬ್ಧಕರ್ಮದ ಭೋಗಾವಸಾನವನ್ನು ಒಟ್ಟಿಗೆ ಹೊಂದಿದೆವು.

೫೨. ಆಗ ಭಯಂಕರವಾದ ಯಮದೂತರು ಪಾಶಗಳನ್ನು ಹಿಡಿದುಕೊಂಡು ಬಂದು ಅತ್ಯಂತ ಕಠಿಣವಾದ ಯಮಯಾತನೆಯನ್ನು ಕೊಡುವುದಕ್ಕಾಗಿ ನರ್ತನದಲ್ಲಿ ಆಸಕ್ತರಾಗಿದ್ದ ನಮ್ಮಿಬ್ಬರನ್ನೂ ಕರೆದುಕೊಂಡು ಹೋಗುವುದಕ್ಕಾಗಿ ಬಂದರು.

೫೩-೫೪. ತರುವಾಯ ಮಾನದಾತನಾದ ಭಗವಂತನು ನಾನು ಮಾಡಿದ್ದ ದೇವಾಲಯಸಂಸ್ಕಾರಕರ್ಮದಿಂದ ಪ್ರಸನ್ನನಾಗಿ, ಭಕ್ತರಾದ ನಮ್ಮನ್ನು ರಕ್ಷಿಸಲು ತನ್ನ ದೂತರನ್ನು ಕಳುಹಿಸಿದನು.

**ಸಹಸ್ರಸೂರ್ಯಸಂಕಾಶಾ ಸರ್ವೇ ಚಾರುಚತುರ್ಭುಜಾಃ ।**
**ಕಿರೀಟಕುಂಡಲಧರಾ ಹಾರಿಣೋ ವನಮಾಲಿನಃ　　॥ ೫೫ ॥**

**ದಿಶೋ ವಿತಿಮಿರಾ ವಿಪ್ರ ಕುರ್ವಂತಃ ಸ್ವೇನ ತೇಜಸಾ ।**
**ಭಯಂಕರಾನ್ಪಾಶಹಸ್ತಾನ್ದ್ರಂಷ್ಟ್ರಿಣೋ ಯಮಕಿಂಕರಾನ್　　॥ ೫೬ ॥**

**ಅವಯೋರ್ಗ್ರಹಣೇ ಯಾತಾನೂಚುಃ ಕೃಷ್ಣಪರಾಯಣಾಃ ।**

**ವಿಷ್ಣುದೂತಾ ಊಚುಃ**

**ಭೋ ಭೋ ಕ್ರೂರಾ ದುರಾಚಾರಾ ವಿವೇಕಪರಿವರ್ಜಿತಾಃ　　॥ ೫೭ ॥**

**ಮುಂಚಧ್ವಮೇತೌ ನಿಷ್ಪಾಪೌ ದಂಪತೀ ಹರಿವಲ್ಲಭೌ　　॥ ೫೮ ॥**

**ವಿವೇಕಸ್ತ್ರಿಷು ಲೋಕೇಷು ಸಂಪದಾಮಾದಿಕಾರಣಂ ।**
**ಅಪಾಪೇ ಪಾಪಧೀರ್ಯಸ್ತು ತಂ ವಿದ್ಯಾತ್ಪುರುಷಾಧಮಂ　　॥ ೫೯ ॥**

---

೫೪-೫೭. ದೇವದೇವೋತ್ತಮನಾದ ವಿಷ್ಣುವಿನ ದೂತರು ಶಂಖಚಕ್ರ ಗದಾಪಾಣಿಗಳು, ಸಾವಿರಸೂರ್ಯರಂತೆ ಪ್ರಕಾಶಿಸುತ್ತಿರುವವರು, ಎಲ್ಲರೂ ಮನೋಹರವಾದ ಚತುರ್ಭುಜವುಳ್ಳವರು, ಕಿರೀಟ, ಕುಂಡಲ, ಹಾರ, ವನಮಾಲೆ ಇವುಗಳನ್ನು ಧರಿಸಿರುವವರೂ ಆಗಿ, ತಮ್ಮ ತೇಜಸ್ಸಿನಿಂದ ದಿಕ್ಕುಗಳನ್ನೆಲ್ಲಾ ಅಂಧಕಾರರಹಿತಗಳನ್ನಾಗಿ ಮಾಡಿ, ನಮ್ಮಿಬ್ಬರನ್ನೂ ಕರೆದುಕೊಂಡು ಹೋಗಲು ಬಂದಿದ್ದ, ಭಯಂಕರರಾದ, ಕೈಯ್ಯಲ್ಲಿ ಹಗ್ಗಗಳನ್ನು ಹಿಡಿದಿರುವ, ಕೋರೆಹಲ್ಲುಗಳುಳ್ಳ, ಯಮನ ಆಳುಗಳನ್ನು ನೋಡಿ, ಕೃಷ್ಣನಾಮಸಂಕೀರ್ತನೆ ಮಾಡುತ್ತಾ ಅವರನ್ನು ಕುರಿತು ಮಾತನಾಡಿದರು.

೫೮. ವಿಷ್ಣುದೂತರು ಹೇಳಿದರು—ದುರಾಚಾರರು, ವಿವೇಕಹೀನರು ಮತ್ತು ಕಠಿಣಹೃದಯರೂ ಆದ ಯಮಕಿಂಕರರೇ! ಶ್ರೀಹರಿಯ ಪ್ರೀತಿಪಾತ್ರರಾದ ಈ ದಂಪತಿಗಳು ಪಾಪರಹಿತರು; ಇವರನ್ನು ಬಿಡಿ.

೫೯. ವಿವೇಕವೇ ಮೂರುಲೋಕಗಳಲ್ಲಿಯೂ ಸಂಪತ್ಪ್ರಾಪ್ತಿಗೆ ಮೂಲ ಕಾರಣವು. ಪಾಪವಮಾಡದವನನ್ನು ಪಾಪಿಯೆಂದು ತಿಳಿಯುವವನು ಕೇವಲ ಪುರುಷಾಧಮನು.

ಪಾಪೇ ತ್ವಪಾಪಧೀರ್ಯಸ್ತು ತಂ ವಿದ್ಯಾದಧಮಾಧಮಂ ॥ ೬೦ ॥

ಯಮದೂತಾ ಊಚುಃ

ಯುಷ್ಮಾಭಿಃ ಸತ್ಯಮೇವೋಕ್ತಂ ಕಿಂ ತ್ವೇತೌ ಪಾಪಿಸತ್ತಮೌ ।
ಯಮೇನ ಪಾಪಿನೋ ದಂಡ್ಯಾಸ್ತನ್ನೇಷ್ಯಾಮೋ ವಯಂತ್ವಿಮೌ ॥ ೬೧ ॥

ಶ್ರುತಿಪ್ರಣಿಹಿತೋ ಧರ್ಮೋ ಹ್ಯಧರ್ಮಸ್ತದ್ವಿಪರ್ಯಯಃ ।
ಧರ್ಮಾಧರ್ಮವಿವೇಕೋಽಯಂ ತನ್ನೇಷ್ಯಾಮೋ ಯಮಾಂತಿಕಂ ॥ ೬೨ ॥

ಏತಚ್ಛ್ರುತ್ವಾತಿಕುಪಿತಾ ವಿಷ್ಣುದೂತಾ ಮಹೌಜಸಃ ।
ಪ್ರತ್ಯೂಚುಸ್ತಾನ್ಯಮಭಟಾನಧರ್ಮೇ ಧರ್ಮಮಾನಿನಃ ॥ ೬೩ ॥

---

೬೦. ಪಾಪಮಾಡಿದವನನ್ನು ಪಾಪಕರ್ತನಲ್ಲವೆಂದು ತಿಳಿಯುವವನು ಅಧಮಾಧಮನು ಎಂದೂ ತಿಳಿಯಬೇಕು.

೬೧. ಯಮದೂತರು ಹೇಳಿದರು—ನೀವು ಹೇಳಿದುದು ನಿಜವೇ ಸರಿ. ಆದರೆ ಇವರಿಬ್ಬರೂ ಪಾಪಿ ಶ್ರೇಷ್ಠರು; ಪಾಪಿಗಳಾದರೋ ಯಮನಿಂದ ಶಿಕ್ಷಿಸಲ್ಪಡಬೇಕು. ಆದುದರಿಂದ ಇವರಿಬ್ಬರನ್ನೂ ನಾವು ಯಮನ ಬಳಿಗೆ ಕರೆದುಕೊಂಡು ಹೋಗುತ್ತೇವೆ.

೬೨. ವೇದದಲ್ಲಿ ಕರ್ತವ್ಯವೆಂದು ವಿಧಿಸಿರುವುದು ಧರ್ಮವು. ಅದಕ್ಕೆ ವಿಪರೀತವಾದುದು ಎಂದರೆ ವೇದದಲ್ಲಿ ಕರ್ತವ್ಯವಲ್ಲವೆಂದು ನಿಷೇಧಿಸಿರುವುದೇ ಅಧರ್ಮವು. ಇದೇ ಧರ್ಮಾಧರ್ಮವಿವೇಚನೆಯು. ಆದುದರಿಂದ ಇವರನ್ನು ಯಮನಹತ್ತಿರಕ್ಕೆ ಕರೆದುಕೊಂಡು ಹೋಗುತ್ತೇವೆ.

೬೩. ಇದನ್ನು ಕೇಳಿ ಮಹಾಪರಾಕ್ರಮಶಾಲಿಗಳಾದ ವಿಷ್ಣುದೂತರು ಬಹಳ ಕೋಪಗೊಂಡು ಅಧರ್ಮವನ್ನೇ ಧರ್ಮವೆಂದು ತಿಳಿದಿರುವ ಆ ಯಮಭಟರಿಗೆ ಹೇಳಿದರು.

ವಿಷ್ಣುದೂತಾ ಊಚುಃ

ಅಹೋ ಕಷ್ಟಂ ಧರ್ಮದೃಶಾಮಧರ್ಮಃ ಸ್ಪೃಶತೇ ಸಭಾ ।
ಸಮ್ಯಗ್ವಿವೇಕಶೂನ್ಯಾನಾಂ ನಿದಾನಂ ಹ್ಯಾಪದಾಂ ಮಹತ್ ॥ ೬೪ ॥

ತರ್ಕಣಾದ್ಯವಿಶೇಷೇಣ ನರಕಾಧ್ಯಕ್ಷತಾಂ ಗತಾಃ ।
ಯೂಯಂ ಕಿಮರ್ಥಮದ್ಯಾಪಿ ಕರ್ತುಂ ಪಾಪಾನಿ ಸೋದ್ಯಮಾಃ ॥ ೬೫ ॥

ಸ್ವಕರ್ಮಕ್ಷಯಪರ್ಯಂತಂ ಮಹಾಪಾತಕಿನೋಽಪಿ ಚ ।
ತಿಷ್ಠಂತಿ ನರಕೇ ಘೋರೇ ಯಾವಚ್ಚಂದ್ರಾರ್ಕತಾರಕಂ ॥ ೬೬ ॥

ಪೂರ್ವಸಂಚಿತಪಾಪಾನಾಮುದೃಷ್ಟ್ವಾ ನಿಷ್ಕೃತಿಂ ವೃಥಾ ।
ಕಿಮರ್ಥಂ ಪಾಪಕರ್ಮಾಣಿ ಕರಿಷ್ಯಥ ಪುನಃ ಪುನಃ ॥ ೬೭ ॥

ಶೃತಿಪ್ರಣಿಹಿತೋ ಧರ್ಮಃ ಸತ್ಯಂ ಸತ್ಯಂ ನ ಸಂಶಯಃ ।
ಕಿಂ ತ್ವಾಭ್ಯಾಂ ಚರಿತಾನ್ಧರ್ಮಾನ್ಪ್ರವಕ್ಷ್ಯಾಮೋ ಯಥಾತಥಂ ॥ ೬೮ ॥

---

೬೪. ವಿಷ್ಣುದೂತರು ಹೇಳಿದರು—ಅಯ್ಯೋಪಾಪ! ಧರ್ಮಕರ್ತ್ತೃಗಳಿಗೂ ಅಧರ್ಮಸಂಬಂಧವನ್ನುಂಟುಮಾಡಿದ್ದಾರೆ. ಸರಿಯಾದ ವಿವೇಚನೆಸಾಮರ್ಥ್ಯವಿಲ್ಲದವರು ಸೇರಿರುವ ಸಭೆಯು ಆಪತ್ತುಗಳಿಗೆ ಮೂಲಕಾರಣವು.

೬೫. ವಿವೇಚನಶೂನ್ಯರಾಗಿರುವುದರಿಂದಲೇ ನೀವು ಸೂರ್ಯಚಂದ್ರಾದಿಗಳಿರುವವರೆಗೂ ನರಕವಾಸವನ್ನು ಹೊಂದಿರುವಿರಿ. ಈಗಲೂ ಸಹ ಪಾಪಕೃತ್ಯಗಳನ್ನು ಮಾಡಲು ಏಕೆ ಉದ್ಯುಕ್ತರಾಗಿರುವಿರಿ ?

೬೬. ಮಹಾಪಾತಕಮಾಡಿದವರೂ ಕೂಡ ತಮ್ಮ ಪಾಪಪರಿಹಾರವಾಗುವವರೆಗೆ ಮಾತ್ರ ಭಯಂಕರ ನರಕದಲ್ಲಿರುತ್ತಾರೆ.

೬೭. ಇದುವರೆಗೆ ಸಂಪಾದಿಸಲ್ಪಟ್ಟ ಪಾಪಗಳಿಗೆ ಪರಿಹಾರಕವಾದ ಪ್ರಾಯಶ್ಚಿತ್ತಾದಿಗಳನ್ನು ಮಾಡದೇನೇ ತಿರುಗಿ ತಿರುಗಿ ಏತಕ್ಕೆ ಪಾಪಕರ್ಮಗಳನ್ನು ಮಾಡುತ್ತಿರುವಿರಿ ?

೬೮. ವೇದವಿಹಿತವಾದುದು ಧರ್ಮವೆಂಬುದು ಸತ್ಯ. ಖಂಡಿತವಾಗಿಯೂ ನಿಜ. ಸಂಶಯವಿಲ್ಲ. ಆದರೆ ಇವರಿಬ್ಬರಿಂದ ಆಚರಿಸಲ್ಪಟ್ಟ ಧರ್ಮಗಳನ್ನು ಯಥಾರ್ಥವಾಗಿ ಹೇಳುತ್ತೇವೆ.

ಏತೌ ಪಾಪವಿನಿರ್ಮುಕ್ತೌ ಹರಿಶುಶ್ರೂಷಣೇ ರತೌ ।
ಹರಿಣಾ ತ್ರಾಯಮಾಣೌ ಚ ಮುಂಚಧ್ವಮವಿಲಂಬಿತಂ ॥ ೧೯ ॥

ಏಷಾ ಚ ನರ್ತನಂ ಚಕ್ರೇ ತಥೈಷ ಧ್ವಜರೋಪಣಂ ।
ಅಂತಕಾಲೇ ವಿಷ್ಣುಗೃಹೇ ತೇನ ನಿಷ್ಪಾಪತಾಂ ಗತೌ ॥ ೨೦ ॥

ಅಂತಕಾಲೇ ತು ಯನ್ನಾಮ ಶ್ರುತ್ವೋಕ್ತ್ವಾಽಪಿ ಚ ವೈ ಸಕೃತ್ ।
ಲಭತೇ ಪರಮಂ ಸ್ಥಾನಂ ಕಿಮು ಶುಶ್ರೂಷಣೇ ರತಾಃ ॥ ೨೧ ॥

ಮಹಾಪಾತಕಯುಕ್ತೋ ವಾ ಯುಕ್ತೋ ವಾಽಪ್ಯುಪಪಾತಕೈಃ ।
ಕೃಷ್ಣಸೇವೀ ನರೋಂತೇಽಪಿ ಲಭತೇ ಪರಮಾಂ ಗತಿಂ ॥ ೨೨ ॥

---

೧೯. ಹರಿಸೇವಾತತ್ಪರರಾಗಿದ್ದ ಇವರಿಬ್ಬರು ಹರಿಯಿಂದ ರಕ್ಷಿಸಲ್ಪಟ್ಟವರಾಗಿ ಪಾಪವನ್ನು ಕಳೆದುಕೊಂಡಿರುವರು. ಆದುದರಿಂದ ಇವರನ್ನು ಬೇಗ ಬಿಡಿ.

೨೦. ಈಕೆಯು ವಿಷ್ಣುದೇವಾಲಯದಲ್ಲಿ ನರ್ತನವನ್ನೂ, ಇವನು ಧ್ವಜಸ್ಥಾಪನೆಯನ್ನೂ ಅಂತ್ಯಕಾಲದಲ್ಲಿ ಮಾಡಿರುವುದರಿಂದ ಪಾಪವನ್ನು ಪರಿಹರಿಸಿಕೊಂಡಿರುವರು.

೨೧. ಅಂತ್ಯಕಾಲದಲ್ಲಿ ಭಗವನ್ನಾಮವನ್ನು ಶ್ರವಣ ಅಥವಾ ಕೀರ್ತನ ಮಾಡುವ ಮಾತ್ರದಿಂದ ಪರಮಪದವಿಯು ಲಭಿಸುತ್ತದೆ. ಹೀಗಿರುವಾಗ ಆ ಭಗವಂತನ ಸೇವೆಯಲ್ಲಿ ಆಸಕ್ತರಾಗಿರುವವರಿಗೆ ಸದ್ಗತಿಯಾಗುವ ವಿಷಯದಲ್ಲಿ ಸಂಶಯವೇ ಇಲ್ಲ.

೨೨. ಮಹಾಪಾತಕ ಅಥವಾ ಸಾಧಾರಣಪಾಪ ಇದನ್ನು ಮಾಡಿವರಾದರೂ ಶ್ರೀಕೃಷ್ಣಸೇವೆಯನ್ನು ಮಾಡಿದ ಮನುಷ್ಯನು ಕೊನೆಯಲ್ಲಿ ಉತ್ತಮಗತಿಯನ್ನು ಹೊಂದುವನು.

ಯತೀನಾಂ ವಿಷ್ಣುಭಕ್ತಾನಾಂ ಪರಿಚರ್ಯಾಪರಾಯಣಾಃ ।
ತೇ ದೂತಾಃ ಸಹಸಾ ಯಾಂತಿ ಪಾಪಿನೋಽಪಿ ಪರಾಂ ಗತಿಂ ॥ ೭೩ ॥

ಮುಹೂರ್ತಂ ವಾ ಮುಹೂರ್ತಾರ್ಧಂ ಯಸ್ತಿಷ್ಠೇದ್ಧರಿಮಂದಿರೇ ।
ಸೋಽಪಿ ಯಾತಿ ಪರಂ ಸ್ಥಾನಂ ಕಿಮು ದ್ವಾತ್ರಿಂಶವತ್ಸರಾನ್ ॥ ೭೪ ॥

ಉಪಲೇಪನಕರ್ತಾರೌ ಸಂಮಾರ್ಜನಪರಾಯಣೌ ।
ಏತೌ ಹರಿಗೃಹೇ ನಿತ್ಯಂ ಜೀರ್ಣಶೀರ್ಣಾಧಿರೋಪಕೌ ॥ ೭೫ ॥

ಜಲಸೇಚನಕರ್ತಾರೌ ದೀಪದೌ ಹರಿಮಂದಿರೇ ।
ಕಥಮೇತೌ ಮಹಾಭಾಗೌ ಯಾತನಾಭೋಗಮರ್ಹಥ ॥ ೭೬ ॥

---

೭೩. ಸನ್ಯಾಸಿ ಅಥವಾ ವಿಷ್ಣುಭಕ್ತರ ಸೇವೆಯಲ್ಲಿ ನಿರತರು ಪಾಪಿಗಳಾದರೂ ಶೀಘ್ರವಾಗಿ ಆ ವಿಷ್ಣುವಿನದೂತರು ಬಂದು ಉತ್ತಮಗತಿಯನ್ನು ಹೊಂದಿಸುತ್ತಾರೆ.

೭೪. ಒಂದು ಮುಹೂರ್ತಕಾಲ ಇಲ್ಲವೇ ಅರ್ಧಮುಹೂರ್ತ ವಿಷ್ಣು ದೇವಾಲಯದಲ್ಲಿ ವಾಸಮಾಡುವವನೂ ಸಹ ಉತ್ತಮಸ್ಥಾನವನ್ನು ಹೊಂದುವನು- ಆದಕಾರಣ ಮೂವತ್ತೆರಡು ವರ್ಷಗಳಕಾಲ ದೇವಾಲಯದಲ್ಲಿ ವಾಸಿಸಿದ ಈ ದಂಪತಿಗಳಿಗೆ ಉತ್ತಮಸ್ಥಾನವೇ ಲಭಿಸಬೇಕು.

೭೫-೭೬. ವಿಷ್ಣುಮಂದಿರವನ್ನು ಯಾವಾಗಲೂ ಸಾರಿಸಿ ಗುಡಿಸುವ ಕಾರ್ಯವನ್ನು ಭಕ್ತಿಯಿಂದ ನಿರ್ವಹಿಸುತ್ತಿದ್ದ, ಹಳೆಯದಾಗಿ ಬಿದ್ದುಹೋದ ಭಾಗವನ್ನು ಸರಿಮಾಡುತ್ತಿದ್ದ, ನೀರನ್ನು ಚುಮುಕಿಸುತ್ತಿದ್ದ, ದೀಪವನ್ನು ಹಚ್ಚಿಸುತ್ತಿದ್ದ, ಪುಣ್ಯವಂತರಾದ ಈ ದಂಪತಿಗಳು ನರಕ ದುಃಖವನ್ನು ಅನುಭವಿಸಲು ಹೇಗೆ ಅರ್ಹರಾಗುವರು ?

ಇತ್ಯುಕ್ತ್ವಾ ವಿಷ್ಣುದೂತಾಸ್ತೇ ಛಿತ್ವಾ ಪಾಶಾಂಸ್ತದೈವ ಹಿ ।
ಆರೋಪ್ಯಾವಾಂ ವಿಮಾನಾಗ್ರ್ಯಂ ಯಯುರ್ವಿಷ್ಣೋಃ ಪರಂ ಪದಂ ॥ ೭೭ ॥

ತತ್ರ ಸಾಮೀಪ್ಯಮಾಪನ್ನೌ ದೇವದೇವಸ್ಯ ಚಕ್ರಿಣಃ ।
ದಿವ್ಯಾನ್ಭೋಗಾನ್ಭುಕ್ತವಂತೌ ತಾವತ್ಕಾಲಂ ಮುನೀಶ್ವರ ॥ ೭೮ ॥

ದಿವ್ಯಾನ್ಭೋಗಾಂಸ್ತು ತತ್ರಾಪಿ ಭುಕ್ತ್ವಾ ಯಾತೌ ಮಹೀಮಿಮಾಂ ।
ಅತ್ರಾಪಿ ಸಂಪದತುಲಾ ಹರಿಸೇವಾಪ್ರಸಾದತಃ ॥ ೭೯ ॥

ಅನಿಚ್ಛಯಾ ಕೃತೇನಾಪಿ ಸೇವನೇನ ಹರೇರ್ಮುನೇ ।
ಪ್ರಾಪ್ತಮೀದೃಕ್ಫಲಂ ವಿಪ್ರ ದೇವಾನಾಮಪಿ ದುರ್ಲಭಂ ॥ ೮೦ ॥

ಇಚ್ಛಯಾರಾಧ್ಯ ವಿಶ್ವೇಶಂ ಭಕ್ತಿಭಾವೇನ ಮಾಧವಂ ।
ಪ್ರಾಪ್ನೋತೀತಿ ಪರಂ ಶ್ರೇಯ ಇತಿ ಹೇತುರ್ನಿರೂಪಿತಃ ॥ ೮೧ ॥

---

೭೭. ಹೀಗೆ ಹೇಳಿ, ತಕ್ಷಣವೇ ಆ ವಿಷ್ಣುದೂತರು ಯಮಪಾಶವನ್ನು ಕತ್ತರಿಸಿ, ನಮ್ಮಿಬ್ಬರನ್ನು ಉತ್ತಮವಾದ ವಿಮಾನದಲ್ಲಿ ಕುಳ್ಳಿರಿಸಿ, ವಿಷ್ಣುವಿನ ಪರಮಪದವನ್ನು ಹೊಂದಿಸಿದರು.

೭೮. ಮುನೀಶ್ವರನೇ! ಅಲ್ಲಿ ದೇವದೇವೋತ್ತಮನಾದ ಚಕ್ರಾಯುಧ ಧಾರಿಯಾದ ಭಗವಂತನ ಸಾಮೀಪ್ಯವನ್ನು ಹೊಂದಿ, ಪುಣ್ಯವು ಸವೆಯುವ ವರೆಗೆ ಉತ್ತಮಭೋಗಗಳನ್ನು ಅನುಭವಿಸಿದೆವು.

೭೯. ಆ ವಿಷ್ಣುಲೋಕದಲ್ಲಿಯೂ ಉತ್ಕೃಷ್ಟಭೋಗಗಳನ್ನು ಅನುಭವಿಸಿ ಈ ಭೂಮಿಗೆ ಬಂದೆವು. ಇಲ್ಲಿಯೂ ಸಹ ವಿಷ್ಣುಸೇವಾಫಲವಾದ ಅವನ ಅನುಗ್ರಹದಿಂದ ಅಸದೃಶವಾದ ಐಶ್ವರ್ಯವು ಪ್ರಾಪ್ತವಾಗಿದೆ.

೮೦. ಋಷಿಯೇ! ಇಚ್ಛೆಯಿಲ್ಲದೆ ಉದಾಸೀನವಾಗಿ ಮಾಡಿದ ಹರಿಸೇವೆಯಿಂದಲೇ ದೇವತೆಗಳಿಗೂ ದುರ್ಲಭವಾದ ಇಂತಹ ಫಲವುಂಟಾಗಿದೆ.

೮೧. ಭಕ್ತಿಭಾವದಿಂದ ಇಚ್ಛಾಪೂರ್ವಕವಾಗಿ ಜಗದೀಶ್ವರನಾದ ಲಕ್ಷ್ಮೀಪತಿಯನ್ನು ಆರಾಧಿಸುವವನು ಪರಮ ಶ್ರೇಯಸ್ಸನ್ನು ಹೊಂದುವನು ಎಂದು ಕಾರಣವು ನಿರೂಪಿಸಲ್ಪಟ್ಟಿತು.

**ಅವಶೇನಾಪಿ ಯತ್ಕರ್ಮ ಕೃತಂ ಸ್ಯಾತ್ಸುಮಹತ್ಫಲಂ ।**
**ಜಾಯತೇ ಭೂಮಿದೇವೇಂದ್ರ ಕಿಂ ಪುನಃ ಶ್ರದ್ಧಯಾ ಕೃತಂ ॥ ೮೨ ॥**

**ಏತದುಕ್ತಂ ನಿಶಮ್ಯಾಸೌ ಸ ಮುನೀಂದ್ರೋ ವಿಭಾಂಡಕಃ ।**
**ಪ್ರಶಸ್ಯ ದಂಪತೀ ತೌ ತು ಪ್ರಯಯೌ ಸ್ವತಪೋವನಂ ॥ ೮೩ ॥**

**ತಸ್ಮಾಜ್ಜಾನೀಹಿ ದೇವರ್ಷೇ ದೇವದೇವಸ್ಯ ಚಕ್ರಿಣಃ ।**
**ಪರಿಚರ್ಯಾ ತು ಸರ್ವೇಷಾಂ ಕಾಮಧೇನೂಪಮಾ ಸ್ಮೃತಾ ॥ ೮೪ ॥**

**ಹರಿಪೂಜಾಪರಾಣಾಂ ತು ಹರಿರೇವ ಸನಾತನಃ ।**
**ದದಾತಿ ಪರಮಂ ಶ್ರೇಯಃ ಸರ್ವಕಾಮಫಲಪ್ರದಃ ॥ ೮೫ ॥**

---

೮೨. ಬ್ರಾಹ್ಮಣಶ್ರೇಷ್ಠನೇ! ಬುದ್ಧಿಪೂರ್ವಕವಲ್ಲದೇ ಮಾಡಿದಕರ್ಮವೇ ಮಹಾಫಲಪ್ರದವಾಗಿರುವಾಗ ಶ್ರದ್ಧೆಯಿಂದ ಅನುಷ್ಠಿತವಾದ ಕರ್ಮವು ಮಹಾಫಲ ಪ್ರದವೆಂದು ಹೇಳಬೇಕಾಗಿಯೇ ಇಲ್ಲ.

೮೩. ಈ ರೀತಿಯಾಗಿ ಹೇಳಿದುದನ್ನು ಕೇಳಿ ಮುನಿಶ್ರೇಷ್ಠನಾದ ಆ ವಿಭಾಂಡಕನು, ಆ ದಂಪತಿಗಳನ್ನು ಸ್ತೋತ್ರಮಾಡಿ ತನ್ನ ತಪೋವನಕ್ಕೆ ಹೊರಟನು.

೮೪. ನಾದರದನೇ! ಆದಕಾರಣ ದೇವೋತ್ತಮನು, ಚರ್ಕಾಯುಧ ಧಾರಿಯೂ ಆದ ನಾರಾಯಣನ ಸೇವೆಯು ಎಲ್ಲರಿಗೂ ಸಕಲೇಷ್ಟಾರ್ಥಪ್ರದವಾಗಿ ಕಾಮಧೇನು ಸದೃಶವೆಂದು ಹೇಳಲ್ಪಟ್ಟಿದೆ.

೮೫. ಹರಿಪೂಜೆಯಲ್ಲಿ ನಿರತರಾದವರಿಗೆ ಪುರಾತನನೂ, ಸಕಲೇಷ್ಟಾರ್ಥ ಪ್ರದನೂ ಆದ ಹರಿಯೇ ಉತ್ಕೃಷ್ಟ ಶ್ರೇಯಸ್ಸನ್ನು ಕೊಡುವನು.

**ಯ ಇದಂ ಪುಣ್ಯಮಾಖ್ಯಾನಂ ಸರ್ವಪಾಪಪ್ರಣಾಶನಂ ।**
**ಪಠೇಚ್ಚ ಶೃಣುಯಾದ್ವಾಪಿ ಸೋಽಪಿ ಯಾತಿ ಪರಾಂ ಗತಿಂ ॥ ೮೬ ॥**

**ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ ಪ್ರಥಮಪಾದೇ ಸುಮತಿಭೂಪ ಕಥಾವರ್ಣನಂ ನಾಮ ವಿಂಶೋಽಧ್ಯಾಯಃ**

---

೮೬. ಪುಣ್ಯಕರವು, ಸಕಲ ಪಾಪಪರಿಹಾರಕವೂ ಆಗಿರುವ ಈ ಉಪಾಖ್ಯಾನವನ್ನು ಶ್ರವಣ ಮತ್ತು ಪಠನೆಮಾಡುವವನೂ ಸಹ ಉತ್ತಮಗತಿಯನ್ನು ಪಡೆಯುವನು.

ಇಂತು ಶ್ರೀಬೃಹನ್ನಾರದೀಯ ಪುರಾಣದೊಳು ಪೂರ್ವಭಾಗ ಪ್ರಥಮಪಾದದಲ್ಲಿ ಸುಮತಿಭೂಪಾಲಕಥಾವರ್ಣನವೆಂಬ ಇಪ್ಪತ್ತನೆಯ ಅಧ್ಯಾಯವು ಸಮಾಪ್ತವಾದುದು.

### ಕಥಾಸಾರಾಂಶ

ಪೂರ್ವಾಧ್ಯಾಯಾಂತ್ಯದಲ್ಲಿ ಹೇಳಿದ ಸುಮತಿಭೂಪಾಲನ ವೃತ್ತಾಂತವನ್ನು ನಾರದನು ಪ್ರಶ್ನಿಸಲು ಸನಕನು ಚಂದ್ರವಂಶದಲ್ಲಿ ಹುಟ್ಟಿದ ಆ ರಾಜನ ಚರಿತ್ರೆಯನ್ನು ಹೇಳಿರುವನು. ಆ ರಾಜನು ಧ್ವಜಾರೋಪಣವನ್ನು ಅವನ ಪತ್ನಿಯು ವಿಷ್ಣುದೇವಾಲಯದಲ್ಲಿ ನರ್ತನವನ್ನೂ ಯಾವಾಗಲೂ ಮಾಡುತ್ತಿದ್ದರು. ಅದನ್ನು ಕೇಳಿ ವಿಭಾಂಡಕನು ಅವರಲ್ಲಿಗೆ ಬಂದು ಅನೇಕ ವ್ರತಗಳಿರುವಾಗ ಈ ವ್ರತವನ್ನೇ ನೀನು ಮಾಡಲು ಕಾರಣವೇನೆಂದು ಕೇಳಿದನು. ಆಗ ರಾಜನು ತಮ್ಮಿಬ್ಬರ ಪೂರ್ವಜನ್ಮವೃತ್ತಾಂತವನ್ನು ವಿಶದಪಡಿಸುವುದರ ಮೂಲಕ ಧ್ವಜಾರೋಪಣವ್ರತದ ಮಹಿಮಾತಿಶಯವನ್ನು ವರ್ಣಿಸಿದನು. ಅದನ್ನು ಕೇಳಿ ಸಂತೋಷಪಟ್ಟು ಮುನಿಯು ತಪೋವನಕ್ಕೆ ಹಿಂದಿರುಗಿದನು ಎಂಬುದಾಗಿ ನಿರೂಪಿಸಿ ಈ ಚರಿತ್ರೆಯ ಪಠನಶ್ರವಣಗಳ ಫಲವನ್ನು ಹೇಳಿ ಈ ಅಧ್ಯಾಯವು ಉಪಸಂಹರಿಸಲ್ಪಟ್ಟಿದೆ.

# ಏಕವಿಂಶೋಽಧ್ಯಾಯಃ

---

**ಸನಕ ಉವಾಚ**

**ಅನ್ಯದ್ವ್ರತಂ ಪ್ರವಕ್ಷ್ಯಾಮಿ ಶೃಣು ನಾರದ ತತ್ವತಃ ।**
**ದುರ್ಲಭಂ ಸರ್ವಲೋಕೇಷು ವಿಖ್ಯಾತಂ ಹರಿಪಂಚಕಂ ॥ ೧ ॥**

**ನಾರೀಣಾಂ ಚ ನರಾಣಾಂ ಚ ಸರ್ವದುಃಖನಿವಾರಣಂ ।**
**ಧರ್ಮಕಾಮಾರ್ಥಮೋಕ್ಷಾಣಾಂ ನಿದಾನಂ ಮುನಿಸತ್ತಮ ॥ ೨ ॥**

**ಸರ್ವಾಭೀಷ್ಟಪ್ರದಂ ಚೈವ ಸರ್ವವ್ರತಫಲಪ್ರದಂ ।**
**ಮಾರ್ಗಶೀರ್ಷೇ ಸಿತೇ ಪಕ್ಷೇ ದಶಮ್ಯಾಂ ನಿಯತೇಂದ್ರಿಯಃ ॥ ೩ ॥**

**ಕುರ್ಯಾತ್ಸ್ನಾನಾದಿಕಂ ಕರ್ಮ ದಂತಧಾವನಪೂರ್ವಕಂ ।**
**ಕೃತ್ವಾ ದೇವಾರ್ಚನಂ ಸಮ್ಯಕ್ತಥಾ ಪಂಚಮಹಾಧ್ವರಾನ್ ॥ ೪ ॥**

---

## ಇಪ್ಪತ್ತೊಂದನೆಯ ಅಧ್ಯಾಯವು.

೧-೩. ಸನಕನು ಹೇಳಿದನು—ಮುನಿವರ್ಯನಾದ ನಾರದನೇ! ಸಕಲ ಲೋಕಗಳಲ್ಲಿಯೂ ದುರ್ಲಭವು, ಸ್ತ್ರೀಪುರುಷರಿಗೆ ಸಕಲದುಃಖಪರಿಹಾರಕವು, ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ಪುರುಷಾರ್ಥ ಚತುಷ್ಟಯಕ್ಕೆ ಮೂಲಕಾರಣವು, ಸಕಲೇಷ್ಟಾರ್ಥಪ್ರದವು ಮತ್ತು ಸಕಲ ವ್ರತಗಳ ಫಲವನ್ನು ಕೊಡುವುದೂ ಆಗಿರುವ ವಿಷ್ಣುಪಂಚಕವೆಂದು ಪ್ರಸಿದ್ಧವಾದ ಇನ್ನೊಂದು ವ್ರತವನ್ನು ಹೇಳುತ್ತೇನೆ ಕೇಳು.

೩-೬. ಮಾರ್ಗಶೀರ್ಷಮಾಸದ ಶುಕ್ಲಪಕ್ಷದ ದಶಮಿಯದಿನ ಜಿತಮನಸ್ಕನಾಗಿ ಹಲ್ಲುಜ್ಜಿಕೊಂಡು, ಸ್ನಾನಾದಿಕರ್ಮಗಳನ್ನು ಆಚರಿಸಬೇಕು. ಅನಂತರ

ಏಕಾದಶೀ ಚ ಭವೇತ್ತಸ್ಮಿನ್ದಿನೇ ನಿಯಮಮಾಸ್ಥಿತಃ ।
ತತಃ ಪ್ರಾತಃ ಸಮುತ್ಥಾಯ ಹ್ಯೇಕಾದಶ್ಯಾಂ ಮುನೀಶ್ವರ ॥ ೫ ॥

ಸ್ನಾನಂ ಕೃತ್ವಾ ಯಥಾಚಾರಂ ಹರಿಂ ಚೈವಾರ್ಚಯೇದ್ಗೃಹೇ ।
ಸ್ನಾಪಯೇದ್ದೇವದೇವೇಶಂ ಪಂಚಾಮೃತವಿಧಾನತಃ ॥ ೬ ॥

ಅರ್ಚಯೇತ್ಪರಯಾ ಭಕ್ತ್ಯಾ ಗಂಧಪುಷ್ಪಾದಿಭಿಃ ಕ್ರಮಾತ್ ।
ಧೂಪೈರ್ದೀಪೈಶ್ಚ ನೈವೇದ್ಯೈಸ್ತಾಂಬೂಲೈಶ್ಚ ಪ್ರದಕ್ಷಿಣೈಃ ॥ ೭ ॥

ಸಂಪೂಜ್ಯ ದೇವದೇವೇಶಮಿಮಂ ಮಂತ್ರಮುದೀರಯೇತ್ ।
ನಮಸ್ತೇ ಜ್ಞಾನರೂಪಾಯ ಜ್ಞಾನದಾಯ ನಮೋಽಸ್ತು ತೇ ॥ ೮ ॥

ನಮಸ್ತೇ ಸರ್ವರೂಪಾಯ ಸರ್ವಸಿದ್ಧಿಪ್ರದಾಯಿನೇ ।
ಏವಂ ಪ್ರಣಮ್ಯ ದೇವೇಶಂ ವಾಸುದೇವಂ ಜನಾರ್ದನಂ ॥ ೯ ॥

---

ಚೆನ್ನಾಗಿ ದೇವರ ಪೂಜೆಯನ್ನು ಮಾಡಿ, ಹಾಗೆಯೇ ಪಂಚಮಹಾಯಜ್ಞಗಳನ್ನು ಆಚರಿಸಿದಮೇಲೆ ಆ ದಿನದಲ್ಲಿ ನಿಯಮದಿಂದ ಇದ್ದು, ಒಂದೇ ಹೊತ್ತು ಭೋಜನ ಮಾಡಬೇಕು. ತರುವಾಯ ಬೆಳಗ್ಗೆ ಎದ್ದು, ಏಕಾದಶಿಯ ದಿನದಲ್ಲಿ ಸಂಪ್ರದಾಯಪ್ರಕಾರ ಸ್ನಾನಮಾಡಿ, ಪದ್ಧತಿಯಂತೆ ಮನೆಯಲ್ಲಿ ದೇವದೇವೇಶ್ವರನಾದ ಹರಿಗೆ ಪಂಚಾಮೃತವಿಧಾನದಿಂದ ಅಭಿಷೇಕಮಾಡಿ ಅವನನ್ನು ಪೂಜಿಸಬೇಕು.

೭-೮. ಉತ್ಕೃಷ್ಟಭಕ್ತಿಯಿಂದ ಕ್ರಮವಾಗಿ ಗಂಧಪುಷ್ಪಾದಿಗಳನ್ನು ಸಮರ್ಪಿಸಬೇಕು. ಧೂಪ, ದೀಪ, ನೈವೇದ್ಯ, ತಾಂಬೂಲ ಪ್ರದಕ್ಷಿಣ ಇವುಗಳಿಂದ ಸರ್ವೋತ್ತಮದೇವನನ್ನು ಚೆನ್ನಾಗಿ ಪೂಜಿಸಿ ಮುಂದಿನ ಮಂತ್ರಗಳನ್ನು ಹೇಳಬೇಕು.

೮-೧೦. "ಜ್ಞಾನರೂಪಿಯಾದ ನಿನಗೆ ನಮಸ್ಕಾರ; ಜ್ಞಾನದಾಯಕನಾದ ನಿನಗೆ ನಮಸ್ಕಾರ; ಸಕಲ ಸಿದ್ಧಿಪ್ರದನು ಮತ್ತು ಸರ್ವಸ್ವಾಮಿಯೂ ಆಗಿರುವ ನಿನಗೆ ನಮಸ್ಕಾರ" ಎಂಬೀಮಂತ್ರವನ್ನು ಹೇಳಿ ದೇವಸ್ವಾಮಿಯೂ, ವಸು

ವಕ್ಷ್ಯಮಾಣೇನ ಮಂತ್ರೇಣ ಹ್ಯುಪವಾಸಂ ಸಮರ್ಪಯೇತ್ ।
ಪಂಚರಾತ್ರಂ ನಿರಾಹಾರೋ ಹ್ಯದ್ಯಪ್ರಭೃತಿ ಕೇಶವ ॥ ೧೦ ॥

ತ್ವದಾಜ್ಞಯಾ ಜಗತ್ಸ್ವಾಮಿನ್ಮಮಾಭೀಷ್ಟಪ್ರದೋ ಭವ ।
ಏವಂ ಸಮರ್ಪ್ಯ ದೇವಸ್ಯ ಉಪವಾಸಂ ಜಿತೇಂದ್ರಿಯಃ ॥ ೧೧ ॥

ರಾತ್ರೌ ಜಾಗರಣಂ ಕುರ್ಯಾದೇಕಾದಶ್ಯಾಮಥೋ ದ್ವಿಜ ।
ದ್ವಾದಶ್ಯಾಂ ಚ ತ್ರಯೋದಶ್ಯಾಂ ಚತುರ್ದಶ್ಯಾಂ ಜಿತೇಂದ್ರಿಯಃ ॥ ೧೨ ॥

ಪೌರ್ಣಮಾಸ್ಯಾಂ ಚ ಕರ್ತವ್ಯಮೇವಂ ವಿಷ್ಣ್ವರ್ಚನಂ ಮುನೇ ।
ಏಕಾದಶ್ಯಾಂ ಪೌರ್ಣಮಾಸ್ಯಾಂ ಕರ್ತವ್ಯಂ ಜಾಗರಂ ತಥಾ ॥ ೧೩ ॥

ಪಂಚಾಮೃತಾದಿ ಪೂಜಾ ತು ಸಾಮಾನ್ಯಾ ದಿನಪಂಚಸು ।
ಕ್ಷೀರೇಣ ಸ್ನಾಪಯೇದ್ವಿಷ್ಣುಂ ಪೌರ್ಣಮಾಸ್ಯಾಂ ತು ಶಕ್ತಿತಃ ।
ತಿಲಹೋಮಶ್ಚ ಕರ್ತವ್ಯಸ್ತಿಲದಾನಂ ತಥೈವ ಚ ॥ ೧೪ ॥

---

ದೇವಪುತ್ರನೂ ಆದ ಜನಾರ್ದನ ಸ್ವಾಮಿಯನ್ನು ನಮಸ್ಕರಿಸಿ ಮುಂದೆ ಹೇಳುವ ಮಂತ್ರದಿಂದ ಉಪವಾಸವನ್ನು ಸಮರ್ಪಿಸಬೇಕು.

೧೦-೧೧. ಜಗನ್ನಾಯಕನಾದ ಕೇಶವನೇ! ನಿನ್ನ ಪ್ರೇರಣೆಯಂತೆ ಈಗಿನಿಂದ ಐದು ದಿವಸಗಳು ಆಹಾರವಿಲ್ಲದೆ ಉಪವಾಸಮಾಡುತ್ತೇನೆ; ನನಗೆ ಇಷ್ಟಾರ್ಥವನ್ನು ದಯಪಾಲಿಸು. ಇದೇ ಸಮರ್ಪಣಮಂತ್ರ.

೧೧-೧೨. ಮೇಲಿನ ಮಂತ್ರದಿಂದ ಉಪವಾಸವನ್ನು ದೇವರಿಗೆ ಸಮರ್ಪಿಸಿ ಏಕಾದಶೀದಿನದಲ್ಲಿ ಜಿತೇಂದ್ರಿಯನಾಗಿ ಆ ರಾತ್ರಿ ಜಾಗರಣೆ ಮಾಡಬೇಕು

೧೨-೧೩. ಋಷಿಯೇ! ದ್ವಾದಶೀ, ತ್ರಯೋದಶೀ, ಚತುರ್ದಶೀ ಮತ್ತು ಪೂರ್ಣಿಮಾ ದಿನಗಳಲ್ಲಿಯೂ ಎಂದಿನಂತೆ ಜಿತೇಂದ್ರಿಯನಾಗಿ ವಿಷ್ಣ್ವಾರಾಧನೆಯನ್ನು ಮಾಡಬೇಕು. ಏಕಾದಶೀ ಮತ್ತು ಪೂರ್ಣಿಮಾದಿನಗಳಲ್ಲಿ ರಾತ್ರಿ ಕಾಲದಲ್ಲಿ ಜಾಗರಣೆಯನ್ನಾಚರಿಸಬೇಕು.

೧೪. ಮೇಲೆ ಹೇಳಿದಂತೆ ಪಂಚಾಮೃತಸ್ನಾನಾದಿ ಪೂಜೆಗಳು ಆ ಐದು ದಿನಗಳಲ್ಲಿಯೂ ಕರ್ತವ್ಯ. ಪೂರ್ಣಿಮಾದಿನದಲ್ಲಿ ತನ್ನ ಶಕ್ತ್ಯನುಸಾರ

**ತತಃ ಷಷ್ಠೇ ದಿನೇ ಪ್ರಾಪ್ತೇ ನಿರ್ವರ್ತ್ಯ ಸ್ವಾಶ್ರಮಕ್ರಿಯಾಂ ।**
**ಸಂಪ್ರಾಶ್ಯ ಪಂಚಗವ್ಯಂ ಚ ಪೂಜಯೇದ್ವಿಧಿವದ್ಧರಿಂ ॥ ೧೫ ॥**

**ಬ್ರಾಹ್ಮಣಾನ್ಭೋಜಯೇತ್ಸ್ವಶ್ಯಾದ್ವಿಭವೇ ಸತ್ಯವಾರಿತಂ ।**
**ತತಃ ಸ್ವಬಂಧುಭಿಃ ಸಾರ್ಧಂ ಸ್ವಯಂ ಭುಂಜೀತ ವಾಗ್ಯತಃ ॥ ೧೬ ॥**

**ಏವಂ ಪೌಷಾದಿಮಾಸೇಷು ಕಾರ್ತಿಕಾಂತೇಷು ನಾರದ ।**
**ಶುಕ್ಲಪಕ್ಷೇ ವ್ರತಂ ಕುರ್ಯಾತ್ಪೂರ್ವೋಕ್ತವಿಧಿನಾ ನರಃ ॥ ೧೭ ॥**

**ಏವಂ ಸಂವತ್ಸರಂ ಕಾರ್ಯಂ ವ್ರತಂ ಪಾಪಪ್ರಣಾಶನಂ ।**
**ಪುನಃ ಪ್ರಾಪ್ತೇ ಮಾರ್ಗಶೀರ್ಷೇ ಕುರ್ಯಾದುದ್ಯಾಪನಂ ವ್ರತೀ ॥ ೧೮ ॥**

**ಏಕಾದಶ್ಯಾಂ ನಿರಾಹಾರೋ ಭವೇತ್ಪೂರ್ವಮಿವ ದ್ವಿಜ ।**
**ದ್ವಾದಶ್ಯಾಂ ಪಂಚಗವ್ಯಂ ಚ ಪ್ರಾಶಯೇತ್ಸುಸಮಾಹಿತಃ ॥ ೧೯ ॥**

---

ವಿಷ್ಣುವಿಗೆ ಕ್ಷೀರಾಭಿಷೇಕಮಾಡಬೇಕು. ಆದಿವಸ ತಿಲಹೋಮ ಮತ್ತು ತಿಲದಾನ ಇವುಗಳನ್ನಾಚರಿಸಬೇಕು.

೧೫. ತರುವಾಯ ಆರನೆಯ ದಿವಸ ವರ್ಣಾಶ್ರಮೋಚಿತ ಕರ್ತವ್ಯ ಧರ್ಮಗಳನ್ನು ಮುಗಿಸಿ, ಪಂಚಗವ್ಯಪ್ರಾಶನೆಮಾಡಿ, ವಿಧಾನೋಕ್ತಪ್ರಕಾರ ಶ್ರೀಹರಿಯನ್ನು ಪೂಜಿಸಬೇಕು.

೧೬. ತನ್ನಐಶ್ವರ್ಯಾನುಗುಣವಾಗಿ ತಪ್ಪದೆ ಬ್ರಾಹ್ಮಣಭೋಜನಮಾಡಿಸಿ, ಬಂಧುಗಳೊಡನೆ ತಾನು ನಿಯಮದಿಂದ ಭೋಜನಮಾಡಬೇಕು.

೧೭. ಈಪ್ರಕಾರ ಪುಷ್ಯಮಾಸದಿಂದ ಕಾರ್ತಿಕಮಾಸದವರೆಗೆ ಶುಕ್ಲ ಪಕ್ಷದಲ್ಲಿ ಉಕ್ತವಿಧಾನದಿಂದ ಈ ವ್ರತವನ್ನಾಚರಿಸಬೇಕು.

೧೮. ಈರೀತಿ ಪಾಪಪರಿಹಾರಕವಾದ ಈ ವ್ರತವನ್ನು ಒಂದು ವರ್ಷ ಮಾಡಿ ಮುಂದಿನ ಮಾರ್ಗಶೀರ್ಷಮಾಸದಲ್ಲಿ ಉದ್ಯಾಪನೆಯನ್ನು ಮಾಡಬೇಕು.

೧೯. ನಾರದನೇ! ಹಿಂದಿನಂತೆ ಏಕಾದಶೀ ದಿನ ಉಪವಾಸಮಾಡಿ ದ್ವಾದಶಿಯದಿನ ಪಂಚಗವ್ಯಪ್ರಾಶನಮಾಡಬೇಕು.

**ಗಂಧಪುಷ್ಪಾದಿಭಿಃ ಸಮ್ಯಗ್ದೇವದೇವಂ ಜನಾರ್ದನಂ ।**
**ಅಭ್ಯರ್ಚ್ಯೋಪಾಯನಂ ದದ್ಯಾದ್ಬ್ರಾಹ್ಮಣಾಯ ಜಿತೇಂದ್ರಿಯಃ ॥ ೨೦ ॥**

**ಪಾಯಸಂ ಮಧುಸಂಮಿಶ್ರಂ ಘೃತಯುಕ್ತಂ ಫಲಾನ್ವಿತಂ ।**
**ಸುಗಂಧಜಲಸಂಯುಕ್ತಂ ಪೂರ್ಣಕುಂಭಂ ಸದಕ್ಷಿಣಂ ॥ ೨೧ ॥**

**ವಸ್ತ್ರೇಣಾಚ್ಛಾದಿತಂ ಕುಂಭಂ ಪಂಚರತ್ನಸಮನ್ವಿತಂ ।**
**ದದ್ಯಾದಧ್ಯಾತ್ಮವಿದುಷೇ ಬ್ರಾಹ್ಮಣಾಯ ಮುನೀಶ್ವರ ॥ ೨೨ ॥**

**ಸರ್ವಾತ್ಮನ್ಸರ್ವಭೂತೇಶ ಸರ್ವವ್ಯಾಪಿನ್ಸನಾತನ ।**
**ಪರಮಾನ್ನಪ್ರದಾನೇನ ಸುಪ್ರೀತೋ ಭವ ಮಾಧವ ॥ ೨೩ ॥**

**ಅನೇನ ಪಾಯಸಂ ದತ್ವಾ ಬ್ರಾಹ್ಮಣಾನ್ಭೋಜಯೇತ್ತತಃ ।**
**ಶಕ್ತಿತೋ ಬಂಧುಭಿಃ ಸಾರ್ಧಂ ಸ್ವಯಂ ಭುಂಜೀತ ವಾಗ್ಯತಃ ॥ ೨೪ ॥**

---

೨೦. ಜಿತೇಂದ್ರಿಯನಾಗಿ ದೇವದೇವೋತ್ತಮನಾದ ಜನಾರ್ದನಸ್ವಾಮಿಯನ್ನು ಗಂಧಪುಷ್ಪಮುಂತಾದ ಪರಿಕರಗಳಿಂದ ಚೆನ್ನಾಗಿ ಪೂಜಿಸಿ, ಬ್ರಾಹ್ಮಣನಿಗೆ ಉಪಾಯನ (ಕಾಣಿಕೆ) ವನ್ನು ಕೊಡಬೇಕು.

೨೧-೨೨. ಜೇನುತುಪ್ಪ ಮತ್ತು ತುಪ್ಪಗಳಿಂದ ಮಿಶ್ರಿತವಾದ ಪಾಯಸವನ್ನು ಮತ್ತು ಸುಗಂಧೋದಕಪೂರಿತವು, ಬಟ್ಟೆಯಿಂದ ಮುಚ್ಚಲ್ಪಟ್ಟಿರುವುದು, ಪಂಚರತ್ನಗಳಿಂದ ಕೂಡಿರುವುದೂ ಆಗಿರುವ ಪೂರ್ಣಕುಂಭವನ್ನೂ ಸಹ ದಕ್ಷಿಣೆ ಫಲ ಇವುಗಳಿಂದ ಸಹಿತವಾಗಿ ಅಧ್ಯಾತ್ಮಜ್ಞಾನಿಯಾದ ಬ್ರಾಹ್ಮಣನಿಗೆ ದಾನ ಮಾಡಬೇಕು.

೨೩-೨೪. " ಸರ್ವಾಂತರ್ಯಾಮಿಯು, ಸರ್ವಭೂತಗಳೊಡೆಯನು, ಸರ್ವವ್ಯಾಪಕನು, ಅನಾದಿಯೂ ಆಗಿರುವ ಮಾಧವನೇ! ಈ ಪರಮಾನ್ನದಾನದಿಂದ ಪ್ರಸನ್ನನಾಗು " ಎಂದು ಪ್ರಾರ್ಥಿಸಿ ಪಾಯಸದಾನಮಾಡಿ ಯಥಾಶಕ್ತಿ ಬ್ರಾಹ್ಮಣ ಭೋಜನಮಾಡಿಸಿ, ಬಂಧುಗಳೊಡನೆ ತಾನು ನಿಯಮದಿಂದ ಊಟ ಮಾಡಬೇಕು.

ವ್ರತಮೇತತ್ತು ಯಃ ಕುರ್ಯಾದ್ಧರಿಪಂಚಕಸಂಜ್ಞಿತಂ ।
ನ ತಸ್ಯ ಪುನರಾವೃತ್ತಿರ್ಬ್ರಹ್ಮಲೋಕಾತ್ಕದಾಚನ ॥ ೨೫ ॥

ವ್ರತಮೇತತ್ಪ್ರಕರ್ತವ್ಯಮಿಚ್ಛದ್ಭಿರ್ಮೋಕ್ಷಮುತ್ತಮಂ ।
ಸಮಸ್ತಪಾಪಕಾಂತಾರದಾವಾನಲಸಮಂ ದ್ವಿಜ ॥ ೨೬ ॥

ಗವಾಂ ಕೋಟಿಸಹಸ್ರಾಣಿ ದತ್ವಾ ಯತ್ಫಲಮಾಪ್ನುಯಾತ್ ।
ತತ್ಫಲಂ ಲಭ್ಯತೇ ಪುಂಭಿರೇತಸ್ಮಾದುಪವಾಸತಃ ॥ ೨೭ ॥

ಯಸ್ತ್ವೇತಚ್ಛೃಣುಯಾದ್ಭಕ್ತ್ಯಾ ನಾರಾಯಣಪರಾಯಣಃ ।
ಸ ಮುಚ್ಯತೇ ಮಹಾಘೋರೈಃ ಪಾತಕಾನಾಂ ಚ ಕೋಟಿಭಿಃ ॥ ೨೮ ॥

ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ ಪ್ರಥಮಪಾದೇ
ವ್ರತಾಖ್ಯಾನೇ ಮಾರ್ಗಶೀರ್ಷ ಶುಕ್ಲೈಕಾದಶೀಮಾರಭ್ಯ
ಪೂರ್ಣಿಮಾಪರ್ಯಂತಂ ಪಂಚರಾತ್ರಿವ್ರತಂ
ನಾಮ್ನೈಕವಿಂಶೋಽಧ್ಯಾಯಃ

---

೨೫. ವಿಷ್ಣುಪಂಚಕವೆಂಬ ಈ ವ್ರತವನ್ನು ಮಾಡುವವನಿಗೆ ಯಾವಾಗಲೂ ಸಂಸಾರಕ್ಕೆ ಹಿಂದಿರುಗದಂತಹ ಬ್ರಹ್ಮಲೋಕವು ಲಭಿಸುತ್ತದೆ.

೨೬. ದ್ವಿಜನೇ! ಸಕಲಪಾಪಗಳೆಂಬ ಅರಣ್ಯಕ್ಕೆ ಕಾಡುಗಿಚ್ಚಿನೋಪಾದಿಯಲ್ಲಿರುವ ಈ ವ್ರತವು ಶ್ರೇಷ್ಠವಾದ ಮುಕ್ತಿಯನ್ನು ಅಪೇಕ್ಷಿಸುವವರಿಂದ ಆಚರಿಸಲ್ಪಡತಕ್ಕದ್ದು.

೨೭. ಕೋಟಿಸಹಸ್ರಗೋದಾನಗಳಿಂದ ಉಂಟಾಗುವ ಫಲವು ಈ ಉಪವಾಸವ್ರತದಿಂದ ಮಾನವರಿಗೆ ಲಭಿಸುತ್ತದೆ.

೨೮. ನಾರಾಯಣಧ್ಯಾನನಿರತನಾಗಿ ಭಕ್ತಿಯಿಂದ ಈ ವ್ರತವಿಧಾನವನ್ನು ಶ್ರವಣಮಾಡುವವನೂ ಸಹ ಅತಿ ಭಯಂಕರವಾದ ಕೋಟ್ಯಂತರ ಪಾಪಗಳಿಂದ ಮುಕ್ತನಾಗುವನು.

ಇಂತು ಶ್ರೀಬೃಹನ್ನಾರದೀಯ ಪುರಾಣದಲ್ಲಿ ಪೂರ್ವಭಾಗ ಪ್ರಥಮಪಾದದೊಳು
ವ್ರತನಿರೂಪಣಪ್ರಕರಣದಲ್ಲಿ ಮಾರ್ಗಶೀರ್ಷ ಶುಕ್ಲಪಕ್ಷೈಕಾದಶಿಯಿಂದ
ಪೂರ್ಣಿಮಾವರೆಗೆ ಐದು ದಿನಗಳಲ್ಲಿ ಮಾಡುವ ವಿಷ್ಣುಪಂಚಕ
ವ್ರತವಿಧಾನಕಥನವೆಂಬ ಇಪ್ಪತ್ತೊಂದನೆಯ ಅಧ್ಯಾಯವು
ಕೊನೆಗೊಂಡಿತು.

# ದ್ವಾವಿಂಶೋಽಧ್ಯಾಯಃ

**ಸನಕ ಉವಾಚ**

**ಅನ್ಯದ್ವ್ರತವರಂ ವಕ್ಷ್ಯೇ ತಚ್ಛೃಣುಷ್ವ ಸಮಾಹಿತಃ ।**
**ಸರ್ವಪಾಪಹರಂ ಪುಣ್ಯಂ ಸರ್ವಲೋಕೋಪಕಾರಕಂ ॥ ೧ ॥**

**ಆಷಾಢೇ ಶ್ರಾವಣೇ ವಾಪಿ ತಥಾ ಭಾದ್ರಪದೇಽಪಿ ಚ ।**
**ತಥೈವಾಶ್ವಿನಕೇ ಮಾಸೇ ಕುರ್ಯಾದೇತದ್ವ್ರತಂ ದ್ವಿಜ ॥ ೨ ॥**

**ಏತೇಷ್ವನ್ಯತಮೇ ಮಾಸಿ ಶುಕ್ಲಪಕ್ಷೇ ಜಿತೇಂದ್ರಿಯಃ ।**
**ಪ್ರಾಶಯೇತ್ಪಂಚಗವ್ಯಂ ಚ ಸ್ವಪೇದ್ವಿಷ್ಣುಸಮೀಪತಃ ॥ ೩ ॥**

**ತತಃ ಪ್ರಾತಃ ಸಮುತ್ಥಾಯ ನಿತ್ಯಕರ್ಮ ಸಮಾಪ್ಯ ಚ ।**
**ಶ್ರದ್ಧಯಾ ಪೂಜಯೇದ್ವಿಷ್ಣುಂ ವಶೀ ಕ್ರೋಧವಿವರ್ಜಿತಃ ॥ ೪ ॥**

---

## ಇಪ್ಪತ್ತೆರಡನೆಯ ಅಧ್ಯಾಯವು

೧. ಸನಕನು ಹೇಳುತ್ತಾನೆ—ಸಕಲಪಾಪಪರಿಹಾರಕವು, ಪುಣ್ಯಪ್ರದವು, ಸಕಲಲೋಕೋಪಕಾರಕವೂ ಆಗಿರುವ ಇನ್ನೊಂದು ಉತ್ತಮವ್ರತವನ್ನು ಹೇಳುತ್ತೇನೆ ಸಮಾಧಾನಚಿತ್ತದಿಂದ ಕೇಳು.

೨. ಆಷಾಢ, ಶ್ರಾವಣ, ಭಾದ್ರಪದ, ಆಶ್ವಯುಜ ಈ ನಾಲ್ಕು ತಿಂಗಳುಗಳ ಪೈಕಿ ಯಾವುದಾದರೊಂದು ಮಾಸದಲ್ಲಿ ಈ ವ್ರತವನ್ನಾಚರಿಸಬೇಕು.

೩. ಇವುಗಳ ಪೈಕಿ ಯಾವುದಾದರೊಂದು ಮಾಸದ ಶುಕ್ಲಪಕ್ಷದಲ್ಲಿ ಜಿತೇಂದ್ರಿಯನಾಗಿ ಪಂಚಗವ್ಯವನ್ನು ಕುಡಿದು ವಿಷ್ಣುವಿನ ಸಮೀಪದಲ್ಲಿ ಮಲಗಬೇಕು.

೪. ಅನಂತರ ಬೆಳಗ್ಗೆ ಎದ್ದು ನಿತ್ಯಕರ್ಮಗಳನ್ನು ಮುಗಿಸಿಕೊಂಡು, ಕೋಪವನ್ನು ಬಿಟ್ಟು ಇಂದ್ರಿಯಗಳನ್ನು ತನ್ನ ಅಧೀನದಲ್ಲಿಟ್ಟುಕೊಂಡು ಶ್ರದ್ಧೆಯಿಂದ ವಿಷ್ಣುವನ್ನು ಪೂಜಿಸಬೇಕು.

ವಿದ್ವದ್ಭಿಃ ಸಹಿತೋ ವಿಷ್ಣುಮರ್ಚಯಿತ್ವಾ ಯಥೋಚಿತಂ ।
ಸಂಕಲ್ಪಂ ತು ತತಃ ಕುರ್ಯಾತ್ಸ್ವಸ್ತಿವಾಚನಪೂರ್ವಕಂ ॥ ೫ ॥

ಮಾಸಮೇಕಂ ನಿರಾಹಾರೋ ಹ್ಯದ್ಯಪ್ರಭೃತಿ ಕೇಶವ ।
ಮಾಸಾಂತಂ ಪಾರಣಂ ಕುರ್ವೇ ದೇವದೇವ ತವಾಜ್ಞಯಾ ॥ ೬ ॥

ತಪೋರೂಪ ನಮಸ್ತುಭ್ಯಂ ತಪಸಾಂ ಫಲದಾಯಕ ।
ಮಮಾಭೀಷ್ಟಪ್ರದಂ ದೇಹಿ ಸರ್ವವಿಘ್ನಾನ್ನಿವಾರಯ ॥ ೭ ॥

ಏವಂ ಸಮರ್ಪ್ಯ ದೇವಸ್ಯ ವಿಷ್ಣೋರ್ಮಾಸವ್ರತಂ ಶುಭಂ ।
ತತಃ ಪ್ರಭೃತಿ ಮಾಸಾಂತಂ ನಿವಸೇದ್ಧರಿಮಂದಿರೇ ॥ ೮ ॥

ಪ್ರತ್ಯಹಂ ಸ್ನಾಪಯೇದ್ದೇವಂ ಪಂಚಾಮೃತವಿಧಾನತಃ ।
ದೀಪಂ ನಿರಂತರಂ ಕುರ್ಯಾತ್ತಸ್ಮಿನ್ಮಾಸೇ ಹರೇರ್ಗೃಹೇ ॥ ೯ ॥

---

೫. ವಿದ್ವಾಂಸರಿಂದ ಕೂಡಿ ಯಥಾಯೋಗ್ಯವಾಗಿ ವಿಷ್ಣುವನ್ನರ್ಚಿಸಿ ಸ್ವಸ್ತಿವಾಚನೆಪೂರ್ವಕವಾಗಿ ಸಂಕಲ್ಪವನ್ನು ಮಾಡಬೇಕು.

೬-೭. "ಕೇಶವ ಸ್ವಾಮಿಯೇ! ಇವತ್ತಿನಿಂದ ಒಂದು ತಿಂಗಳು ಉಪವಾಸಮಾಡಿ ದೇವದೇವೋತ್ತಮನಾದ ನಿನ್ನ ಪ್ರೇರಣೆಯಿಂದ ಮಾಸಾಂತ್ಯದಲ್ಲಿ ಪಾರಣೆಯನ್ನು ಮಾಡುತ್ತೇನೆ. ಸಕಲತಪಸ್ಸುಗಳಿಗೆ ನಿಯಾಮಕನು ಮತ್ತು ಫಲಪ್ರದನೂ ಆಗಿರುವ ಭಗವಂತನೇ! ನಿನಗೆ ನಮಸ್ಕಾರ, ನನಗೆ ಇಷ್ಟಾರ್ಥವನ್ನು ಕೊಡು, ಸಕಲ ವಿಘ್ನಗಳನ್ನೂ ಪರಿಹರಿಸು."

೮. ಮಂಗಳಕರವಾದ ಮಾಸವ್ರತವನ್ನು ಈಪ್ರಕಾರ ವಿಷ್ಣುದೇವನಿಗೆ ಸಮರ್ಪಿಸಿ, ಅಂದಿನಿಂದ ತಿಂಗಳು ಕಳೆಯುವವರೆಗೆ ವಿಷ್ಣುಮಂದಿರದಲ್ಲಿ ವಾಸ ಮಾಡಬೇಕು.

೯. ಆ ತಿಂಗಳಿನಲ್ಲಿ ದೇವಾಲಯದಲ್ಲಿ ಪ್ರತಿದಿನವೂ ದೇವರಿಗೆ ಪಂಚಾಮೃತವಿಧಾನದಿಂದ ಅಭಿಷೇಕಮಾಡಿಸಿ, ಅಖಂಡದೀಪ ಹಚ್ಚಬೇಕು.

**ಪ್ರತ್ಯಹಂ ಖಾದಯೇತ್ಕಾಷ್ಠಂ ಅಪಾಮಾರ್ಗಸಮುದ್ಭವಂ ।**
**ತತಃ ಸ್ನಾಯೀತ ವಿಧಿವನ್ನಾರಾಯಣಪರಾಯಣಃ ॥ ೧೦ ॥**

**ತತಃ ಸಂಸ್ನಾಪಯೇದ್ವಿಷ್ಣುಂ ಪೂರ್ವವತ್ಪ್ರಯತೋಽರ್ಚಯೇತ್ ।**
**ಬ್ರಾಹ್ಮಣಾನ್ಭೋಜಯೇಚ್ಛಕ್ತ್ಯಾ ಭಕ್ತಿಯುಕ್ತಃ ಸದಕ್ಷಿಣಂ ॥ ೧೧ ॥**

**ಸ್ವಯಂ ಚ ಬಂಧುಭಿಃ ಸಾರ್ಧಂ ಭುಂಜೀತ ಪ್ರಯತೇಂದ್ರಿಯಃ ।**
**ಏವಂ ಮಾಸೋಪವಾಸಾಂಶ್ಚ ವ್ರತೀ ಕುರ್ಯಾತ್ತ್ರಯೋದಶ ॥ ೧೨ ॥**

**ವರ್ಷಾಂತೇ ವೇದವಿದುಷೇ ಗಾಂ ಪ್ರದದ್ಯಾತ್ಸದಕ್ಷಿಣಾಂ ।**
**ಭೋಜಯೇದ್ಬ್ರಾಹ್ಮಣಾಂಸ್ತತ್ರ ದ್ವಾದಶೈವ ವಿಧಾನತಃ ।**
**ಶಕ್ತ್ಯಾ ಚ ದಕ್ಷಿಣಾಂ ದದ್ಯಾದ್ಭಕ್ತ್ಯಾಹ್ಯಾಭರಣಾನಿ ಚ ॥ ೧೩ ॥**

---

೧೦. ಪ್ರತಿದಿನವೂ ಬೆಳಗ್ಗೆ ಎದ್ದು ಉತ್ತರಣೆಕಡ್ಡಿಯಿಂದ ಹಲ್ಲನ್ನು ಉಜ್ಜಿಕೊಂಡು ನಾರಾಯಣಧ್ಯಾನನಿರತನಾಗಿ ವಿಧಾನೋಕ್ತಪ್ರಕಾರ ಸ್ನಾನ ಮಾಡಬೇಕು.

೧೧. ತರುವಾಯ ಹಿಂದಿನಂತೆ ವಿಷ್ಣುವಿಗೆ ಅಭಿಷೇಕಮಾಡಿ ಪೂಜೆ ಮಾಡಬೇಕು. ತನ್ನ ಶಕ್ತ್ಯನುಸಾರ ಬ್ರಾಹ್ಮಣಭೋಜನಮಾಡಿಸಿ, ದಕ್ಷಿಣೆಯನ್ನು ಕೊಡಬೇಕು.

೧೨. ಜಿತೇಂದ್ರಿಯನಾಗಿ ತಾನು ಬಂಧುಗಳೊಡನೆ ಭೋಜನಮಾಡಬೇಕು. ಈರೀತಿ ವ್ರತಕರ್ತನು ಹದಿಮೂರು ಮಾಸೋಪವಾಸವನ್ನು ಆಚರಿಸಬೇಕು.

೧೩. ವರ್ಷದ ಕೊನೆಯಲ್ಲಿ ವೇದಜ್ಞಾನಿಯಾದ ಬ್ರಾಹ್ಮಣನಿಗೆ ದಕ್ಷಿಣೆಸಹಿತವಾಗಿ ಗೋದಾನಮಾಡಬೇಕು. ಆಗ ವಿಧಾನೋಕ್ತಪ್ರಕಾರ ಹನ್ನೆರಡುಜನ ಬ್ರಾಹ್ಮಣರಿಗೆ ಭೋಜನಮಾಡಿಸಬೇಕು. ಯಥಾಶಕ್ತಿ ಆಭರಣ ದಕ್ಷಿಣೆ ಇವುಗಳನ್ನು ಕೊಡಬೇಕು.

**ಮಾಸೋಪವಾಸತ್ರಿತಯಂ ಯಃ ಕುರ್ಯಾತ್ಸಂಯತೇಂದ್ರಿಯಃ ।**
**ಅಸೌ ಸೋಮಸ್ಯ ಯಜ್ಞಸ್ಯ ದ್ವಿಗುಣಂ ಫಲಮಶ್ನುತೇ ॥ ೧೪ ॥**

**ಚತುಃಕೃತ್ವಃ ಕೃತಂ ಯೇನ ಪಾರಾಕಂ ಮುನಿಸತ್ತಮ ।**
**ಸ ಲಭೇತ್ಪರಮಂ ಪುಣ್ಯಮಷ್ಟಾಗ್ನಿಷ್ಟೋಮಸಂಭವಂ ॥ ೧೫ ॥**

**ಪಂಚಕೃತ್ವೋ ವ್ರತಮಿದಂ ಕೃತಂ ಯೇನ ಮಹಾತ್ಮನಾ ।**
**ಅತ್ಯಗ್ನಿಷ್ಟೋಮಜಂ ಪುಣ್ಯಂ ದ್ವಿಗುಣಂ ಪ್ರಾಪ್ನುಯಾನ್ನರಃ ॥ ೧೬ ॥**

**ಮಾಸೋಪವಾಸಷಟ್ಕಂ ಯಃ ಕರೋತಿ ಸುಸಮಾಹಿತಃ ।**
**ಜ್ಯೋತಿಷ್ಟೋಮಸ್ಯ ಯಜ್ಞಸ್ಯ ಫಲಂ ಸೋಽಷ್ಟಗುಣಂ ಲಭೇತ್ ॥ ೧೭ ॥**

**ನಿರಾಹಾರಃ ಸಪ್ತಕೃತ್ವೋ ನರೋ ಮಾಸೋಪವಾಸಕಾನ್ ।**
**ಅಶ್ವಮೇಧಸ್ಯ ಯಜ್ಞಸ್ಯ ಫಲಮಷ್ಟಗುಣಂ ಲಭೇತ್ ॥ ೧೮ ॥**

---

೧೪. ಜಿತೇಂದ್ರಿಯನಾಗಿ ಮೂರು ಮಾಸೋಪವಾಸಗಳನ್ನು ಮಾಡುವವನು ಸೋಮ ಯಾಗದ ಎರಡರಷ್ಟು ಫಲವನ್ನು ಹೊಂದುವನು.

೧೫. ಮುನಿವರ್ಯನೇ ! ನಾಲ್ಕಾವರ್ತಿ ಮಾಸೋಪವಾಸವನ್ನು ಮಾಡುವವನು ಎರಡು ಅಗ್ನಿಷ್ಟೋಮ ಯಾಗಗಳಿಂದ ಉಂಟಾಗುವ ಉತ್ತಮ ಪುಣ್ಯವನ್ನು ಹೊಂದುವನು.

೧೬. ಐದಾವರ್ತಿ ವ್ರತವನ್ನು ಮಾಡಿದ ಮಹಾತ್ಮನು ಅಗ್ನಿಷ್ಟೋಮ ಯಾಗದ ಎರಡರಷ್ಟು ಪುಣ್ಯವನ್ನು ಪಡೆಯುವನು.

೧೭. ಸಮಾಧಾನದಿಂದ ಆರು ಮಾಸೋಪವಾಸಗಳನ್ನು ಮಾಡಿದ ಮನುಷ್ಯನು ಜೋತಿಷ್ಟೋಮಯಾಗದ ಫಲದ ಎಂಟರಷ್ಟು ಫಲವನ್ನು ಹೊಂದುವನು.

೧೮. ನಿರಾಹಾರನಾಗಿ ಏಳಾವರ್ತಿ ಮಾಸೋಪವಾಸಗಳನ್ನು ಮಾಡುವ ಮನುಷ್ಯನು ಅಶ್ವಮೇಧಯಜ್ಞಫಲದ ಎಂಟರಷ್ಟು ಫಲವನ್ನು ಪಡೆಯುವನು.

**ಮಾಸೋಪವಾಸಾನ್ಯಃ ಕುರ್ಯಾದಷ್ಟಕೃತ್ವೋ ಮುನೀಶ್ವರ ।**
**ನರಮೇಧಾಖ್ಯ ಯಜ್ಞಸ್ಯ ಫಲಂ ಪಂಚಗುಣಂ ಲಭೇತ್ ॥ ೧೯ ॥**

**ಯಸ್ತು ಮಾಸೋಪವಾಸಾಂಶ್ಚ ನವಕೃತ್ವಃ ಸಮಾಚರೇತ್ ।**
**ಗೋಮೇಧಮುಖಜಂ ಪುಣ್ಯಂ ಲಭತೇ ತ್ರಿಗುಣಂ ನರಃ ॥ ೨೦ ॥**

**ದಶಕೃತ್ವಸ್ತು ಯಃ ಕುರ್ಯಾತ್ಪರಾಕಂ ಮುನಿಸತ್ತಮ ।**
**ಸ ಬ್ರಹ್ಮಮೇಧಯಜ್ಞಸ್ಯ ತ್ರಿಗುಣಂ ಫಲಮಶ್ನುತೇ ॥ ೨೧ ॥**

**ಏಕಾದಶಪರಾಕಾಂಶ್ಚ ಯಃ ಕುರ್ಯಾತ್ಸಂಯತೇಂದ್ರಿಯಃ ।**
**ಸ ಯಾತಿ ಹರಿಸಾರೂಪ್ಯಂ ಸರ್ವಭೋಗಸಮನ್ವಿತಂ ॥ ೨೨ ॥**

**ತ್ರಯೋದಶಪರಾಕಾಂಶ್ಚ ಯಃ ಕುರ್ಯಾತ್ಪ್ರಯತೋ ನರಃ ।**
**ಸ ಯಾತಿ ಪರಮಾನಂದಂ ಯತ್ರ ಗತ್ವಾ ನ ಶೋಚತಿ ॥ ೨೩ ॥**

---

೧೯. ಎಂಟಾವರ್ತಿ ಮಾಸೋಪವಾಸವನ್ನು ಮಾಡುವವನು ನರಮೇಧವೆಂಬ ಯಜ್ಞದ ಫಲದ ಐದರಷ್ಟು ಫಲವನ್ನು ಹೊಂದುವನು.

೨೦. ಒಂಭತ್ತಾವರ್ತಿ ಮಾಸೋಪವಾಸವನ್ನಾಚರಿಸುವವನು ಗೋಮೇಧವೆಂಬ ಯಜ್ಞಫಲದ ಮೂರರಷ್ಟು ಫಲವನ್ನು ಹೊಂದುತ್ತಾನೆ.

೨೧. ಮುನಿಶ್ರೇಷ್ಠನೆ! ಹತ್ತಾವರ್ತಿ ಮಾಸೋಪವಾಸಗಳನ್ನು ಮಾಡಿದವನು ಬ್ರಹ್ಮಮೇಧವೆಂಬ ಯಜ್ಞಫಲದ ಮೂರರಷ್ಟು ಫಲಕ್ಕೆ ಭಾಗಿಯಾಗುತ್ತಾನೆ.

೨೨. ಜಿತೇಂದ್ರಿಯನಾಗಿ ಹನ್ನೊಂದು ಮಾಸೋಪವಾಸಗಳನ್ನು ಆಚರಿಸುವವನು ಸಕಲಭೋಗಯುಕ್ತವಾದ ಹರಿಸಾರೂಪ್ಯವನ್ನು ಪಡೆಯುತ್ತಾನೆ.

೨೩. ಹದಿಮೂರು ಉಪವಾಸಗಳನ್ನು ನಿಯಮದಿಂದ ಮಾಡುವ ಮನುಷ್ಯನು ಶೋಕರಹಿತವಾದ ಸ್ಥಾನಕ್ಕೆ ಹೋಗಿ ಪರಮಾನಂದವನ್ನು ಅನುಭವಿಸುವನು.

ಮಾಸೋಪವಾಸನಿರತಾ ಗಂಗಾಸ್ನಾನಪರಾಯಣಾಃ ।
ಧರ್ಮಮಾರ್ಗಪ್ರವಕ್ತಾರೋ ಮುಕ್ತಾ ಏವ ನ ಸಂಶಯಃ ॥ ೨೪ ॥

ಅನೀರಾಭಿಶ್ಚ ನಾರೀಭಿರ್ಯತಿಭಿರ್ಬ್ರಹ್ಮಚಾರಿಭಿಃ ।
ಮಾಸೋಪವಾಸಃ ಕರ್ತವ್ಯೋ ವನಸ್ಥೈರ್ವ ವಿಶೇಷತಃ ॥ ೨೫ ॥

ನಾರೀ ವಾ ಪುರುಷೋ ವಾಽಪಿ ವ್ರತಮೇತತ್ಸುದುರ್ಲಭಂ ।
ಕೃತ್ವಾ ಮೋಕ್ಷಮವಾಪ್ನೋತಿ ಯೋಗಿನಾಮಪಿ ದುರ್ಲಭಂ ॥ ೨೬ ॥

ಗೃಹಸ್ಥೋ ವಾನಪ್ರಸ್ಥೋ ವಾ ವ್ರತೀ ವಾ ಬಿಕ್ಷುರೇವ ಚ ।
ಮೂರ್ಖೋ ವಾ ಪಂಡಿತೋ ವಾಪಿ ಶ್ರುತ್ವೈತನ್ಮೋಕ್ಷಭಾಗ್ಭವೇತ್ ॥ ೨೭ ॥

---

೨೪. ಮಾಸೋಪವಾಸ ತತ್ಪರರು, ಗಂಗಾಸ್ನಾನ ನಿರತರು, ಮತ್ತು ಧರ್ಮಮಾರ್ಗೋಪದೇಶಕರೂ ಸಹ ನಿಜವಾಗಿಯೂ ಮುಕ್ತಿಯನ್ನು ಹೊಂದುವರು. ಸಂಶಯವಿಲ್ಲ.

೨೫. ಅಬಲೆಯರಾದ ಹೆಂಗಸರು, ಯತಿಗಳು ಮತ್ತು ಬ್ರಹ್ಮಚಾರಿಗಳು ಇವರಿಗೆ ಮಾಸೋಪವಾಸವು ಅವಶ್ಯಕರ್ತವ್ಯವು ಮತ್ತು ವಿಶೇಷವಾಗಿ ವಾನಪ್ರಸ್ಥರಿಗೆ ಇದು ಕರ್ತವ್ಯವು

೨೬. ಸುಲಭವಾಗಿ ಎಲ್ಲರಿಗೂ ಸಾಧ್ಯವಾಗದ ಈ ವ್ರತವನ್ನು ಸ್ತ್ರೀಯಾಗಲೀ ಪುರುಷನಾಗಲಿ ಅನುಷ್ಠಾನಮಾಡಿದರೆ ಯೋಗಿಗಳಿಗೂ ದುರ್ಲಭವಾದ ಮೋಕ್ಷವು ದೊರೆಯುವುದು.

೨೭. ಗೃಹಸ್ಥ, ವಾನಪ್ರಸ್ಥ, ಯತಿ ಅಥವ ಬಿಕ್ಷುವೇ ಆಗಲಿ, ಮೂರ್ಖ ಅಥವಾ ಪಂಡಿತನಾಗಲಿ ಈ ಉಪಾಖ್ಯಾನವನ್ನು ಶ್ರವಣಮಾಡಿದವನು ಮೋಕ್ಷಭಾಗಿಯಾಗುವನು.

**ಇದಂ ಪುಣ್ಯಂ ವ್ರತಾಖ್ಯಾನಂ ನಾರಾಯಣಪರಾಯಣಃ ।**
**ಶ್ರುಣುಯಾದ್ವಾಚಯೇದ್ವಾಪಿ ಸರ್ವಪಾಪೈಃ ಪ್ರಮುಚ್ಯತೇ ॥ ೨೮ ॥**

**ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ ಪ್ರಥಮಪಾದೇ ವ್ರತಾಖ್ಯಾನೇ ಮಾಸೋಪವಾಸವರ್ಣನಂ ನಾಮ ದ್ವಾವಿಂಶೋಽಧ್ಯಾಯಃ**

---

೨೮. ನಾರಾಯಣಧ್ಯಾನನಿರತನಾಗಿ ಪುಣ್ಯಕರವಾದ ಈ ವ್ರತೋಪಾಖ್ಯಾನವನ್ನು ಶ್ರವಣಪಠನ ಮಾಡುವವನು ಸಕಲ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾನೆ.

ಇಂತು ಶ್ರೀಬೃಹನ್ನಾರದೀಯಪುರಾಣದೊಳು ಪೂರ್ವಭಾಗ ಪ್ರಥಮಪಾದದಲ್ಲಿ ವ್ರತಪ್ರಕರಣದಲ್ಲಿ ಮಾಸೋಪವಾಸವರ್ಣನೆಯೆಂಬ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.

---

**ಕಥಾಸಾರಾಂಶ**

ಈ ಅಧ್ಯಾಯದಲ್ಲಿ ಮಾಸೋಪವಾಸ ವ್ರತಾಚರಣೆಯ ವಿಧಾನ, ಉದ್ಯಾಪನೆ, ಅದರ ಫಲ, ಅನೇಕಬಾರಿ ಆ ವ್ರತವನ್ನು ಆಚರಿಸಿದರೆ ಬರುವ ಪುಣ್ಯವಿಶೇಷ ಮುಂತಾದುವು ವಿಶದವಾಗಿ ನಿರೂಪಿತವಾಗಿವೆ.



# ತ್ರಯೋವಿಂಶೋಽಧ್ಯಾಯಃ

**ಸನಕ ಉವಾಚ**

ಇದಮನ್ಯತ್ಪ್ರವಕ್ಷ್ಯಾಮಿ ವ್ರತಂ ತ್ರೈಲೋಕ್ಯವಿಶ್ರುತಂ ।
ಸರ್ವಪಾಪಪ್ರಶಮನಂ ಸರ್ವಕಾಮಫಲಪ್ರದಂ ॥ ೧ ॥

ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಚೈವ ಯೋಷಿತಾಂ ।
ಮೋಕ್ಷದಂ ಕುರ್ವತಾಂ ಭಕ್ತ್ಯಾ ವಿಷ್ಣೋಃ ಪ್ರಿಯತರಂ ದ್ವಿಜ ॥ ೨ ॥

ಏಕಾದಶೀವ್ರತಂ ನಾಮ ಸರ್ವಾಭೀಷ್ಟಪ್ರದಂ ನೃಣಾಂ ।
ಕರ್ತವ್ಯಂ ಸರ್ವಥಾ ವಿಪ್ರ ವಿಷ್ಣುಪ್ರೀತಿಕರಂ ಯತಃ ॥ ೩ ॥

ಏಕಾದಶ್ಯಾಂ ನ ಭುಂಜೀತ ಪಕ್ಷಯೋರುಭಯೋರಪಿ ।
ಯೋ ಭುಂಕ್ತೇ ಸೋಽತ್ರ ಪಾಪೀಯಾನ್ಪರತ್ರ ನರಕಂ ವ್ರಜೇತ್ ॥ ೪ ॥

---

## ಇಪ್ಪತ್ತಮೂರನೆಯ ಅಧ್ಯಾಯವು

೧-೩. ಸನಕನು ಹೇಳಿದನು—ಮೂರು ಲೋಕಗಳಲ್ಲಿಯೂ ವಿಖ್ಯಾತವು, ಸರ್ವಪಾಪಪರಿಹಾರಕವು ಸಕಲೇಷ್ಟಾರ್ಥಪ್ರದವು, ಭಕ್ತಿಯಿಂದ ಈ ವ್ರತವನ್ನಾಚರಿಸುವ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಇವರು ಮತ್ತು ಸ್ತ್ರೀಯರು ಇವರಿಗೆ ಮೋಕ್ಷವನ್ನು ಕೊಡುವುದು, ವಿಷ್ಣುವಿಗೆ ಅತಿಶಯ ಪ್ರೀತಿಕರವು ಮತ್ತು ಜನರಿಗೆ ಸಕಲಾಭೀಷ್ಟಪ್ರದವೂ ಆದ, ಏಕಾದಶೀ ವ್ರತವೆಂಬ ಇನ್ನೊಂದು ವ್ರತವನ್ನು ಹೇಳುತ್ತೇನೆ ಕೇಳು. ಈ ವ್ರತವು ಎಲ್ಲಾವಿಧದಲ್ಲಿಯೂ ವಿಷ್ಣುಪ್ರೀತಿದಾಯಕವಾದುದರಿಂದ ಸರ್ವಪ್ರಯತ್ನದಿಂದಲೂ ಇದನ್ನು ಅನುಷ್ಠಾನಮಾಡಬೇಕು.

೪. ಶುಕ್ಲಪಕ್ಷಗಳೆರಡರಲ್ಲಿಯೂ ಏಕಾದಶಿಯ ದಿನ ಭೋಜನಮಾಡಬಾರದು. ಆದಿನ ಭೋಜನಮಾಡುವವನು ಇಲ್ಲಿ ಪಾಪಫಲವನ್ನನುಭವಿಸಿ ಅನಂತರ ನರಕಕ್ಕೆ ಹೋಗುವನು.

ಉಪವಾಸಫಲಂ ಲಿಪ್ಸುರ್ಜಹ್ಯಾದ್ಭುಕ್ತಿಚತುಷ್ಟಯಂ ।
ಪೂರ್ವಾಪರದಿನೇ ರಾತ್ರಾವಹೋರಾತ್ರಂ ತು ಮಧ್ಯಮೇ ॥ ೫ ॥

ಏಕಾದಶೀ ದಿನೇ ಯಸ್ತು ಭೋಕ್ತುಮಿಚ್ಛತಿ ಮಾನವಃ ।
ಸ ಭೋಕ್ತುಂ ಸರ್ವಪಾಪಾನಿ ಸ್ಪೃಹಯಾಲುರ್ನಸಂಶಯಃ ॥ ೬ ॥

ಭವೇದ್ದಶಮ್ಯಾಮೇಕಾಶೀ ದ್ವಾದಶ್ಯಾಂ ಚ ಮುನೀಶ್ವರ ।
ಏಕಾದಶ್ಯಾಂ ನಿರಾಹಾರೋ ಯದಿ ಮುಕ್ತಿಮಭೀಪ್ಸತಿ ॥ ೭ ॥

ಯಾನಿ ಕಾನಿ ಚ ಪಾಪಾನಿ ಬ್ರಹ್ಮಹತ್ಯಾದಿಕಾನಿ ಚ ।
ಅನ್ನಮಾಶ್ರಿತ್ಯ ತಿಷ್ಠಂತಿ ತಾನಿ ವಿಪ್ರ ಹರೇರ್ದಿನೇ ॥ ೮ ॥

ಬ್ರಹ್ಮಹತ್ಯಾದಿಪಾಪಾನಾಂ ಕಥಂಚಿನ್ನಿಷ್ಕೃತಿರ್ಭವೇತ್ ।
ಏಕಾದಶ್ಯಾಂ ತು ಯೋ ಭುಂಕ್ತೇ ತಸ್ಯ ನೈವಾಸ್ತಿ ನಿಷ್ಕೃತಿಃ ॥ ೯ ॥

---

೫. ಉಪವಾಸಫಲವನ್ನಪೇಕ್ಷಿಸುವವನು ದಶಮಿ ದ್ವಾದಶಿ ದಿನಗಳ ರಾತ್ರಿಕಾಲದಲ್ಲಿಯೂ, ಏಕಾದಶಿಯದಿನ ಹಗಲು ರಾತ್ರಿ ಎರಡು ಹೊತ್ತು ಈ ರೀತಿ ನಾಲ್ಕುಹೊತ್ತು ಭೋಜನವನ್ನು ತ್ಯಜಿಸಬೇಕು.

೬. ಏಕಾದಶಿ ದಿನದಲ್ಲಿ ಭೋಜನಮಾಡಬೇಕೆಂದಪೇಕ್ಷಿಸುವ ಮನುಷ್ಯನು ಸಕಲಪಾಪಗಳನ್ನೂ ಅನುಭವಿಸಲಿಚ್ಛಿಸುವನೆಂಬುದರಲ್ಲಿ ಸಂದೇಹವಿಲ್ಲ.

೭. ಮೋಕ್ಷವನ್ನು ಅಪೇಕ್ಷಿಸುವವನು ದಶಮಿ ದ್ವಾದಶೀ ದಿನಗಳಲ್ಲಿ ಒಪ್ಪತ್ತು ಭೋಜನಮಾಡಿ ಏಕಾದಶಿಯ ದಿನ ಆಹಾರವೇ ಇಲ್ಲದೆ ಇರಬೇಕು.

೮. ಬ್ರಾಹ್ಮಣನಾದ ನಾರದನೇ! ಬ್ರಹ್ಮಹತ್ಯೆ ಮುಂತಾಗಿ ಪ್ರಸಿದ್ಧವಾದ ಪಾಪಗಳೆಲ್ಲವೂ ಹರಿದಿನದಲ್ಲಿ ಅನ್ನದಲ್ಲಿರುತ್ತವೆ.

೯. ಬ್ರಹ್ಮಹತ್ಯೆ ಮುಂತಾದ ಪಾಪಗಳಿಗೂ ಸಹ ಹೇಗಾದರೂ ಪರಿಹಾರವುಂಟು. ಏಕಾದಶಿಯ ದಿನ ಊಟಮಾಡಿದರೆ ಬರುವ ಪಾಪಕ್ಕೆ ಪರಿಹಾರವೇ ಇಲ್ಲ.

ಮಹಾಪಾತಕಯುಕ್ತೋ ವಾ ಯುಕ್ತೋ ವಾ ಸರ್ವಪಾತಕೈಃ ।
ಏಕಾದಶ್ಯಾಂ ನಿರಾಹಾರಃ ಸ್ಥಿತ್ವಾ ಯಾತಿ ಪರಾಂ ಗತಿಂ ॥ ೧೦ ॥

ಏಕಾದಶೀ ಮಹಾಪುಣ್ಯಾ ವಿಷ್ಣೋಃ ಪ್ರಿಯತಮಾ ತಿಥಿಃ ।
ಸಂಸೇವ್ಯಾ ಸರ್ವಥಾ ವಿಪ್ರೈಃ ಸಂಸಾರಛೇದಲಿಪ್ಸುಭಿಃ ॥ ೧೧ ॥

ದಶಮ್ಯಾಂ ಪ್ರಾತರುತ್ಥಾಯ ದಂತಧಾವನ ಪೂರ್ವಕಂ ।
ಸ್ನಾಪಯೇದ್ವಿಧಿವದ್ವಿಷ್ಣುಂ ಪೂಜಯೇತ್ಪ್ರಯತೇಂದ್ರಿಯಃ ॥ ೧೨ ॥

ಏಕಾದಶ್ಯಾಂ ನಿರಾಹಾರೋ ನಿಗೃಹೀತೇಂದ್ರಿಯೋ ಭವೇತ್ ।
ಶಯೀತ ಸನ್ನಿಧೌ ವಿಷ್ಣೋರ್ನಾರಾಯಣಪರಾಯಣಃ ॥ ೧೩ ॥

ಏಕಾದಶ್ಯಾಂ ತಥಾ ಸ್ನಾತ್ವಾ ಸಂಪೂಜ್ಯ ಚ ಜನಾರ್ದನಂ ।
ಗಂಧಪುಷ್ಪಾದಿಭಿಃ ಸಮ್ಯಕ್ತತಸ್ತ್ವೇವಮುದೀರಯೇತ್ ॥ ೧೪ ॥

---

೧೦. ಮಹಾಪಾತಕವನ್ನು ಅಥವ ಸಕಲಪಾಪಕೃತ್ಯಗಳನ್ನು ಮಾಡಿದವನಾದರೂ ಏಕಾದಶಿಯ ದಿನ ನಿರಾಹಾರ ಮಾಡಿದರೆ ಉತ್ತಮಗತಿಯನ್ನು ಪಡೆಯುವನು.

೧೧. ಏಕಾದಶೀತಿಥಿಯು ಮಹಾಪುಣ್ಯಪ್ರದ ಮತ್ತು ವಿಷ್ಣುವಿಗೆ ಅತ್ಯಂತ ಪ್ರೀತಿಕರವು. ಅದು ಸಂಸಾರಬಂಧದಿಂದ ನಿವೃತ್ತಿಯನ್ನು ಬಯಸುವ ಬ್ರಾಹ್ಮಣರಿಂದ ಸಕಲವಿಧವಾಗಿಯೂ ಸೇವಿಸಲ್ಪಡತಕ್ಕುದು.

೧೨. ದಶಮಿಯದಿನ ಬೆಳಗ್ಗೆ ಎದ್ದು ಜಿತೇಂದ್ರಿನಾಗಿ ದಂತಧಾವನ ಮಾಡಿಕೊಂಡು ಸ್ನಾನಾದಿ ನಿತ್ಯಕರ್ಮವನ್ನುಮುಗಿಸಿ, ವಿಷ್ಣುವಿಗೆ ಅಭಿಷೇಕಮಾಡಿ ವಿಧಾನೋಕ್ತಪ್ರಕಾರ ಪೂಜೆಮಾಡಬೇಕು.

೧೩. ಏಕಾದಶಿಯದಿನ ಆಹಾರವನ್ನು ಸೇವಿಸದೇ, ಇಂದ್ರಿಯವನ್ನು ನಿಗ್ರಹಿಸಿಕೊಂಡು, ನಾರಾಯಣ ಧ್ಯಾನ ನಿರತನಾಗಿ ವಿಷ್ಣುಸನ್ನಿಧಿಯಲ್ಲಿ ಶಯನ ಮಾಡಬೇಕು.

೧೪. ಏಕಾದಶಿಯ ದಿನ ಸ್ನಾನಮಾಡಿ, ಜನಾರ್ದನನನ್ನು ಭಕ್ತಿಪೂರ್ವಕವಾಗಿ ಗಂಧಪುಷ್ಪಾದಿಗಳಿಂದ ಪೂಜಿಸಿ ಮುಂದಿನ ಮಂತ್ರವನ್ನು ಹೇಳಬೇಕು.

ಏಕಾದಶ್ಯಾಂ ನಿರಾಹಾರಃ ಸ್ಥಿತ್ವಾದ್ಯಾಹಂ ಪರೇಽಹನಿ ।
ಭೋಕ್ಷ್ಯಾಮಿ ಪುಂಡರೀಕಾಕ್ಷ ಶರಣಂ ಮೇ ಭವಾಚ್ಯುತ ॥ ೧೫ ॥

ಇಮಂ ಮಂತ್ರಂ ಸಮುಚ್ಚಾರ್ಯ ದೇವದೇವಸ್ಯ ಚಕ್ರಿಣಃ ।
ಭಕ್ತಿಭಾವೇನ ತುಷ್ಟಾತ್ಮಾ ಉಪವಾಸಂ ಸಮರ್ಪಯೇತ್ ॥ ೧೬ ॥

ದೇವಸ್ಯ ಪುರತಃ ಕುರ್ಯಾಜ್ಜಾಗರಂ ನಿಯತೋ ವ್ರತೀ ।
ಗೀತೈರ್ವಾದ್ಯೈಶ್ಚ ನೃತ್ಯೈಶ್ಚ ಪುರಾಣಶ್ರವಣಾದಿಭಿಃ ॥ ೧೭ ॥

ತತಃ ಪ್ರಾತಃ ಸಮುತ್ಥಾಯ ದ್ವಾದಶೀ ದಿವಸೇ ವ್ರತೀ ।
ಸ್ನಾತ್ವಾ ಚ ವಿಧಿವದ್ವಿಷ್ಣುಂ ಪೂಜಯೇತ್ಪ್ರಯತೇಂದ್ರಿಯಃ ॥ ೧೮ ॥

ಪಂಚಾಮೃತೇನ ಸಂಸ್ನಾಪ್ಯ ಏಕಾದಶ್ಯಾಂ ಜನಾರ್ದನಂ ।
ದ್ವಾದಶ್ಯಾಂ ಪಯಸಾ ವಿಪ್ರ ಹರಿಸಾರೂಪ್ಯಮಶ್ನುತೇ ॥ ೧೯ ॥

---

೧೫. "ಪುಂಡರೀಕಾಕ್ಷನೇ! ಈ ಏಕಾದಶಿಯ ದಿನ ಆಹಾರವನ್ನು ತೆಗೆದುಕೊಳ್ಳದಂತೆ ಉಪವಾಸಮಾಡಿ, ನಾಳೆಯದಿನ ಪಾರಣೆಮಾಡುತ್ತೇನೆ, ಅಚ್ಯುತನೇ! ನೀನೇ ರಕ್ಷಿಸಬೇಕು"

೧೬. ಈ ಮಂತ್ರವನ್ನು ಹೇಳಿ ದೇವೋತ್ತಮನು, ಚಕ್ರಾಯುಧಧಾರಿಯೂ ಆಗಿರುವ ಭಗವಂತನಿಗೆ ಭಕ್ತಿಭಾವದಿಂದ ಆತ್ಮಸಂತೋಷಪೂರ್ವಕವಾಗಿ ಉಪವಾಸವನ್ನು ಸಮರ್ಪಣೆಮಾಡಬೇಕು.

೧೭. ಏಕಾದಶೀವ್ರತಕರ್ತನು ದೇವರ ಮುಂದೆ ಗೀತ ವಾದ್ಯ ನರ್ತನ ಮತ್ತು ಪುರಾಣ ಶ್ರವಣ ಮುಂತಾದ ಸದ್ವ್ಯಾಪಾರಗಳಿಂದ ನಿಯಮಪೂರ್ವಕವಾಗಿ ಜಾಗರಣೆಯನ್ನು ಮಾಡಬೇಕು.

೧೮. ತರುವಾಯ ಬೆಳಗ್ಗೆ ಎದ್ದು ದ್ವಾದಶೀದಿನದಲ್ಲಿ ವ್ರತಕರ್ತನು ಜಿತೇಂದ್ರಿಯನಾಗಿ ಸ್ನಾನಮಾಡಿ ವಿಧಾನೋಕ್ತಪ್ರಕಾರ ವಿಷ್ಣುಪೂಜೆ ಮಾಡಬೇಕು.

೧೯. ಏಕಾದಶಿಯ ದಿನ ಜನಾರ್ದನನಾಮಕನಾದ ಶ್ರೀ ನಾರಾಯಣನಿಗೆ ಪಂಚಾಮೃತಾಭಿಷೇಕವನ್ನು ಮಾಡಿ ದ್ವಾದಶಿಯ ದಿನ ಹಾಲಿನಿಂದ ಅಭಿಷೇಕಮಾಡುವವನು ಹರಿಸಾರೂಪ್ಯವನ್ನು ಪಡೆಯುತ್ತಾನೆ.

ಅಜ್ಞಾನತಿಮಿರಾಂಧಸ್ಯ ವ್ರತೇನಾನೇನ ಕೇಶವ ।
ಪ್ರಸೀದ ಸುಮುಖೋ ಭೂತ್ವಾ ಜ್ಞಾನದೃಷ್ಟಿಪ್ರದೋ ಭವ ॥ ೨೦ ॥

ಏವಂ ವಿಜ್ಞಾಪ್ಯ ವಿಪ್ರೇಂದ್ರ ಮಾಧವಂ ಸುಸಮಾಹಿತಃ ।
ಬ್ರಾಹ್ಮಣಾನ್ಭೋಜಯೇಚ್ಛಕ್ತ್ಯಾ ದದ್ಯಾದ್ವೈ ದಕ್ಷಿಣಾಂ ತಥಾ ॥ ೨೧ ॥

ತತಃ ಸ ಬಂಧುಭಿಃ ಸಾರ್ಧಂ ನಾರಾಯಣಪರಾಯಣಃ ।
ಕೃತಪಂಚಮಹಾಯಜ್ಞಃ ಸ್ವಯಂ ಭುಂಜೀತ ವಾಗ್ಯತಃ ॥ ೨೨ ॥

ಏವಂ ಯಃ ಪ್ರಯತಃ ಕುರ್ಯಾತ್ಪುಣ್ಯಮೇಕಾದಶೀವ್ರತಂ ।
ಸ ಯಾತಿ ವಿಷ್ಣುಭವನಂ ಪುನರಾವೃತ್ತಿದುರ್ಲಭಂ ॥ ೨೩ ॥

ಉಪವಾಸವ್ರತಪರೋ ಧರ್ಮಕಾರ್ಯಪರಾಯಣಃ ।
ಚಂಡಾಲಾನ್ಪತಿತಾಂಶ್ಚೈವ ನೇಕ್ಷೇದಪಿ ಕದಾಚನ ॥ ೨೪ ॥

---

೨೦. ಕೇಶವಸ್ವಾಮಿಯೇ ! ಅಜ್ಞಾನವೆಂಬ ಕಗ್ಗತ್ತಲೆಯಲ್ಲಿ ಸಿಲುಕಿ ಕುರುಡನಂತಿರುವ ನನಗೆ ಈ ಏಕಾದಶೀವ್ರತದಿಂದ ಪ್ರಸನ್ನನಾಗು, ಸುಮುಖನಾಗಿ ಜ್ಞಾನದೃಷ್ಟಿನಾಯಕನಾಗು.

೨೧. ಬ್ರಾಹ್ಮಣೋತ್ತಮನೇ ! ಈಪ್ರಕಾರ ದೇವರಸನ್ನಿಧಿಯಲ್ಲಿ ವಿಜ್ಞಾಪಿಸಿ, ಸಮಾಧಾನಚಿತ್ತನಾಗಿ ತನ್ನ ಶಕ್ತ್ಯನುಸಾರ ಬ್ರಾಹ್ಮಣರಿಗೆ ಭೋಜನ ಮಾಡಿಸಿ, ದಕ್ಷಿಣೆಯನ್ನು ಕೊಡಬೇಕು.

೨೨. ತರುವಾಯ ನಾರಾಯಣ ಧ್ಯಾನಮಾಡುತ್ತಾ ಪಂಚಮಹಾಯಜ್ಞಗಳನ್ನು ಮಾಡಿದವನಾಗಿ, ಬಂಧುಗಳೊಡನೆ ತಾನು ನಿಯಮದಿಂದ ಭೋಜನಮಾಡಬೇಕು.

೨೩. ಈ ಪ್ರಕಾರ ಮನಃಪೂರ್ವಕವಾಗಿ ಪುಣ್ಯಪ್ರದವಾದ ಏಕಾದಶೀ ವ್ರತವನ್ನು ಮಾಡುವವನು ಪುನಃ ಸಂಸಾರಬಂಧಕ್ಕೆ ಅವಕಾಶವನ್ನು ಕೊಡದಿರುವ ವಿಷ್ಣುಲೋಕವನ್ನು ಪಡೆಯುತ್ತಾನೆ.

೨೪. ಉಪವಾಸವ್ರತನನ್ನಾಚರಿಸುವಾಗ ವ್ರತಕರ್ತನು ಧರ್ಮಕಾರ್ಯಗಳಲ್ಲಿ ನಿರತನಾಗಬೇಕು. ಚಂಡಾಲ ಮತ್ತು ಪತಿತರನ್ನು ಯಾವಾಗಲೂ ನೋಡಬಾರದು.

ನಾಸ್ತಿಕಾನ್ಭಿನ್ನಮರ್ಯಾದಾನ್ನಿಂದಕಾನ್ಪಿಶುನಾಂಸ್ತಥಾ ।
ಉಪವಾಸವ್ರತಪರೋ ನಾಲಪೇಚ್ಚ ಕದಾಚನ ॥ ೨೫ ॥

ವೃಷಲೀಸೂತಿಪೋಷ್ಟಾರಂ ವೃಷಲೀಪತಿಮೇವ ಚ ।
ಅಯಾಜ್ಯಯಾಜಕಂ ಚೈವ ನಾಲಪೇತ್ಸರ್ವದಾ ವ್ರತೀ ॥ ೨೬ ॥

ಕುಂಡಾಶಿನಂ ಗಾಯಕಂ ಚ ತಥಾ ದೇವಲಕಾಶಿನಂ ।
ಭಿಷಜಂ ಕಾವ್ಯಕರ್ತಾರಂ ದೇವದ್ವಿಜವಿರೋಧಿನಂ ॥ ೨೭ ॥

ಪರಾನ್ನಲೋಲುಪಂ ಚೈವ ಪರಸ್ತ್ರೀನಿರತಂ ತಥಾ ।
ವ್ರತೋಪವಾಸನಿರತೋ ವಾಙ್ಮಾತ್ರೇಣಾಪಿ ನಾರ್ಚಯೇತ್ ॥ ೨೮ ॥

ಇತ್ಯೇವಮಾದಿಭಿಃ ಶುದ್ಧೋ ವಶೀ ಸರ್ವಹಿತೇ ರತಃ ।
ಉಪವಾಸಪರೋ ಭೂತ್ವಾ ಪರಾಂ ಸಿದ್ಧಿಮವಾಪ್ನುಯಾತ್ ॥ ೨೯ ॥

---

೨೫. ನಾಸ್ತಿಕರು, ವಿರುದ್ಧಕರ್ಮಾನುಷ್ಠಾತೃಗಳು, ಧರ್ಮದೂಷಕರು ಮತ್ತು ಚಾಡಿ ಹೇಳುವವರು ಇವರನ್ನು ಉಪವಾಸವ್ರತನಿಷ್ಠನು ಯಾವಾಗಲೂ ಮಾತನಾಡಿಸಬಾರದು.

೨೬. ಉಪವಾಸವ್ರತಕರ್ತನು ವೃಷಲೀಸೂತಿಪೋಷಕನನ್ನು. ವೃಷಲೀಪತಿಯನ್ನು, ಶ್ರೌತಕರ್ಮಾನಧಿಕಾರಿಗಳಿಗೆ ಯಜ್ಞಾದಿಗಳನ್ನು ಮಾಡಿಸುವವನನ್ನೂ ಸಹ ಯಾವಾಗಲೂ ಮಾತನಾಡಿಸಬಾರದು.

೨೭-೨೮. ಪತಿಯು ಜೀವಿತನಾಗಿರುವಾಗ ಪರಪುರುಷಸಂಗದಿಂದ ಹುಟ್ಟಿದವನ (ಕುಂಡ) ಮನೆಯಲ್ಲಿ ಭೋಜನಮಾಡಿದವನು, ಸಂಗೀತಗಾರನು, ಪೂಜಾರಿಯ ಅನ್ನದಿಂದ ಜೀವಿಸುವವನು, ವೈದ್ಯ, ಕಾವ್ಯಕರ್ತೃ, ದೇವಬ್ರಾಹ್ಮಣವಿರೋಧಿಯು, ಪರಾನ್ನದಿಂದಲೇ ಜೀವಿಸುವವನು ಪರಸ್ತ್ರೀಸಂಗತತ್ಪರನು ಇವರನ್ನು ಉಪವಾಸವ್ರತನಿಷ್ಠನು ಒಳ್ಳೆಯಮಾತಿನಿಂದಲೂ ಸಹ ಸತ್ಕರಿಸಬಾರದು.

೨೯. ಈ ರೀತಿಯಾದ ನಿಷಿದ್ಧಪರಿತ್ಯಾಗಗಳಿಂದ ಪರಿಶುದ್ಧನು, ಸ್ವಾಧೀನೇಂದ್ರಿಯನು, ಸರ್ವರಿಗೂ ಉಪಕಾರಿಯೂ ಆಗಿ ಉಪವಾಸವ್ರತನಿಷ್ಠನಾದರೆ ಉತ್ತಮಸಿದ್ಧಿ ಎಂದರೆ ಮೋಕ್ಷವನ್ನು ಹೊಂದುವನು.

ನಾಸ್ತಿ ಗಂಗಾಸಮಂ ತೀರ್ಥಂ ನಾಸ್ತಿ ಮಾತೃಸಮೋ ಗುರುಃ ।
ನಾಸ್ತಿ ವಿಷ್ಣುಸಮಂ ದೈವಂ ತಪೋ ನಾನಶನಾತ್ಪರಂ ॥ ೩೦ ॥

ನಾಸ್ತಿ ಕ್ಷಮಾಸಮಾ ಮಾತಾ ನಾಸ್ತಿ ಕೀರ್ತಿಸಮಂ ಧನಂ ।
ನಾಸ್ತಿ ಜ್ಞಾನಸಮೋ ಲಾಭೋ ನ ಚ ಧರ್ಮಸಮಃ ಪಿತಾ ॥ ೩೧ ॥

ನ ವಿವೇಕಸಮೋ ಬಂಧುಃ ನೈಕಾದಶ್ಯಾಃ ಪರಂ ವ್ರತಂ ।
ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಂ ॥ ೩೨ ॥

ಸಂವಾದಂ ಭದ್ರಶೀಲಸ್ಯ ತತ್ಪಿತುರ್ಗಾಲವಸ್ಯ ಚ ।
ಪುರಾ ಹಿ ಗಾಲವೋ ನಾಮ ಮುನಿಃ ಸತ್ಯಪರಾಯಣಃ ॥ ೩೩ ॥

ಉವಾಸ ನರ್ಮದಾತೀರೇ ಶಾಂತೋದಾಂತಸ್ತಪೋನಿಧಿಃ ।
ಬಹುವೃಕ್ಷಸಮಾಕೀರ್ಣೇ ಗಜಭಲ್ಲುನಿಷೇವಿತೇ ॥ ೩೪ ॥

---

೩೦. ಗಂಗೆಗೆ ಸಮಾನವಾದ ತೀರ್ಥವು, ತಾಯಿಗೆ ಸಮಾನವಾದ ಗುರುವು, ವಿಷ್ಣುವಿಗೆ ಸಮಾನವಾದ ದೇವರು, ನಿರಾಹಾರವ್ರತಕ್ಕಿಂತ ಅಧಿಕವಾದ ತಪಸ್ಸೂ ಇಲ್ಲ.

೩೧. ಸಹನೆಗೆ ಸಮಾನವಾದ ಮಾತೆಯು, ಕೀರ್ತಿಗೆ ಸಮಾನವಾದ ಧನವು, ಜ್ಞಾನಸದೃಶವಾದ ಲಾಭವು, ಧರ್ಮಕ್ಕೆ ಸಮಾನವಾದ ತಂದೆಯೂ ಇಲ್ಲ.

೩೨-೩೩. ವಿವೇಕಕ್ಕೆ ಸಮಾನವಾದ ಬಂಧುವಿಲ್ಲ. ಏಕಾದಶಿಗಿಂತ ಉತ್ತಮವಾದ ವ್ರತವಿಲ್ಲ. ಈ ವಿಷಯದಲ್ಲಿ ಭದ್ರಶೀಲ ಮತ್ತು ಅವನ ತಂದೆಯಾದ ಗಾಲವಮುನಿ ಇವರಿಬ್ಬರ ಸಂವಾದರೂಪವಾದ ಪ್ರಾಚೀನೇತಿಹಾಸವನ್ನು ಹೇಳುತ್ತಾರೆ-

೩೩-೩೪. ಪೂರ್ವದಲ್ಲಿ ಸತ್ಯನಿರತನು, ಶಮದಮಾದಿ ಸಂಪತ್ತುಳ್ಳವನು ತಪೋನಿಧಿಯೂ ಆದ ಗಾಲವನೆಂಬ ಋಷಿಯು ನರ್ಮದಾನದಿಯ ತೀರದಲ್ಲಿ ವಾಸಮಾಡಿಕೊಂಡಿದ್ದನು.

ಸಿದ್ಧ ಚಾರಣ ಗಂಧರ್ವಯಕ್ಷವಿದ್ಯಾಧರಾನ್ವಿತೇ ।
ಕಂದಮೂಲಫಲೈಃ ಪೂರ್ಣೇ ಮುನಿವೃಂದನಿಷೇವಿತೇ ॥ ೩೫ ॥

ಗಾಲವೋ ನಾಮ ವಿಪ್ರೇಂದ್ರೋ ನಿವಾಸಮಕರೋಚ್ಚಿರಂ ।
ತಸ್ಯಾಭವದ್ಭದ್ರಶೀಲ ಇತಿ ಖ್ಯಾತಃ ಸುತೋ ವಶೀ ॥ ೩೬ ॥

ಜಾತಿಸ್ಮರೋ ಮಹಾಭಾಗೋ ನಾರಾಯಣಪರಾಯಣಃ ।
ಬಾಲಕ್ರೀಡನಕಾಲೇಽಪಿ ಭದ್ರಶೀಲೋ ಮಹಾಮತಿಃ ॥ ೩೭ ॥

ಮೃದಾ ಚ ವಿಷ್ಣೋಃ ಪ್ರತಿಮಾಂಕೃತ್ವಾ ಪೂಜಯತೇ ಕ್ಷಣಂ ।
ವಯಸ್ಯಾನ್ಬೋಧಯೇಚ್ಚಾಪಿ ವಿಷ್ಣುಃ ಪೂಜ್ಯೋ ನರೈಃ ಸದಾ ॥ ೩೮ ॥

ಏಕಾದಶೀವ್ರತಂ ಚೈವ ಕರ್ತವ್ಯಮಪಿ ಪಂಡಿತೈಃ ।
ಏವಂ ತೇ ಬೋಧಿತಾಸ್ತೇನ ಶಿಶವೋಽಪಿ ಮುನೀಶ್ವರ ॥ ೩೯ ॥

---

೩೪-೩೬. ಬಹು ಗಿಡಮರಗಳಿಂದ ತುಂಬಿದ, ಆನೆ ಮತ್ತು ಕರಡಿಗಳಿಂದ ಸೇವಿಸಲ್ಪಟ್ಟ, ಸಿದ್ಧರು, ಚಾರಣರು, ಗಂಧರ್ವ, ಯಕ್ಷ, ವಿದ್ಯಾಧರ ಇವರುಗಳಿಂದ ಕೂಡಿದ, ಗೆಡ್ಡೆ, ಗೆಣಸು, ಹಣ್ಣು ಇವುಗಳಿಂದ ಪರಿಪೂರ್ಣವಾದ ಋಷಿ ಸಮೂಹಗಳಿಂದ ಆಶ್ರಯಿಸಲ್ಪಟ್ಟಿರುವ, ಆ ನರ್ಮದಾನದಿಯ ತೀರದಲ್ಲಿ ಗಾಲವನೆಂಬ ಬ್ರಾಹ್ಮಣಶ್ರೇಷ್ಠನು ಬಹುಕಾಲ ವಾಸವಾಡುತ್ತಿದ್ದನು. ಅವನಿಗೆ ವಿಧೇಯನಾದ ಭದ್ರಶೀಲನೆಂದು ಪ್ರಸಿದ್ಧನಾದ ಮಗನಿದ್ದನು.

೩೭-೩೮. ಜನ್ಮಾಂತರ ಸ್ಮರಣೆಯುಳ್ಳವನು, ಧನ್ಯನು, ನಾರಾಯಣಧ್ಯಾನ ಪರನೂ, ಬಹುಬುದ್ಧಿವಂತನೂ ಆಗಿದ್ದ ಭದ್ರಶೀಲನು ಹುಡುಗತನದ ಆಟದ ಕಾಲದಲ್ಲಿಯೂ ಸಹ ಕ್ಷಣಮಾತ್ರದಲ್ಲಿ ಮಣ್ಣಿನಿಂದ ವಿಷ್ಣುಪ್ರತಿಮೆಯನ್ನು ಮಾಡಿ ಪೂಜಿಸುತ್ತಿದ್ದನು.

೩೮-೩೯. ಮನುಷ್ಯರು ಸರ್ವದಾ ವಿಷ್ಣುವನ್ನು ಪೂಜಿಸಬೇಕು. ಪಂಡಿತರೂ ಸಹ ಏಕಾದಶೀ ವ್ರತವನ್ನು ಆಚರಿಸಬೇಕು ಎಂಬುದಾಗಿ ಅವನು ಸ್ನೇಹಿತರಿಗೆ ಬೋಧಿಸುತ್ತಿದ್ದನು.

**ಹರಿಂ ಮೃದೈವ ನಿರ್ಮಾಯ ಪೃಥಕ್ಸಂಭೂಯ ವಾ ಮುದಾ ।**
**ಅರ್ಚಯಂತಿ ಮಹಾಭಾಗಾ ವಿಷ್ಣುಭಕ್ತಿಪರಾಯಣಾಃ ॥ ४೦ ॥**

**ನಮಸ್ಕುರ್ವನ್ಭದ್ರಮತಿರ್ವಿಷ್ಣವೇ ಸರ್ವವಿಷ್ಣವೇ ।**
**ಸರ್ವೇಷಾಂ ಜಗತಾಂ ಸ್ವಸ್ತಿ ಭೂಯಾದಿತ್ಯಬ್ರವೀದಿದಂ ॥ ४೧ ॥**

**ಕ್ರೀಡಾಕಾಲೇ ಮುಹೂರ್ತಂ ವಾ ಮುಹೂರ್ತಾರ್ಧಮಥಾಪಿ ವಾ ।**
**ಏಕಾದಶೀತಿ ಸಂಕಲ್ಪ್ಯ ವ್ರತಂ ಯಚ್ಛತಿ ಕೇಶವೇ ॥ ४೨ ॥**

**ಏವಂ ಸುಚರಿತಂ ದೃಷ್ಟ್ವಾ ತನಯಂ ಗಾಲವೋ ಮುನಿಃ ।**
**ಅಪೃಚ್ಛದ್ವಿಸ್ಮಯಾವಿಷ್ಟಃ ಸಮಾಲಿಂಗ್ಯ ತಪೋನಿಧಿಃ ॥ ४೩ ॥**

**ಗಾಲವ ಉವಾಚ**

**ಭದ್ರಶೀಲ ಮಹಾಭಾಗ ಭದ್ರಶೀಲೋಽಸಿ ಸುವ್ರತ ।**
**ಚರಿತಂ ಮಂಗಲಂ ಯತ್ತೇ ಯೋಗಿನಾಮಪಿ ದುರ್ಲಭಂ ॥ ४४ ॥**

---

೩೯-४೦. ಮುನಿವರ್ಯನೇ? ಈರೀತಿ ಬೋಧಿಸಲ್ಪಟ್ಟ ಆ ಮಕ್ಕಳೂ ಸಹ ಒಟ್ಟಿಗೆ ಸೇರಿ ಮಣ್ಣಿನಿಂದಲೇ ಹರಿಪ್ರತಿಮೆಯನ್ನು ಮಾಡಿ ಅದನ್ನು ಸಂತೋಷದಿಂದ ಹರಿಭಕ್ತಿನಿರತರಾಗಿ ಪೂಜಿಸಿ ಧನ್ಯರಾದರು.

४೧. ಭದ್ರಮತಿಯು ಸರ್ವಸ್ವಾಮಿಯಾದ ವಿಷ್ಣುವಿಗೆ ನಮಸ್ಕಾರ ಮಾಡಿದವನಾಗಿ ಸಕಲಜಗತ್ತಿಗೂ ಮಂಗಳವಾಗಲೆಂದು ಹೇಳಿದನು.

४೨. ಆ ಭದ್ರಶೀಲನು ಆಟವಾಡುವ ಕಾಲದಲ್ಲಿ ಒಂದು ಮುಹೂರ್ತವಾದರೂ ಏಕಾದಶೀ ವ್ರತವನ್ನು ಸಂಕಲ್ಪಿಸಿ ಕೇಶವನಲ್ಲಿ ಸಮರ್ಪಿಸುತ್ತಿದ್ದನು.

४೩. ತಪೋನಿಧಿಯಾದ ಗಾಲವನು ಸನ್ಮಾರ್ಗವರ್ತಿಯಾದ ಮಗನನ್ನು ನೋಡಿ ಆಲಿಂಗನೆ ಮಾಡಿಕೊಂಡು, ಆಶ್ಚರ್ಯಯುಕ್ತನಾಗಿ ಅವನನ್ನು ಕೇಳಿದನು.

४४. ಗಾಲವಮುನಿಯು ಹೇಳಿದನು—ಧನ್ಯನಾದ ಭದ್ರಶೀಲನೇ! ಸಮೀಚೀನವ್ರತವನ್ನನುಷ್ಠಾನಮಾಡುವವನಾಗಿ ಮಂಗಳಕರವಾದ ನಡತೆಯುಳ್ಳವನಾಗಿರುವೆ. ಶ್ರೇಯಸ್ಕರವಾದ ನಿನ್ನ ನಡತೆಯು ಯೋಗಿಗಳಿಗೂ ಸಹ ದೊರೆಯಲಾರದು.

ಹರಿಪೂಜಾಪರೋ ನಿತ್ಯಂ ಸರ್ವಭೂತಹಿತೇ ರತಃ ।
ಏಕಾದಶೀವ್ರತಪರೋ ನಿಷಿದ್ಧಾಚಾರವರ್ಜಿತಃ ।
ನಿರ್ದ್ವಂದ್ವೋ ನಿರ್ಮಮಃ ಶಾಂತೋ ಹರಿಧ್ಯಾನಪರಾಯಣಃ ॥ ೪೫ ॥

ಏವಮೇತಾದೃಶೀ ಬುದ್ಧಿಃ ಕಥಂ ಜಾತಾರ್ಭಕಸ್ಯ ತೇ ।
ವಿನಾऽಪಿ ಮಹತಾಂ ಸೇವಾಂ ಹರಿಭಕ್ತಿರ್ಹಿ ದುರ್ಲಭಾ ॥ ೪೬ ॥

ಸ್ವಭಾವತೋ ಜನಸ್ಯಾಸ್ಯ ಹ್ಯವಿದ್ಯಾಕಾಮಕರ್ಮಸು ।
ಪ್ರವರ್ತತೇ ಮತಿರ್ವತ್ಸ ಕಥಂ ತೇऽಲೌಕಿಕೇ ಕೃತಿಃ ॥ ೪೭ ॥

ಸತ್ಸಂಗೇऽಪಿ ಮನುಷ್ಯಾಣಾಂ ಪೂರ್ವಪುಣ್ಯಾತಿರೇಕತಃ ।
ಜಾಯತೇ ಭಗವದ್ಭಕ್ತಿಸ್ತದಹಂ ವಿಸ್ಮಯಂ ಗತಃ ॥ ೪೮ ॥

---

೪೫-೪೬. ವಿಷ್ಣುಪೂಜಾನಿರತನು, ಸಕಲ ಪ್ರಾಣಿಗಳಿಗೂ ಅನುಕೂಲ ಮಾಡುವವನು, ಏಕಾದಶೀವ್ರತನಿಷ್ಠನು, ನಿಷಿದ್ಧಾಚರಣೆಯನ್ನು ದೂರಮಾಡಿರುವವನು, ಸುಖದುಃಖಾದಿ ದ್ವಂದ್ವಸಹಿಷ್ಣುವು, ಮಮಕಾರಸಹಿತನು, ಶಾಂತನು, ಹರಿಧ್ಯಾನದಲ್ಲಿ ಆಸಕ್ತನೂ ಆಗಬೇಕೆಂಬೀಬುದ್ಧಿಯು ಬಾಲಕನಾದ ನಿನಗೆ ಹೇಗೆ ಹುಟ್ಟಿತು ? ಹರಿಭಕ್ತಿಯು ಮಹಾತ್ಮರ ಸೇವೆಯಿಲ್ಲದೆ ದುರ್ಲಭವು. ಅಂತಹುದು ನಿನಗೆ ಹೇಗೆ ಹುಟ್ಟಿತು?

೪೭. ಮಗುವೇ! ಸ್ವಾಭಾವಿಕವಾಗಿ ಈ ಜನರ ಬುದ್ಧಿಯು ಅಜ್ಞಾನ ಮತ್ತು ಕಾಮಗಳಿಂದ ಲೌಕಿಕ ಕರ್ಮಗಳಲ್ಲಿಯೇ ಪ್ರವರ್ತಿಸುತ್ತದೆ. ಆದುದರಿಂದ ನಿನಗೆ ಈ ಅಲೌಕಿಕ ವ್ಯಾಪಾರದಲ್ಲಿ ಹೇಗೆ ಪ್ರವೃತ್ತಿಯುಂಟಾಯಿತು ?

೪೮. ಸಜ್ಜನರ ಸಹವಾಸದಲ್ಲಿದ್ದಾಗ್ಯೂ ಮನುಷ್ಯರಿಗೆ ಪೂರ್ವಾರ್ಜಿತ ಪುಣ್ಯಾತಿಶಯದಿಂದಲೇ ಭಗವದ್ಭಕ್ತಿಯು ಲಭಿಸುತ್ತದೆ. ಆದುದರಿಂದ ನಿನ್ನ ಹರಿಭಕ್ತ್ಯಾದಿಗಳನ್ನು ನೋಡಿ ನಾನು ಆಶ್ಚರ್ಯಚಕಿತನಾಗಿರುವೆನು.

ಪೃಚ್ಛಾಮಿ ಪ್ರೀತಿಮಾಪನ್ನ ಸ್ತದ್ಭವಾನ್ವಕ್ತುಮರ್ಹತಿ ।
ಭದ್ರಶೀಲೋ ಮುನಿಶ್ರೇಷ್ಠಃ ಪಿತ್ರೈವಂ ಸುವಿಕಲ್ಪಿತಃ ॥ ೪೯ ॥

ಜಾತಿಸ್ಮರಃ ಸುಕೃತಾತ್ಮಾ ಹೃಷ್ಟಪ್ರಹಸಿತಾನನಃ ।
ಸ್ವಾನುಭೂತಂ ಯಥಾವೃತ್ತಂ ಸರ್ವಂ ಪಿತ್ರೇ ನ್ಯವೇದಯತ್ ॥ ೫೦ ॥

ಭದ್ರಶೀಲ ಉವಾಚ

ಶೃಣು ತಾತ ಮುನಿಶ್ರೇಷ್ಠ ಹ್ಯನುಭೂತಂ ಮಯಾ ಪುರಾ ।
ಜಾತಿಸ್ಮರತ್ವಾಜ್ಜಾನಾಮಿ ಯಮೇನ ಪರಿಭಾಷಿತಂ ॥ ೫೧ ॥

ಏತಚ್ಛ್ರುತ್ವಾ ಮಹಾಭಾಗೋ ಗಾಲವೋ ವಿಸ್ಮಯಾನ್ವಿತಃ ।
ಉವಾಚ ಪ್ರೀತಿಮಾಪನ್ನೋ ಭದ್ರಶೀಲಂ ಮಹಾಮತಿಂ ॥ ೫೨ ॥

ಗಾಲವ ಉವಾಚ

ಕಸ್ತ್ವಂ ಪೂರ್ವಂ ಮಹಾಭಾಗ ಕಿಮುಕ್ತಂ ಚ ಯಮೇನ ತೇ ।
ಕಸ್ಯ ವಾ ಕೇನ ವಾ ಹೇತೋಸ್ತತ್ಸರ್ವಂ ವಕ್ತುಮರ್ಹಸಿ ॥ ೫೩ ॥

---

೪೯-೫೦. ನಿನ್ನ ಸಚ್ಚರಿತ್ರೆಯಿಂದ ಸಂತುಷ್ಟನಾಗಿ ಕೇಳಿರುವೆನು. ಅದನ್ನು ನೀನು ಹೇಳು ಎಂಬುದಾಗಿ ತಂದೆಯಿಂದ ಪ್ರಶ್ನೆಮಾಡಿಸಿಕೊಳ್ಳಲ್ಪಟ್ಟ, ಜನ್ಮಾಂತರ ಸ್ಮರಣೆಯುಳ್ಳ, ಪುಣ್ಯಾತ್ಮನಾದ ಭದ್ರಶೀಲಮುನಿವರ್ಯನು ಸಂತೋಷದಿಂದ ನಕ್ಕು ತಾನು ಅನುಭವಿಸಿದ ವೃತ್ತಾಂತವನ್ನು ಯಥಾವತ್ತಾಗಿ ತಂದೆಗೆ ತಿಳಿಸಿದನು.

೫೧. ಭದ್ರಶೀಲನು ಹೇಳಿದನು—ಮುನಿವರ್ಯನಾದ ತಂದೆಯೇ! ಕೇಳು ನಾನು ಜನ್ಮಾಂತರಸ್ಮರಣೆಯುಳ್ಳವನಾದುದರಿಂದ ಪೂರ್ವಜನ್ಮದಲ್ಲಿ ಯಮನಿಂದ ಉಕ್ತವಾದುದೆಲ್ಲವನ್ನೂ ತಿಳಿದಿರುತ್ತೇನೆ.

೫೨. ಈ ಮಾತನ್ನು ಕೇಳಿ ಧನ್ಯನಾದ ಗಾಲವನು ವಿಸ್ಮಯಗೊಂಡು ಸಂತೋಷವನ್ನು ಹೊಂದಿ, ಮಹಾಬುದ್ಧಿವಂತನಾದ ಭದ್ರಶೀಲನನ್ನು ಕುರಿತು ಮಾತನಾಡಿದನು.

೫೩. ಗಾಲವನು ಹೇಳಿದನು—ಪುಣ್ಯವಂತನೇ! ನೀನು ಪೂರ್ವಜನ್ಮದಲ್ಲಿ ಯಾರಾಗಿದ್ದೀ? ನಿನಗೆ ಯಮನು ಏನು ಹೇಳಿದನು? ಕಾರಣವೇನು? ತಪ್ಪೇನಾಯಿತು? ಅವುಗಳೆಲ್ಲವನ್ನೂ ಹೇಳು.

ಭದ್ರಶೀಲ ಉವಾಚ

ಅಹಮಾಸಂ ಪುರಾ ತಾತ ರಾಜಾ ಸೋಮಕುಲೋದ್ಭವಃ ।
ಧರ್ಮಕೀರ್ತಿರಿತಿ ಖ್ಯಾತೋ ದತ್ತಾತ್ರೇಯೇಣ ಶಾಸಿತಃ ॥ ೫೪ ॥

ನವವರ್ಷಸಹಸ್ರಾಣಿ ಮಹೀಂ ಕೃತ್ಸ್ನಾಮಪಾಲಯಂ ।
ಅಧರ್ಮಾಶ್ಚ ತಥಾ ಧರ್ಮಾ ಮಯಾ ತು ಬಹವಃ ಕೃತಾಃ ॥ ೫೫ ॥

ತತಃ ಶ್ರಿಯಾ ಪ್ರಮತ್ತೋಽಹಂ ಬಹ್ವಧರ್ಮಮಕಾರಿಷಂ ।
ಪಾಷಂಡಜನಸಂಸರ್ಗಾತ್ ಪಾಷಂಡಚರಿತೋಽಭವಂ ॥ ೫೬ ॥

ಪೂರ್ವಾರ್ಜಿತಾನಿ ಪುಣ್ಯಾನಿ ಮಯಾ ತು ಸುಬಹೂನ್ಯಪಿ ।
ಪಾಷಂಡೈರ್ಬೋಧಿತೋಽಹಂ ತು ವೇದಮಾರ್ಗಂ ಸಮತ್ಯಜಂ ॥ ೫೭ ॥

ಮಖಾಶ್ಚ ಸರ್ವೇ ವಿಧ್ವಸ್ತಾಃ ಕೂಟಯುಕ್ತಿವಿದಾ ಮಯಾ ।
ಅಧರ್ಮನಿರತಂ ಮಾಂ ತು ದೃಷ್ಟ್ವಾ ಮದ್ದೇಶಜಾಃ ಪ್ರಜಾಃ ॥ ೫೮ ॥

---

೫೪. ಭದ್ರಶೀಲನು ಹೇಳಿದನು—ತಂದೆಯೇ! ಪೂರ್ವದಲ್ಲಿ ನಾನು ಚಂದ್ರವಂಶೋತ್ಪನ್ನನಾದ ದೊರೆಯಾಗಿದ್ದೆನು, ದತ್ತಾತ್ರೇಯನಿಂದ ಆಜ್ಞಾಸ್ತನಾಗಿ ಧರ್ಮಕೀರ್ತಿಯೆಂದು ಪ್ರಸಿದ್ಧನಾಗಿದ್ದೆನು.

೫೫. ಸಕಲ ಭೂಮಂಡಲವನ್ನು ಒಂಭತ್ತುಸಾವಿರವರ್ಷಗಳ ಕಾಲ ರಕ್ಷಿಸಿದೆನು. ಬಹಳವಾದ ಅಧರ್ಮ ಮತ್ತು ಧರ್ಮಗಳು ನನ್ನಿಂದ ಮಾಡಲ್ಪಟ್ಟವು.

೫೬. ಅನಂತರ ಐಶ್ವರ್ಯದಿಂದ ಮತ್ತನಾಗಿ ನಾನು ಬಹಳ ಅಧರ್ಮವನ್ನು ಮಾಡಿದೆನು. ಪಾಷಂಡ ಜನಗಳ ಸಹವಾಸದಿಂದ ಅವರ ವ್ಯಾಪಾರವನ್ನೇ ಮಾಡುವವನಾದೆನು.

೫೭. ನಾನು ಪೂರ್ವಜನ್ಮಗಳಲ್ಲಿ ಬಹು ಪುಣ್ಯಗಳನ್ನು ಸಂಪಾದಿಸಿದ್ದೆನು, ಪಾಷಂಡಜನ ಸಹವಾಸದಿಂದ ಅವರ ಬೋಧನೆಯಿಂದ ವೇದವಿಹಿತ ಮಾರ್ಗವನ್ನು ಪರಿತ್ಯಾಗಮಾಡಿದೆನು.

೫೮-೫೯. ಮಿಥ್ಯಾಯುಕ್ತಿಜ್ಞಾನಿಯಾದ ನನ್ನಿಂದ ಸಕಲ ಯಜ್ಞಗಳೂ, ನಾಶಮಾಡಲ್ಪಟ್ಟವು. ಅಧರ್ಮಪರನಾದ ನನ್ನನ್ನು ನೋಡಿ ನನ್ನ ದೇಶದ

ಸದೈವ ದುಷ್ಕೃತಂ ಚಕ್ರುಃ ಷಷ್ಠಾಂಶಸ್ತತ್ರ ಮೇಽಭವತ್ ।
ಏವಂ ಪಾಪಸಮಾಚಾರೋ ವ್ಯಸನಾಭಿರತಃ ಸದಾ ॥ ೫೯ ॥

ಮೃಗಯಾಭಿರತೋ ಭೂತ್ವಾ ಹ್ಯೇಕದಾ ಪ್ರಾವಿಶಂ ವನಂ ।
ಸಸೈನ್ಯೋಽಹಂ ವನೇ ತತ್ರ ಹತ್ವಾ ಬಹುವಿಧಾನ್ ಮೃಗಾನ್ ॥ ೬೦ ॥

ಕ್ಷುತ್ತೃಟ್ಪರಿವೃತಃ ಶ್ರಾಂತೋ ರೇವಾತೀರಮುಪಾಗಮಂ ।
ರವಿತೀಕ್ಷ್ಣತಪಕ್ಲಾಂತೋ ರೇವಾಯಾಂ ಸ್ನಾನಮಾಚರಂ ॥ ೬೧ ॥

ಅದೃಷ್ಟಸೈನ್ಯ ಏಕಾಕೀ ಪೀಡ್ಯಮಾನಃ ಕ್ಷುಧಾ ಭೃಶಂ ।
ಸಮೇತಾಸ್ತತ್ರ ಯೇ ಕೇಚಿದ್ರೇವಾತೀರನಿವಾಸಿನಃ ॥ ೬೨ ॥

ಏಕಾದಶೀವ್ರತಪರಾ ಮಯಾ ದೃಷ್ಟಾ ನಿಶಾಮುಖೇ ।
ನಿರಾಹಾರಶ್ಚ ತತ್ರಾಹಮೇಕಾಕೀ ತಜ್ಜನೈಃ ಸಹ ॥ ೬೩ ॥

---

ಪ್ರಜೆಗಳೂ ಸಹ ಯಾವಾಗಲೂ ದುಷ್ಕೃತ್ಯಗಳನ್ನೇ ಮಾಡುತ್ತಿದ್ದರು. ಅದರಲ್ಲಿಯೂ ಸಹ ಆರನೆಯ ಒಂದುಭಾಗ ಪಾಪವು ನನಗೆ ಬಂದಿತು.

೫೯-೬೦. ಈರೀತಿಯಾಗಿ ಪಾಪವರ್ತನೆಯಿಂದ ಯಾವಾಗಲೂ ದುಃಖಪಡುತ್ತಿರುವಾಗ ಒಂದುದಿನ ಬೇಟೆಯಲ್ಲಿ ಅಭಿಲಾಷೆಯುಂಟಾಗಿ ಸೈನ್ಯದೊಡನೆ ಕಾಡಿಗೆ ಹೋದೆನು.

೬೦-೬೧. ಅಲ್ಲಿ ನಾನಾವಿಧವಾದ ಮೃಗಗಳನ್ನು ಸಂಹರಿಸಿ, ಹಸಿವು ಬಾಯಾರಿಕೆಗಳಿಂದ ಬಳಲಿ, ಆಯಾಸಪಟ್ಟವನಾಗಿ ರೇವಾನದಿಯ ತೀರಕ್ಕೆ ಬಂದೆನು. ತೀಕ್ಷ್ಣವಾದ ಬಿಸಲಿನ ತಾಪದಿಂದ ತಪ್ತನಾಗಿ ರೇವಾನದಿಯಲ್ಲಿ ಸ್ನಾನಮಾಡಿದೆನು.

೬೨-೬೩. ಸೈನ್ಯವನ್ನು ಕಾಣದೇ ಏಕಾಕಿಯಾಗಿ ಹೆಚ್ಚು ಹಸಿವಿನಿಂದ ಬಳಲಿದವನಾಗಿ, ಅಲ್ಲಿ ಸೇರಿದ್ದ, ರೇವಾನದಿಯ ತೀರವಾಸಿಗಳಾದ, ಏಕಾದಶೀ ವ್ರತನಿಷ್ಠರಾದ ಕೆಲವು ಜನರನ್ನು ಪ್ರದೋಷಕಾಲದಲ್ಲಿ ನೋಡಿದೆನು.

**ಜಾಗರಂ ಕೃತವಾಂಶ್ಚಾಪಿ ಸೇನಯಾ ರಹಿತೋ ನಿಶಿ ।**
**ಅಧ್ವಶ್ರಮಪರಿಶ್ರಾಂತಃ ಕ್ಷುತ್ಪಿಪಾಸಾಪ್ರಪೀಡಿತಃ ॥ ೬೪ ॥**

**ತತ್ರೈವ ಜಾಗರಾಂತೇಽಹಂ ತಾತ ಪಂಚತ್ವಮಾಗತಃ ।**
**ತತೋ ಯಮಭಟೈರ್ಬದ್ಧೋ ಮಹಾದಂಷ್ಟ್ರಾಭಯಂಕರೈಃ ॥ ೬೫ ॥**

**ಅನೇಕಕ್ಲೇಶಸಂಪನ್ನಮಾರ್ಗೇಣಾಪ್ತೋ ಯಮಾಂತಿಕಂ ।**
**ದಂಷ್ಟ್ರಾಕರಾಲವದನಮಪಶ್ಯಂ ಸಮವರ್ತಿನಂ ॥ ೬೬ ॥**

**ಅಥ ಕಾಲಶ್ಚಿತ್ರಗುಪ್ತಮಾಹೂಯೇದಮಭಾಷತ ।**
**ಅಸ್ಯ ಶಿಕ್ಷಾವಿಧಾನಂ ಚ ಯಥಾವದ್ವದ ಪಂಡಿತ ॥ ೬೭ ॥**

**ಏವಮುಕ್ತಶ್ಚಿತ್ರಗುಪ್ತೋ ಧರ್ಮರಾಜೇನ ಸತ್ತಮ ।**
**ಚಿರಂ ವಿಚಾರಯಾಮಾಸ ಪುನಶ್ಚೇದಮಭಾಷತ ॥ ೬೮ ॥**

---

೬೩-೬೪. ನಿರಾಹಾರನಾಗಿದ್ದ ನಾನು ಅಲ್ಲಿ ಏಕಾಕಿಯಾಗಿ ಆ ಜನನಳೊಡನೆ ಸೇರಿ, ಸೈನ್ಯವಿರಹಿತನಾಗಿ ಆ ರಾತ್ರಿಯೆಲ್ಲಾ ಜಾಗರಣೆಯನ್ನು ಮಾಡಿದನು.

೬೪-೬೫. ತಂದೆಯೇ! ಮಾರ್ಗಶ್ರಮದಿಂದ ಆಯಾಸಪಟ್ಟು, ಹಸಿವು ಬಾಯಾರಿಕೆಗಳಿಂದ ಪೀಡಿತನಾದ ನಾನು ಜಾಗರಣೆಯಾದ ಮೇಲೆ ಅಲ್ಲಿಯೇ ಮರಣಹೊಂದಿದೆನು.

೬೫-೬೬. ತರುವಾಯ ದೊಡ್ಡ ಕೋರೆ ಹಲ್ಲುಗಳಿಂದ ಭಯಂಕರರಾದ ಯಮಭಟರು ನನ್ನನ್ನು ಹಿಡಿದುಕೊಂಡರು. ಅನಂತರ ಬಹು ಕ್ಲೇಶಯುತವಾದ ಮಾರ್ಗದಿಂದ ಯಮನ ಸಮೀಪಕ್ಕೆ ಬಂದು ಕೋರೆಹಲ್ಲುಗಳಿಂದ ಕೂಡಿದ ಕರಾಳಮುಖನಾದ ಯಮನನ್ನು ನೋಡಿದೆನು.

೬೭. ಅನಂತರ ಯಮನು ಚಿತ್ರಗುಪ್ತನನ್ನು ಕರೆದು ಪಂಡಿತನೇ! ಇವನಿಗೆ ಶಿಕ್ಷೆಯ ವಿಧಾನವನ್ನು ಯಥಾವತ್ತಾಗಿ ಹೇಳೆಂದು ಕೇಳಿದನು.

೬೮. ಸಾಧೂತ್ತಮ! ಧರ್ಮರಾಜನಿಂದ ಪ್ರಶ್ನಿಸಲ್ಪಟ್ಟ ಚಿತ್ರಗುಪ್ತನು ಬಹುಹೊತ್ತು ಯೋಚಿಸಿ, ಹೀಗೆ ಹೇಳಿದನು.

ಅಸೌ ಪಾಪರತಃ ಸತ್ಯಂ ತಥಾऽಪಿ ಶ್ರುಣು ಧರ್ಮಪ ।
ಏಕಾದಶ್ಯಾಂ ನಿರಾಹಾರಃ ಸರ್ವಪಾಪೈಃ ಪ್ರಮುಚ್ಯತೇ ॥ ೬೯ ॥

ಏಷ ರೇವಾತಟೇ ರಮ್ಯೇ ನಿರಾಹಾರೋ ಹರೇರ್ದಿನೇ ।
ಜಾಗರಂ ಚೋಪವಾಸಂ ಚ ಕೃತ್ವಾ ನಿಷ್ಪಾಪತಾಂ ಗತಃ ॥ ೭೦ ॥

ಯಾನಿ ಕಾನಿ ಚ ಪಾಪಾನಿ ಕೃತಾನಿ ಸುಬಹೂನಿ ಚ ।
ತಾನಿ ಸರ್ವಾಣಿ ನಷ್ಟಾನಿ ಹ್ಯುಪವಾಸಪ್ರಭಾವತಃ ॥ ೭೧ ॥

ಏವಮುಕ್ತೋ ಧರ್ಮರಾಜಶ್ಚಿತ್ರಗುಪ್ತೇನ ಧೀಮತಾ ।
ನನಾಮ ದಂಡವದ್ಭೂಮೌ ಮಮಾಗ್ರೇ ಸೋऽನುಕಂಪಿತಃ ॥ ೭೨ ॥

ಪೂಜಯಾಮಾಸ ಮಾಂ ತತ್ರ ಭಕ್ತಿಭಾವೇನ ಧರ್ಮರಾಟ್ ।
ತತಶ್ಚ ಸ್ವಭಟಾನ್ಸರ್ವಾನಾಹೂಯೇದಮುವಾಚ ಹ ॥ ೭೩ ॥

---

೬೯. ಧರ್ಮರಾಜ ! ಇವನು ಪಾಪಿಯಾಗಿರುವುದು ನಿಜ, ಆದರೆ ಏಕಾದಶಿಯ ದಿನ ನಿರಾಹಾರಮಾಡಿದವರು ಸಕಲಪಾಪಗಳನ್ನೂ ಕಳೆದುಕೊಳ್ಳುವರು.

೭೦. ಈತನು ಮನೋಹರವಾದ ರೇವಾನದಿಯ ತೀರದಲ್ಲಿ "ಹರಿದಿನ" ಎಂದರೆ ಏಕಾದಶಿಯ ದಿನ ಉಪವಾಸ ಮತ್ತು ಜಾಗರಗಳನ್ನು ಮಾಡಿ ಪಾಪಗಳನ್ನು ಪರಿಹರಿಸಿಕೊಂಡಿರುವನು.

೭೧. ಇವನು ಮಾಡಿದ್ದ ಅತ್ಯಧಿಕವಾದ ಪಾಪಗಳೆಲ್ಲವೂ ಏಕಾದಶೀ ಉಪವಾಸದ ಪ್ರಭಾವದಿಂದ ನಶಿಸಿಹೋಗಿವೆ.

೭೨. ಜ್ಞಾನಿಯಾದ ಚಿತ್ರಗುಪ್ತನು ಈಪ್ರಕಾರ ಹೇಳಿದಮೇಲೆ ಧರ್ಮರಾಜನು ಪಶ್ಚಾತ್ತಾಪಪಟ್ಟು ನನ್ನೆದುರಿಗೆ ಬಂದು ದಂಡಪ್ರಣಾಮ ಮಾಡಿದನು.

೭೩. ಧರ್ಮರಾಜನು ಅಲ್ಲೇ ಭಕ್ತಿಯಿಂದ ನನ್ನನ್ನು ಪೂಜಿಸಿದನು. ತರುವಾಯ ತನ್ನ ಭಂಟರನ್ನು ಕರೆದು ಈರೀತಿ ಹೇಳಿದನು.

## ಧರ್ಮರಾಜ ಉವಾಚ

ಶೃಣುಧ್ವಂ ಮದ್ವಚೋ ದೂತಾ ಹಿತಂ ವಕ್ಷ್ಯಾಮ್ಯನುತ್ತಮಂ ।
ಧರ್ಮಮಾರ್ಗರತಾನ್ಮರ್ತ್ಯಾನ್ನಾನಯಧ್ವಂ ಮಮಾಂತಿಕಂ ॥ ೭೪ ॥

ನಾರಾಯಣಾಚ್ಯುತ ಜನಾರ್ದನ ಕೃಷ್ಣ ವಿಷ್ಣೋ ।
ಪದ್ಮೇಶ ಪದ್ಮಜಪಿತಃ ಶಿವ ಶಂಕರೇತಿ ॥ ೭೫ ॥

ನಿತ್ಯಂ ವದಂತ್ಯಖಿಲಲೋಕಹಿತಾಃ ಪ್ರಶಾಂತಾಃ ।
ದೂರಾದ್ಭಟಾಸ್ತ್ಯಜತ ತನ್ನ ಮಮಾಸ್ತಿ ಶಿಕ್ಷಾ ॥ ೭೬ ॥

ನಾರಾಯಣಾರ್ಪಿತ ಕೃತಾನ್ಹರಿಭಕ್ತಿಭಾಜಃ
ಸ್ವಾಚಾರಮಾರ್ಗನಿರತಾನ್ ಗುರುಸೇವಕಾಂಶ್ಚ ।
ಸತ್ಪಾತ್ರದಾನನಿರತಾಂಶ್ಚ ಸದೀನಪಾಲಾನ್
ದೂತಾಸ್ತ್ಯಜಧ್ವಮನಿಶಂ ಹರಿನಾಮಸಕ್ತಾನ್ ॥ ೭೭ ॥

---

೭೪. ಧರ್ಮರಾಜನು ಹೇಳಿದನು—ದೂತರೇ! ನಿಮಗೆ ಉತ್ತಮವಾದ ಹಿತವನ್ನು ಹೇಳುತ್ತೇನೆ ಕೇಳಿ, ಧರ್ಮಮಾರ್ಗದಲ್ಲಿ ನಿರತರಾದ ಮನುಷ್ಯರನ್ನು ನನ್ನ ಬಳಿಗೆ ಕರತರಬೇಡಿ.

೭೫-೭೬. ದೂತರೇ ! ನಾರಾಯಣ, ಅಚ್ಯುತ, ಜನಾರ್ದನ, ಕೃಷ್ಣ, ವಿಷ್ಣು, ಲಕ್ಷ್ಮೀಪತಿ, ಚತುರ್ಮುಖಜನಕ, ಮಂಗಳಪ್ರದ, ಸುಖಪ್ರದ ಎಂಬು ದಾಗಿ ಯಾವಾಗಲೂ ಭಗವನ್ನಾಮಸ್ಮರಣೆಮಾಡುತ್ತಿರುವ, ಲೋಕೋಪಕಾರಿ ಗಳಾದ, ಶಾಂತಮನಸ್ಕರಾದ, ವಿಷ್ಣುಭಕ್ತರನ್ನು ದೂರದಿಂದಲೇ ಬಿಟ್ಟುಬಿಡಿ. ನನಗೆ ಅಂತಹವರ ವಿಷಯದಲ್ಲಿ ಶಿಕ್ಷಿಸುವ ಅಧಿಕಾರವಿಲ್ಲ.

೭೭. ದೂತರೇ ! ತಾವು ಮಾಡಿದ ಕರ್ಮಗಳನ್ನು ನಾರಾಯಣನಿಗೆ ಸಮರ್ಪಿಸುತ್ತಿರುವವರು, ಹರಿಭಕ್ತಿಯುಳ್ಳವರು, ವರ್ಣಾಶ್ರಮವಿಹಿತಧರ್ಮಾನು ಷ್ಠಾನಪರರು, ಗುರುಗಳನ್ನು ಸೇವಿಸುವವರು, ಸತ್ಪಾತ್ರದಲ್ಲಿ ದಾನಮಾಡುವವರು, ದೀನರನ್ನು ರಕ್ಷಿಸುವವರು, ಯಾವಾಗಲೂ ಹರಿನಾಮಕೀರ್ತನನಿರತರೂ ಆಗಿರು ವವರನ್ನು ಬಿಟ್ಟುಬಿಡಿ.

ಪಾಷಂಡಸಂಗರಹಿತಾನ್ದ್ವಿಜಭಕ್ತಿನಿಷ್ಠಾನ್
ಸತ್ಸಂಗಲೋಲುಪತರಾಂಶ್ಚ ತಥಾತಿಥೇಯಾನ್ ।
ಶಂಭೌ ಹರೌ ಚ ಸಮಬುದ್ಧಿಮತಸ್ತಥೈವ
ದೂತಾಸ್ತ್ಯಜಧ್ವಮುಪಕಾರಪರಾನ್ಜನಾನಾಂ ॥ ೭೮ ॥

ಯೇ ವರ್ಜಿತಾ ಹರಿಕಥಾಮೃತಸೇವನೈಶ್ಚ
ನಾರಾಯಣಸ್ಮೃತಿಪರಾಯಣ ಮಾನಸೈಶ್ಚ ।
ವಿಪ್ರೇಂದ್ರಪಾದಜಲಸೇಚನತೋಽಪ್ರಹೃಷ್ಟಾನ್
ತಾನ್ಪಾಪಿನೋ ಮಮ ಭಟಾ ಗೃಹಮಾನಯಧ್ವಂ ॥ ೭೯ ॥

ಯೇ ಮಾತೃತಾತಪರಿಭರ್ತ್ಸನಶೀಲಿನಶ್ಚ ।
ಲೋಕದ್ವಿಷೋ ಹಿತಜನಾಹಿತಕರ್ಮಿಣಶ್ಚ ।
ದೇವಸ್ವಲೋಭನಿರತಾನ್ಜನನಾಶಕರ್ತ್ರ್ಯಾನ್
ಅತ್ರಾನಯಧ್ವಮಪರಾಧಪರಾಂಶ್ಚ ದೂತಾಃ ॥ ೮೦ ॥

---

೭೮. ದೂತರೇ! ಪಾಷಂಡಜನ ಸಹವಾಸಮಾಡದಿರುವವರು, ದ್ವಿಜ ಭಕ್ತಿಮಾಡುವವರು, ಸಜ್ಜನಸಹವಾಸದಲ್ಲಿ ಆಶೆಯುಳ್ಳವರು, ಅತಿಥಿಸತ್ಕಾರ ಮಾಡುವವರು ಮತ್ತು ಈಶ್ವರ, ಹರಿ ಇವರುಗಳಲ್ಲಿ ಯೋಗ್ಯತಾಗುಣವಾಗಿ ಭಕ್ತಿಮಾಡುವವರು ಮತ್ತು ಜನಗಳಿಗೆ ಉಪಕಾರಮಾಡುವವರೂ ಆಗಿರುವವರನ್ನು ನನ್ನಲ್ಲಿಗೆ ಕರೆತರಬೇಡಿ, ಬಿಟ್ಟು ಬಿಡಿ.

೭೯. ದೂತರೇ! ಹರಿಕಥೆಯೆಂಬ ಅಮೃತವನ್ನು ಸೇವಿಸದಿರುವವರು ನಾರಾಯಣಧ್ಯಾನಪರವಾದ ಮನಸ್ಸಿಲ್ಲದವರು, ಬ್ರಾಹ್ಮಣಶ್ರೇಷ್ಠರ ಪಾದೋದಕ ಪ್ರೋಕ್ಷಣೆಯಿಂದ ಸಂತೋಷಪಡದಿರುವವರೂ ಆಗಿರುವ ಆ ಪಾಪಿಷ್ಠರನ್ನು ನನ್ನ ಬಳಿಗೆ ಕರೆತನ್ನಿರಿ.

೮೦. ದೂತರೇ! ತಾಯಿತಂದೆಗಳನ್ನು ಗದರಿಸುವವರು, ಲೋಕವಿದ್ವೇಷಿಗಳು, ಉಪಕಾರಿಗಳಿಗೆ ಅಪಕಾರಮಾಡುವವರು, ದೇವರ ಸ್ವತ್ತಿಗೆ ಆಶೆ ಪಡುವವರು, ಜನಗಳನ್ನು ನಾಶಮಾಡುವವರು, ಮತ್ತು ತಪ್ಪುಮಾಡುವವರೂ ಆಗಿರುವವರನ್ನು ಇಲ್ಲಿಗೆ ಕರೆತನ್ನಿರಿ.

ಏಕಾದಶೀವ್ರತಪರಾಙ್ಮುಖಮುಗ್ರಶೀಲಂ
ಲೋಕಾಪವಾದನಿರತಂ ಪರನಿಂದಕಂ ಚ ।
ಗ್ರಾಮಸ್ಯ ನಾಶಕರಮುತ್ತಮವೈರಯುಕ್ತಂ
ದೂತಾಃ ಸಮಾನಯತ ವಿಪ್ರಧನೇಷು ಲುಬ್ಧಂ　　　　॥ ೮೧ ॥

ಯೇ ವಿಷ್ಣುಭಕ್ತಿವಿಮುಖಾಃ ಪ್ರಣಮಂತಿ ನೈವ
ನಾರಾಯಣಂ ಹಿ ಶರಣಾಗತಪಾಲಕಂ ಚ ।
ವಿಷ್ಣ್ವಾಲಯಂ ಚ ನ ಹಿ ಯಾಂತಿ ನರಾಃ ಸುಮೂರ್ಖಾಃ
ತಾನಾನಯಧ್ವಮತಿಪಾಪರತಾನ್ಪ್ರಸಹ್ಯ　　　　॥ ೮೨ ॥

ಏವಂ ಶ್ರುತಂ ಯದಾ ತತ್ರ ಯಮೇನ ಪರಿಭಾಷಿತಂ ।
ಮಯಾನುತಾಪದಗ್ಧೇನ ಸ್ಮೃತಂ ತತ್ಕರ್ಮ ನಿಂದಿತಂ　　　　॥ ೮೩ ॥

---

೮೧. ದೂತರೇ! ಏಕಾದಶಿವ್ರತವನ್ನನುಷ್ಠಾನ ಮಾಡದಿರುವವರು, ಕಠಿನಸ್ವಭಾವವುಳ್ಳವರು, ಲೋಕಾಪವಾದ ಭಾಗಿಗಳು, ಇತರರನ್ನು ದೂಷಿಸುವವರು, ಗ್ರಾಮಗಳನ್ನು ಹಾಳುಮಾಡುವವರು, ಉತ್ಕೃಷ್ಟ ದ್ವೇಷಿಗಳು, ಬ್ರಾಹ್ಮಣದ್ರವ್ಯವನ್ನು ಆಶಿಸುವವರೂ, ಆಗಿರುವವರನ್ನು ನನ್ನ ಬಳಿಗೆ ಕರೆತರಬೇಕು.

೮೨. ದೂತರೇ! ವಿಷ್ಣುಭಕ್ತಿರಹಿತರಾಗಿ ಶರಣಾಗತರಕ್ಷಕನಾದ ನಾರಾಯಣನನ್ನು ಯಾವಾಗಲೂ ನಮಸ್ಕರಿಸದಿರುವವರು, ಅತಿಮೂರ್ಖತನದಿಂದ ವಿಷ್ಣುದೇವಾಲಯಕ್ಕೆ ಹೋಗದಿರುವವರು, ಮತ್ತು ದುಷ್ಕೃತ್ಯನಿಷ್ಠರೂ ಆಗಿರುವವರನ್ನು ಹಿಡಿದು ಕರೆತನ್ನಿರಿ.

೮೩. ಅಲ್ಲಿ ಈಪ್ರಕಾರ ಯಮನು ಹೇಳಿದಕೂಡಲೇ ಅದನ್ನು ಕೇಳಿ ಪಶ್ಚಾತ್ತಾಪವುಂಟಾಗಿ ನಾನು ಮಾಡಿದ್ದ ನಿಷಿದ್ಧ ಕರ್ಮಗಳೆಲ್ಲವೂ ಜ್ಞಾಪಕಕ್ಕೆ ಬಂದವು.

ಅಸತ್ಕರ್ಮಾನುತಾಪೇನ ಸದ್ಧರ್ಮಶ್ರವಣೇನ ಚ ।
ತತ್ರೈವ ಸರ್ವಪಾಪಾನಿ ನಿಃಶೇಷಾಣಿ ಗತಾನಿ ಮೇ ॥ ೮೪ ॥

ಪಾಪಶೇಷಾದ್ವಿನಿರ್ಮುಕ್ತಂ ಹರಿಸಾರೂಪ್ಯತಾಂ ಗತಂ ।
ಸಹಸ್ರಸೂರ್ಯಸಂಕಾಶಂ ಪ್ರಣನಾಮ ಯಮಶ್ಚ ಮಾಂ ॥ ೮೫ ॥

ಏವಂ ದೃಷ್ಟ್ವಾ ವಿಸ್ಮಿತಾಸ್ತೇ ಯಮದೂತಾ ಭಯೋತ್ಕಟಾಃ ।
ವಿಶ್ವಾಸಂ ಪರಮಂ ಚಕ್ರುರ್ಯಮೇನ ಪರಿಭಾಷಿತೇ ॥ ೮೬ ॥

ತತಃ ಸಂಪೂಜ್ಯ ಮಾಂ ಕಾಲೋ ವಿಮಾನಶತಸಂಕುಲಂ ।
ಸದ್ಯಃ ಪಂಪ್ರೇಷಯಾಮಾಸ ತದ್ವಿಷ್ಣೋಃ ಪರಮಂ ಪದಂ ॥ ೮೭ ॥

ವಿಮಾನಕೋಟಿಭಿಃ ಸಾರ್ಧಂ ಸರ್ವಭೋಗಸಮನ್ವಿತೈಃ ।
ಕರ್ಮಣಾ ತೇನ ವಿಪ್ರರ್ಷೇ ವಿಷ್ಣುಲೋಕೇ ಮಯೋಷಿತಂ ॥ ೮೮ ॥

---

೮೪. ದುಷ್ಕೃತ್ಯಗಳ ವಿಷಯದಲ್ಲಿ ಪಶ್ಚಾತ್ತಾಪಪಟ್ಟುದರಿಂದಲೂ ಸತ್ಕರ್ಮಗಳನ್ನು ಶ್ರವಣ ಮಾಡಿದುದರಿಂದಲೂ, ಅಲ್ಲಿಯೇ ನನ್ನಪಾಪಗಳೆಲ್ಲವೂ ನಿಶ್ಶೇಷವಾಗಿ ಹೋದುವು.

೮೫. ಉಳಿದ ಪಾಪಗಳನ್ನೆಲ್ಲಾ ಕಳೆದುಕೊಂಡು ವಿಷ್ಣುಸಾರೂಪ್ಯವನ್ನು ಹೊಂದಿದ ಸಾವಿರ ಸೂರ್ಯರಂತೆ ಪ್ರಕಾಶಮಾನನಾದ, ಯಮನು ನನಗೆ ನಮಸ್ಕರಿಸಿದನು.

೮೬. ಅದನ್ನು ನೋಡಿ ಆಶ್ಚರ್ಯಗೊಂಡ ಆ ಯಮದೂತರು ಭಯಚಕಿತರಾಗಿ, ಯಮನು ಹೇಳಿದಮೇಲೆ ಉತ್ತಮವಾದ ಭಕ್ತಿಯನ್ನು ಪ್ರದರ್ಶಿಸಿದರು.

೮೭. ತರುವಾಯ ಯಮನು ನನ್ನನ್ನು ಸತ್ಕರಿಸಿ, ತಕ್ಷಣವೇ ನನ್ನನ್ನು ನೂರು ವಿಮಾನಗಳೊಡನೆ ವಿಷ್ಣುವಿನ ಪರಮಪದಕ್ಕೆ ಕಳುಹಿಸಿದನು.

೮೮. ವಿಪ್ರಶ್ರೇಷ್ಠನೇ! ಆ ಸತ್ಕರ್ಮದಿಂದ ಸಕಲ ಭೋಗಸಹಿತವಾದ ಕೋಟ್ಯಂತರ ವಿಮಾನಗಳಿಂದ ಕೂಡಿ ವಿಷ್ಣುಲೋಕದಲ್ಲಿ ವಾಸಮಾಡಿದೆನು.

**ಕಲ್ಪಕೋಟಿಸಹಸ್ರಾಣಿ ಕಲ್ಪಕೋಟಿ ಶತಾನಿ ಚ ।**
**ಸ್ಥಿತ್ವಾ ವಿಷ್ಣುಪದೇ ಪಶ್ಚಾದಿಂದ್ರಲೋಕಮುಪಾಗಮಂ ॥ ೮೯ ॥**

**ತತ್ರಾಪಿ ಸರ್ವಭೋಗಾಢ್ಯಃ ಸರ್ವದೇವನಮಸ್ಕೃತಃ ।**
**ತಾವತ್ಕಾಲಂ ದಿವಿ ಸ್ಥಿತ್ವಾ ತತೋ ಭೂಮಿಮುಪಾಗತಃ ॥ ೯೦ ॥**

**ಅತ್ರಾಪಿ ವಿಷ್ಣುಭಕ್ತಾನಾಂ ಜಾತೋಽಹಂ ಭವತಾಂ ಕುಲೇ ।**
**ಜಾತಿಸ್ಮರತ್ವಾಜ್ಜಾನಾಮಿ ಸರ್ವಮೇತನ್ಮುನೀಶ್ವರ ॥ ೯೧ ॥**

**ತಸ್ಮಾದ್ವಿಷ್ಣ್ವರ್ಚನೋದ್ಯೋಗಂ ಕರೋಮಿ ಸಹ ಬಾಲಕೈಃ ।**
**ಏಕಾದಶೀವ್ರತಮಿದಮಿತಿ ನ ಜ್ಞಾತವಾನ್ಪುರಾ ॥ ೯೨ ॥**

**ಜಾತಿಸ್ಮೃತಪ್ರಭಾವೇಣ ತದ್‌ಜ್ಞಾತಂ ಸಾಂಪ್ರತಂ ಮಯಾ ।**
**ಅತ್ರ ಸ್ವೇನಾಪಿ ಯತ್ಕರ್ಮ ಕೃತಂ ತಸ್ಯ ಫಲಂ ತ್ವಿದಂ ॥ ೯೩ ॥**

---

೮೯. ಸಾವಿರ ಕೋಟಿ ಕಲ್ಪಗಳು ಮತ್ತು ನೂರಾರು ಕೋಟಿ ಕಲ್ಪಗಳ ಪರ್ಯಂತರ ವಿಷ್ಣುಲೋಕದಲ್ಲಿದ್ದು ಅನಂತರ ಇಂದ್ರ ಲೋಕಕ್ಕೆ ಬಂದೆನು.

೯೦. ಆ ಇಂದ್ರಲೋಕದಲ್ಲಿಯೂ ಸಹ ಸಕಲ ಭೋಗಗಳಿಂದ ಪೂರ್ಣನಾಗ, ಸಕಲ ದೇವತೆಗಳಿಂದಲೂ ಸತ್ಕೃತನಾಗುತ್ತಾ ವಿಷ್ಣುಲೋಕದಲ್ಲಿ ವಾಸ ಮಾಡಿದಷ್ಟು ಕಾಲ ಅಲ್ಲಿದ್ದು ಅನಂತರ ಭೂಲೋಕಕ್ಕೆ ಬಂದೆನು.

೯೧. ಇಲ್ಲಿಯೂ ಸಹ ವಿಷ್ಣುಭಕ್ತರಾದ ನಿಮ್ಮ ಕುಲದಲ್ಲಿ ಹುಟ್ಟಿದೆನು. ಮುನೀಶ್ವರ! ನಾನು ಜಾತಿಸ್ಮರನಾದುದರಿಂದ ಜನ್ಮಾಂತರವೃತ್ತಾಂತವನ್ನೆಲ್ಲಾ ತಿಳಿದಿರುವೆನು.

೯೨. ಆದಕಾರಣ ಬಾಲಕರೊಡನೆ ವಿಷ್ಣುಪೂಜೋದ್ಯೋಗವನ್ನು ಮಾಡುತ್ತಿದ್ದೇನೆ. ಪೂರ್ವದಲ್ಲಿ ಏಕಾದಶೀ ವ್ರತವು ಇಷ್ಟುಮಹಿಮೆಯುಳ್ಳದೆಂದು ನನಗೆ ತಿಳದಿರಲಿಲ್ಲಾ.

೯೩. ಜನ್ಮಸ್ಮರಣೆಪ್ರಭಾವದಿಂದ ಈಗ ನನಗೆ ತಿಳಿಯಿತು. ಇಲ್ಲಿ ನಾನು ಮಾಡಿದ ಕರ್ಮಫಲವೇ ಇದು.

ಏಕಾದಶೀವ್ರತಂ ಭಕ್ತ್ಯಾ ಕುರ್ವತಾಂ ಕಿಮುತ ಪ್ರಭೋ ।
ತಸ್ಮಾಚ್ಚರಿಷ್ಯೇ ವಿಪ್ರೇಂದ್ರ ಶುಭಮೇಕಾದಶೀವ್ರತಂ ॥ ೯೪ ॥

ವಿಷ್ಣುಪೂಜಾಂ ಚಾಹರಹಃ ಪರಮುಸ್ಥಾನಕಾಂಕ್ಷಯಾ ।
ಏಕಾದಶೀವ್ರತಂ ಯತ್ತು ಕುರ್ವಂತಿ ಶ್ರದ್ಧಯಾ ನರಾಃ ॥ ೯೫ ॥

ತೇಷಾಂ ತು ವಿಷ್ಣುಭವನಂ ಪರಮಾನಂದದಾಯಕಂ ।
ಏವಂ ಪುತ್ರವಚಃ ಶ್ರುತ್ವಾ ಸಂತುಷ್ಟೋ ಗಾಲವೋ ಮುನಿಃ ॥ ೯೬ ॥

ಅವಾಪ ಪರಮಾಂ ತುಷ್ಟಿಂ ಮನಸಾ ಚಾತಿಹರ್ಷಿತಃ ।
ಮಜ್ಜನ್ಮ ಸಫಲಂ ಜಾತಂ ಮದ್ವಂಶಃ ಪಾವನೀಕೃತಃ ॥ ೯೭ ॥

ಯತಸ್ತ್ವಂ ಮದ್ಗೃಹೇ ಜಾತೋ ವಿಷ್ಣುಭಕ್ತಿಪರಾಯಣಃ ।
ಇತಿ ಸಂತುಷ್ಟಚಿತ್ತಸ್ತು ತಸ್ಯ ಪುತ್ರಸ್ಯ ಕರ್ಮಣಾ ॥ ೯೮ ॥

---

೯೪. ಸ್ವಾಮಿಯೇ! ಭಕ್ತಿಯಿಂದ ಏಕಾದಶೀವ್ರತವನ್ನು ಆಚರಿಸುವವರಿಗೆ ಯಾವುದು ತಾನೇ ಅಸಾಧ್ಯವು! ಆದಕಾರಣ ಬ್ರಾಹ್ಮಣಶ್ರೇಷ್ಠನೇ! ಶ್ರೇಯಸ್ಕರವಾದ ಏಕಾದಶೀ ವ್ರತವನ್ನು ಮಾಡುತ್ತೇನೆ.

೯೫-೯೭. ಪ್ರತಿದಿನವೂ ಉತ್ತಮಲೋಕಾಪೇಕ್ಷೆಯಿಂದ ವಿಷ್ಣುಪೂಜೆಯನ್ನು ಮತ್ತು ಏಕಾದಶೀವ್ರತವನ್ನೂ ಆದರದಿಂದ ಮಾಡುವ ಮನುಷ್ಯರಿಗೆ ಉತ್ಕೃಷ್ಟಾನಂದದಾಯಕವಾದ ವಿಷ್ಣುಲೋಕವು ಲಭಿಸುತ್ತದೆ ಎಂದು ಹೇಳಿವ ಮಗನ ಮಾತನ್ನು ಕೇಳಿ ಸಂತೋಷಪಟ್ಟು ಗಾಲವಋಷಿಯು ಮನಸ್ಸಿನಲ್ಲಿಯೂ ಅತ್ಯಂತ ಸಂತೋಷಗೊಂಡು, ಆತ್ಯಂತಿಕ ತೃಪ್ತಿಯನ್ನು ಹೊಂದಿದನು.

೯೭-೯೯. ವಿಷ್ಣುಭಕ್ತಿನಿರತನಾದ ನಿನ್ನಂತಹವನು ನಮ್ಮ ಮನೆಯಲ್ಲಿ ಜನಿಸಿದುದರಿಂದ ನನ್ನ ಜನ್ಮವು ಸಫಲವಾಯಿತು, ನನ್ನ ವಂಶವೂ ಪವಿತ್ರವಾಯಿತು ಎಂದು ಸಂತೋಷಚಿತ್ತನಾಗಿ ಆ ಗಾಲವಮುನಿಯು ಮಗನ ಕರ್ಮದಿಂದ ವಿಷ್ಣುಪೂಜೆಯ ವಿಧಾನವನ್ನು ಯಥಾವತ್ತಾಗಿ ತಿಳಿದನು. ಮುನಿವರ! ಈರೀತಿ

**ಹರಿಪೂಜಾವಿಧಾನಂ ಚ ಯಥಾವತ್ಸಮಬೋಧಯತ್ ।**
**ಇತ್ಯೇತತ್ತೇ ಮುನಿಶ್ರೇಷ್ಠ ಯಥಾವತ್ಕಥಿತಂ ಮಯಾ ।**
**ಸಂಕೋಚವಿಸ್ತರಾಭ್ಯಾಂ ಚ ಕಿಮನ್ಯಚ್ಛ್ರೋತುಮಿಚ್ಛಸಿ ॥ ೯೯ ॥**

**ಇತಿ ಶ್ರೀ ಬೃಹನ್ನಾರದೀಯಪುರಾಣೇ ಪೂರ್ವಭಾಗೇ ಪ್ರಥಮಪಾದೇ ವ್ರತಾಖ್ಯಾನೇ ಏಕಾದಶೀವ್ರತಮಹಿಮಾನುವರ್ಣನಂ ನಾಮ ತ್ರಯೋವಿಂಶೋಽಧ್ಯಾಯಃ**

---

ಯಾದ ಸಚ್ಚರಿತ್ರೆಯನ್ನು ಯಥಾರ್ಥವಾಗಿ ನಾನು ನಿನಗೆ ಹೇಳಿರುವೆನು. ಸಂಕೋಚವಾಗಿ ಅಥವಾ ವಿಸ್ತಾರವಾಗಿ ಇನ್ನಾವುದನ್ನು ಕೇಳಲು ಅಪೇಕ್ಷಿಸುವೆ ತಿಳಿಸು ಎಂಬುದಾಗಿ ಸನಕನು ನಾರದನಿಗೆ ಹೇಳಿದನು.

ಇಂತು ಶ್ರೀಬೃಹನ್ನಾರದೀಯಪುರಾಣದಲ್ಲಿ ಪ್ರಥಮಪಾದದೊಳು ವ್ರತಾಖ್ಯಾನ ಪ್ರಕರಣದಲ್ಲಿ ಏಕಾದಶೀವ್ರತದ ಮಾಹಾತ್ಮ್ಯೆಯ ಕಥನವೆಂಬ ಇಪ್ಪತ್ತು ಮೂರನೆಯ ಅಧ್ಯಾಯವು ಮುಗಿದುದು.

## ಕಥಾಸಾರಾಂಶ

ಈ ಅಧ್ಯಾಯದಲ್ಲಿ ಏಕಾದಶೀವ್ರತದ ಮಹಿಮೆಯು ನಿರೂಪಿಸಲ್ಪಟ್ಟಿದೆ. ಏಕಾದಶೀವ್ರತವು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಂಬ ಚತುರ್ವರ್ಣದವರಿಗೂ ಕರ್ತವ್ಯವು. ದಶಮೀ ದ್ವಾದಶೀ ದಿನಗಳಲ್ಲಿ ಒಪ್ಪತ್ತೂಟಮಾಡಿ ಏಕಾದಶಿಯದಿನ ನಿರಾಹಾರದಿಂದಿದ್ದು ರಾತ್ರಿ ಜಾಗರಣೆಮಾಡಿ ದ್ವಾದಶೀ ಪಾರಣೆಯಾದ ನಂತರ ಆ ವ್ರತವನ್ನು ಭಗವಂತನಿಗೆ ಸಮರ್ಪಿಸಬೇಕು ಮುಂತಾಗಿ ಅದರ ವಿಧಾನವನ್ನು ಹೇಳಿ, ಆ ಪ್ರಸಂಗದಲ್ಲಿ ಗಾಲವಮುನಿ ಅವನ ಮಗನಾದ ಭದ್ರಶೀಲ ಇವರ ಸಂವಾದವನ್ನು ವಿಸ್ತಾರವಾಗಿ ನಿರೂಪಿಸಿ ಏಕಾದಶೀ ವ್ರತದ ಮಹಾಮಹಿಮೆಯನ್ನು ಹೇಳಿದೆ.

# ಚತುರ್ವಿಂಶೋಽಧ್ಯಾಯಃ

ಸೂತ ಉವಾಚ

ಏತನ್ನಿಶಮ್ಯ ಸನಕೋದಿತಮಪ್ರಮೇಯಂ
ಪುಣ್ಯಂ ಹರೇರ್ದಿನಭವಂ ನಿಖಿಲೋತ್ತಮಂ ಚ ।
ಪಾಪೌಘಶಾಂತಿಕರಣಂ ವ್ರತಸಾರಮೇವಂ
ಬ್ರಹ್ಮಾತ್ಮಜಃ ಪುನರಭಾಷತ ಹರ್ಷಯುಕ್ತಃ ॥ ೧ ॥

ನಾರದ ಉವಾಚ

ಕಥಿತಂ ಭವತಾ ಸರ್ವಂ ಮುನೇ ತತ್ವಾರ್ಥಕೋವಿದ ।
ವ್ರತಾಖ್ಯಾನಂ ಮಹಾಪುಣ್ಯಂ ಯಥಾವದ್ಧರಿಭಕ್ತಿದಂ ॥ ೨ ॥

ಇದಾನೀಂ ಶ್ರೋತುಮಿಚ್ಛಾಮಿ ವರ್ಣಾಚಾರವಿಧಿಂ ಮುನೇ ।
ತಥಾ ಸರ್ವಾಶ್ರಮಾಚಾರಂ ಪ್ರಾಯಶ್ಚಿತ್ತವಿಧಿಂ ತಥಾ ॥ ೩ ॥

---

## ಇಪ್ಪತ್ತನಾಲ್ಕನೆಯ ಅಧ್ಯಾಯವು.

೧. ಸೂತನು ಹೇಳುತ್ತಾನೆ—ಸನಕನು ಹೇಳಿದ ವರ್ಣಿಸಲಶಕ್ಯವು, ಸರ್ವೋತ್ತಮವೂ ಆದ ಹರಿದಿನವ್ರತದಿಂದುಂಟಾಗುವ ಪುಣ್ಯವನ್ನು, ಈರೀತಿ ಪಾಪರಾಶಿಯನ್ನು ಪರಿಹರಿಸುವ ಶ್ರೇಷ್ಠವ್ರತವನ್ನು ಸಹ ಕೇಳಿ ನಾರದನು ಸಂತೋಷಯುಕ್ತನಾಗಿ ಪುನಃ ಮಾತನಾಡಿದನು.

೨. ತತ್ವಾರ್ಥಜ್ಞಾನಿಯಾದ ಸನಕಮುನಿಯೇ! ಮಹಾಪುಣ್ಯಕರವೂ ವಿಷ್ಣುಭಕ್ತಿಪ್ರದವೂ ಆದ ಸಕಲ ವ್ರತಚರಿತ್ರೆಯನ್ನೂ ನೀನು ಹೇಳಿರುವೆ.

೩. ಮುನಿಯೇ! ಈಗ ವರ್ಣಧರ್ಮವಿಧಾನ ಆಶ್ರಮಧರ್ಮ ಮತ್ತು ಪ್ರಾಯಶ್ಚಿತ್ತವಿಧಿ ಇವುಗಳನ್ನು ಶ್ರವಣಮಾಡಬೇಕೆಂದು ಇಚ್ಛಿಸುತ್ತೇನೆ.

ಏತತ್ಸರ್ವಂ ಮಹಾಭಾಗ ಸರ್ವತತ್ತ್ವಾರ್ಥಕೋವಿದ ।
ಕೃಪಯಾ ಪರಯಾ ಮಹ್ಯಂ ಯಥಾವದ್ವಕ್ತುಮರ್ಹಸಿ ॥ ೪ ॥

ಸನಕ ಉವಾಚ

ಶೃಣುಷ್ವ ಮುನಿಶಾರ್ದೂಲ ಯಥಾ ಭಕ್ತಪ್ರಿಯಂಕರಃ ।
ವರ್ಣಾಶ್ರಮಾಚಾರಪರೈಃ ಪೂಜ್ಯತೇ ಹರಿರವ್ಯಯಃ ॥ ೫ ॥

ಮನ್ವಾದ್ಯೈರುದಿತಂ ಯಚ್ಚ ವರ್ಣಾಶ್ರಮನಿಬಂಧನಂ ।
ತತ್ತೇ ವಕ್ಷ್ಯಾಮಿ ವಿಧಿವದ್ಭಕ್ತೋಽಸಿ ತ್ವಮಧೋಕ್ಷಜೇ ॥ ೬ ॥

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಶ್ಚತ್ವಾರ ಏವ ತೇ ।
ವರ್ಣಾ ಇತಿ ಸಮಾಖ್ಯಾತಾ ಏತೇಷು ಬ್ರಾಹ್ಮಣೋಽಧಿಕಃ ॥ ೭ ॥

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ದ್ವಿಜಾಃ ಪ್ರೋಕ್ತಾಸ್ತ್ರಯಸ್ತಥಾ ।
ಮಾತೃತಶ್ಚೋಪನಯನಾದ್ದ್ವಿಜತ್ವಂ ಪ್ರಾಪ್ಯತೇ ತ್ರಿಭಿಃ ॥ ೮ ॥

---

೪. ಧನ್ಯನೂ ಸಕಲ ತತ್ತ್ವಾರ್ಥಜ್ಞಾನಿಯೂ ಆದ ನೀನು ಅವುಗಳನ್ನು ದಯೆಯಿಟ್ಟು ಯಥಾವತ್ತಾಗಿ ತಿಳಿಸು.

೫. ಸನಕನು ಹೇಳಿದನು—ಮುನಿಶ್ರೇಷ್ಠನೇ! ವರ್ಣಾಶ್ರಮಧರ್ಮ ನಿಷ್ಠರಿಂದ ಭಕ್ತೇಷ್ಟದಾಯಕನೂ ನಾಶರಹಿತನೂ ಆದ ಹರಿಯು ಹೇಗೆ ಪೂಜಿಸಲ್ಪಡುತ್ತಾನೆಂಬುದನ್ನು ಹೇಳುತ್ತೇನೆ ಕೇಳು.

೬. ನಾರದನೇ! ನೀನು ಅಧೋಕ್ಷಜನಾಮಕನಾದ ಶ್ರೀಹರಿಯ ಭಕ್ತನಾಗಿರವೆಯಾದುದರಿಂದ ಮನು ಮುಂತಾದವರು ಹೇಳಿರುವ ವರ್ಣಾಶ್ರಮಧರ್ಮ ವಿಧಾನವನ್ನು ನಿನಗೆ ಹೇಳುವೆನು.

೭. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬುದಾಗಿ ಜಾತಿಗಳಲ್ಲಿ ನಾಲ್ಕುಬಗೆ. ಅವುಗಳಲ್ಲಿ ಬ್ರಾಹ್ಮಣನು ಉತ್ತಮನು.

೮. ಬ್ರಾಹ್ಮಣ ಕ್ಷತ್ರಿಯ ವೈಶ್ಯ ಈ ಮೂವರೂ ದ್ವಿಜರೆಂದು ಉಕ್ತರಾಗಿದ್ದಾರೆ. ಇವರು ತಾಯಿಯ ಗರ್ಭದಿಂದ ಒಂದಾವರ್ತಿ, ಉಪನಯನ ಸಂಸ್ಕಾರದಿಂದ ಇನ್ನೊಂದಾವರ್ತಿ ಈರೀತಿ ಎರಡಾವರ್ತಿ ಹುಟ್ಟುವುದರಿಂದ ದ್ವಿಜರೆನಿಸಿರುತ್ತಾರೆ.

ಏತೈರ್ವರ್ಣೈಃ ಸರ್ವಧರ್ಮಾಃ ಕಾರ್ಯಾ ವರ್ಣಾನುರೂಪತಃ ।
ಸ್ವವರ್ಣಧರ್ಮತ್ಯಾಗೇನ ಪಾಷಂಡಃ ಪ್ರೋಚ್ಯತೇ ಬುಧೈಃ ॥ ೯ ॥

ಸ್ವಗೃಹ್ಯಚೋದಿತಂ ಕರ್ಮ ದ್ವಿಜಃ ಕುರ್ವನ್ ಕೃತೀ ಭವೇತ್ ।
ಅನ್ಯಥಾ ಪತಿತೋ ಭೂಯಾತ್ ಸರ್ವಧರ್ಮಬಹಿಷ್ಕೃತಃ ॥ ೧೦ ॥

ಯುಗಧರ್ಮಾಃ ಪರಿಗ್ರಾಹ್ಯೋ ವರ್ಣೈರೇತೈರ್ಯಥೋಚಿತಂ ।
ದೇಶಾಚಾರಾಸ್ತಥಾ ಗ್ರಾಹ್ಯಾಃ ಸ್ಮೃತಿ ಧರ್ಮಾವಿರೋಧತಃ ॥ ೧೧ ॥

ಕರ್ಮಣಾ ಮನಸಾ ವಾಚಾ ಯತ್ನಾದ್ಧರ್ಮಂ ಸಮಾಚರೇತ್ ।
ಅಸ್ವರ್ಗ್ಯಂ ಲೋಕವಿದ್ವಿಷ್ಟಂ ಧರ್ಮ್ಯಮಪ್ಯಾಚರೇನ್ನ ತು ॥ ೧೨ ॥

ಸಮುದ್ರಯಾತ್ರಾಸ್ವೀಕಾರಃ ಕಮಂಡಲುವಿದಾರಣಂ ।
ದ್ವಿಜಾನಾಮಸವರ್ಣಾಸು ಕನ್ಯಾಸೂಪಯಮಸ್ತಥಾ ॥ ೧೩ ॥

---

೯. ಇವರು ತಮ್ಮ ವರ್ಣಾಶ್ರಮವಿಹಿತವಾದ ಸಕಲಧರ್ಮಗಳನ್ನೂ ಅನುಷ್ಠಾನ ಮಾಡಬೇಕು. ವರ್ಣಾಶ್ರಮಧರ್ಮಪರಿತ್ಯಾಗಮಾಡಿದವನನ್ನು ಜ್ಞಾನಿಗಳು ಪಾಷಂಡನೆಂದು ಹೇಳುತ್ತಾರೆ.

೧೦. ದ್ವಿಜನು ತನಗೆ ಗೃಹ್ಯಸೂತ್ರದಲ್ಲಿ ವಿಹಿತವಾದ ಕರ್ಮವನ್ನಾಚರಿಸಿದರೆ ಕೃತಕೃತ್ಯನಾಗುವನು, ಇಲ್ಲದಿದ್ದರೆ ಪತಿತನೆನಿಸಿ ಸಕಲ ಧರ್ಮಗಳಿಗೂ ಬಹಿಷ್ಕೃತನಾಗುವನು.

೧೧. ಈ ದ್ವಿಜರು ಯಥಾಯೋಗ್ಯವಾಗಿ ಸ್ಮೃತಿವಿಹಿತ ಧರ್ಮಗಳಿಗನುಗುಣವಾದ ಯುಗಧರ್ಮ ಮತ್ತು ದೇಶಾಚಾರಗಳನ್ನು ಪರಿಗ್ರಹಿಸಬೇಕು.

೧೨. ಶಾರೀರಿಕವ್ಯಾಪಾರ, ಮನಸ್ಸು, ವಾಕ್ಕು ಇವುಗಳಿಂದ ಪ್ರಯತ್ನಪೂರ್ವಕವಾಗಿ ಧರ್ಮವನ್ನಾಚರಿಸಬೇಕು. ಧರ್ಮಸಾಧನವಾದಾಗ್ಯೂ ಸ್ವರ್ಗಪ್ರಾಪ್ತಿಗೆ ವಿರುದ್ಧವು ಬಹುಜನಗಳಿಗೆ ಬೇಡವಾದುದೂ ಆಗಿದ್ದರೆ ಅಂತಹ ಕರ್ಮವನ್ನಾಚರಿಸಬಾರದು.

೧೩–೧೬. ಸಮುದ್ರಯಾನ, ಕಮಂಡಲುವನ್ನು ಧರಿಸುವುದು, ದ್ವಿಜರು ತಮಗೆ ಸಮಾನಜಾತಿಯಲ್ಲದ ಕನ್ಯೆಯನ್ನು ಮದುವೆಮಾಡಿಕೊಳ್ಳುವುದು,

ದೇವರಾಚ್ಚ ಸುತೋತ್ಪತ್ತಿರ್ಮಧುಪರ್ಕೇ ಪಶೋರ್ವಧಃ ।
ಮಾಂಸಾದನಂ ತಥಾ ಶ್ರಾದ್ಧೇ ವಾನಪ್ರಸ್ಥಾಶ್ರಮಸ್ತಥಾ ॥ ೧೪ ॥

ದತ್ತಾಕ್ಷತಾಯಾಃ ಕನ್ಯಾಯಾಃ ಪುನರ್ದಾನಂ ವರಾಯ ಚ ।
ನೈಷ್ಠಿಕಂ ಬ್ರಹ್ಮಚರ್ಯಂ ಚ ನರಮೇಧಾಶ್ವಮೇಧಕೌ ॥ ೧೫ ॥

ಮಹಾಪ್ರಸ್ಥಾನಗಮನಂ ಗೋಮೇಧಶ್ಚ ತಥಾ ಮಖಃ ।
ಏತಾನ್ಧರ್ಮಾನ್ಕಲಿಯುಗೇ ವರ್ಜ್ಯಾನಾಹುರ್ಮನೀಷಿಣಃ ॥ ೧೬ ॥

ದೇಶಾಚಾರಾಃ ಪರಿಗ್ರಾಹ್ಯಾಸ್ತತ್ತದ್ದೇಶಗತೈರ್ನರೈಃ ।
ಅನ್ಯಥಾ ಪತಿತೋ ಜ್ಞೇಯಃ ಸರ್ವಧರ್ಮಬಹಿಷ್ಕೃತಃ ॥ ೧೭ ॥

ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಚ ದ್ವಿಜೋತ್ತಮ ।
ಕ್ರಿಯಾಃ ಸಾಮಾನ್ಯತೋ ವಕ್ಷ್ಯೇ ತಚ್ಛೃಣುಷ್ವ ಸಮಾಹಿತಃ ॥ ೧೮ ॥

---

ಮೈದುನನ (ಗಂಡನ ತಮ್ಮ) ಸಂಗದಿಂದ ಮಗನನ್ನು ಪಡೆಯುವುದು, ವಿವಾಹಾಂಗವಾಗಿ ಮಾಡುವ ಮಧುಪರ್ಕವೆಂಬ ಕರ್ಮಾಂಗವಾಗಿ ಪಶುವನ್ನು ಕೊಲ್ಲುವುದು, ಶ್ರಾದ್ಧದಲ್ಲಿ ಮಾಂಸ ತಿನ್ನುವುದು, ವಾನಪ್ರಸ್ಥಾಶ್ರಮವು, ವಿವಾಹವಾದಮೇಲೆ ಅಕ್ಷತಯೋನಿಯಾಗಿದ್ದಾಗ್ಯೂ ಆ ಕನ್ಯೆಗೆ ಪುನರ್ವಿವಾಹವು, ನೈಷ್ಠಿಕ ಬ್ರಹ್ಮಚರ್ಯೆ, ನರಮೇಧ, ಅಶ್ವಮೇಧ, ಮಹಾಪ್ರಸ್ಥಾನಗಮನ, ಗೋಮೇಧ ಮತ್ತು ಮಖ ಈ ಧರ್ಮಗಳನ್ನು ಕಲಿಯುಗದಲ್ಲಿ ಆಚರಿಸಬಾರದೆಂದು ಜ್ಞಾನಿಗಳು ಹೇಳುತ್ತಾರೆ.

೧೭. ಮನುಷ್ಯರು ಅವರು ವಾಸಮಾಡುವ ದೇಶಗಳಲ್ಲಿನ ಸಂಪ್ರದಾಯ ಪ್ರಾಪ್ತವಾದ ಧರ್ಮಗಳನ್ನು ಪರಿಗ್ರಹಿಸಬೇಕು. ಹಾಗೆ ದೇಶಾಚಾರಗಳನ್ನು ಪರಿಗ್ರಹಿಸದಿದ್ದರೆ ಅಂತಹವರು ಪತಿತರು ಮತ್ತು ಸಕಲ ಧರ್ಮಬಹಿಷ್ಕೃತರೆಂದು ತಿಳಿಯಬೇಕು.

೧೮. ದ್ವಿಜಶ್ರೇಷ್ಠನೇ! ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಇವರುಗಳಿಗೆ ವಿಹಿತವಾದ ಸಾಮಾನ್ಯ ಧರ್ಮಗಳನ್ನು ಹೇಳುತ್ತೇನೆ ಸಮಾಧಾನದಿಂದ ಕೇಳು.

ದಾನಂ ದದ್ಯಾದ್ಬ್ರಾಹ್ಮಣೇಭ್ಯಸ್ತಥಾ ಯಜ್ಞೈರ್ಯಜೇತ್ಸುರಾನ್ ।
ವೃತ್ತ್ಯರ್ಥಂ ಯಾಚಯೇಚ್ಚೈವ ಅನ್ಯಾನಧ್ಯಾಪಯೇತ್ತಥಾ ॥ ೧೯ ॥

ಯಾಜಯೇದ್ಯಜನೇ ಯೋಗ್ಯಾನ್ವಿಪ್ರೋ ನಿತ್ಯೋದಕೀ ಭವೇತ್ ।
ಕುರ್ಯಾಚ್ಚ ವೇದಗ್ರಹಣಂ ತಥಾಗ್ನೇಶ್ಚ ಪರಿಗ್ರಹಂ ॥ ೨೦ ॥

ಗ್ರಾಹ್ಯೇ ದ್ರವ್ಯೇ ಚ ಪಾರಕ್ಯೇ ಸಮಬುದ್ಧಿರ್ಭವೇತ್ತಥಾ ।
ಸರ್ವಲೋಕಹಿತಂ ಕುರ್ಯಾನ್ಮೃದುವಾಕ್ಯಮುದೀರಯೇತ್ ॥ ೨೧ ॥

ಋತಾವಭಿಗಮಃ ಪತ್ನ್ಯಾಂ ಶಸ್ಯತೇ ಬ್ರಾಹ್ಮಣಸ್ಯ ವೈ ।
ನ ಕಸ್ಯಾಪ್ಯಹಿತಂ ಬ್ರೂಯಾದ್ವಿಷ್ಣುಪೂಜಾಪರೋ ಭವೇತ್ ॥ ೨೨ ॥

---

೧೯. ಬ್ರಾಹ್ಮಣರಿಗೆ ದಾನಕೊಡಬೇಕು. ಯಜ್ಞಗಳನ್ನಾಚರಿಸಿ ದೇವತೆಗಳನ್ನು ಪೂಜಿಸಬೇಕು. ಜೀವನಕ್ಕಾಗಿ ಯಾಚನೆ ಮಾಡಬೇಕು ಮತ್ತು ಇತರರಿಗೆ ಪಾಠಹೇಳಬೇಕು.

೨೦. ಯಜ್ಞಾದಿಕರ್ಮಗಳನ್ನು ಅನುಷ್ಠಾನಮಾಡಲು ಯೋಗ್ಯರಾದ ದ್ವಿಜರಿಂದ ಯಜ್ಞಾದಿಗಳನ್ನು ಮಾಡಿಸಬೇಕು. ಬ್ರಾಹ್ಮಣನು ನಿತ್ಯೋದಕಿಯಾಗಬೇಕು. ವೇದಾಧ್ಯಯನ ಮತ್ತು ಔಪಾಸನಾದಿಗಳಿಂದ ಅಗ್ನಿಪರಿಗ್ರಹ ಇವುಗಳನ್ನು ಮಾಡಬೇಕು.

೨೧. ಗ್ರಾಹ್ಯವಾದ ಮತ್ತು ಪರಕೀಯವಾದ ದ್ರವ್ಯದಲ್ಲಿ ಸಮಬುದ್ಧಿಯುಳ್ಳವನಾಗಬೇಕು. ಎಲ್ಲರಿಗೂ ಅನುಕೂಲವಾದುದನ್ನು ಮಾಡಬೇಕು ಮತ್ತು ಮೃದುವಚನವನ್ನು ನುಡಿಯಬೇಕು.

೨೨. ಬ್ರಾಹ್ಮಣನಿಗೆ ಋತುಕಾಲದಲ್ಲಿ ಪತ್ನೀಸಂಗವು ಪ್ರಶಸ್ತವೆಂದು ಉಕ್ತವಾಗಿದೆ. ಅವನು ಯಾರಿಗೂ ಅಹಿತವಚನವನ್ನು ನುಡಿಯದೇ ವಿಷ್ಣುಪೂಜಾನಿರತನಾಗಬೇಕು.

ದದ್ಯಾದ್ದಾನಾನಿ ವಿಪ್ರೇಭ್ಯಃ ಕ್ಷತ್ರಿಯೋಽಪಿ ದ್ವಿಜೋತ್ತಮ ।
ಕುರ್ಯಾಚ್ಚ ವೇದಗ್ರಹಣಂ ಯಜ್ಞೈರ್ದೇವಾನ್ಯಜೇತ್ತಥಾ ॥ ೨೩ ॥

ಶಸ್ತ್ರಜೀವೀ ಭವೇಚ್ಚೈವ ಪಾಲಯೇದ್ಧರ್ಮತೋ ಮಹೀಂ ।
ದುಷ್ಟಾನಾಂ ಶಾಸನಂ ಕುರ್ಯಾಚ್ಛಿಷ್ಟಾನಾಂ ಪಾಲನಂ ತಥಾ ॥ ೨೪ ॥

ಪಾಶುಪಾಲ್ಯಂ ಚ ವಾಣಿಜ್ಯಂ ಕೃಷಿಶ್ಚ ದ್ವಿಜಸತ್ತಮ ।
ವೇದಸ್ಯಾಧ್ಯಯನಂ ಚೈವ ವೈಶ್ಯಸ್ಯಾಪಿ ಪ್ರಕೀರ್ತಿತಂ ॥ ೨೫ ॥

ಕುರ್ಯಾಚ್ಚ ದಾರಗ್ರಹಣಂ ಧರ್ಮಾಂಶ್ಚೈವ ಸಮಾಚರೇತ್ ।
ಕ್ರಯವಿಕ್ರಯಜೈರ್ವಾಪಿ ಧನೈಃ ಕಾರುಕ್ರಿಯೋದ್ಭವೈಃ ॥ ೨೬ ॥

ದದ್ಯಾದ್ದಾನಾನಿ ಶೂದ್ರೋಽಪಿ ಪಾಕಯಜ್ಞೈರ್ಯಜೇನ್ನ ಚ ।
ಬ್ರಾಹ್ಮಣಕ್ಷತ್ರಿಯವಿಶಾಂ ಶುಶ್ರೂಷಾನಿರತೋ ಭವೇತ್ ॥ ೨೭ ॥

---

೨೩. ದ್ವಿಜೋತ್ತಮನೇ ! ಕ್ಷತ್ರಿಯನೂ ಸಹ ಬ್ರಾಹ್ಮಣರಿಗೆ ದಾನ ಕೊಡಬೇಕು. ವೇದಾಧ್ಯಯನ ಮಾಡಿ ಯಜ್ಞಗಳಿಂದ ದೇವತೆಗಳನ್ನು ತೃಪ್ತಿಪಡಿಸಬೇಕು.

೨೪. ಕ್ಷತ್ರಿಯನು ಶಸ್ತ್ರವಿದ್ಯೆಯಿಂದ ಜೀವಿಸುತ್ತಾ ಧರ್ಮದಿಂದ ರಾಜ್ಯ ಪರಿಪಾಲನೆ ಮಾಡಬೇಕು. ದುಷ್ಟನಿಗ್ರಹ ಮತ್ತು ಶಿಷ್ಟಪರಿಪಾಲನೆಗಳು ಕ್ಷತ್ರಿಯನಿಗೆ ಕರ್ತವ್ಯವು.

೨೫. ವೈಶ್ಯನಿಗೆ ಪಶುಪಾಲನೆ, ವ್ಯಾಪಾರ, ವ್ಯವಸಾಯ ಮತ್ತು ವೇದಾಧ್ಯಯನ ಇವುಗಳು ವಿಹಿತಧರ್ಮಗಳು.

೨೬. ವಿವಾಹಮಾಡಿಕೊಂಡು ವ್ಯಾಪಾರ (ಕ್ರಯ ವಿಕ್ರಯ) ಶಿಲ್ಪಕ್ರಿಯಾ ಇವುಗಳಿಂದ ಬಂದ ಧನದಿಂದ ಧರ್ಮವನ್ನಾಚರಿಸಬೇಕು.

೨೭. ಶೂದ್ರನೂ ಸಹ ದಾನಮಾಡಬೇಕು. ಅವನು ಪಾಕಯಜ್ಞಾದಿಗಳನ್ನು ಮಾಡಬಾರದು. ತ್ರಿವರ್ಣ ಎಂದರೆ ಬ್ರಾಹ್ಮಣ ಕ್ಷತ್ರಿಯ ಮತ್ತು ವೈಶ್ಯರ ಸೇವೆಯನ್ನು ಆದರದಿಂದ ಮಾಡಬೇಕು.

ಋತುಕಾಲಾಭಿಗಾಮೀ ಚ ಸ್ವದಾರೇಷು ಭವೇತ್ತಥಾ ।
ಸರ್ವಲೋಕಹಿತೈಷಿತ್ವಂ ಮಂಗಳಂ ಪ್ರಿಯವಾದಿತಾ ॥ ೨೮ ॥

ಅನಾಯಾಸೋ ಮನೋಹರ್ಷಃ ತಿತಿಕ್ಷಾ ನಾತಿಮಾನಿತಾ ।
ಸಾಮಾನ್ಯಂ ಸರ್ವವರ್ಣಾನಾಂ ಮುನಿಭಿಃ ಪರಿಕೀರ್ತಿತಂ ॥ ೨೯ ॥

ಸರ್ವೇ ಚ ಮುನಿತಾಂ ಯಾಂತಿ ಸ್ವಾಶ್ರಮೋಚಿತಕರ್ಮಣಾ !
ಬ್ರಾಹ್ಮಣಃ ಕ್ಷತ್ರಿಯಾಚಾರಮಾಚರೇದಾಪದಿ ದ್ವಿಜ ॥ ೩೦ ॥

ಕ್ಷತ್ರಿಯೋಽಪಿಚ ವಿಡ್ವೃತ್ತಿಮತ್ಯಾಪದಿ ಸಮಾಶ್ರಯೇತ್ ।
ನಾಶ್ರಯೇಚ್ಛೂದ್ರವೃತ್ತಿಂ ತು ಅತ್ಯಾಪದ್ಯಪಿ ವೈ ದ್ವಿಜಃ ॥ ೩೧ ॥

ಯದ್ಯಾಶ್ರಯೇದ್ದ್ವಿಜೋ ಮೂಢಸ್ತದಾ ಚಂಡಾಲತಾಂ ವ್ರಜೇತ್ ।
ಬ್ರಾಹ್ಮಣಕ್ಷತ್ರಿಯವಿಶಾಂ ತ್ರಯಾಣಾಂ ಮುನಿಸತ್ತಮ ॥ ೩೨ ॥

---

೨೮. ಅವನು ಋತುಕಾಲದಲ್ಲಿ ತನ್ನ ಹೆಂಡತಿಯ ಸಂಗಮಾಡಬೇಕು. ಸಕಲರಿಗೂ ಹಿತೈಷಿಯು, ಶ್ರೇಯಸ್ಸನ್ನು ಕೋರುವವನು ಮತ್ತು ಇಷ್ಟವಾದುದನ್ನೇ ಹೇಳುವವನೂ ಆಗಬೇಕು.

೨೯. ಆಲಸ್ಯವಿಲ್ಲದಿರುವಿಕೆ, ಹರ್ಷಚಿತ್ತತೆ ಸಹನಶೀಲತೆ ಅತಿಶಯವಾದ ಅಭಿಮಾನವಿಲ್ಲದಿರುವಿಕೆ ಇವುಗಳು ಸಕಲ ಜಾತಿಯವರಿಗೂ ಸಾಧಾರಣ ಧರ್ಮಗಳೆಂದು ಜ್ಞಾನಿಗಳು ಹೇಳಿರುತ್ತಾರೆ.

೩೦. ಎಲ್ಲರೂ ತಮ್ಮ ತಮ್ಮ ವರ್ಣಾಶ್ರಮೋಚಿತಧರ್ಮಾನುಷ್ಠಾನದಿಂದ ಜ್ಞಾನಿಗಳಾಗುವರು. ದ್ವಿಜನೇ! ಆಪತ್ಕಾಲದಲ್ಲಿ ಬ್ರಾಹ್ಮಣನು ಕ್ಷತ್ರಿಯ ಧರ್ಮವನ್ನಾಶ್ರಯಿಸಿ ಜೀವಿಸಬಹುದು.

೩೧. ಕ್ಷತ್ರಿಯನೂ ಸಹ ಮಹಾಪತ್ಕಾಲದಲ್ಲಿ ವೈಶ್ಯರ ಧರ್ಮವನ್ನು ಅವಲಂಬಿಸಬಹುದು. ದ್ವಿಜನು ಎಂತಹ ಕಷ್ಟಬಂದಾಗ್ಯೂ ಶೂದ್ರಧರ್ಮವನ್ನವಲಂಬಿಸಬಾರದು.

೩೨-೩೪. ದ್ವಿಜನು ಶೂದ್ರಧರ್ಮವನ್ನವಲಂಬಿಸಿದರೆ ಚಂಡಾಲನಾಗುತ್ತಾನೆ. ಮುನಿಶ್ರೇಷ್ಠನೇ! ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯ ಈ ಮೂವರಿಗೆ ನಾಲ್ಕು ಆಶ್ರಮಗಳು ವಿಹಿತವಾಗಿವೆ. ಐದನೆಯದಿಲ್ಲ. ಬ್ರಹ್ಮಚಾರಿ ಗೃಹಸ್ಥ ವಾನಪ್ರಸ್ಥ ಸನ್ಯಾಸಿ ಎಂಬೀ ನಾಲ್ವರು ನಾಲ್ಕು ಆಶ್ರಮಗಳಿಂದ ಉತ್ಕೃಷ್ಟ

ಚತ್ವಾರಆಶ್ರಮಾಃ ಪ್ರೋಕ್ತಾಃ ಪಂಚಮೋ ನೋಪಪದ್ಯತೇ ।
ಬ್ರಹ್ಮಚಾರೀ ಗೃಹೀ ವಾನಪ್ರಸ್ಥೋ ಭಿಕ್ಷುಶ್ಚ ಸತ್ತಮ ॥ ೩೩ ॥

ಚತುರ್ಭಿರಾಶ್ರಮೈರೇಭಿಃ ಸಾಧ್ಯತೇ ಧರ್ಮಉತ್ತಮಃ ।
ವಿಷ್ಣುಸ್ತುಷ್ಯತಿ ವಿಪ್ರೇಂದ್ರ ಕರ್ಮಯೋಗರತಾತ್ಮನಃ ॥ ೩೪ ॥

ನಿಃಸ್ಪೃಹಾಃ ಶಾಂತಮನಸಃ ಸ್ವಕರ್ಮಪರಿನಿಷ್ಠಿತಾಃ ।
ತೇ ಯಾಂತಿ ಪರಮಂ ಸ್ಥಾನಂ ನಾವರ್ತಂತೇ ಯತಃ ಪುನಃ ॥ ೩೫ ॥

ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ ಪ್ರಥಮಪಾದೇ ವ್ರತಾಖ್ಯಾನೇ ಸದಾಚಾರೋ ನಾಮ ಚತುರ್ವಿಂಶೋऽಧ್ಯಾಯಃ

---

ಧರ್ಮವನ್ನು ಸಂಪಾದಿಸಬಹುದು. ಕರ್ಮಯೋಗನಿಷ್ಠನ ವಿಷಯದಲ್ಲಿ ವಿಷ್ಣುವು ಸಂತುಷ್ಟನಾಗಿ ಅನುಗ್ರಹ ಮಾಡುತ್ತಾನೆ.

೩೫. ನಿಃಸ್ಪೃಹರು ಎಂದರೆ ಆಶೆಯಿಲ್ಲದವರು ಮತ್ತು ಶಾಂತಚಿತ್ತರೂ ಆಗಿ ವಿಹಿತಧರ್ಮಾನುಷ್ಠಾನಪರರಾದವರು ಪುನರಾವೃತ್ತಿರಹಿತವಾದ ಉತ್ತಮ ಸ್ಥಾನ ಎಂದರೆ ವಿಷ್ಣುಲೋಕವನ್ನು ಹೊಂದುತ್ತಾರೆ.

ಇಂತು ಶ್ರೀಬೃಹನ್ನಾರದೀಯಪುರಾಣದೊಳು ಪೂರ್ವಭಾಗ ಪ್ರಥಮಪಾದದಲ್ಲಿ ಸದಾಚಾರನಿರೂಪಣವೆಂಬ ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.

## ಕಥಾಸಾರಾಂಶ

ಈ ಅಧ್ಯಾಯದಲ್ಲಿ ವರ್ಣಾಶ್ರಮಧರ್ಮಗಳು ಉಕ್ತವಾಗಿವೆ. ಬ್ರಾಹ್ಮಣ ಕ್ಷತ್ರಿಯ, ವೈಶ್ಯ, ಶೂದ್ರ ಎಂಬದಾಗಿ ನಾಲ್ಕು ವರ್ಣಗಳು. ಅವುಗಳಿಗೆ ಸಾಮಾನ್ಯಧರ್ಮಗಳು, ಒಂದೊಂದು ವರ್ಣಕ್ಕೂ ಪ್ರತ್ಯೇಕವಾಗಿ ವಿಹಿತಧರ್ಮಗಳು, ಆಪತ್ಕಾಲದಲ್ಲಿ ಅವಲಂಬಿಸಬಹುದಾದ ಧರ್ಮಗಳು, ದೇಶಾಚಾರಗಳು ಗ್ರಾಹ್ಯವೆಂಬಂಶ, ತ್ರೈವರ್ಣಿಕರಿಗೆ ದ್ವಿಜತ್ವನಿರೂಪಣೆ, ನಾಲ್ಕು ಆಶ್ರಮಗಳು ತ್ರೈವರ್ಣಿಕರಿಗೆ ಮಾತ್ರ ಉಂಟು, ದ್ವಿಜರು ಎಂತಹ ಸಂದರ್ಭ ಬಂದಾಗ್ಯೂ ಶೂದ್ರಧರ್ಮವನ್ನಾಶ್ರಯಿಸಬಾರದು ಹಾಗೂ ಆಶ್ರಯಿಸಿದರೆ ಅಂತಹವನು ಚಂಡಾಲನಾಗುತ್ತಾನೆ ಇತ್ಯಾದಿಯಾಗಿ ಹೇಳಿ ವರ್ಣಾಶ್ರಮಧರ್ಮಾನುಷ್ಠಾನಕ್ಕೆ ಫಲವನ್ನು ನಿರೂಪಿಸಿದೆ.

# ಪಂಚವಿಂಶೋಽಧ್ಯಾಯಃ

**ಸನಕ ಉವಾಚ**

ವರ್ಣಾಶ್ರಮಾಚಾರವಿಧಿಂ ಪ್ರವಕ್ಷ್ಯಾಮಿ ವಿಶೇಷತಃ ।
ಶೃಣುಷ್ವ ತ್ವಂ ಮುನಿಶ್ರೇಷ್ಠ ಸಾವಧಾನೇನ ಚೇತಸಾ ॥ ೧ ॥

ಯಃ ಸ್ವಧರ್ಮಂ ಪರಿತ್ಯಜ್ಯ ಪರಧರ್ಮಂ ಸಮಾಚರೇತ್ ।
ಪಾಷಂಡಃ ಸ ಹಿ ವಿಜ್ಞೇಯಃ ಸರ್ವಧರ್ಮಬಹಿಷ್ಕೃತಃ ॥ ೨ ॥

ಗರ್ಭಾಧಾನಾದಿಸಂಸ್ಕಾರಾಃ ಕಾರ್ಯಾ ಮಂತ್ರವಿಧಾನತಃ ।
ಸ್ತ್ರೀಣಾಮಮಂತ್ರತಃ ಕಾರ್ಯಾ ಯಥಾಕಾಲಂ ಯಥಾವಿಧಿ ॥ ೩ ॥

ಸೀಮಂತಕರ್ಮ ಪ್ರಥಮಂ ಚತುರ್ಥೇ ಮಾಸಿ ಶಸ್ಯತೇ ।
ಷಷ್ಠೇ ವಾ ಸಪ್ತಮೇ ವಾಪಿ ಅಷ್ಟಮೇ ವಾಽಪಿ ಕಾರಯೇತ್ ॥ ೪ ॥

---

## ಇಪ್ಪತ್ತೈದನೆಯ ಅಧ್ಯಾಯವು

೧. ಸನಕನು ಹೇಳಿದನು—ಋಷಿವರ್ಯನೇ! ವರ್ಣಾಶ್ರಮ ಧರ್ಮಗಳನ್ನು ವಿವರವಾಗಿ ಹೇಳುತ್ತೇನೆ. ಅದನ್ನು ಸಾವಧಾನಚಿತ್ತದಿಂದ ಕೇಳು.

೨. ತನಗೆ ವಿಹಿತವಾದ ಧರ್ಮವನ್ನು ಬಿಟ್ಟು ಪರಧರ್ಮವನ್ನಾಚರಿಸುವವನು ಪಾಷಂಡನೆಂದು ತಿಳಿಯಬೇಕು. ಅಂತಹವನು ಸಕಲ ಧರ್ಮಗಳಿಗೂ ಬಹಿಷ್ಕೃತನು. ಎಂದರೆ ಯಾವ ಧರ್ಮಾಚರಣೆಗೂ ಯೋಗ್ಯನಲ್ಲ.

೩. ಗರ್ಭಾಧಾನ ಮುಂತಾದ ಷೋಡಶ ಸಂಸ್ಕಾರಗಳು ಮಂತ್ರಪೂರ್ವಕವಾಗಿ ಆಚರಿಸಲ್ಪಡತಕ್ಕವುಗಳು. ಸ್ತ್ರೀಯರಿಗೆ ಸಂಸ್ಕಾರಗಳು ಮಂತ್ರ ಹೇಳದೆ ವಿಹಿತಕಾಲದಲ್ಲಿ ವಿಧಾನೋಕ್ತಪ್ರಕಾರ ಆಚರಿಸಲ್ಪಡಬೇಕು.

೪. ನಾಲ್ಕನೆಯ ತಿಂಗಳಲ್ಲಿ ಮೊದಲನೆಯದಾದ ಸೀಮಂತಕರ್ಮವು ಪ್ರಶಸ್ತವೆಂದು ಉಕ್ತವಾಗಿದೆ. ಅದನ್ನು ಆರು, ಏಳು ಅಥವಾ ಎಂಟನೆಯ ತಿಂಗಳಲ್ಲಿಯಾದರೂ ಆಚರಿಸಬಹುದು.

ಜಾತೇ ಪುತ್ರೇ ಪಿತಾ ಸ್ನಾತ್ವಾ ಸಚೈಲಂ ಜಾತಕರ್ಮ ಚ ।
ಕುರ್ಯಾಚ್ಚ ನಾಂದೀಶ್ರಾದ್ಧಂ ಚ ಸ್ವಸ್ತಿವಾಚನಪೂರ್ವಕಂ ॥ ೫ ॥

ಹೇಮ್ನಾ ವಾ ರಜತೇನಾಪಿ ವೃದ್ಧಿಶ್ರಾದ್ಧಂ ಪ್ರಕಲ್ಪಯೇತ್ ।
ಅನ್ನೇನ ಕಾರಯೇದ್ಯಸ್ತು ಸ ಚಂಡಾಲಸಮೋ ಭವೇತ್ ॥ ೬ ॥

ಕೃತ್ವಾಭ್ಯುದಯಿಕಂ ಶ್ರಾದ್ಧಂ ಪಿತಾ ಪುತ್ರಸ್ಯ ವಾಗ್ಯತಃ ।
ಕುರ್ವೀತ ನಾಮನಿರ್ದೇಶಂ ಸೂತಕಾಂತೇ ಯಥಾವಿಧಿ ॥ ೭ ॥

ಅಸ್ಪಷ್ಟಮರ್ಥಹೀನಂ ಚ ಹ್ಯತಿಗುರ್ವಕ್ಷರಾನ್ವಿತಂ ।
ನ ದದ್ಯಾನ್ನಾಮ ವಿಪ್ರೇಂಪ್ರ ತಥಾಚ ವಿಷಮಾಕ್ಷರಂ ॥ ೮ ॥

ತೃತೀಯೇ ವರ್ಷೇ ಚೌಲಂ ಚ ಪಂಚಮೇ ಷಷ್ಠಸಂಮಿತೇ ।
ಸಪ್ತಮೇಚಾಷ್ಟಮೇ ವಾಽಪಿ ಕುರ್ಯಾದ್ಗೃಹ್ಯೋಕ್ತಮಾರ್ಗತಃ ॥ ೯ ॥

---

೫. ಮಗನು ಹುಟ್ಟಿದ ಕೂಡಲೇ ತಂದೆಯು ಸಚೇಲಸ್ನಾನಮಾಡಿ ಜಾತಕರ್ಮ, ನಾಂದೀಶ್ರಾದ್ಧ ಇವುಗಳನ್ನು ಸ್ವಸ್ತಿವಾಚನಪೂರ್ವಕವಾಗಿ ಆಚರಿಸಬೇಕು.

೬. ಸುವರ್ಣ ಅಥವಾ ರಜತ ಇವುಗಳಿಂದ ವೃದ್ಧಿಶ್ರಾದ್ಧವನ್ನು ನಡೆಸಬೇಕು. ಅನ್ನದಿಂದ ವೃದ್ಧಿಶ್ರಾದ್ಧವನ್ನು ಮಾಡುವವನು ಚಂಡಾಲಸದೃಶನಾಗುವನು.

೭. ತಂದೆಯು ನಿಯಮದಿಂದ ಆಭ್ಯುದಯಿಕಶ್ರಾದ್ಧವನ್ನು ಮಾಡಿ ಆಶೌಚ ಕಳೆದಮೇಲೆ ಹನ್ನೊಂದನೆಯ ದಿನದಲ್ಲಿ ವಿಧಾನೋಕ್ತಪ್ರಕಾರ ನಾಮಕರಣಮಾಡಬೇಕು.

೮. ಬ್ರಾಹ್ಮಣಶ್ರೇಷ್ಠನೇ! ಸ್ಪಷ್ಟವಾಗಿ ತಿಳಿಯದಿರುವ, ಅರ್ಥವಿಲ್ಲದ ಹೆಚ್ಚಾಗಿ ಗುರ್ವಕ್ಷರಗಳನ್ನೊಳಗೊಂಡಿರುವ, ವಿಷಮಸಂಖ್ಯಾತವಾದ ಅಕ್ಷರಗಳುಳ್ಳ ಹೆಸರನ್ನು ಇಡಬಾರದು.

೯. ಮೂರನೆಯ ವರ್ಷ ಅಥವಾ ಐದನೆಯವರ್ಷ ಇಲ್ಲವೇ ಎಂಟನೆಯ ವರ್ಷದಲ್ಲಿಯಾದರೂ ಗೃಹ್ಯಸೂತ್ರೋಕ್ತವಿಧಾನದಿಂದ ಚೌಲವನ್ನು ಮಾಡಬೇಕು.

**ದೈವಯೋಗಾದತಿಕ್ರಾಂತೇ ಗರ್ಭಾಧಾನಾದಿಕರ್ಮಣಿ ।**
**ಕರ್ತವ್ಯಃ ಪಾದಕೃಚ್ಛ್ರೋ ವೈ ಚೌಲೇತ್ವರ್ಧಂ ಪ್ರಕಲ್ಪಯೇತ್ ॥ ೧೦ ॥**

**ಗರ್ಭಾಷ್ಟಮೇ ವಾಬ್ದೇ ವಟುಕಸ್ಯೋಪನಾಯನಂ ।**
**ಆಷೋಡಶಾಬ್ದಪರ್ಯಂತಂ ಗೌಣಂ ಕಾಲಮುಶಂತಿ ಚ ॥ ೧೧ ॥**

**ಗರ್ಭೈಕಾದಶಮೇಽಬ್ದೇ ತು ರಾಜನ್ಯಸ್ಯೋಪನಾಯನಂ ।**
**ಅಷ್ಟಾವಿಂಶಾಬ್ದಪರ್ಯಂತಂ ಕಾಲಮಾಹುರ್ವಿಪಶ್ಚಿತಃ ॥ ೧೨ ॥**

**ವೈಶ್ಯೋಪನಯನಂ ಪ್ರೋಕ್ತಂ ಗರ್ಭಾದ್ದ್ವಾದಶಮೇ ತಥಾ ।**
**ಚತುರ್ವಿಂಶಾಬ್ದಪರ್ಯಂತಂ ಗೌಣಮಾಹುರ್ಮನೀಷಿಣಃ ॥ ೧೩ ॥**

---

೧೦. ದೈವಿಕವಾದ ಅನಾನುಕೂಲಗಳಿಂದ ಗರ್ಭಾಧಾನ ಮುಂತಾದ ಕರ್ಮಗಳು ವಿಹಿತಕಾಲದಲ್ಲಿ ಮಾಡಲು ಸಾಧ್ಯವಾಗದೇ ಮೀರಿದರೆ ಪಾದ ಕೃಚ್ಛ್ರವನ್ನು ಆಚರಿಸಬೇಕು.

೧೧. ಗರ್ಭಧಾರಣವಾದ ಎಂಟನೆಯ ವರ್ಷದಲ್ಲಿ ವಟುವಿಗೆ ಉಪ ನಯನಸಂಸ್ಕಾರ ಮಾಡಬೇಕು. ಇದು ಉತ್ತಮಕಲ್ಪವು. ಉಪನಯನಕ್ಕೆ ಬ್ರಾಹ್ಮಣನಿಗೆ ಹದಿನಾರುವರ್ಷದವರೆಗೆ ಗೌಣಕಾಲವೆಂದು ಹೇಳಿದ್ದಾರೆ.

೧೨. ಕ್ಷತ್ರಿಯನಿಗೆ ಗರ್ಭವಾದ ಹನ್ನೊಂದನೆಯ ವರ್ಷದಲ್ಲಿ ಉಪನಯನ ಮಾಡುವುದು ಉತ್ತಮಕಲ್ಪವು. ಜ್ಞಾನಿಗಳು ಅವನಿಗೆ ಇಪ್ಪತ್ತೆಂಟುವರ್ಷಗಳ ವರೆಗೆ ಉಪನಯಕಾಲವೆಂದು ಹೇಳಿದ್ದಾರೆ.

೧೩. ಗರ್ಭವಾದ ಹನ್ನೆರಡನೆಯ ವರ್ಷದಲ್ಲಿ ವೈಶ್ಯನಿಗೆ ಉಪನಯ ನವು ವಿಹಿತವಾಗಿದೆ. ಅವನಿಗೆ ಇಪ್ಪತ್ತನಾಲ್ಕು ವರ್ಷ ಪರ್ಯಂತವಾಗಿ ಉಪ ನಯನಕ್ಕೆ ಗೌಣಕಾಲವೆಂದು ಜ್ಞಾನಿಗಳು ಹೇಳಿರುತ್ತಾರೆ.

ಏತತ್ಕಾಲಾವಧೇರ್ಯಸ್ಯ ದ್ವಿಜಸ್ಯಾತಿಕ್ರಮೋ ಭವೇತ್ ।
ಸಾವಿತ್ರೀಪತಿತಂ ವಿದ್ಯಾತ್ತಂ ತು ನೈವಾಲಪೇತ್ಕದಾ ॥ ೧೪ ॥

ದ್ವಿಜೋಪನಯನೇ ವಿಪ್ರ ಮುಖ್ಯಕಾಲವ್ಯತಿಕ್ರಮೇ ।
ದ್ವಾದಶಾಬ್ದಂ ಚರೇತ್ಕೃಚ್ಛ್ರಂ ಪಶ್ಚಾಚ್ಚಾಂದ್ರಾಯಣಂ ತಥಾ ॥ ೧೫ ॥

ಸಾಂತಪನದ್ವಯಂ ಚೈವ ಕೃತ್ವಾ ಕರ್ಮ ಸಮಾಚರೇತ್ ।
ಅನ್ಯಥಾ ಪತಿತಂ ವಿದ್ಯಾತ್ಕರ್ತಾಽಪಿ ಬ್ರಹ್ಮಹಾ ಭವೇತ್ ॥ ೧೬ ॥

ಮೌಂಜೀ ವಿಪ್ರಸ್ಯ ವಿಜ್ಞೇಯಾ ಧನುರ್ಜ್ಯಾ ಕ್ಷತ್ರಿಯಸ್ಯ ಚ ।
ಆವೀ ವೈಶ್ಯಸ್ಯ ವಿಜ್ಞೇಯಾ ಶೂದ್ರಾಯತಾಮಜಿನಂ ತಥಾ ।
ವಿಪ್ರಸ್ಯ ಚೋಕ್ತಮೈಣೇಯಂ ರೌರವಂ ಕ್ಷತ್ರಿಯಸ್ಯ ತು ॥ ೧೭ ॥

---

೧೪. ಈರೀತಿಯಾಗಿ ಆಯಾಯಾ ವರ್ಣದವರಿಗೆ ವಿಹಿತವಾದ ಕಾಲವನ್ನು ಮೀರಿದರೆ ಅಂತಹ ದ್ವಿಜನಿಗೆ ಗಾಯತ್ರಿಯ ಅಧಿಕಾರವು ಹೋಗುವುದೆಂದು ತಿಳಿಯಬೇಕು. ಅಂತಹವನ ಸಂಗಡ ಯಾವಾಗಲೂ ಸಂಭಾಷಣೆಯನ್ನೂ ಸಹ ಮಾಡಬಾರದು.

೧೫-೧೬. ದ್ವಿಜನಿಗೆ ಉಪನಯನ ಮಾಡಲು ವಿಹಿತವಾದ ಕಾಲವನ್ನು ಮೀರಿದರೆ ಹನ್ನೆರಡುವರ್ಷ ಕೃಚ್ಛ್ರವನ್ನೂ ಅನಂತರ ಚಾಂದ್ರಾಯಣವ್ರತ ಮತ್ತು ಸಾಂತಪನದ್ವಯವನ್ನೂ ಸಹ ಮಾಡಿ ಉಪನಯನ ಮಾಡಬೇಕು. ಹಾಗೆ ಮಾಡದಿದ್ದರೆ ಅವನು ಪತಿತನಾಗುವನು. ಕರ್ತೃವೂ ಸಹ ಬ್ರಹ್ಮಹತ್ಯೆಗೆ ಭಾಗಿಯಾಗುವನು.

೧೭. ಬ್ರಾಹ್ಮಣನು ನೊದೆಹುಲ್ಲಿನ ಹುರಿಯನ್ನೂ, ಕ್ಷತ್ರಿಯನು ಬಿಲ್ಲನ್ನು ಕಟ್ಟುವ ಹಗ್ಗವನ್ನೂ, ವೈಶ್ಯನು ಉಣ್ಣೆಯದಾರವನ್ನೂ ಕಟಿಸೂತ್ರವಾಗಿ ಉಪಯೋಗಿಸಬೇಕು. ಬ್ರಾಹ್ಮಣನು ಜಿಂಕೆಯ ಚರ್ಮವನ್ನೂ, ಕ್ಷತ್ರಿಯನು ರುರು ಎಂಬ ಒಂದು ಜಾತಿಯ ಕೃಷ್ಣಸಾರ ಮೃಗದ ಚರ್ಮವನ್ನು ಸಹ ಯಜ್ಞೋಪವೀತಕ್ಕೆ ಸೇರಿಸಿ ಧರಿಸಬೇಕು.

ಆಜಂ ವೈಶ್ಯಸ್ಯ ವಿಜ್ಞೇಯಂ ದಂಡಾನ್ವಕ್ಷ್ಯೇ ಯಥಾಕ್ರಮಂ ।
ಪಾಲಾಶಂ ಬ್ರಾಹ್ಮಣಸ್ಯೋಕ್ತಂ ನೃಪಸ್ಯೋದುಂಬರಂ ತಥಾ ॥ ೧೮ ॥

ಬೈಲ್ವಂ ವೈಶ್ಯಸ್ಯ ವಿಜ್ಞೇಯಂ ತತ್ಪ್ರಮಾಣಂ ಶೃಣುಷ್ವ ಮೇ ।
ವಿಪ್ರಸ್ಯ ಕೇಶಮಾನಂ ಸ್ಯಾದಾಲಲಾಟಂ ನೃಪಸ್ಯ ಚ ॥ ೧೯ ॥

ನಾಸಾಗ್ರಸಂಮಿತಂ ದಂಡಂ ವೈಶ್ಯಸ್ಯಾಹುರ್ವಿಪಶ್ಚಿತಃ ।
ತಥಾ ವಾಸಾಂಸಿ ವಕ್ಷ್ಯಾಮಿ ವಿಪ್ರಾದೀನಾಂ ಯಥಾಕ್ರಮಂ ॥ ೨೦ ॥

ಕಷಾಯಂ ಚೈವ ಮಾಂಜಿಷ್ಠಂ ಹಾರಿದ್ರಂ ಚ ಪ್ರಕೀರ್ತಿತಂ ।
ಉಪನೀತೋ ದ್ವಿಜೋ ವಿಪ್ರ ಪರಿಚರ್ಯಾಪರೋ ಗುರೋಃ ॥ ೨೧ ॥

---

೧೮. ವೈಶ್ಯನು ಆಡಿನ ಚರ್ಮವನ್ನು ಯಜ್ಞೋಪವೀತಕ್ಕೆ ಸೇರಿಸಿ ಧರಿಸ ಬೇಕೆಂದು ವಿಹಿತವಾಗಿದೆ. ಕ್ರಮವಾಗಿ ಆಯಾಯಾ ಜಾತಿಯವರಿಗೆ ದಂಡ ಗಳನ್ನು ಹೇಳುತ್ತೇನೆ. ಬ್ರಾಹ್ಮಣನಿಗೆ ಮುತ್ತುಗದ ದಂಡವೂ, ಕ್ಷತ್ರಿಯನಿಗೆ ಅತ್ತಿದಂಡವೂ ವಿಹಿತವಾಗಿದೆ.

೧೯. ವೈಶ್ಯನಿಗೆ ಬಿಲ್ವದಂಡವು ವಿಹಿತವಾಗಿವೆ. ಅವುಗಳ ಉದ್ದಳತೆ ಗಳನ್ನು ಹೇಳುತ್ತೇನೆ ಕೇಳು. ಕೇಶದವರೆಗೆ ಉದ್ದವಾಗಿರುವ ದಂಡವು ಬ್ರಾಹ್ಮ ಣನಿಗೂ, ಹಣೆಯಪರ್ಯಂತವಾಗಿ ಉದ್ದವಿರುವುದು ಕ್ಷತ್ರಿಯನಿಗೂ ವಿಹಿತ ವಾಗಿದೆ.

೨೦. ಮೂಗಿನ ಕೊನೆಯವರೆಗೆ ಉದ್ದವಾಗಿರುವ ದಂಡವನ್ನು ವೈಶ್ಯನು ಉಪಯೋಗಿಸಬೇಕೆಂದು ಜ್ಞಾನಿಗಳು ಹೇಳುತ್ತಾರೆ.

೨೧. ಹಾಗೆಯೇ ಬ್ರಾಹ್ಮಣಾದಿಗಳಿಗೆ ಕ್ರಮವಾಗಿ ವಸ್ತ್ರಗಳನ್ನು ಹೇಳು ತ್ತೇನೆ. ಬ್ರಾಹ್ಮಣನು ಕಾವೀಬಣ್ಣದ ವಸ್ತ್ರವನ್ನೂ, ಕ್ಷತ್ರಿಯನು ಉರುಮಂಜಿ ಬಣ್ಣದ ವಸ್ತ್ರವನ್ನೂ, ವೈಶ್ಯನು ಹಳದೀಬಣ್ಣದ ವಸ್ತ್ರವನ್ನೂ ಉಪನಯನ ಕಾಲದಲ್ಲಿ ಧರಿಸಬೇಕು. ಉಪನಯವಾದಮೇಲೆ ದ್ವಿಜನು ಗುರುಸೇವೆಯಲ್ಲಿ ನಿರತನಾಗಿರಬೇಕು.

ವೇದಗ್ರಹಣಪರ್ಯಂತಂ ನಿವಸೇದ್ಗುರುವೇಶ್ಮನಿ ।
ಪ್ರಾತಃಸ್ನಾಯೀ ಭವೇದ್ವರ್ಣೀ ಸಮಿತ್ಕುಶಫಲಾದಿಕಾನ್ ॥ ೨೨ ॥

ಗುರ್ವರ್ಥಮಾಹರೇನ್ನಿತ್ಯಂ ಕಲ್ಯೇ ಕಲ್ಯೇ ಮುನೀಶ್ವರ ।
ಯಜ್ಞೋಪವೀತಮಜಿನಂ ದಂಡಂ ಚ ಮುನಿಸತ್ತಮ ॥ ೨೩ ॥

ನಷ್ಟೇ ನಷ್ಟೇ ನವಂ ಮಂತ್ರಾದ್ಧೃತ್ವಾ ಭ್ರಷ್ಟಂ ಜಲೇ ಕ್ಷಿಪೇತ್ ।
ವರ್ಣಿನೋ ವರ್ತನಂ ಪ್ರಾಹುರ್ಭಿಕ್ಷಾನ್ನೇನೈವ ಕೇವಲಂ ॥ ೨೪ ॥

ಭಿಕ್ಷಾ ಚ ಶ್ರೋತ್ರಿಯಾಗಾರಾದಾಹರೇತ್ಪ್ರಯತೇಂದ್ರಿಯಃ ।
ಭವತ್ಪೂರ್ವಂ ಬ್ರಾಹ್ಮಣಸ್ಯ ಭವನ್ಮಧ್ಯೇ ನೃಪಸ್ಯ ಚ ॥ ೨೫ ॥

ಭವದಂತ್ಯಂ ವಿಶಃ ಪ್ರೋಕ್ತಂ ಭಿಕ್ಷಾಹರಣಕಂ ವಚಃ ।
ಸಾಯಂ ಪ್ರಾತರ್ವಹ್ನಿಕಾರ್ಯಂ ಯಥಾಚಾರಂ ಜಿತೇಂದ್ರಿಯಃ ॥ ೨೬ ॥

---

೨೨-೨೩. ಅವನು ವೇದಾಧ್ಯಯನ ಮುಗಿಯುವವರೆಗೂ ಗುರುಕುಲ ವಾಸಮಾಡಬೇಕು. ಪ್ರತಿದಿನವೂ ಉಷಃಕಾಲದಲ್ಲೆದ್ದು ಸ್ನಾನಮಾಡಿ ಗುರುಗಳಿಗೆ ಸಮಿತ್ತುದರ್ಭೆ ಫಲ ಮುಂತಾದುವುಗಳನ್ನು ತಂದು ಕೊಡಬೇಕು.

೨೩-೨೪. ಮುನಿವರ್ಯನೇ! ಯಜ್ಞೋಪವೀತ, ಕೃಷ್ಣಾಜಿನ ಮತ್ತು ದಂಡ ಇವುಗಳು ಜೀರ್ಣವಾದಾಗಲೆಲ್ಲಾ ನೂತನವಾದ ಬೇರೆ ಯಜ್ಞೋಪವೀತಾದಿಗಳನ್ನು ಮಂತ್ರಪೂರ್ವಕನಾಗಿ ಧರಿಸಿ ಹಳೆಯದನ್ನು ನೀರಿನಲ್ಲಿ ಹಾಕಬೇಕು. ಬ್ರಹ್ಮಚಾರಿಯು ಭಿಕ್ಷಾನ್ನದಿಂದಲೇ ಜೀವಿಸಬೇಕೆಂದು ಹೇಳಿದ್ದಾರೆ.

೨೫. ಭಿಕ್ಷೆಯನ್ನೂ ಸಹ ಪ್ರಯತ್ನಪೂರ್ವಕವಾಗಿ ಶ್ರೋತ್ರಿಯರ ಮನೆಯಿಂದಲೇ ತೆಗೆದುಕೊಳ್ಳಬೇಕು. ಬ್ರಾಹ್ಮಣನು 'ಭವಾನ್' ಎಂಬಶಬ್ದವನ್ನು ಆದಿಯಲ್ಲಿ ಎಂದರೆ ಭಿಕ್ಷೆಯನ್ನುಕೇಳುವಾಗ "ಭವಾನ್ ಭಿಕ್ಷಾಂ ದದಾತು'' ಎಂಬುದಾಗಿ ಹೇಳಬೇಕು. ಕ್ಷತ್ರಿಯನು ಭಿಕ್ಷೆಯನ್ನು ಕೇಳುವಾಗ "ಭಿಕ್ಷಾಂ ಭವಾನ್ ದದಾತು" ಎಂಬುದಾಗಿ ಮಧ್ಯದಲ್ಲಿ 'ಭವಾನ್' ಎಂಬ ಶಬ್ದವನ್ನೂ ಹೇಳಬೇಕು.

೨೬. ವೈಶ್ಯನು ''ಭಿಕ್ಷಾಂ ದದಾತು ಭವಾನ್'' ಎಂಬುದಾಗಿ ಕೊನೆಯಲ್ಲಿ ''ಭವಾನ್'' ಎಂಬ ಶಬ್ದವನ್ನು ಹೇಳಬೇಕು. ಬ್ರಹ್ಮಚಾರಿಯು ಜಿತೇಂ

ಕುರ್ಯಾತ್ಪ್ರತಿದಿನಂ ವರ್ಣೀ ಬ್ರಹ್ಮಯಜ್ಞಂ ಚ ತರ್ಪಣಂ ।
ಅಗ್ನಿಕಾರ್ಯಪರಿತ್ಯಾಗೀ ಪತಿತಃ ಪ್ರೋಚ್ಯತೇ ಬುಧೈಃ ॥ ೨೭ ॥

ಬ್ರಹ್ಮಯಜ್ಞವಿಹೀನಶ್ಚ ಬ್ರಹ್ಮಹಾ ಪರಿಕೀರ್ತಿತಃ ।
ದೇವತಾಭ್ಯರ್ಚನಂ ಕುರ್ಯಾಚ್ಛುಶ್ರೂಷಾನುಪದಂ ಗುರೋಃ ॥ ೨೮ ॥

ಭಿಕ್ಷಾನ್ನಂ ಭೋಜಯೇನ್ನಿತ್ಯಂ ನೈಕಾನ್ನಾಶೀ ಕದಾಚನ ।
ಆನೀಯಾನಿಂದ್ಯವಿಪ್ರಾಣಾಂ ಗೃಹಾದ್ಭಿಕ್ಷಾಂ ಜಿತೇಂದ್ರಿಯಃ ॥ ೨೯ ॥

ನಿವೇದ್ಯ ಗುರವೇಽಶ್ನೀಯಾದ್ವಾಗ್ಯತಸ್ತದನುಜ್ಞಯಾ ।
ಮಧುಸ್ತ್ರೀಮಾಂಸಲವಣಂ ತಾಂಬೂಲಂ ದಂತಧಾವನಂ ॥ ೩೦ ॥

ಉಚ್ಛಿಷ್ಟಭೋಜನಂ ಚೈವ ದಿವಾ ಸ್ವಾಪಂ ಚ ವರ್ಜಯೇತ್ ।
ಛತ್ರಪಾದುಕಗಂಧಾಶ್ಚ ತಥಾ ಮಾಲ್ಯಾನುಲೇಪನಂ ॥ ೩೧ ॥

---

ದ್ರಿಯನಾಗಿ ಪ್ರಾತಃಕಾಲ ಮತ್ತು ಸಾಯಂಕಾಲಗಳಲ್ಲಿ ಪ್ರತಿದಿನವೂ ಸಂಪ ದಾಯಪ್ರಕಾರ ಅಗ್ನಿಕಾರ್ಯವನ್ನು ಮಾಡಬೇಕು.

೨೭. ಅವನು ಪ್ರತಿದಿನವೂ ಬ್ರಹ್ಮಯಜ್ಞ ಮತ್ತು ತರ್ಪಣಗಳನ್ನು ಆಚರಿಸಬೇಕು. ಅಗ್ನಿಕಾರ್ಯವನ್ನು ಬಿಡುವವನು ಪತಿಪನಾಗುವನೆಂದು ಜ್ಞಾನಿಗಳು ಹೇಳಿದ್ದಾರೆ.

೨೮. ಬ್ರಹ್ಮಯಜ್ಞಮಾಡದಿರುವವನು ಬ್ರಹ್ಮಘಾತಕನೆಂದು ಹೇಳಲ್ಪಟ್ಟಿದೆ. ದೇವರಪೂಜೆ, ಗುರು ಶುಶ್ರೂಷೆ ಇವುಗಳು ಬ್ರಹ್ಮಚಾರಿಗೆ ಅವಶ್ಯ ಕರ್ತವ್ಯವು.

೨೯-೩೦. ಪ್ರತಿದಿನವೂ ಬ್ರಹ್ಮಚಾರಿಯು ಭಿಕ್ಷಾನ್ನ ಭೋಜನ ಮಾಡಬೇಕು. ಯಾವಾಗಲೂ ಒಂದೇ ಮನೆಯಲ್ಲಿ ಪೂಟಮಾಡಬಾರದು. ಶಿಷ್ಟ ಬ್ರಾಹ್ಮಣರ ಮನೆಗಳಿಂದ ಭಿಕ್ಷೆಯನ್ನು ತೆಗೆದುಕೊಂಡು ಬಂದು ಜಿತೇಂದ್ರಿಯನಾಗಿ ಗುರುಗಳಿಗೆ ನಿವೇದನೆಮಾಡಿ ಅವರ ಅನುಜ್ಞೆಯನ್ನು ಪಡೆದು ನಿಯಮ್ನದಿಂದ ಭೋಜನಮಾಡಬೇಕು.

೩೦-೩೧. ಮಧು (ಜೇನುತುಪ್ಪ) ಹೆಂಗಸು, ಮಾಂಸ, ಉಪ್ಪು,

ಜಲಕೇಲಿಂ ನೃತ್ಯಗೀತವಾದ್ಯಂ ತು ಪರಿವರ್ಜಯೇತ್ ।
ಪರಿವಾದಂ ಚೋಪತಾಪಂ ವಿಪ್ರಲಾಪಂ ತಥಾಂಜನಂ ॥ ೩೨ ॥

ಪಾಷಂಡಜನಸಂಯೋಗಂ ಶೂದ್ರಸಂಗಂ ಚ ವರ್ಜಯೇತ್ ।
ಅಭಿವಾದನಶೀಲಃ ಸ್ಯಾದ್ವೃದ್ಧೇಷು ಚ ಯಥಾಕ್ರಮಂ ॥ ೩೩ ॥

ಜ್ಞಾನವೃದ್ಧಾಸ್ತಪೋವೃದ್ಧಾ ವಯೋವೃದ್ಧಾಃ ಇತಿ ತ್ರಯಃ ।
ಆಧ್ಯಾತ್ಮಿಕಾದಿದುಃಖಾನಿ ನಿವಾರಯತಿ ಯೋ ಗುರುಃ ॥ ೩೪ ॥

ವೇದಶಾಸ್ತ್ರೋಪದೇಶೇನ ತಂ ಪೂರ್ವಮಭಿವಾದಯೇತ್ ।
ಅಸಾವಹಮಿತಿ ಬ್ರೂಯಾದ್ದ್ವಿಜೋ ವೈ ಹ್ಯಭಿವಾದನೇ ॥ ೩೫ ॥

---

ತಾಂಬೂಲ, ಹಲ್ಲುಜ್ಜುವುದು, ಇತರರ ಎಂಜಲನ್ನು ತಿನ್ನುವುದು, ಹಗಲು ನಿದ್ರೆ ಇವುಗಳನ್ನು ಪರಿತ್ಯಾಗ ಮಾಡಬೇಕು.

೩೧-೩೨. ಛತ್ರಿ, ಚಪ್ಪಲಿ, ಗಂಧ ಮತ್ತು ಮಾಲ್ಯಧಾರಣೆ, ಜಲಕ್ರೀಡೆ ನರ್ತನ, ಗಾನ, ವಾದ್ಯ ಇವುಗಳನ್ನು ಬ್ರಹ್ಮಚಾರಿಯು ತ್ಯಜಿಸಬೇಕು.

೩೨-೩೩. ನಿಂದಿಸುವುದು, ಬೆಂಕಿಕಾಯಿಸಿಕೊಳ್ಳುವುದು, ವಿರುದ್ಧನುಡಿ ಮತ್ತು ಅಂಜನ, ಪಾಷಂಡಿಗಳ ಸಹವಾಸ ಶೂದ್ರಜನಗಳ ಸಹವಾಸ ಇವುಗಳನ್ನೆಲ್ಲಾ ಬ್ರಹ್ಮಚಾರಿಯು ತ್ಯಜಿಸಬೇಕು. ಹಿರಿಯರಲ್ಲಿ ಕ್ರಮಪ್ರಕಾರ ಅಭಿವಾದನೆ ಮಾಡಬೇಕು.

೩೪. ಜ್ಞಾನವೃದ್ಧರು ಎಂದರೆ ತನಗಿಂತ ಹೆಚ್ಚು ಜ್ಞಾನವುಳ್ಳವರು, ಹೆಚ್ಚಾಗಿ ತಪಸ್ಸನ್ನಾಚರಿಸಿರುವ ತಪೋವೃದ್ಧರು, ಹೆಚ್ಚು ವಯಸ್ಸಾದವರು ಎಂಬುದಾಗಿ ಮೂರು ವಿಧವಾದ ವೃದ್ಧರಿರುವರು. ಆಧ್ಯಾತ್ಮಿಕ ಮುಂತಾದ ದುಃಖವನ್ನು ಸತ್ತತ್ತ್ವೋಪದೇಶದಿಂದ ಪರಿಹರಿಸುವವನು "ಗುರು" ವೆನಿಸುವನು.

೩೫. ಗುರುವು ವೇದಶಾಸ್ತ್ರಗಳನ್ನುಪದೇಶಿಸುವುದರಿಂದ ಅವನಿಗೇ ಮೊದಲು ಅಭಿವಾದನೆಮಾಡಬೇಕು. ದ್ವಿಜನು ಅಭಿವಾದನೆ ಮಾಡುವಾಗ ಇಂತಹ ನಾನು (ಅಸಾವಹಂ) ಎಂಬುದಾಗಿ ಪರಿಚಯ ಹೇಳಬೇಕು.

ನಾಭಿವಾದ್ಯಾಶ್ಚ ವಿಪ್ರೇಣ ಕ್ಷತ್ರಿಯಾದ್ಯಾಃ ಕಥಂಚನ ।
ನಾಸ್ತಿಕಂ ಭಿನ್ನಮರ್ಯಾದಂ ಕೃತಘ್ನಂ ಗ್ರಾಮಯಾಜಕಂ ॥ ೩೬ ॥

ಸ್ತೇನಂ ಚ ಕಿತವಂ ಚೈವ ಕದಾಚಿನ್ನಾಭಿವಾದಯೇತ್ ।
ಪಾಷಂಡಂ ಪತಿತಂ ವ್ರಾತ್ಯಂ ತಥಾ ನಕ್ಷತ್ರಜೀವಿನಂ ॥ ೩೭ ॥

ತಥಾ ಪಾತಕಿನಂ ಚೈವ ಕದಾಚಿನ್ನಾಭಿವಾದಯೇತ್ ।
ಉನ್ಮತ್ತಂ ಚ ಶಠಂ ಧೂರ್ತಂ ಧಾವಂತಮಶುಚಿಂ ತಥಾ ॥ ೩೮ ॥

ಅಭ್ಯಕ್ತಶಿರಸಂ ಚೈವ ಜಪಂತಂ ನಾಭಿವಾದಯೇತ್ ।
ವಿವಾದಶೀಲಿನಂ ಚಂಡಂ ವಮಂತಂ ಜಲಮಧ್ಯಗಂ ॥ ೩೯ ॥

---

೩೬-೩೭. ಬ್ರಾಹ್ಮಣನು ಕ್ಷತ್ರಿಯಮುಂತಾದವರಿಗೆ ಹೇಗೂ ಅಭಿವಾದನೆ ಮಾಡಬಾರದು. ನಾಸ್ತಿಕ, ವಿರುದ್ಧಸಂಪ್ರದಾಯವನ್ನಾಶ್ರಯಿಸಿರುವವನು, ಉಪಕಾರವನ್ನು ಮರೆತವನು, ಗ್ರಾಮಪುರೋಹಿತ, ಕಳ್ಳ, ಮೋಸಗಾರ ಇವರುಗಳಿಗೆ ಯಾವಾಗಲೂ ಅಭಿವಾದನೆಮಾಡಕೂಡದು.

೩೭-೩೮. ಪಾಷಂಡಿ, ಪತಿತ, ವ್ರಾತ್ಯ, ಜೋಯಿಸ ಮತ್ತು ಪಂಚಮಹಾಪಾತಕಿಗಳು ಇವರನ್ನು ಯಾವಾಗಲೂ ಅಭಿವಾದಿಸಕೂಡದು. ಅಂತೆಯೇ ಉನ್ಮತ್ತ, ದುಷ್ಟ, ಧೂರ್ತ, ಓಡುತ್ತಿರುವವನು, ಅಶುದ್ಧನಾಗಿರುವವನು ಇವರಿಗೂ ಸಹ ಬ್ರಾಹ್ಮಣನು ಅಭಿವಾದನೆ ಮಾಡಕೂಡದು.

೩೯. ತಲೆಗೆ ಎಣ್ಣೆಯನ್ನು ಹಚ್ಚಿಕೊಂಡು ಅಭ್ಯಂಜನಮಾಡಿಕೊಳ್ಳುತ್ತಿರುವವನು, ಜಪ ಮಾಡುತ್ತಿರುವವನು, ಜಗಳವಾಡುತ್ತಿರುವವನು, ಕ್ರೂರನು, ವಾಂತಿ ಮಾಡುತ್ತಿರುವವನು ನೀರಿನ ಮಧ್ಯದಲ್ಲಿ ನಿಂತಿರುವವನು ಇವರಿಗೆ ನಮಸ್ಕಾರ ಮಾಡಬಾರದು.

ಭಿಕ್ಷಾನ್ನಧಾರಿಣಂ ಚೈವ ಶಯಾನಂ ನಾಭಿವಾದಯೇತ್ ।
ಭರ್ತೃಘ್ನೀಂ ಪುಷ್ಪಿಣೀಂ ಜಾರಾಂ ಸೂತಿಕಾಂ ಗರ್ಭಪಾತನೀಂ ।
ಕೃತಘ್ನೀಂ ಚ ತಥಾ ಚಂಡೀಂ ಕದಾಚಿನ್ನಾಭಿವಾದಯೇತ್ ॥ ೪೦ ॥

ಸಭಾಯಾಂ ಯಜ್ಞಶಾಲಾಯಾಂ ದೇವತಾಯತನೇಷ್ವಪಿ ॥ ೪೧ ॥

ಪ್ರತ್ಯೇಕಂ ತು ನಮಸ್ಕಾರೋ ಹಂತಿ ಪುಣ್ಯಾಂ ಪುರಾಕೃತಂ ।
ಶ್ರಾದ್ಧಂ ವ್ರತಂ ತಥಾ ದಾನಂ ದೇವತಾಭ್ಯರ್ಚನಂ ತಥಾ ॥ ೪೨ ॥

ಯಜ್ಞಂ ಚ ತರ್ಪಣಂ ಚೈವ ಕುರ್ವಂತಂ ನಾಭಿವಾದಯೇತ್ ।
ಕೃತೇಽಭಿವಾದನೇ ಯಸ್ತು ನ ಕುರ್ಯಾತ್ಪ್ರತಿವಾದನಂ ॥ ೪೩ ॥

ನಾಭಿವಾದ್ಯಃ ಸ ವಿಜ್ಞೇಯೋ ಯಥಾ ಶೂದ್ರಸ್ತಥೈವ ಸಃ ।
ಪ್ರಕ್ಷಾಲ್ಯ ಪಾದಾವಾಚಮ್ಯ ಗುರೋರಭಿಮುಖಃ ಸದಾ ॥ ೪೪ ॥

---

೪೦. ಭಿಕ್ಷಾನ್ನವನ್ನು ಧರಿಸಿರುವವನು ಮಲಗಿರುವವನು ಇವರನ್ನು ನಮ್ಕರಿಸಬಾರದು. ಗಂಡನನ್ನು ಸಂಹರಿಸಿದವಳು, ರಜಸ್ವಲೆಯಾಗಿರುವವಳು, ವ್ಯಭಿಚಾರಿಣಿಯು, ಪ್ರಸವಿಸಿರುವವಳು, ಗರ್ಭವನ್ನು ನಾಶಪಡಿಸಿದವಳು, ಉಪಕಾರಹೊಂದಿ ಅದನ್ನು ಮರೆತಿರುವವಳು, ಹಠ ಮಾಡುವವಳು ಇಂತಹವರಿಗೆ ಯಾವಾಗಲೂ ಅಭಿವಾದನೆ ಮಾಡಬಾರದು.

೪೧-೪೨. ಸಭೆ, ಯಜ್ಞಶಾಲೆ, ದೇವಾಲಯ ಇವುಗಳಲ್ಲಿ ನೆರೆದಿದ್ದವರಿಗೆ ಪ್ರತ್ಯೇಕವಾಗಿ ನಮಸ್ಕಾರಮಾಡಬಾರದು. ಹಾಗೆ ಮಾಡಿದರೆ ಪೂರ್ವದಲ್ಲಿ ಸಂಪಾದಿಸಿದ ಪುಣ್ಯವೆಲ್ಲವೂ ನಾಶವಾಗುತ್ತದೆ.

೪೨-೪೩. ಶ್ರಾದ್ಧ ವ್ರತ, ದಾನ, ದೇವರಪೂಜೆ, ಯಜ್ಞ ಮತ್ತು ತರ್ಪಣ ಇವುಗಳನ್ನು ಮಾಡುತ್ತಿರುವವರಿಗೆ ಆಗ ನಮಸ್ಕಾರ ಮಾಡಬಾರದು.

೪೩–೪೪. ಅಭಿವಾದನ ಮಾಡಿದರೆ ಪ್ರತಿಯಾಗಿ ಅಭಿವಾದನ ಮಾಡದಿರುವವನಿಗೆ ನಮಸ್ಕಾರ ಮಾಡಕೂಡದು. ಶೂದ್ರನಂತೆ ಅಂತಹವನನ್ನು ಅಭಿವಾದನಾನರ್ಹನೆಂದು ತಿಳಿಯಬೇಕು.

ತಸ್ಯ ಪಾದೌ ಚ ಸಂಗೃಹ್ಯ ಅಧೀಯೀತ ವಿಚಕ್ಷಣಃ ।
ಅಷ್ಟಕಾಸು ಚತುರ್ದಶ್ಯಾಂ ಪ್ರತಿಪತ್ಪರ್ವಣೋಸ್ತಥಾ ॥ ೪೫ ॥

ಮಹಾಭರಣ್ಯಾಂ ವಿಪ್ರೇಂದ್ರ ಶ್ರವಣದ್ವಾದಶೀದಿನೇ ।
ಭಾದ್ರಪದಾಪರಪಕ್ಷೇ ದ್ವಿತೀಯಾಯಾಂ ತಥೈವ ಚ ॥ ೪೬ ॥

ಮಾಘಸ್ಯ ಶುಕ್ಲಸಪ್ತಮ್ಯಾಂ ನವಮ್ಯಾಮಾಶ್ವಿನಸ್ಯ ಚ ।
ಪರಿವೇಶಂ ಗತೇ ಸೂರ್ಯೇ ಶ್ರೋತ್ರಿಯೇ ಗೃಹಮಾಗತೇ ॥ ೪೭ ॥

ಬಂಧಿತೇ ಬ್ರಾಹ್ಮಣೇ ಚೈವ ಪ್ರವೃದ್ಧಕಲಹೇ ತಥಾ ।
ಸಂಧ್ಯಾಯಾಂ ಗರ್ಜಿತೇ ಮೇಘೇ ಹ್ಯಕಾಲೇ ಪರಿವರ್ಷಣೇ ॥ ೪೮ ॥

ಉಲ್ಕಾಶನಿಪ್ರಪಾತೇ ಚ ತಥಾ ವಿಪ್ರೇಽವಮಾನಿತೇ ।
ಮನ್ವಾದಿಷು ಚ ದೇವರ್ಷೇ ಯುಗಾದಿಷು ಚತುರ್ಷ್ವಪಿ ॥ ೪೯ ॥

---

೪೪-೪೫. ವಿವೇಕಿಯಾದ ಬ್ರಹ್ಮಚಾರಿಯು ಕಾಲು ತೊಳೆದುಕೊಂಡು ಗುರುಗಳೆದುರಿಗೆ ಕುಳಿತು ಆಚಮನ ಮಾಡಿ ಗುರುಗಳ ಪಾದಸ್ಪರ್ಶಮಾಡಿ ಅಧ್ಯಯನವನ್ನಾರಂಭಿಸಬೇಕು.

೪೫-೫೦. ಬ್ರಾಹ್ಮಣಶ್ರೇಷ್ಠನೇ! ಅಷ್ಟಕಾತಿಥಿಗಳು, ಚತುರ್ದಶೀ, ಪಾಡ್ಯ, ಪೂರ್ಣಿಮಾ, ಅಮಾವಾಸ್ಯೆ, ಮಹಾಭರಣಿ, ಶ್ರವಣನಕ್ಷತ್ರಯುಕ್ತ ದ್ವಾದಶೀ, ಭಾದ್ರಪದಕೃಷ್ಣಪಕ್ಷದ್ವಿತಿಯಾ, ಮಾಘಶುಕ್ಲ ಸಪ್ತಮಿ (ರಥ ಸಪ್ತಮಿ) ಆಶ್ವಯುಜ ಶುಕ್ಲನವಮಿ (ಮಹಾನವಮಿ) ಸೂರ್ಯನಿಗೆ ಸುತ್ತಲೂ ಗೂಡುಕಟ್ಟಿದ ದಿನ, ಶ್ರೋತ್ರಿಯರಾದ ಜ್ಞಾನಿಗಳು ಮನೆಗೆಬಂದ ದಿನ, ಬ್ರಾಹ್ಮಣನಿಗೆ ಬಂಧನವಾದ ದಿನ, ಕಲಹವು ಅಭಿವೃದ್ಧಿಯಾದಾಗ, ಸಂಧ್ಯಾ ಕಾಲ, ಮೇಘಗರ್ಜನೆ, ಅಕಾಲವೃಷ್ಟಿ, ಉರಿಯುವಕೊಳ್ಳಿ ಕಲ್ಲು ಇವುಗಳ ಪತನ ಮತ್ತು ಬ್ರಾಹ್ಮಣನಿಗೆ ಅವಮಾನ ಇವುಗಳು ಸಂಭವಿಸಿದಾಗ, ಮನ್ವಾದಿಗಳು ಮತ್ತು ನಾಲ್ಕು ಯುಗಾದಿಗಳು ಈ ದಿವಸಗಳಲ್ಲಿ ಕರ್ಮಫಲವನ್ನಪೇಕ್ಷಿಸುವ

ನಾಧೀಯೀತ ದ್ವಿಜಃ ಕಶ್ಚಿತ್ಸರ್ವಕರ್ಮಫಲೋತ್ಸುಕಃ ।
ತೃತೀಯಾ ಮಾಧವೇ ಶುಕ್ಲಾ ಭಾದ್ರೇ ಕೃಷ್ಣಾ ತ್ರಯೋದಶೀ ॥ ೫೦ ॥

ಕಾರ್ತೀಕೇ ನವಮೀ ಶುದ್ಧಾ ಮಾಘೇ ಪಂಚದಶೀ ತಿಥಿಃ ।
ಏತಾ ಯುಗಾದ್ಯಾಃ ಕಥಿತಾ ದತ್ತಸ್ಯಾಕ್ಷಯಕಾರಕಾಃ ॥ ೫೧ ॥

ಮನ್ವಾದೀಂಶ್ಚ ಪ್ರವಕ್ಷ್ಯಾಮಿ ಶೃಣುಷ್ವ ಸುಸಮಾಹಿತಃ ।
ಆಶ್ವಯುಕ್ಶುಕ್ಲನವಮೀ ಕಾರ್ತೀಕೇ ದ್ವಾದಶೀ ಸಿತಾ ॥ ೫೨ ॥

ತೃತೀಯಾ ಚೈತ್ರಮಾಸಸ್ಯ ತಥಾ ಭಾದ್ರಪದಸ್ಯ ಚ ।
ಆಷಾಢಶುಕ್ಲದಶಮೀ ಸಿತಾ ಮಾಘಸ್ಯ ಸಪ್ತಮೀ ॥ ೫೩ ॥

ಶ್ರಾವಣಸ್ಯಾಷ್ಟಮೀ ಕೃಷ್ಣಾ ತಥಾಷಾಢೀ ಚ ಪೂರ್ಣಿಮಾ ।
ಫಾಲ್ಗುನಸ್ಯ ತ್ವಮಾವಾಸ್ಯಾ ಪೌಷಸ್ಯೈಕಾದಶೀ ಸಿತಾ ॥ ೫೪ ॥

ಕಾರ್ತೀಕೀ ಫಾಲ್ಗುನೀ ಚೈತ್ರೀ ಜ್ಯೈಷ್ಠೀ ಪಂಚದಶೀ ಸಿತಾ ।
ಮನ್ವಾದಯಃ ಸಮಾಖ್ಯಾತಾಃ ದತ್ತಸ್ಯಾಕ್ಷಯಕಾರಕಾಃ ॥ ೫೫ ॥

---

ದ್ವಿಜನು ಅಧ್ಯಯನ ಮಾಡಬಾರದು ಎಂದರೆ ಇವುಗಳೆಲ್ಲವೂ ಅನಧ್ಯಯನತಿಥಿಗಳೆಂದು ತಿಳಿಯಬೇಕು.

೫೦-೫೧. ವೈಶಾಖ ಶುಕ್ಲ ತದಿಗೆ, ಭಾದ್ರಪದ ಕೃಷ್ಣ ತ್ರಯೋದಶೀ, ಕಾರ್ತೀಕ ಶುದ್ಧ ನವಮೀ, ಮಾಘಪೂರ್ಣಿಮಾ ಈ ನಾಲ್ಕು ತಿಥಿಗಳು ಯುಗಾದಿ ಎಂದು ಉಕ್ತವಾಗಿವೆ. ಈ ದಿನಗಳಲ್ಲಿ ಮಾಡಿದ ದಾನವು ಅನಂತಫಲಪ್ರದವು.

೫೨-೫೫. ಮನ್ವಾದಿಗಳನ್ನು ಹೇಳುತ್ತೇನೆ. ಸಮಾಧಾನಚಿತ್ತದಿಂದ ಕೇಳು. ಆಶ್ವಯುಜಮಾಸಶುಕ್ಲಪಕ್ಷದನವಮೀ, ಕಾರ್ತೀಕ ಶುದ್ಧ ದ್ವಾದಶಿ, ಚೈತ್ರ ಶುದ್ಧ ತದಿಗೆ, ಭಾದ್ರಪದಶುದ್ಧತದಿಗೆ, ಆಷಾಢ ಶುಕ್ಲ ದಶಮಿ, ಮಾಘ ಶುದ್ಧಸಪ್ತಮಿ, ಶ್ರಾವಣಕೃಷ್ಣಾಷ್ಟಮಿ, ಆಷಾಢಪೂರ್ಣಿಮಾ, ಫಾಲ್ಗುಣಮಾಸದ ಅಮಾವಾಸ್ಯೆ, ಪುಷ್ಯಶುದ್ಧಏಕಾದಶಿ, ಕಾರ್ತಿಕ ಫಾಲ್ಗುಣ ಚೈತ್ರ ಮತ್ತು ಜೇಷ್ಠಮಾಸಗಳ ಪೂರ್ಣಿಮೆಗಳು, ಈ ಹದಿನಾಲ್ಕು ತಿಥಿಗಳು ಮನ್ವಾದಿಗಳೆಂದು ಹೇಳಲ್ಪಟ್ಟಿವೆ. ಈ ದಿನಗಳಲ್ಲಿ ಮಾಡಿದ ದಾನವು ಅನಂತಫಲದಾಯಕವಾಗುತ್ತದೆ.

ದ್ವಿಜೈಃ ಶ್ರಾದ್ಧಂ ಚ ಕರ್ತವ್ಯಂ ಮನ್ವಾದಿಷು ಯುಗಾದಿಷು ।
ಶ್ರಾದ್ಧೇ ನಿಮಂತ್ರಿತೇ ಚೈವ ಗ್ರಹಣೇ ಚಂದ್ರಸೂರ್ಯಯೋಃ ॥ ೫೬ ॥

ಅಯನದ್ವಿತಯೇ ಚೈವ ತಥಾ ಭೂಕಂಪನೇ ಮುನೇ ।
ಗಲಗ್ರಹೇ ದುರ್ದಿನೇ ಚ ನಾಧೀಯೀತ ಕದಾಚನ ॥ ೫೭ ॥

ಏವಮಾದಿಷು ಸರ್ವೇಷು ಅನಧ್ಯಾಯೇಷು ನಾರದ ।
ಅಧೀತಾನಾಂ ತು ಮೂಢಾನಾಂ ಪ್ರಜಾಂ ಪ್ರಜ್ಞಾಂ ಯಶಶ್ಶ್ರಿಯಂ ॥ ೫೮ ॥

ಆಯುಷ್ಯಂ ಬಲಮಾರೋಗ್ಯಂ ನಿಕೃಂತತಿ ಯಮಃ ಸ್ವಯಂ ।
ಅನಧ್ಯಾಯೇ ತು ಯೋಽಧೀತೇ ತಂ ವಿದ್ಯಾದ್ಬ್ರಹ್ಮಘಾತಕಂ ॥ ೫೯ ॥

ನ ತಂ ಸಂಭಾಷಯೇದ್ವಿಪ್ರ ನ ತೇನ ಸಹ ಸಂವಸೇತ್ ।
ಕುಂಡಗೋಲಕಯೋಃ ಕೇಚಿಜ್ಜಡಾದೀನಾಂ ಚ ನಾರದ ॥ ೬೦ ॥

---

೫೬-೫೭. ಮನ್ವಾದಿ ಮತ್ತು ಯುಗಾದಿ ದಿನಗಳಲ್ಲಿ ದ್ವಿಜರು ಶ್ರಾದ್ಧ ಮಾಡಬೇಕು. ಶ್ರಾದ್ಧದಲ್ಲಿ ಭೋಜನಕ್ಕೆ ಆಹೂತನಾಗಿರುವ ದಿವಸ, ಚಂದ್ರ ಸೂರ್ಯರ ಗ್ರಹಣದ ದಿನ, ಉತ್ತರಾಯಣ ಮತ್ತು ದಕ್ಷಿಣಾಯನಪುಣ್ಯಕಾಲ, ಭೂಕಂಪವಾದದಿನ, ಗಲಗ್ರಹತಿಥಿ, ಸೂರ್ಯರಶ್ಮಿಯು ಮೇಘದಿಂದ ಆಚ್ಛಾದಿತ ವಾಗಿ ಕಾಣಿಸದಿರುವ ದಿನ ಇವುಗಳಲ್ಲಿ ಅಧ್ಯಯನ ಮಾಡಬಾರದು.

೫೮-೫೯. ನಾರದನೇ! ಈರೀತಿ ಉಕ್ತವಾದ ಅನಧ್ಯಾಯತಿಥಿಗಳಲ್ಲಿ ಅಧ್ಯಯನಮಾಡಿದ ಮೂಢಜನರಿಗೆ ಸಂತತಿ, ಜ್ಞಾನ, ಕೀರ್ತಿ, ಐಶ್ವರ್ಯ, ಆಯುಸ್ಸು, ಶಕ್ತಿ, ಆರೋಗ್ಯ ಇವುಗಳನ್ನು ಯಮನು ಸ್ವತಃ ನಾಶಪಡಿಸುತ್ತಾನೆ. ಅನಧ್ಯಾಯತಿಥಿಗಳಲ್ಲಿ ಅಧ್ಯಯನ ಮಾಡುವವನನ್ನು ಬ್ರಹ್ಮಘಾತಕನೆಂದು ತಿಳಿಯಬೇಕು.

೬೦-೬೧. ಬ್ರಾಹ್ಮಣನೇ! ಅನಧ್ಯಾಯದಿನಗಳಲ್ಲಿ ಅಧ್ಯಯನಮಾಡಿ ದವನ ಸಂಗಡ ಮಾತನಾಡಬಾರದು. ಅವನ ಸಹವಾಸವನ್ನೂ ಸಹ ಮಾಡ

ವದಂತಿ ಚೋಪನಯನಂ ತತ್ಪುತ್ರಾದಿಷು ಕೇಚನ ।
ಅನಧೀತ್ಯ ತು ಯೋ ವೇದಮನ್ಯತ್ರ ಕುರುತೇ ಶ್ರಮಂ ॥ ೬೧ ॥

ಶೂದ್ರತುಲ್ಯಃ ಸ ವಿಜ್ಞೇಯೋ ನರಕಸ್ಯ ಪ್ರಿಯೋಽತಿಥಿಃ ।
ಅನಧೀತಶ್ರುತಿರ್ವಿಪ್ರ ಆಚಾರಂ ಪ್ರತಿಪದ್ಯತೇ ॥ ೬೨ ॥

ನಾಚಾರಫಲಮಾಪ್ನೋತಿ ಯಥಾ ಶೂದ್ರಸ್ತಥೈವ ಸಃ ।
ನಿತ್ಯಂ ನೈಮಿತ್ತಿಕಂ ಕಾಮ್ಯಂ ಯಚ್ಚಾನ್ಯತ್ಕರ್ಮ ವೈದಿಕಂ ॥ ೬೩ ॥

ಅನಧೀತಸ್ಯ ವಿಪ್ರಸ್ಯ ಸರ್ವಂ ಭವತಿ ನಿಷ್ಫಲಂ ।
ಶಬ್ದಬ್ರಹ್ಮಮಯೋ ವಿಷ್ಣುರ್ವೇದಃ ಸಾಕ್ಷಾದ್ಧರಿಃ ಸ್ಮೃತಃ ॥ ೬೪ ॥

---

ಕೂಡದು. ನಾರದನೇ! ಕುಂಡ ಮತ್ತು ಗೋಲಕ ಇವರ ಮಕ್ಕಳು ಮತ್ತು ಕೆಲವು ಜಡಗಳು ಇವರಿಗೂ ಉಪನಯನ ಸಂಸ್ಕಾರ ಉಂಟೆಂದು ಕೆಲವರು ಹೇಳುತ್ತಾರೆ.

೬೧-೬೨. ವೇದಾಧ್ಯಯನಮಾಡದೇ ಬೇರೆ ವಿಷಯದಲ್ಲಿ ಶ್ರಮ ಪಡುವವನು ಶೂದ್ರ ಸಮಾನನೆಂದು ತಿಳಿಯಬೇಕು. ಅಂತಹವನು ನರಕಕ್ಕೆ ಇಷ್ಟವಾದ ಅತಿಥಿಯು ಎಂದರೆ ಅಂತಹವನು ನರಕದಲ್ಲಿ ದುಃಖಭಾಗಿಯಾಗುತ್ತಾನೆಂದು ತಾತ್ಪರ್ಯ.

೬೨-೬೩. ವೇದಾಧ್ಯಯನ ಮಾಡದಿರುವ ಬ್ರಾಹ್ಮಣನು ಸದಾಚಾರವನ್ನು ಅನುಷ್ಠಾನಮಾಡಿರೂ ಶೂದ್ರನಂತೆ ಅವನಿಗೆ ಅದರ ಫಲವು ಲಭಿಸುವುದಿಲ್ಲ.

೬೩-೬೪. ನಿತ್ಯ ನೈಮತ್ತಿಕ ಮತ್ತು ಕಾಮ್ಯ ಕರ್ಮಗಳು ಇವುಗಳಲ್ಲದೇ ವೇದೋಕ್ತವಾದ ಯಾವ ಕರ್ಮವಾದರೂ ಎಲ್ಲವೂ ವೇದಾಧ್ಯಯನ ಮಾಡದಿರುವ ಬ್ರಾಹ್ಮಣನಿಗೆ ನಿಷ್ಫಲವಾಗುತ್ತದೆ.

**ವೇದಾಧ್ಯಾಯಿಾ ತತೋ ವಿಪ್ರಃ ಸರ್ವಾನ್ಕಾಮಾನವಾಪ್ನುಯಾತ್ ॥ ೬೫ ॥**

**ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ ಪ್ರಥಮಪಾದೇ ಸ್ಮಾರ್ತಾಚಾರೇಷು ವರ್ಣಾಶ್ರಮಧರ್ಮೇಷು ಅಧ್ಯಯನಾದಿ ಧರ್ಮನಿರೂಪಣಂ ನಾಮ ಪಂಚವಿಂಶೋऽಧ್ಯಾಯಃ**

---

೬೪-೬೫. ವಿಷ್ಣುವು ಸಕಲಶಬ್ದವಾಚ್ಯನಾಗಿರುವುದರಿಂದ ಅನಂತಗುಣಪರಿಪೂರ್ಣನು. ವೇದವು ಪರಮಮುಖ್ಯವೃತ್ತಿಯಿಂದ ವಿಷ್ಣುವನ್ನೇ ಪ್ರತಿಪಾದಿಸುತ್ತದೆಯಾದಕಾರಣ ಅದು ಹರಿ ಎಂದು ಉಕ್ತವಾಗಿದೆ. ಆದುದರಿಂದ ವೇದಾಧ್ಯಯನಮಾಡಿದ ಮನುಷ್ಯನು ಸಕಲೇಷ್ಟಾರ್ಥಗಳನ್ನೂ ಹೊಂದುವನು.

ಇಂತು ಶ್ರೀಬೃಹನ್ನಾರದೀಯ ಪುರಾಣದ ಪೂರ್ವಭಾಗ ಪ್ರಥಮಪಾದದಲ್ಲಿ ಸ್ಮೃತ್ಯುಕ್ತವರ್ಣಾಶ್ರಮಧರ್ಮಗಳಲ್ಲಿ ಅಧ್ಯಯನಾದಿಧರ್ಮನಿರೂಪಣವೆಂಬ ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು.

**ಕಥಾಸಾರಾಂಶ**

ಈ ಅಧ್ಯಾಯದಲ್ಲಿ ವರ್ಣಾಶ್ರಮಧರ್ಮಗಳು ವಿಸ್ತಾರವಾಗಿ ನಿರೂಪಿತವಾಗಿವೆ. ದ್ವಿಜರಿಗೆ ಗರ್ಭಾಧಾನಾದಿ ಸಂಸ್ಕಾರ, ಅವಕ್ಕೆ ವಿಹಿತಕಾಲ, ಅವುಗಳ ವಿಧಾನ ಇವುಗಳನ್ನು ಹೇಳಿ, ಬ್ರಾಹ್ಮಣ ಕ್ಷತ್ರಿಯ ವೈಶ್ಯರಿಗೆ ಉಪನಯನಕ್ಕೆ ವಿಹಿತವಾದ ಮುಖ್ಯ ಗೌಣಕಾಲಗಳನ್ನು ತಿಳಿಸಿ, ಆಯಾಯಾ ವರ್ಣದವರಿಗೆ ವಿಹಿತವಾದ ಅಜಿನ ದಂಡಾದಿಗಳನ್ನು ವಿವರಿಸಿ, ಬ್ರಹ್ಮಚಾರಿಗೆ ಗುರುಕುಲವಾಸ ವೇದಾಧ್ಯಯನಗಳಾವಶ್ಯಕವೆಂದು ಹೇಳಿ ಬ್ರಹ್ಮಚಾರಿಧರ್ಮವನ್ನು ವಿಶೇಷವಾಗಿ ನಿರೂಪಿಸಿದೆ. ಅನಂತರ ಅಭಿವಾದನಕ್ರಮ, ಯಾರುಯಾರಿಗೆ ಅಭಿವಾದನ ಮಾಡಬೇಕೆಂಬುದು, ಅನಧ್ಯಾಯತಿಥಿಗಳು, ಅವುಗಳಲ್ಲಿ ಅಧ್ಯಯನನಿಷೇಧ, ಯುಗಾದಿ ಮನ್ವಾದಿಗಳ ವಿವರಣೆ, ವೇದಾಧ್ಯಯನದ ಫಲ ಮುಂತಾದುವು ವಿಸ್ತಾರವಾಗಿ ನಿರೂಪಿಸಲ್ಪಟ್ಟಿವೆ.

---

# ಷಡ್ವಿಂಶೋಽಧ್ಯಾಯಃ

**ಸನಕ ಉವಾಚ**

ವೇದಗ್ರಹಣಪರ್ಯಂತಂ ಶುಶ್ರೂಷಾ ನಿಯತೋ ಗುರೋಃ ।
ಅನುಜ್ಞಾತಸ್ತತಸ್ತೇನ ಕುರ್ಯಾದಗ್ನಿಪರಿಗ್ರಹಂ ॥ ೧ ॥

ವೇದಾಶ್ಚ ಧರ್ಮಶಾಸ್ತ್ರಾಣಿ ವೇದಾಂಗಾನ್ಯಪಿ ಚ ದ್ವಿಜಃ ।
ಅಧೀತ್ಯ ಗುರವೇ ದತ್ವಾ ದಕ್ಷಿಣಾಂ ಸಂವಿಶೇದ್ಗೃಹಂ ॥ ೨ ॥

ರೂಪಲಾವಣ್ಯಸಂಪನ್ನಾಂ ಸಗುಣಾಂ ಸುಕುಲೋದ್ಭವಾಂ ।
ದ್ವಿಜಃ ಸಮುದ್ವಹೇತ್ಕನ್ಯಾಂ ಸುಶೀಲಾಂ ಧರ್ಮಚಾರಿಣೀಂ ॥ ೩ ॥

ಮಾತೃತಃ ಪಂಚಮೀಂ ಹಿತ್ವಾ ಪಿತೃತಃ ಸಪ್ತಮೀಂ ತಥಾ ।
ದ್ವಿಜಃ ಸಮುದ್ವಹೇತ್ಕನ್ಯಾಮನ್ಯಥಾ ಗುರುತಲ್ಪಗಃ ॥ ೪ ॥

---

## ಇಪ್ಪತ್ತಾರನೆಯ ಅಧ್ಯಾಯವು

೧. ವೇದಾಧ್ಯಯನವಾಗುವವರೆಗೆ ಗುರುಸೇವೆಯಲ್ಲಿ ನಿರತನಾಗಿದ್ದು ತರುವಾಯ ಗುರುಗಳ ಅಪ್ಪಣೆ ಪಡೆದು ವಿವಾಹವನ್ನು ಮಾಡಿಕೊಳ್ಳಬೇಕು.

೨. ದ್ವಿಜನು ವೇದಗಳು, ಧರ್ಮಶಾಸ್ತ್ರಗಳು ಮತ್ತು ಶಿಕ್ಷಾ ವ್ಯಾಕರಣಾದಿ ವೇದಾಂಗಗಳನ್ನೂ ಸಹ ಅಧ್ಯಯನ ಮಾಡಿ ಗುರುಗಳಿಗೆ ದಕ್ಷಿಣೆ ಕೊಟ್ಟು ತನ್ನ ಮನೆಗೆ ಹಿಂದಿರುಗಬೇಕು.

೩. ಸೌಂದರ್ಯ ಲಾವಣ್ಯಯುಕ್ತಳು, ಸುಗುಣಶಾಲಿನಿಯು, ಸದ್ವಂಶ ಸಂಭೂತಳು, ಒಳ್ಳೆಯ ನಡತೆಯುಳ್ಳ ಧರ್ಮಾನುಷ್ಠಾನಪರಳೂ ಆಗಿರುವ ಕನ್ಯೆಯನ್ನು ದ್ವಿಜನು ಗುರುಕುಲವಾಸ ಮುಗಿದಮೇಲೆ ವಿವಾಹಮಾಡಿಕೊಳ್ಳಬೇಕು.

೪. ದ್ವಿಜನು ತಾಯಿಯ ಸೋದರತ್ತೆ, ಮಾತಾಮಹಿಯ ಸೋದರಿ ಇವರ ಮಕ್ಕಳು ಮುಂತಾದ ಮಾತೃಬಂಧುವರ್ಗದಲ್ಲಿ ಐದು ತಲೆಗಳನ್ನು ಮತ್ತು ತಂದೆಯ ಸೋದರತ್ತೆ, ಪಿತಾಮಹಿಯ ಸೋದರಿ ಇವರ ಮಕ್ಕಳು ಮುಂತಾದ

ರೋಗಿಣೀಂ ಚೈವ ವೃತ್ತಾಕ್ಷೀಂ ಸರೋಗಕುಲಸಂಭವಾಂ ।
ಅತಿಕೇಶಾಮಕೇಶಾಂ ಚ ವಾಚಾಲಾಂ ನೋದ್ವಹೇತ್ ಬುಧಃ ॥ ೫ ॥

ಕೋಪನಾಂ ವಾಮನಾಂ ಚೈವ ದೀರ್ಘದೇಹಾಂ ವಿರೂಪಿಣೀಂ ।
ನ್ಯೂನಾಧಿಕಾಂಗೀಮುನ್ಮತ್ತಾಂ ಪಿಶುನಾಂ ನೋದ್ವಹೇತ್ ಬುಧಃ ॥ ೬ ॥

ಸ್ಥೂಲಗುಲ್ಫಾಂ ದೀರ್ಘಜಂಘಾಂ ತಥೈವ ಪುರುಷಾಕೃತಿಂ ।
ಶ್ಮಶ್ರುವ್ಯಂಜನಸಂಯುಕ್ತಾಂ ಕುಬ್ಜಾಂ ಚೈವೋದ್ವಹೇನ್ನ ಚ ॥ ೭ ॥

ವೃಥಾ ಹಾಸ್ಯಮುಖೀಂ ಚೈವ ಸದಾನ್ಯಗೃಹವಾಸಿನೀಂ ।
ವಿವಾದಶೀಲಾಂ ಭ್ರಮಿತಾಂ ನಿಷ್ಠುರಾಂ ನೋದ್ವಹೇದ್ಬುಧಃ ॥ ೮ ॥

---

ಪಿತೃಬಂಧುವರ್ಗದಲ್ಲಿ ಏಳುತಲೆಗಳನ್ನೂ ಬಿಟ್ಟು ಕನ್ಯೆಯನ್ನು ಮದುವೆ ಮಾಡಿಕೊಳ್ಳಬೇಕು. ಹಾಗೆ ಮಾಡದಿದ್ದರೆ ಗುರುಪತ್ನೀಗಮನಮಾಡಿದ ದೋಷಕ್ಕೆ ಭಾಗಿಯಾಗುತ್ತಾನೆ.

೫. ರೋಗಿಷ್ಠಳು, ಗುಂಡುಕಣ್ಣುಗಳುಳ್ಳವಳು, ರೋಗವಿರುವ ಕುಲದಲ್ಲಿ ಹುಟ್ಟಿದವಳು, ಹೆಚ್ಚು ಕೂದಲುಳ್ಳವಳು, ಕೂದಲಿಲ್ಲದವಳು, ಕಠಿನವಾಗಿ ಮಾತನಾಡುವವಳೂ ಆಗಿರುವ ಕನ್ಯೆಯನ್ನು ವಿವೇಕಿಯಾದನು ಮದುವೆ ಮಾಡಿಕೊಳ್ಳಬಾರದು.

೬. ಕೋಪಿಷ್ಠೆಯು, ಗಿಡ್ಡಾಗಿರುವವಳು, ಬಹುಉದ್ದವಾದ ಶರೀರವುಳ್ಳವಳು, ವಿರೂಪಿಣಿಯು, ಕಮ್ಮಿ ಅಥವಾ ಹೆಚ್ಚು ಅವಯವವುಳ್ಳವಳು, ಉನ್ಮತ್ತಳು ಮತ್ತು ಚಾಡಿ ಹೇಳುವವಳೂ ಆಗಿರುವ ಕನ್ಯೆಯನ್ನು ಜ್ಞಾನಿಯಾದವನು ವಿವಾಹವಾಗಬಾರದು.

೭. ದೊಡ್ಡ ಪಾದಗ್ರಂಥಿಗಳುಳ್ಳ, ಉದ್ದವಾದ ಕಣಕಾಲುಗಳುಳ್ಳ, ಗಂಡಸಿನ ಆಕಾರವನ್ನು ಹೊಂದಿದ, ಮೀಸೆಯಿಂದ ಕೂಡಿದ ಮತ್ತು ಕುಳ್ಳಾಗಿರುವ ಕನ್ಯೆಯನ್ನು ಮದುವೆ ಮಾಡಿಕೊಳ್ಳಬಾರದು.

೮. ವ್ಯರ್ಥವಾಗಿ ನಗುತ್ತಿರುವ, ಯಾವಾಗಲೂ ಇತರರ ಮನೆಯಲ್ಲಿರುವ, ಕಲಹಸ್ವಭಾವವುಳ್ಳ, ಅಲೆಯುತ್ತಿರುವ, ಕಠಿನವಾದ ಮಾತನಾಡುತ್ತಿರುವ ಕನ್ಯೆಯನ್ನು ಜ್ಞಾನಿಗಳು ಸ್ವೀಕರಿಸಬಾರದು.

ಬಹ್ವಶಿನೀಂ ಸ್ಥೂಲದಂತಾಂ ಸ್ಥೂಲೋಷ್ಠೀಂ ಘುರ್ಘುರಸ್ವನಾಂ ।
ಅತಿಕೃಷ್ಣಾಂ ರಕ್ತವರ್ಣಾಂ ಧೂರ್ತಾಂ ನೈವೋದ್ವಹೇದ್ಬುಧಃ ॥ ೯ ॥

ದೀರ್ಘನಾಸಾಂ ಚ ಕಿತವಾಂ ತನೂರುಹವಿಭೂಷಿತಾಂ ।
ಗರ್ವಿತಾಂ ಬಕವೃತ್ತಿಂ ಚ ಸರ್ವಥಾ ನೋದ್ವಹೇದ್ಬುಧಃ ॥ ೧೦ ॥

ಸದಾ ರೋದನಶಿಲಾಂ ಚ ಪಾಂಡುರಾಭಾಂ ಚ ಕುತ್ಸಿತಾಂ ।
ಕಾಸಶ್ವಾಸಾದಿಸಯುಂಕ್ತಾಂ ನಿದ್ರಾಶೀಲಾಂ ಚ ನೋದ್ವಹೇತ್ ॥ ೧೧ ॥

ಅನರ್ಥಭಾಷಿಣೀಂ ಚೈವ ಲೋಕದ್ವೇಷಪರಾಯಣಾಂ ।
ಪರಾಪವಾದನಿರತಾಂ ತಸ್ಕರಾಂ ನೋದ್ವಹೇದ್ಬುಧಃ ॥ ೧೨ ॥

---

೯. ಅಧಿಕವಾಗಿ ಆಹಾರವನ್ನು ತಿನ್ನುವ, ದಪ್ಪವಾದ ಹಲ್ಲು, ತುಟಿ ಇವುಗಳುಳ್ಳ, ಘುರ್, ಘುರ್ ಎಂಬ ಧ್ವನಿಯುಳ್ಳ, ಬಹು ಕಪ್ಪಾದ, ಕೆಂಪಗಿರುವ ಮತ್ತು ದುಷ್ಟಳಾದ ಕನ್ಯೆಯನ್ನು ಸ್ವೀಕರಿಸಬಾರದು.

೧೦. ಉದ್ದಮೂಗುಳ್ಳ, ಕಪಟಿಯಾದ, ಮೈಯಲ್ಲೆಲ್ಲಾ ಕೂದಲುಳ್ಳ, ಅಹಂಕಾರಿಣಿಯಾದ ಮತ್ತು ಡಂಭಾಚಾರಿಣಿಯಾದ ಕನ್ಯೆಯನ್ನು ವಿವೇಕಿಯಾದವನು ವಿವಾಹಮಾಡಿಕೊಳ್ಳಬಾರದು.

೧೧. ಯಾವಾಗಲೂ ಅಳುತ್ತಿರುವ, ಹಳದಿ ಮಿಶ್ರವಾದ ಬಣ್ಣವುಳ್ಳ, ಪರರ ಶ್ರೇಯಸ್ಸನ್ನು ನೋಡಿ ಕುದಿಯುವ, ಶ್ವಾಸವ್ಯಾಧಿಯುಳ್ಳ ಮತ್ತು ಸರ್ವದಾ ನಿದ್ರೆಯ ಸ್ವಭಾವವುಳ್ಳ ಕನ್ಯೆಯನ್ನು ವಿವಾಹಮಾಡಿಕೊಳ್ಳಬಾರದು.

೧೨. ಅನರ್ಥಕರವಾಗಿ ಮಾತನಾಡುತ್ತಿರುವ, ಎಲ್ಲರಲ್ಲಿಯೂ ದ್ವೇಷ ಮಾಡುವುದರಲ್ಲಿ ಆಸಕ್ತಳಾದ, ಇತರರ ಅಪವಾದವರ್ಣನೆಯಲ್ಲಿ ಆಸಕ್ತಿಯುಳ್ಳ ಮತ್ತು ಕಳ್ಳತನಮಾಡುವ ಕನ್ಯೆಯನ್ನು ಜ್ಞಾನಿಯಾದವನು ವಿವಾಹ ಮಾಡಿಕೊಳ್ಳಬಾರದು.

ಬಾಲಭಾವಾದವಿಜ್ಞಾತಸ್ವಭಾವಾಮುದ್ವಹೇದ್ಯದಿ ।
ಪ್ರಗಲ್ಭಾಂ ವಾಽಗುಣಾಂ ಜ್ಞಾತ್ವಾ ಸರ್ವಥಾ ತಾಂ ಪರಿತ್ಯಜೇತ್ ॥ ೧೩ ॥

ಭರ್ತೃಪುತ್ರೇಷು ಯಾ ನಾರೀ ಸರ್ವದಾ ನಿಷ್ಠುರಾ ಭವೇತ್ ।
ಪರಾನುಕೂಲಿನೀ ವಾ ಚ ಸರ್ವಥಾ ತಾಂ ಪರಿತ್ಯಜೇತ್ ॥ ೧೪ ॥

ವಿವಾಹಾಶ್ಚಾಷ್ಟಧಾ ಜ್ಞೇಯಾ ಬ್ರಾಹ್ಮಾದ್ಯಾ ಮುನಿಸತ್ತಮ ।
ಪೂರ್ವಃ ಪೂರ್ವೋ ವರೋ ಜ್ಞೇಯಃ ಪೂರ್ವಾಭಾವೇ ಪರಃ ಪರಃ॥ ೧೫ ॥

ಬ್ರಾಹ್ಮೋ ದೈವಸ್ತಥೈವಾರ್ಷಃ ಪ್ರಾಜಾಪತ್ಯಸ್ತಥಾಽಽಸುರಃ ।
ಗಂಧರ್ವೋ ರಾಕ್ಷಸಶ್ಚೈವ ಪೈಶಾಚಶ್ಚಾಷ್ಟಮೋ ಮತಃ ॥ ೧೬ ॥

ಬ್ರಾಹ್ಮೇಣ ಚ ವಿವಾಹೇನ ವಿವಹೇದ್ವೈ ದ್ವಿಜೋತ್ತಮಃ ।
ದೈವೇನಾಪ್ಯಥವಾ ವಿಪ್ರ ಕೇಚಿದಾರ್ಷಂ ಪ್ರಚಕ್ಷತೇ ॥ ೧೭ ॥

---

೧೩. ಬಾಲ್ಯದಿಂದ ಸ್ವಭಾವ ತಿಳಿಯದೆ ಮದುವೆಮಾಡಿಕೊಂಡು ದೊಡ್ಡವಳಾದಮೇಲೆ ಗುಣವಿಲ್ಲವೆಂದು ತಿಳಿದರೆ ಅಂತಹವಳನ್ನು ಸರ್ವಪ್ರಕಾರದಿಂದಲೂ ತ್ಯಜಿಸಬೇಕು.

೧೪. ಗಂಡ ಮತ್ತು ಮಕ್ಕಳಲ್ಲಿ ಯಾವಾಗಲೂ ನಿಷ್ಠುರವಾಗಿ ಮಾತನಾಡುತ್ತಿರುವ ಮತ್ತು ಇತರರಿಗೆ ಅನುಕೂಲಮಾಡುತ್ತಿರುವ ಹೆಂಗಸನ್ನು ಸರ್ವಥಾ ಪರಿತ್ಯಾಗಮಾಡಬೇಕು.

೧೫. ಮುನಿವರ್ಯನೇ! ವಿವಾಹವು ಬ್ರಾಹ್ಮ ಮುಂತಾಗಿ ಎಂಟು ವಿಧವು. ಅವುಗಳಲ್ಲಿ ಮೊದಲಮೊದಲನೆಯದು ಆಮೇಲಿನ ವಿವಾಹಗಳಿಗಿಂತ ಉತ್ತಮವೆಂದು ತಿಳಿಯಬೇಕು. ಪೂರ್ವನಿರ್ದಿಷ್ಟವಾದ ವಿವಾಹವು ಸಾಧ್ಯವಾಗದಿದ್ದಲ್ಲಿ ಉತ್ತರೋತ್ತರ ವಿವಾಹಗಳನ್ನು ಸ್ವೀಕರಿಸಬೇಕು.

೧೬. ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯ, ಆಸುರ, ಗಾಂಧರ್ವ, ರಾಕ್ಷಸ, ಪೈಶಾಚ ಎಂಬುದಾಗಿ ವಿವಾಹವು ಎಂಟು ವಿಧವು.

೧೭. ದ್ವಿಜಶ್ರೇಷ್ಠನು ಬ್ರಾಹ್ಮವಿವಾಹವಿಧಾನದಿಂದ ಮದುವೆಮಾಡಿಕೊಳ್ಳಬೇಕು ಅಥವಾ ದೈವವಿಧಾನದಿಂದ ಮದುವೆಮಾಡಿಕೊಳ್ಳಬೇಕು. ಕೆಲವರು ಆರ್ಷವಿಧಾನವೂ ಗ್ರಾಹ್ಯವೆಂದು ಹೇಳುತ್ತಾರೆ.

ಪ್ರಾಜಾಪತ್ಯಾದಯೋ ವಿಪ್ರ ವಿವಾಹಾಃ ಪಂಚ ಗರ್ಹಿತಾಃ ।
ಅಭಾವೇಷು ತು ಪೂರ್ವೇಷಾಂ ಕುರ್ಯಾದೇವ ಪರಾನ್ಬುಧಃ ॥ ೧೮ ॥

ಯಜ್ಞೋಪವೀತದ್ವಿತಯಂ ಸೋತ್ತರೀಯಂ ಚ ಧಾರಯೇತ್ ।
ಸುವರ್ಣಕುಂಡಲೇ ಚೈವ ಧೌತವಸ್ತ್ರದ್ವಯಂ ತಥಾ ॥ ೧೯ ॥

ಅನುಲೇಪನಲಿಪ್ತಾಂಗಃ ಕೃತ್ತಕೇಶನಖಃ ಶುಚಿಃ ।
ಧಾರಯೇದ್ವೈಣವಂ ದಂಡಂ ಸೋದಕಂ ಚ ಕಮಂಡಲುಂ ॥ ೨೦ ॥

ಉಷ್ಣೀಷಮಮಲಂ ಛತ್ರಂ ಪಾದುಕೇ ಚಾಪ್ಯುಪಾನಹೌ ।
ಧಾರಯೇತ್ಪುಷ್ಪಮಾಲ್ಯೇ ಚ ಸುಗಂಧಂ ಪ್ರಿಯದರ್ಶನಃ ॥ ೨೧ ॥

ನಿತ್ಯಂ ಸ್ವಾಧ್ಯಾಯಶೀಲಃ ಸ್ಯಾದ್ಯಥಾಚಾರಂ ಸಮಾಚರೇತ್ ।
ಪರಾನ್ನಂ ನೈವ ಭುಂಜೀತ ಪರವಾದಂ ಚ ವರ್ಜಯೇತ್ ॥ ೨೨ ॥

---

೧೮. ಬ್ರಾಹ್ಮಣನಾದ ನಾರದನೇ! ಪ್ರಾಜಾಪತ್ಯ ಮುಂತಾದ ಐದು ವಿಧ ವಿವಾಹಗಳು ನಿಂದಿತವಾಗಿವೆ. ಪೂರ್ವ ಪೂರ್ವ ವಿವಾಹಗಳು ಸಾಧ್ಯವಾಗದಿದ್ದಪಕ್ಷದಲ್ಲಿ ಉತ್ತರೋತ್ತರ ವಿಧಾನವನ್ನಾಶ್ರಯಿಸಬೇಕು.

೧೯. ವಿವಾಹಿತನಾದವನು ಎರಡು ಜನಿವಾರಗಳು, ಮೇಲೆ ಹೊದೆಯುವ ವಸ್ತ್ರ, ಬಂಗಾರದ ಕಡಕುಗಳು, ಒಂದು ಜೊತೆ ಒಗೆದಬಟ್ಟೆ ಇವುಗಳನ್ನು ಧರಿಸಬೇಕು.

೨೦. ಅಭ್ಯಂಜನ, ಕ್ಷೌರ ಇವುಗಳನ್ನು ಮಾಡಿಕೊಂಡು ಶುದ್ಧನಾಗಿ ಬಿದರುಕೋಲು, ನೀರಿನಿಂದ ತುಂಬಿದ ಕಮಂಡಲು ಇವುಗಳನ್ನು ಧರಿಸಬೇಕು.

೨೧. ರುಮಾಲು, ಛತ್ರಿ, ಚಪ್ಪಲಿ, ಪುಷ್ಪಹಾರ, ಸುಗಂಧ ಇವುಗಳನ್ನು ಧರಿಸಿ ಚೆನ್ನಾಗಿ ಕಾಣಿಸುತ್ತಿರಬೇಕು.

೨೨. ಪ್ರತಿದಿನವೂ ಪದ್ಧತಿಯಮೇರೆಗೆ ವೇದಾಧ್ಯಯನಮಾಡುವವನಾಗಬೇಕು. ಪರಾನ್ನ ಭೋಜನ ಇತರರ ನಿಂದಾದಿಗಳು ಇವುಗಳನ್ನು ಬಿಡಬೇಕು.

ಪಾದೇನ ನಾಕ್ರಮೇತ್ಪಾದಮುಚ್ಛಿಷ್ಟಂ ನೈವ ಲಂಘಯೇತ್ ।
ಸಂಹತಾಭ್ಯಾಂ ಹಸ್ತಾಭ್ಯಾಂ ಕಂಡೂಯೇದಾತ್ಮನಃ ಶಿರಃ ॥ ೨೩ ॥

ಪೂಜ್ಯಂ ದೇವಾಲಯಂ ಚೈವ ನಾಪಸವ್ಯಂ ವ್ರಜೇದ್ದ್ವಿಜಃ ।
ದೇವಾರ್ಚಾಚಮನಸ್ನಾನವ್ರತಶ್ರಾದ್ಧಕ್ರಿಯಾದಿಷು ॥ ೨೪ ॥

ನ ಭವೇನ್ಮುಕ್ತಕೇಶಶ್ಚ ನೈಕವಸ್ತ್ರಧರಃ ತಥಾ ।
ನಾರೋಹೇದುಷ್ಟ್ರಯಾನಂ ಚ ಶುಷ್ಕವಾದಂ ಚ ವರ್ಜಯೇತ್ ॥ ೨೫ ॥

ಅನ್ಯಸ್ತ್ರಿಯಂ ನ ಗಚ್ಛೇಚ್ಚ ಪೈಶುನ್ಯಂ ಪರಿವರ್ಜಯೇತ್ ।
ನಾಪಸವ್ಯಂ ವ್ರಜೇದ್ದ್ವಿಪ್ರ ಗೋಽಶ್ವತ್ಥಾನಲಪರ್ವತಾತ್ ॥ ೨೬ ॥

ಚತುಷ್ಪಥಂ ಚೈತ್ಯವೃಕ್ಷಂ ದೇವಖಾತಂ ನೃಪಂ ತಥಾ ।
ಅಸೂಯಾಂ ಮತ್ಸರತ್ವಂ ಚ ದಿವಾಸ್ವಾಪಂ ಚ ವರ್ಜಯೇತ್ ॥ ೨೭ ॥

---

೨೩. ಒಂದು ಕಾಲಿನಿಂದ ಇನ್ನೊಂದು ಕಾಲನ್ನು ಉಜ್ಜಬಾರದು. ಉಗುಳನ್ನು ದಾಟಬಾರದು. ಎರಡು ಕೈಗಳಿಂದ ಒಟ್ಟಿಗೆ ತನ್ನ ತಲೆಯನ್ನು ತುರಿಸಬಾರದು.

೨೪-೨೫. ದ್ವಿಜನು ಪೂಜ್ಯವಾದ ದೇವಸ್ಥಾನವನ್ನು ಅಪಸವ್ಯವಾಗಿ ಸುತ್ತಬಾರದು. ದೇವಪೂಜೆ, ಆಚಮನ, ಸ್ನಾನ, ವ್ರತ, ಶ್ರಾದ್ಧ ಮುಂತಾದ ಪವಿತ್ರಕಾರ್ಯಗಳಲ್ಲಿ ಜುಟ್ಟುಗಂಟುಬಿಚ್ಚಿಕೊಂಡಿರಬಾರದು ಮತ್ತು ಉತ್ತರೀಯ ವಿಲ್ಲದೇ ಒಂದೇ ವಸ್ತ್ರವನ್ನು ಧರಿಸಬಾರದು. ಒಂಟೆಯಮೇಲೆ ಸವಾರಿ ಮಾಡ ಬಾರದು. ಶುಷ್ಕವಾದ ಎಂದರೆ ವ್ಯರ್ಥವಾದ ಭಾಷಣವನ್ನು ಮಾಡಬಾರದು.

೨೬. ಪರಸ್ತ್ರೀಗಮನ, ಚಾಡಿಕೋರತನ ಇವುಗಳನ್ನು ಬಿಡಬೇಕು. ಬ್ರಾಹ್ಮಣ, ಗೋವು, ಅಶ್ವತ್ಥ, ಬೆಂಕಿ ಮತ್ತು ಪರ್ವತ ಇವುಗಳನ್ನು ಅಪಸವ್ಯ ವಾಗಿ ಸುತ್ತಬಾರದು.

೨೭. ನಾಲ್ಕು ದಾರಿ ಸೇರುವ ಸ್ಥಳ, ವೃಂದಾವನ, ದೇವನಿರ್ಮಿತಕೊಳ ಮತ್ತು ರಾಜ ಇವುಗಳಿಗೂ ಅಪಸವ್ಯವಾಗಿ ಹೋಗಬಾರದು. ಹೊಟ್ಟೇಕಿಚ್ಚು, ಮಾತ್ಸರ್ಯ ಮತ್ತು ಹಗಲು ನಿದ್ದೆಮಾಡುವುದು ಇವುಗಳನ್ನು ಬಿಡಬೇಕು.

ನ ವದೇತ್ಪರಪಾಪಾನಿ ಸ್ವಪುಣ್ಯಂ ನ ಪ್ರಕಾಶಯೇತ್ ।
ಸ್ವಕಂ ನಾಮ ಸ್ವನಕ್ಷತ್ರಂ ಮಾನಂ ಚೈವಾತಿಗೋಪಯೇತ್ ॥ ೨೮ ॥

ನ ದುರ್ಜನೈಸ್ಸಹ ವಸೇನ್ನಾಶಾಸ್ತ್ರಂ ಶೃಣುಯಾತ್ತಥಾ ।
ಅಸಾರದ್ಯೂತಗೀತೇಷು ದ್ವಿಜಸ್ತು ನ ರತಿಂ ಚರೇತ್ ॥ ೨೯ ॥

ಮಾರ್ಗಸ್ಥಿತಮಥೋಚ್ಛಿಷ್ಟಂ ಶೂದ್ರಂ ಚ ಪತಿತಂ ತಥಾ ।
ಶವಂ ಚ ಭಿಷಜಂ ಚ ಸ್ಪೃಷ್ಟ್ವಾ ಸಚೈಲಂ ಸ್ನಾನಮಾಚರೇತ್ ॥ ೩೦ ॥

ಚಿತಿಂ ಚ ಚಿತಿಕಾಷ್ಠಂ ಚ ಯೂಪಂ ಚಂಡಾಲಮೇವ ಚ ।
ಸ್ಪೃಷ್ಟ್ವಾ ದೇವಲಕಂ ಚೈವ ಸವಾಸಾ ಜಲಮಾವಿಶೇತ್ ॥ ೩೧ ॥

ಪ್ರದೀಪಸ್ಯ ತಥಾ ಛಾಯಾ ಕೇಶವಸ್ತ್ರಕಟೋದಕಂ ।
ಅಜಾಮಾರ್ಜಾರದುಗ್ಧಂ ಚ ಹಂತಿ ಪುಣ್ಯಂ ಪುರಾಕೃತಂ ॥ ೩೨ ॥

---

೨೮. ಇತರರ ಪಾಪಕೃತ್ಯಗಳನ್ನು ಹೇಳಬಾರದು. ತಾನು ಮಾಡಿದ ಪುಣ್ಯಕೆಲಸವನ್ನು ಹೊಗಳಿಕೊಳ್ಳಬಾರದು. ತನ್ನ ಹೆಸರು, ನಕ್ಷತ್ರ, ಮರ್ಯಾದೆ ಇವುಗಳನ್ನು ಅತ್ಯಂತವಾಗಿ ಮುಚ್ಚಿಡಬೇಕು.

೨೯. ದ್ವಿಜನು ದುರ್ಜನಸಹವಾಸ, ಶಾಸ್ತ್ರವಿರುದ್ಧಶ್ರವಣ ಇವುಗಳನ್ನು ಬಿಡಬೇಕು. ಅಸಾರವಾದ ಜೂಜು, ಗಾನ ಇವುಗಳಲ್ಲಿ ಆಸಕ್ತನಾಗಬಾರದು.

೩೦-೩೧. ದಾರಿಯಲ್ಲಿ ಬಿದ್ದಿದ್ದ ಎಂಜಲು, ಶೂದ್ರ, ಪತಿತ, ಹೆಣ, ವೈದ್ಯ ಇವರನ್ನು ಮುಟ್ಟಿದರೆ ಸಚೇಲಸ್ನಾನಮಾಡಬೇಕು. ಚಟ್ಟ ಮತ್ತು ಅದರ ಕಟ್ಟಿಗೆ ಚಂಡಾಲಸಂಬಂಧಿಯಾದ ಯೂಪ ಮತ್ತು ಪೂಜಾರಿ ಇವರನ್ನು ಮುಟ್ಟಿದರೆ ಆ ಬಟ್ಟೆಸಹಿತವಾಗಿ ನೀರಿನಲ್ಲಿ ಮುಳುಗಬೇಕು.

೩೨. ದೀಪದ ನೆರಳು, ಬಟ್ಟೆ ಮತ್ತು ಕೂದಲನ್ನು ಝಾಡಿಸುವುದರಿಂದ ಬೀಳುವ ನೀರು, ಮೇಕೆ, ಮತ್ತು ಬೆಕ್ಕಿನಹಾಲು ಇವುಗಳು ಪೂರ್ವಾರ್ಜಿತಪುಣ್ಯವನ್ನು ನಾಶಪಡಿಸುತ್ತವೆ.

ಶೂರ್ಪವಾತಂ ಪ್ರೇತಧೂಮಂ ತಥಾ ಶೂದ್ರಾನ್ನಭೋಜನಂ ।
ವೃಷಲೀಪತಿಸಂಗಂ ಚ ದೂರತಃ ಪರಿವರ್ಜಯೇತ್ ॥ ೩೩ ॥

ಅಸಚ್ಛಾಸ್ತ್ರಮನನಂ ಖಾದನಂ ನಖಕೇಶಯೋಃ ।
ತಥೈವ ನಗ್ನಶಯನಂ ಸರ್ವದಾ ಪರಿವರ್ಜಯೇತ್ ॥ ೩೪ ॥

ಶಿರೋಽಭ್ಯಂಗಾವಶಿಷ್ಟೇನ ತೈಲೇನಾಂಗಂ ನ ಲೇಪಯೇತ್ ।
ತಾಂಬೂಲಮಶುಚಿರ್ನಾದ್ಯಾತ್ತಥಾ ಸುಪ್ತಂ ನ ಬೋಧಯೇತ್ ॥ ೩೫ ॥

ನಾಶುದ್ಧೋಽಗ್ನಿಂ ಪರಿಚರೇತ್ಪೂಜಯೇದ್ಗುರುದೇವತಾಃ ।
ನ ವಾಮಹಸ್ತೇನೈಕೇನ ಪಿಬೇದ್ವಕ್ತ್ರೇಣ ವಾ ಜಲಂ ॥ ೩೬ ॥

ನಚಾಕ್ರಮೇದ್ಗುರೋಶ್ಛಾಯಾಂ ತದಾಜ್ಞಾಂ ಚ ಮುನೀಶ್ವರ ।
ನ ನಿಂದ್ಯೇದ್ಯೋಗಿನೋ ವಿಪ್ರಾನ್ವ್ರತಿನೋಽಪಿ ಯತೀಂಸ್ತಥಾ ॥ ೩೭ ॥

---

೩೩. ಮೊರದಿಂದ ಬೀಸುವ ಗಾಳಿ, ಹೆಣದ ಹೊಗೆ, ಶೂದ್ರರ ಅನ್ನವನ್ನು ತಿನ್ನುವುದು, ವೃಷಲೀಗಂಡನ ಸಹವಾಸ ಇವುಗಳನ್ನು ದೂರಮಾಡಬೇಕು.

೩೪. ದುಃಶಾಸ್ತ್ರವಿಚಾರ, ಉಗುರು ಕೂದಲು ಇವುಗಳನ್ನು ತಿನ್ನುವುದು ಮತ್ತು ಬರೀಮೈಯಲ್ಲಿ ಮಲಗುವುದು ಇವುಗಳನ್ನು ಯಾವಾಗಲೂ ಬಿಡಬೇಕು.

೩೫. ತಲೆಗೆ ಹಚ್ಚಿ ಮಿಕ್ಕ ಎಣ್ಣೆಯನ್ನು ಇತರ ಭಾಗಗಳಿಗೆ ಹಚ್ಚಬಾರದು. ಅಶುದ್ಧನಾಗಿ ತಾಂಬೂಲವನ್ನು ಹಾಕಿಕೊಳ್ಳಬಾರದು. ಮತ್ತು ಮಲಗಿದ್ದವನನ್ನು ಎಬ್ಬಿಸಬಾರದು.

೩೬. ಅಶುದ್ಧನಾಗಿ ಅಗ್ನಿಪರಿಚರ್ಯೆ, ಗುರು ದೇವತೆಗಳ ಪೂಜೆ ಇವುಗಳನ್ನು ಮಾಡಬಾರದು. ಎಡಗೈಮಾತ್ರದಿಂದ ಅಥವಾ ಬಾಯಿಂದಲೇ ನೀರು ಕುಡಿಯಬಾರದು.

೩೭. ಗುರುಗಳ ಛಾಯೆ ಮತ್ತು ಅಪ್ಪಣೆಯನ್ನು ಅತಿಕ್ರಮಿಸಬಾರದು. ಯೋಗಿಗಳು, ವ್ರತನಿಷ್ಠರು, ಬ್ರಾಹ್ಮಣರು ಮತ್ತು ಯತಿಗಳು ಇವರನ್ನು ದೂಷಿಸಬಾರದು.

ಪರಸ್ಪರಸ್ಯ ಮರ್ಮಾಣಿ ನ ಕದಾಪಿ ವದೇದ್ದ್ವಿಜಃ ।
ದರ್ಶೇ ಚ ಪೌರ್ಣಮಾಸ್ಯಾಂ ಚ ಯಾಗಂ ಕುರ್ಯಾದ್ಯಥಾವಿಧಿ　॥ ೩೮ ॥

ಔಪಾಸನಂ ಚ ಹೋತವ್ಯಂ ಸಾಯಂಪ್ರಾತಃ ದ್ವಿಜಾತಿಭಿಃ ।
ಔಪಾಸನಪರಿತ್ಯಾಗೀ ಸುರಾಪೀತ್ಯುಚ್ಯತೇ ಬುಧೈಃ　॥ ೩೯ ॥

ಅಯನೇ ವಿಷುವೇ ಚೈವ ಯುಗಾದಿಷು ಚತುರ್ಷ್ವಪಿ ।
ದರ್ಶೇ ಚ ಪ್ರೇತಪಕ್ಷೇ ಚ ಶ್ರಾದ್ಧಂ ಕುರ್ಯಾದ್ಗೃಹೀ ದ್ವಿಜಃ　॥ ೪೦ ॥

ಮನ್ವಾದಿಷು ಮೃತಾಹೇ ಚ ಅಷ್ಟಕಾಸು ಚ ನಾರದ ।
ನವಧಾನ್ಯೇ ಸಮಾಯಾತೇ ಗೃಹೀ ಶ್ರಾದ್ಧಂ ಸಮಾಚರೇತ್　॥ ೪೧ ॥

---

೩೮. ಪರಸ್ಪರಮರ್ಮಗಳನ್ನು ಯಾವಾಗಲೂ ಬಹಿರಂಗ ಮಾಡಬಾರದು. ದ್ವಿಜನು ಅಮಾವಾಸ್ಯೆ ಮತ್ತು ಪೂರ್ಣಿಮೆ ದಿನಗಳಲ್ಲಿ ವಿಧಾನೋಕ್ತಪ್ರಕಾರ ಯಾಗವನ್ನು ಮಾಡಬೇಕು.

೩೯. ದ್ವಿಜರು ಸಾಯಂಕಾಲ ಮತ್ತು ಪ್ರಾತಃಕಾಲಗಳಲ್ಲಿ ಔಪಾಸನೆ ಮಾಡಬೇಕು. ಔಪಾಸನೆಯನ್ನು ಬಿಟ್ಟವನು ಮದ್ಯಪಾನ ಮಾಡಿದವನಿಗೆ ಸಮಾನನೆಂದು ಜ್ಞಾನಿಗಳು ಹೇಳಿದ್ದಾರೆ.

೪೦. ಗೃಹಸ್ಥನಾದ ದ್ವಿಜನು ಅಯನಪರ್ವಕಾಲ, ತುಲಾಸಂಕ್ರಮಣಕಾಲ, ನಾಲ್ಕು ಯುಗಾದಿಗಳು, ಅಮಾವಾಸ್ಯೆ ಮತ್ತು ಭಾದ್ರಪದ ಕೃಷ್ಣಪಕ್ಷ ಇವುಗಳಲ್ಲಿ ಶ್ರಾದ್ಧಮಾಡಬೇಕು.

೪೧. ನಾರದನೇ! ಗೃಹಸ್ಥನು ಮನ್ವಾದಿಗಳು, ಪಿತೃಗಳ ಮರಣದಿನ, ಅಷ್ಟಕಾ ತಿಥಿಗಳು ಮತ್ತು ನೂತನವಾಗಿ ಧಾನ್ಯ ಬಂದ ದಿನ ಇವುಗಳಲ್ಲಿ ಶ್ರಾದ್ಧ ಮಾಡಬೇಕು.

ಶ್ರೋತ್ರಿಯೇ ಗೃಹಮಾಯಾತೇ ಗ್ರಹಣೇ ಚಂದ್ರಸೂರ್ಯಯೋಃ ।
ಪುಣ್ಯಕ್ಷೇತ್ರೇಷು ತೀರ್ಥೇಷು ಗೃಹೀ ಶ್ರಾದ್ಧಂ ಸಮಾಚರೇತ್ ॥ ೪೨ ॥

ಯಜ್ಞೋ ದಾನಂ ತಪೋ ಹೋಮಃ ಸ್ವಾಧ್ಯಾಯಃ ಪಿತೃತರ್ಪಣಂ ।
ವೃಥಾ ಭವತಿ ತತ್ಸರ್ವಮೂರ್ಧ್ವಪುಂಡ್ರಂ ವಿನಾ ಕೃತಂ ॥ ೪೩ ॥

ಊರ್ಧ್ವಪುಂಡ್ರಂ ಚ ತುಲಿಸೀಂ ಶ್ರಾದ್ಧೇ ನೇಚ್ಛಂತಿ ಕೇಚನ ।
ವೃದ್ಧಾಚಾರಃ ಪರಿಗ್ರಾಹ್ಯಸ್ತಸ್ಮಾಚ್ಛ್ರೇಯೋರ್ಥಿಭಿರ್ದ್ವಿಜೈಃ ॥ ೪೪ ॥

ಇತ್ಯೇವಮಾದಯೋ ಧರ್ಮಾಃ ಸ್ಮೃತಿಮಾರ್ಗಪ್ರಚೋದಿತಾಃ ।
ಕಾರ್ಯಾ ದ್ವಿಜಾತಿಭಿಃ ಸಮ್ಯಕ್ಸರ್ವಕರ್ಮಫಲಪ್ರದಾಃ ॥ ೪೫ ॥

---

೪೨. ಗೃಹಸ್ಥನು ಶ್ರೋತ್ರಿಯರು ಮನೆಗೆ ಬಂದ ದಿನ, ಚಂದ್ರ ಸೂರ್ಯ ಗ್ರಹಣಗಳ ದಿನ, ಪುಣ್ಯಕ್ಷೇತ್ರತೀರ್ಥಗಳಲ್ಲಿ ಹೋದಾಗ ಶ್ರಾದ್ಧ ಮಾಡಬೇಕು.

೪೩. ಊರ್ಧ್ವಪುಂಡ್ರವನ್ನು ಧರಿಸದೇ ಮಾಡಿದ ಯಜ್ಞ, ದಾನ, ತಪಸ್ಸು, ಹೋಮ, ವೇದಾಧ್ಯಯನ ಮತ್ತು ಪಿತೃತರ್ಪಣ ಇವೆಲ್ಲವೂ ವ್ಯರ್ಥವಾಗುತ್ತವೆ.

೪೪. ಕೆಲವರು ಶ್ರಾದ್ಧದಲ್ಲಿ ಊರ್ಧ್ವಪುಂಡ್ರ ಮತ್ತು ತುಲಸಿ ಇವುಗಳನ್ನು ಉಪಯೋಗಿಸಬಾರದೆಂದು ಹೇಳುವರು. ಅದು ಸರಿಯಲ್ಲ. ಶ್ರೇಯಸ್ಸನ್ನು ಬಯಸುವ ದ್ವಿಜರು ವೃದ್ಧಸಂಪ್ರದಾಯಸಿದ್ಧವಾದ ಊರ್ಧ್ವಪುಂಡ್ರಧಾರಣಾದಿಗಳನ್ನು ಮಾಡಬೇಕು.

೪೫. ಇವೇ ಮುಂತಾದ ಸ್ಮೃತಿವಿಹಿತವಾದ ಸಕಲ ಕರ್ಮಗಳಿಗೂ ಸಾಫಲ್ಯವನ್ನುಂಟುಮಾಡುವ ಧರ್ಮಗಳು ದ್ವಿಜರೆನಿಸಿದ ಬ್ರಾಹ್ಮಣ ಕ್ಷತ್ರಿಯ ವೈಶ್ಯರಿಂದ ಚೆನ್ನಾಗಿ ಆಚರಿಸಲ್ಪಡಬೇಕು.

**ಸದಾಚಾರಪರಾ ಯೇ ತು ತೇಷಾಂ ವಿಷ್ಣುಃ ಪ್ರಸೀದತಿ ।**
**ವಿಷ್ಣೌ ಪ್ರಸನ್ನತಾಂ ಯಾತೇ ಕಿಮಸಾಧ್ಯಂ ದ್ವಿಜೋತ್ತಮ ॥ ೪೬ ॥**

**ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ ಪ್ರಥಮಪಾದೇ ಸ್ಮಾರ್ತಧರ್ಮೇಷು ವೇದಾಧ್ಯಯನಾದಿಕಸ್ಯ ಗೃಹಸ್ಥ ಧರ್ಮಸ್ಯ ಚ ನಿರೂಪಣಂ ನಾಮ ಷಡ್ವಿಂಶೋಽಧ್ಯಾಯಃ**

---

೪೬. ದ್ವಿಜಶ್ರೇಷ್ಠನೇ ! ಸದಾಚಾರನಿಷ್ಠರಾದವರಿಗೆ ವಿಷ್ಣುವು ಪ್ರಸನ್ನನಾಗುವನು. ವಿಷ್ಣುವು ಪ್ರಸನ್ನನಾದ ಮೇಲೆ ಯಾವದುತಾನೇ ಅಸಾಧ್ಯವು? ಅಂತಹವರಿಗೆ ಸಕಲವೂ ಸಿದ್ಧಿಸುತ್ತವೆ.

ಇಂತು ಶ್ರೀಬೃಹನ್ನಾರದೀಯಪುರಾಣದೊಳು ಪೂರ್ವಭಾಗ ಪ್ರಥಮಪಾದದಲ್ಲಿ ಸ್ಮೃತ್ಯುಕ್ತಧರ್ಮಗಳಲ್ಲಿ ವೇದಾಧ್ಯಯನಾದಿ ಗೃಹಸ್ಥಧರ್ಮಗಳನಿರೂಪಣ ಪರವಾದ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.

### ಕಥಾಸಾರಾಂಶ

ಈ ಅಧ್ಯಾಯದಲ್ಲಿ ದ್ವಿಜನು ಉಪನೀತನಾಗಿ ವೇದವನ್ನು ಅಧ್ಯಯನ ಮಾಡಲು ಗುರುಕುಲವಾಸಮಾಡಿದಮೇಲೆ ಅವರ ಅಪ್ಪಣೆಯನ್ನು ಪಡೆದು ವಿವಾಹಮಾಡಿಕೊಳ್ಳಬೇಕೆಂಬುದನ್ನು ಮತ್ತು ವಿವಾಹಯೋಗ್ಯಕನ್ಯೆಯ ಲಕ್ಷಣ, ವಿವಾಹಪ್ರಭೇದ, ಅವುಗಳ ತಾರತಮ್ಯ ಮುಂತಾದುವುಗಳನ್ನು ನಿರೂಪಿಸಿ, ಗೃಹಸ್ಥನಾದಮೇಲೆ ಕರ್ತವ್ಯಧರ್ಮಗಳನ್ನು ವಿವರಿಸಿ ಊರ್ಧ್ವಪುಂಡ್ರಧಾರಣೆಯು ಆವಶ್ಯಕವೆಂದು ಹೇಳಿ ಉಕ್ತಧರ್ಮಗಳನ್ನು ಆಚರಿಸುವವರಿಗೆ ಫಲವನ್ನು ಹೇಳಿದೆ.

# ಸಪ್ತವಿಂಶೋಽಧ್ಯಾಯಃ

**ಸನಕ ಉವಾಚ**

ಗೃಹಸ್ಥಸ್ಯ ಸದಾಚಾರಂ ವಕ್ಷ್ಯಾಮಿ ಮುನಿಸತ್ತಮ ।
ಯದ್ವತಾಂ ಸರ್ವಪಾಪಾನಿ ನಶ್ಯಂತ್ಯೇವ ನ ಸಂಶಯಃ ॥ ೧ ॥

ಬ್ರಾಹ್ಮೇ ಮುಹೂರ್ತೇ ಚೋತ್ಥಾಯ ಪುರುಷಾರ್ಥಾವಿರೋಧಿನೀಂ ।
ವೃತ್ತಿಂ ಸಂಚಿಂತಯೇದ್ವಿಪ್ರಃ ಕೃತಕೇಶಪ್ರಸಾಧನಃ ॥ ೨ ॥

ದಿವಾ ಸಂಧ್ಯಾಸು ಕರ್ಣಸ್ಥಬ್ರಹ್ಮಸೂತ್ರ ಉದಙ್ಮುಖಃ ।
ಕುರ್ಯಾನ್ಮೂತ್ರಪುರೀಷೇ ತು ರಾತ್ರೌ ಚೇದ್ದಕ್ಷಿಣಾಮುಖಃ ॥ ೩ ॥

ಶಿರಃ ಪ್ರಾವೃತ್ಯ ವಸ್ತ್ರೇಣ ಹ್ಯಂತರ್ಧಾಯ ತೃಣೈರ್ಮಹೀಂ ।
ವಹನ್ಕಾಷ್ಠಂ ಕರೇಣೈಕಂ ತಾವನ್ಮೌನೀ ಭವೇದ್ದ್ವಿಜಃ ॥ ೪ ॥

---

## ಇಪ್ಪತ್ತೇಳನೆಯ ಅಧ್ಯಾಯವು

೧. ಸನಕನು ಹೇಳಿದನು—ಮುನಿಶ್ರೇಷ್ಠನೇ! ಅನುಷ್ಠಾನಮಾಡುವವರ ಸಕಲಪಾಪಗಳನ್ನೂ ಸಂದೇಹವಿಲ್ಲದೇ ನಾಶಪಡಿಸುವಂತಹ ಗೃಹಸ್ಥನ ಸದ್ಧರ್ಮಗಳನ್ನು ಹೇಳುತ್ತೇನೆ.

೨. ಬ್ರಾಹ್ಮಣನು ಬ್ರಾಹ್ಮ ಮುಹೂರ್ತದಲ್ಲಿ (ಬೆಳಗಿನ ಜಾವದಲ್ಲಿ) ಎದ್ದು ತಲೆಯಕೂದಲನ್ನು ಬಾಚಿಕೊಂಡು ಧರ್ಮಾದಿ ಪುರುಷಾರ್ಥಗಳಿಗೆ ಅವಿರುದ್ಧವಾದ ವ್ಯಾಪಾರವನ್ನು ಚಿಂತಿಸಬೇಕು.

೩. ಬ್ರಾಹ್ಮಣನು ಹಗಲು ಮತ್ತು ಸಂಧ್ಯಾಕಾಲಗಳಲ್ಲಿ ಜನಿವಾರವನ್ನು ಕಿವಿಗೆ ಸುತ್ತಿಕೊಂಡು ಉತ್ತರಾಭಿಮುಖನಾಗಿಯೂ ರಾತ್ರಿಯ ಕಾಲದಲ್ಲಿ ದಕ್ಷಿಣಾಭಿಮುಖನಾಗಿಯೂ ಕುಳಿತು ಮಲಮೂತ್ರಗಳನ್ನು ವಿಸರ್ಜನೆ ಮಾಡಬೇಕು.

೪. ದ್ವಿಜನು ತಲೆಗೆ ಬಟ್ಟೆಯನ್ನು ಸುತ್ತಿಕೊಂಡು ಮಲಮೂತ್ರವಿಸರ್ಜನೆ ಮಾಡುವ ಸ್ಥಳವನ್ನು ಹುಲ್ಲಿನಿಂದ ಮುಚ್ಚಿ, ಒಂದು ಕೈಯಿಂದ ಕಟ್ಟಿಗೆಯನ್ನು ಹಿಡಿದುಕೊಂಡು ವಿಸರ್ಜನೆಮಾಡುವವರೆಗೂ ಮೌನವಾಗಿರಬೇಕು.

ಪಥಿ ಗೋಷ್ಠೇ ನದೀತೀರೇ ತಡಾಗಗೃಹಸನ್ನಿಧೌ ।
ತಥಾ ವೃಕ್ಷಸ್ಯ ಛಾಯಾಯಾಂ ಕಾಂತಾರೇ ವಹ್ನಿಸನ್ನಿಧೌ ॥ ೫ ॥

ದೇವಾಲಯೇ ತಥೋದ್ಯಾನೇ ಕೃಷ್ಟಭೂಮೌ ಚತುಷ್ಪಥೇ ।
ಬ್ರಾಹ್ಮಣಾನಾಂ ಸಮೀಪೇ ಚ ತಥಾ ಗೋಗುರುಯೋಷಿತಾಂ ॥ ೬ ॥

ತುಷಾಂಗಾರಕಪಾಲೇಷು ಜಲಮಧ್ಯೇ ತಥೈವ ಚ ।
ಏವಮಾದಿಷು ದೇಶೇಷು ಮಲಮೂತ್ರಂ ನ ಕಾರಯೇತ್ ॥ ೭ ॥

ಶೌಚೇ ಯತ್ನಃ ಸದಾ ಕಾರ್ಯಃ ಶೌಚಮೂಲೋ ದ್ವಿಜಃ ಸ್ಮೃತಃ ।
ಶೌಚಾಚಾರವಿಹೀನಸ್ಯ ಸಮಸ್ತಂ ಕರ್ಮ ನಿಷ್ಫಲಂ ॥ ೮ ॥

ಶೌಚಂ ತು ದ್ವಿವಿಧಂ ಪ್ರೋಕ್ತಂ ಬಾಹ್ಯಮಾಭ್ಯಂತರಂ ತಥಾ ।
ಮೃಜ್ಜಲಾಭ್ಯಾಂ ಬಹಿಃ ಶುದ್ಧಿರ್ಭಾವಶುದ್ಧಿಸ್ತಥಾಂತರೇ ॥ ೯ ॥

---

೫-೭. ಕೆರೆ ಮತ್ತು ಮನೆಗಳ ಸಮೀಪ, ಗಿಡದ ನೆರಳು, ಕಾಡು, ಬೆಂಕಿಯ ಹತ್ತಿರ, ದೇವಾಲಯ, ತೋಟ, ಉತ್ತಿರುವ ಭೂಮಿ, ನಾಲ್ಕು ದಾರಿಗಳು ಸೇರುವಸ್ಥಳ, ಬ್ರಾಹ್ಮಣ, ಗೋವು, ಗುರು ಮತ್ತು ಸ್ತ್ರೀಯರು ಇವರುಗಳ ಸಮೀಪ, ಹೊಟ್ಟು, ಇದ್ದಿಲು, ಮೂಳೆ ಇವುಗಳ ಮೇಲೆ ಮತ್ತು ನೀರಿನ ಮಧ್ಯೆ ಮುಂತಾದ ಸ್ಥಳದಲ್ಲಿ ಮಲಮೂತ್ರವಿಸರ್ಜನೆ ಮಾಡಬಾರದು.

೮. ದ್ವಿಜನಿಗೆ ಶುದ್ಧಿಯು ಮುಖ್ಯವೆಂದು ಸ್ಮೃತಿಯಲ್ಲಿ ಹೇಳಿದೆ. ಆದ ಕಾರಣ ದ್ವಿಜನು ಯಾವಾಗಲೂ ಶುದ್ಧಿವಿಷಯದಲ್ಲಿ ಪ್ರಯತ್ನಮಾಡಬೇಕು. ಶುದ್ಧಿಕ್ರಿಯೆ ಇಲ್ಲದವನಿಗೆ ಸಕಲಕರ್ಮವೂ ನಿಷ್ಫಲವಾಗುತ್ತವೆ.

೯. ಶೌಚವು ಬಾಹ್ಯ ಆಭ್ಯಂತರ ಎಂಬುದಾಗಿ ಎರಡು ವಿಧ. ಮಣ್ಣು ನೀರು ಇವುಗಳಿಂದ ಹಸ್ತಪಾದಾದಿಗಳನ್ನು ತೊಳೆದುಕೊಳ್ಳುವುದು ಬಾಹ್ಯ ಶುದ್ಧಿಯು. ನಿರ್ಮಲ ಮನೋಭಾವನೆಯೇ ಆಭ್ಯಂತರ ಶುದ್ಧಿ ಎಂದು ತಿಳಿಯಬೇಕು.

ಗೃಹೀತಶಿಶ್ನಶ್ಚೋತ್ಥಾಯ ಶೌಚಾರ್ಥಂ ಮೃದಮಾಹರೇತ್ ।
ನ ಮೂಷಕಾದಿಖನಿತಾಂ ಹಲೋತ್ಕೃಷ್ಟಾಂ ತಥೈವ ಚ ॥ ೧೦ ॥

ವಾಪೀಕೂಪತಡಾಗೇಭ್ಯೋ ನಾಹರೇದಪಿ ಮೃತ್ತಿಕಾಂ ।
ಶೌಚಂ ಕುರ್ಯಾತ್ಪ್ರಯತ್ನೇನ ಸಮಾದಾಯ ಶುಭಾಂ ಮೃದಂ ॥ ೧೧ ॥

ಲಿಂಗೇ ಮೃದೇಕಾ ದಾತವ್ಯಾ ತಿಸ್ರೋ ವಾ ಮೇಢ್ರಯೋರ್ದ್ವಯೋಃ ।
ಏತನ್ಮೂತ್ರಸಮುತ್ಸರ್ಗೇ ಶೌಚಮಾಹುರ್ಮನೀಷಿಣಃ ॥ ೧೨ ॥

ಏಕಾ ಲಿಂಗೇ ಗುದೇ ಪಂಚ ದಶ ವಾಮೇ ತಥೋಭಯೋಃ ।
ಸಪ್ತ ತಿಸ್ರಃ ಪ್ರದಾತವ್ಯಾಃ ಪಾದಯೋರ್ಮೃತ್ತಿಕಾಃ ಪೃಥಕ್ ॥ ೧೩ ॥

ಏತಚ್ಛೌಚಂ ವಿಡುತ್ಸರ್ಗೇ ಗಂಧಲೇಪಾಪನುತ್ತಯೇ ।
ಏತಚ್ಛೌಚಂ ಗೃಹಸ್ಥಸ್ಯ ದ್ವಿಗುಣಂ ಬ್ರಹ್ಮಚಾರಿಣಾಂ ॥ ೧೪ ॥

---

೧೦-೧೧. ಮೂತ್ರವಿಸರ್ಜನೆಯಾದಮೇಲೆ ಶಿಶ್ನವನ್ನು ಕೈಯಲ್ಲಿ ಹಿಡಿದುಕೊಂಡು ಎದ್ದು ಶೌಚಕ್ಕಾಗಿ ಮಣ್ಣನ್ನು ತೆಗೆದುಕೊಳ್ಳಬೇಕು. ಇಲಿ, ಹೆಗ್ಗಣ ಮುಂತಾದುವುಗಳಿಂದ ತೋಡಲ್ಪಟ್ಟ ಮತ್ತು ನೇಗಿಲಿನಿಂದ ಉತ್ತ ಮಣ್ಣನ್ನು, ಸರೋವರ ಬಾವಿ ಕೆರೆ ಇವುಗಳ ಮಣ್ಣನ್ನೂ ಶೌಚಕ್ಕಾಗಿ ಉಪಯೋಗಿಸಬಾರದು. ಪ್ರಯತ್ನಪೂರ್ವಕವಾಗಿ ಒಳ್ಳೆಯ ಮಣ್ಣನ್ನು ತೆಗೆದುಕೊಂಡು ಅದರಿಂದ ಅವಯುವಗಳನ್ನು ಶುದ್ಧಿಮಾಡಿಕೊಳ್ಳಬೇಕು.

೧೨. ಉಚ್ಚೆ ಹೊಯಿದಾಗ ಶಿಶ್ನ ಮತ್ತು ವೃಷಣಗಳನ್ನು ಮಣ್ಣಿನಿಂದ ಒಂದಾವರ್ತಿ ಅಥವಾ ಮೂರಾವರ್ತಿ ನೀರನ್ನು ಹಾಕಿ ತೊಳೆಯಬೇಕು. ಇದೇ ಮೂತ್ರವಿಸರ್ಜನೆಮಾಡಿದಮೇಲೆ ಮಾಡಬೇಕಾದ ಶುದ್ಧಿಯು ಎಂದು ಜ್ಞಾನಿಗಳು ಹೇಳುವರು.

೧೩-೧೫. ಮಲವಿಸರ್ಜನೆಮಾಡಿದಾಗ ಮಲದ ದುರ್ಗಂಧ ಹೋಗುವುದಕ್ಕಾಗಿ ಶಿಶ್ನದಲ್ಲಿ ಒಂದಾವರ್ತಿ, ಗುದದಲ್ಲಿ ಐದುಸಾರಿ, ಪೃಷ್ಠಭಾಗದಲ್ಲಿ ಹತ್ತುಸಲ ಉಭಯ ಪಾರ್ಶ್ವಗಳಲ್ಲಿಯೂ ಸೇರಿ ಏಳುಸಾರಿ, ಒಂದೊಂದು ಪಾದದಲ್ಲಿ ಮೂರು

ತ್ರಿಗುಣಂ ತು ವನಸ್ಥಾನಾಂ ಯತೀನಾಂ ತಚ್ಚತುರ್ಗುಣಂ ।
ಸ್ವಸ್ಥಾನೇ ಪೂರ್ಣಶೌಚಂ ಸ್ಯಾತ್ಪಥ್ಯರ್ಧಂ ಮುನಿಸತ್ತಮ ॥ ೧೫ ॥

ಆತುರೇ ನಿಯಮೋ ನಾಸ್ತಿ ಮಹಾಪದಿ ತಥೈವ ಚ ।
ಗಂಧಲೇಪಕ್ಷಯಕರಂ ಶೌಚಂ ಕುರ್ಯಾದ್ವಿಚಕ್ಷಣಃ ॥ ೧೬ ॥

ಸ್ತ್ರೀಣಾಮನುಪನೀತಾನಾಂ ಗಂಧಲೇಪಕ್ಷಯಾವಧಿ ।
ವ್ರತಸ್ಥಾನಾಂ ತು ಸರ್ವೇಷಾಂ ಯತಿವಚ್ಛೌಚಮಿಷ್ಯತೇ ॥ ೧೭ ॥

ವಿಧವಾನಾಂ ಚ ವಿಪ್ರೇಂದ್ರ ಏತದೇವ ನಿಗದ್ಯತೇ ।
ಏವಂ ಶೌಚಂ ತು ನಿರ್ವರ್ತ್ಯ ಪಶ್ಚಾದ್ವೈ ಸುಸಮಾಹಿತಃ ॥ ೧೮ ॥

ಪ್ರಾಗಾಸ್ಯ ಉದಗಾಸ್ಯೋ ವಾsಪ್ಯಾಚಾಮೇತ್ಪ್ರಯತೇಂದ್ರಿಯಃ ।
ತ್ರಿಶ್ಚತುರ್ಧಾ ಪಿಬೇದಾಪೋ ಗಂಧಫೇನಾದಿವರ್ಜಿತಾಃ ॥ ೧೯ ॥

---

ಮೂರುಸಲ ಮಣ್ಣನ್ನು ಹಚ್ಚಿ ತೊಳೆಯಬೇಕು. ಇದು ಮಲಮೂತ್ರವಿಸರ್ಜನೆ ಮಾಡಿದಾಗ ಗೃಹಸ್ಥನು ಮಾಡಬೇಕಾದ ಶೌಚವು. ಇದರ ಎರಡರಷ್ಟು ಬ್ರಹ್ಮ ಚಾರಿಗಳೂ, ಮೂರರಷ್ಟು ವಾನಪ್ರಸ್ಥಾಶ್ರಮಿಗಳೂ, ನಾಲ್ಕರಷ್ಟು ಸನ್ಯಾಸಿಗಳೂ ಮಾಡಿಕೊಳ್ಳಬೇಕು. ಮುನಿವರ್ಯ! ಸ್ವಂತಗ್ರಾಮದಲ್ಲಿ ತನ್ನ ಮನೆಯಲ್ಲಿ ಮೇಲೆ ಹೇಳಿದ ಪ್ರಕಾರ ಶೌಚವನ್ನು ಸಂಪೂರ್ಣವಾಗಿಯೂ ಮಾರ್ಗದಲ್ಲಿ ಅರ್ಧ ಭಾಗವನ್ನೂ ಮಾಡಿಕೊಳ್ಳಬೇಕು.

೧೬. ರೋಗಿಯಾಗಿರುವಾಗ ಮತ್ತು ಅತ್ಯಂತ ಆಪತ್ಕಾಲದಲ್ಲಿಯೂ ಸಹ ವಿವೇಚನಶೀಲನು ದುರ್ಗಂಧ ಹೋಗುವವರೆಗೂ ತೊಳೆಯಬೇಕು. ಅಂತ ಹವನು ಇಷ್ಟೇ ಶೌಚವನ್ನು ಮಾಡಬೇಕೆಂಬ ನಿಯಮವಿಲ್ಲ.

೧೭. ಹೆಂಗಸರು ಮತ್ತು ಉಪನಯನವಿಲ್ಲದ ಹುಡುಗರೂ ಸಹ ದುರ್ವಾ ಸನೆ ಹೋಗುವತನಕ ಶೌಚವನ್ನು ಆಚರಿಸಬೇಕು. ಎಲ್ಲಾ ವ್ರತಕರ್ತರಿಗೂ ಸನ್ಯಾಸಿಗಳಿಗೆ ಹೇಳಿರುವಷ್ಟು ಶೌಚವು ವಿಹಿತವಾಗಿದೆ.

೧೮-೨೦. ಬ್ರಾಹ್ಮಣವರ್ಯನೇ! ವಿಧವೆಯರಿಗೂ ಯತಿಗಳಷ್ಟು ಶೌಚವು ಉಕ್ತವಾಗಿದೆ. ಈ ಪ್ರಕಾರ ಶೌಚಕರ್ಮವನ್ನು ಮುಗಿಸಿಕೊಂಡು ಅನಂತರ

**ದ್ವಿರ್ಮಾರ್ಜಯೇತ್ಕಪೋಲಂ ಚ ತಲೇನೋಷ್ಠೌ ಚ ಸತ್ತಮ ।**
**ತರ್ಜನ್ಯಂಗುಷ್ಠಯೋಗೇನ ನಾಸಾರಂಧ್ರದ್ವಯಂ ಸ್ಪೃಶೇತ್ ॥ ೨೦ ॥**

**ಅಂಗುಷ್ಠಾನಾಮಿಕಾಭ್ಯಾಂ ಚ ಚಕ್ಷುಃ ಶ್ರೋತ್ರೇ ಯಥಾಕ್ರಮಂ ।**
**ಕನಿಷ್ಠಾಂಗುಷ್ಠಯೋಗೇನ ನಾಭಿದೇಶೇ ಸ್ಪೃಶೇದ್ದ್ವಿಜಃ ॥ ೨೧ ॥**

**ತಲೇನೋರಃಸ್ಥಲಂ ಚೈವ ಅಂಗುಲ್ಯಗ್ರೈಶ್ಶಿರಃ ಸ್ಪೃಶೇತ್ ।**
**ತಲೇನ ಚಾಂಗುಲಾಗ್ರೈರ್ವಾ ಸ್ಪೃಶೇದಂಸೌ ವಿಚಕ್ಷಣಃ ॥ ೨೨ ॥**

**ಏವಮಾಚಮ್ಯ ವಿಪ್ರೇಂದ್ರ ಶುದ್ಧಿಮಾಪ್ನೋತ್ಯನುತ್ತಮಾಂ ।**
**ದಂತಕಾಷ್ಠಂ ತತಃ ಖಾದೇತ್ಸತ್ವಚಂ ಶಸ್ತವೃಕ್ಷಜಂ ॥ ೨೩ ॥**

---

ಸಮಾಧಾನಚಿತ್ತನು ಜಿತೇಂದ್ರಿಯನೂ ಆಗಿ ಪೂರ್ವ ಅಥವಾ ಉತ್ತರದಿಕ್ಕಿಗೆ ಅಭಿಮುಖವಾಗಿ ಕುಳಿತು ಆಚಮನೆಮಾಡಬೇಕು. ವಾಸನೆ ಮತ್ತು ನೊರೆ ಇವುಗಳಿಲ್ಲದ ನೀರನ್ನು ಮೂರು ನಾಲ್ಕಾವರ್ತಿ ಪಾನಮಾಡಬೇಕು. ಅಂಗೈ ಯಿಂದ ಎರಡುಸಾರಿ ಕಪಾಳ ಮತ್ತು ತುಟಿಗಳನ್ನು ಪ್ರೋಕ್ಷಿಸಿಕೊಳ್ಳಬೇಕು. ಹೆಬ್ಬೆಟ್ಟು ಮತ್ತು ತರ್ಜನೀ (ಮೊದಲನೆಯ ಬೆಟ್ಟು) ಇವೆರಡರಿಂದ ಮೂಗಿನ ಎರಡು ಹೊಳ್ಳೆಗಳನ್ನು ಸ್ಪರ್ಶಮಾಡಬೇಕು.

೨೧. ಹೆಬ್ಬೆಟ್ಟಿನಿಂದ ಕಣ್ಣನ್ನೂ ಕಿರುಬೆಟ್ಟಿನಿಂದ ಕಿವಿಗಳನ್ನೂ ಕಿರು ಬೆಟ್ಟು ಹೆಬ್ಬೆಟ್ಟು ಇವೆರಡನ್ನೂ ಸೇರಿಸಿ ನಾಭಿಯನ್ನೂ ಸಹ ಸ್ಪರ್ಶಮಾಡಬೇಕು.

೨೨. ಅಂಗೈಯಿಂದ ಎದೆಯನ್ನೂ ಬೆಟ್ಟಿನ ಕೊನೆಗಳಿಂದ ತಲೆಯನ್ನೂ ಸ್ಪರ್ಶಮಾಡಬೇಕು. ಅಂಗೈ ಅಥವಾ ಬೆಟ್ಟಿನ ತುದಿಯಿಂದ ಎರಡು ಭುಜ ಗಳನ್ನು ಸ್ಪರ್ಶಮಾಡಬೇಕು.

೨೩-೨೪. ಬ್ರಾಹ್ಮಣಶ್ರೇಷ್ಠನೇ! ಉಕ್ತಪ್ರಕಾರ ಆಚಮನಮಾಡಿದರೆ ದ್ವಿಜನು ಶ್ರೇಷ್ಠವಾದ ಶುದ್ಧಿಯನ್ನು ಪಡೆಯುವನು. ಅನಂತರ ಬಿಲ್ವ, ಉತ್ತರಣೆ ಬೇವು, ಮಾವು, ಎಕ್ಕೆ ಮುಂತಾದ ಗಿಡಗಳ ಕಡ್ಡಿಯನ್ನು ಗಿಡದಿಂದ ತೊಗಟೆ

ಬಿಲ್ವಾಸನಾಪಾಮಾರ್ಗಾಣಾಂ ನಿಂಬಾಮ್ರಾರ್ಕಾದಿಶಾಖಿನಾಂ ।
ಪ್ರಕ್ಷಾಲ್ಯ ವಾರಿಣಾ ಚೈವ ಮಂತ್ರೇಣಾಪ್ಯಭಿಮಂತ್ರಿತಂ ॥ ೨೪ ॥

ಆಯುರ್ಬಲಂ ಯಶೋ ವರ್ಚಃ ಪ್ರಜಾಃ ಪಶುವಸೂನಿ ಚ ।
ಬ್ರಹ್ಮಪ್ರಜ್ಞಾಂ ಚ ಮೇಧಾಂ ಚ ತ್ವಂ ನೋ ದೇಹಿ ವನಸ್ಪತೇ ॥ ೨೫ ॥

ಕನಿಷ್ಠಾಗ್ರಸಮಂ ಸ್ಥೌಲ್ಯೇ ವಿಪ್ರಃ ಖಾದೇದ್ದಶಾಂಗುಲಂ ।
ನವಾಂಗುಲಂ ಕ್ಷತ್ರಿಯಶ್ಚ ವೈಶ್ಯಶ್ಚಾಷ್ಟಾಂಗುಲೋನ್ಮಿತಂ ॥ ೨೬ ॥

ಶೂದ್ರೋ ವೇದಾಂಗುಲಮಿತಂ ವನಿತಾ ಚ ಮುನೀಶ್ವರ ।
ಅಲಾಭೇ ದಂತಕಾಷ್ಠಾನಾಂ ಗಂಡೂಷೈರ್ಭಾನುಸಂಮಿತೈಃ ॥ ೨೭ ॥

---

ಸಹಿತವಾಗಿ ಕತ್ತರಿಸಿ ಅದನ್ನು ನೀರಿನಿಂದ ತೊಳೆದು ಮುಂದೆ ಹೇಳುವಮಂತ್ರ ದಿಂದ ಅಭಿಮಂತ್ರಿಸಿ ಅಗಿದು ಮೃದುವಾಗಿ ಮಾಡಿಕೊಂಡು ಅದರಿಂದ ಹಲ್ಲುಜ್ಜಿ ಕೊಳ್ಳಬೇಕು.

೨೫. ಆ ದಂತಕಾಷ್ಠವನ್ನು ಅಭಿಮಂತ್ರಿಸುವ ಪದ್ಯವಿದು. ಅದರ ಅರ್ಥ—ವನಸ್ಪತಿಯೇ! ಎಂದರೆ ಮೂಲಿಕೆಯ ಅಭಿಮಾನಿದೇವತೆಯೇ! ನೀನು ನನಗೆ ಆಯುಸ್ಸು, ಶಕ್ತಿ, ಕೀರ್ತಿ, ವರ್ಚಸ್ಸು, ಮಕ್ಕಳು, ಪಶು, ದ್ರವ್ಯ, ಬ್ರಹ್ಮ ಜ್ಞಾನ, ಪ್ರತಿಭೆ ಇವುಗಳನ್ನು ಕೊಡು ಎಂದು ಪ್ರಾರ್ಥಿಸುವೆನು.

೨೬-೨೭. ಬ್ರಾಹ್ಮಣನು ಕಿರುಬೆಟ್ಟಿನ ಕೊನೆಯಭಾಗದಷ್ಟು ದಪ್ಪ, ಹತ್ತು ಅಂಗುಲ ಉದ್ದವುಳ್ಳ ಕಡ್ಡಿಯನ್ನೂ, ಕ್ಷತ್ರಿಯನು ಒಂಭತ್ತಂಗುಲದ ಕಡ್ಡಿ ಯನ್ನೂ, ವೈಶ್ಯನು ಎಂಟು ಅಂಗುಲದ ಕಡ್ಡಿಯನ್ನೂ, ಶೂದ್ರನು ನಾಲ್ಕು ಅಂಗು ಲದ ಕಡ್ಡಿಯನ್ನೂ ಹಲ್ಲುಜ್ಜುವುದಕ್ಕೆ ಉಪಯೋಗಿಸಬೇಕು. ಇದರಂತೆಯೇ ಹೆಂಗಸರೂ ಹಲ್ಲುಜ್ಜಬೇಕು. ಮೇಲ್ಕಂಡ ದಂತಕಾಷ್ಠಗಳು ಸಿಕ್ಕದಿದ್ದಲ್ಲಿ ಹನ್ನೆ ರಡಾವರ್ತಿ ಬಾಯಿ ಮುಕ್ಕಳಿಸುವುದರಿಂದ ಹಲ್ಲನ್ನು ಶುದ್ಧಿಮಾಡಿಕೊಳ್ಳಬೇಕು.

ಮುಖಶುದ್ಧಿರ್ವಿಧೀಯೇತ ತೃಣಪತ್ರಸಮನ್ವಿತೈಃ ।
ಕರೇಣಾದಾಯ ವಾಮೇನ ಸಂಚರೇದ್ವಾಮದಂಷ್ಟ್ರಯಾ ॥ ೨೮ ॥

ದ್ವಿಜಾನ್ಸಂಘರ್ಷ್ಯ ಗೋದೋಹಂ ತತಃ ಪ್ರಕ್ಷಾಲ್ಯ ಪಾಟಯೇತ್ ।
ಜಿಹ್ವಾಮುಲ್ಲಿಖ್ಯ ತಾಭ್ಯಾಂ ತು ದಲಾಭ್ಯಾಂ ನಿಯತೇಂದ್ರಿಯಃ ॥ ೨೯ ॥

ಪ್ರಕ್ಷಾಲ್ಯ ಪ್ರಕ್ಷಿಪೇದ್ದೂರೇ ಭೂಯಶ್ಚಾಚಮ್ಯ ಪೂರ್ವವತ್ ।
ತತಃ ಸ್ನಾನಂ ಪ್ರಕುರ್ವೀತ ನದ್ಯಾದೌ ವಿಮಲೇ ಜಲೇ ॥ ೩೦ ॥

ತಟಂ ಪ್ರಕ್ಷಾಲ್ಯ ದರ್ಭಾಂಶ್ಚ ವಿನ್ಯಸ್ಯ ಪ್ರವಿಶೇಜ್ಜಲಂ ।
ಪ್ರಣಮ್ಯ ತತ್ರ ತೀರ್ಥಾನಿ ಆವಾಹ್ಯ ರವಿಮಂಡಲಾತ್ ॥ ೩೧ ॥

ಗಂಧಾದ್ಯೈರ್ಮಂಡಲಂ ಕೃತ್ವಾ ಧ್ಯಾತ್ವಾ ದೇವಂ ಜನಾರ್ದನಂ ।
ಸ್ನಾಯಾನ್ಮಂತ್ರಾನ್ಸ್ಮರನ್ಪುಣ್ಯಾಂಸ್ತೀರ್ಥಾನಿ ವಿರಿಂಚಿಜ ॥ ೩೨ ॥

---

೨೮-೨೯. ಬ್ರಹ್ಮಪುತ್ರನೇ! ತೃಣಪರ್ಣಗಳಿಂದ ಉಜ್ಜಿ ನೀರಿನಿಂದ ತೊಳೆದು ಬಾಯಿಯನ್ನು ಶುದ್ಧಿಮಾಡಿಕೊಳ್ಳಬೇಕು. ಕೈಯಿಂದ ಪರ್ಣಾದಿಗಳನ್ನು ತೆಗೆದುಕೊಂಡು ಎಡಗಿಂದ ಬಲಕ್ಕೆ ತಿಕ್ಕಬೇಕು. ಈ ರೀತಿ ಹಲ್ಲುಗಳನ್ನುಜ್ಜಿ ಆ ಪರ್ಣವನ್ನು ತೊಳೆದು, ಸೀಳಿ ಅದರ ದಳಗಳಿಂದ ನಾಲಿಗೆಯನ್ನು ತಿಕ್ಕಿ ತೊಳೆಯಬೇಕು.

೩೦. ತರುವಾಯ ಆ ಪರ್ಣಾದಿಗಳನ್ನು ತೊಳೆದು ದೂರ ಹಾಕಬೇಕು. ಅನಂತರ ಹಿಂದಿನಂತೆ ತಿರುಗಿ ಆಚಮನಮಾಡಿ ನದೀ ಮುಂತಾದ ನಿರ್ಮಲೋದಕದಲ್ಲಿ ಸ್ನಾನಮಾಡಬೇಕು.

೩೧-೩೨. ತೀರಪ್ರದೇಶವನ್ನು ತೊಳೆದು ದರ್ಭೆಗಳನ್ನಿಟ್ಟು ನೀರಿನಲ್ಲಿಳಿಯಬೇಕು. ಅಲ್ಲಿ ತೀರ್ಥಾಭಿಮಾನಿ ದೇವತೆಗಳನ್ನು ಸೂರ್ಯಮಂಡಲದಿಂದ ಆವಾಹನಮಾಡಿ ನಮಸ್ಕರಿಸಿ, ಗಂಧಾದಿಗಳಿಂದ ಮಂಡಲಮಾಡಿ, ಜನಾರ್ದನನನ್ನು ಧ್ಯಾನಿಸಿ, ಪುಣ್ಯತೀರ್ಥಗಳನ್ನು ಸ್ಮರಿಸುತ್ತಾ ಮಂತ್ರಗಳನ್ನು ಹೇಳುವವನಾಗಿ ಸ್ನಾನಮಾಡಬೇಕು.

**ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ ।**
**ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು ॥ ೩೩ ॥**

**ಪುಷ್ಕರಾದ್ಯಾನಿ ತೀರ್ಥಾನಿ ಗಂಗಾದ್ಯಾಸ್ಸರಿತಸ್ತಥಾ ।**
**ಆಗಚ್ಛಂತು ಮಹಾಭಾಗಾಃ ಸ್ನಾನಕಾಲೇ ಸದಾ ಮಮ ॥ ೩೪ ॥**

**ಅಯೋಧ್ಯಾ ಮಥುರಾ ಮಾಯಾ ಕಾಶೀ ಕಾಂಚೀ ಹ್ಯವಂತಿಕಾ ।**
**ಪುರೀ ದ್ವಾರಾವತೀ ಜ್ಞೇಯಾ ಸಪ್ತೈತಾ ಮೋಕ್ಷದಾಯಕಾಃ ॥ ೩೫ ॥**

**ತತೋಽಘಮರ್ಷಣಂ ಜಪ್ತ್ವಾ ಯತಾಸುರ್ವಾರಿಸಂಪ್ಲುತಃ ।**
**ಸ್ನಾನಾಂಗಂ ತರ್ಪಣಂ ಕೃತ್ವಾಽಽಚಮ್ಯಾರ್ಘ್ಯಂ ಭಾನವೇಽರ್ಪಯೇತ್ ೩೬**

**ತತೋ ಧ್ಯಾತ್ವಾ ವಿವಸ್ವಂತಂ ಜಲಾನ್ನಿರ್ಗತ್ಯ ನಾರದ ।**
**ಪರಿಧಾಯಾಹತಂ ಧೌತಂ ದ್ವಿತೀಯಂ ಪರಿವೀಯ ಚ ॥ ೩೭ ॥**

---

೩೩-೩೪. ಸ್ನಾನಮಾಡುವಾಗ "ಗಂಗೆ, ಯಮುನೆ, ಗೋದಾವರಿ, ಸರಸ್ವತಿ, ನರ್ಮದೆ, ಸಿಂಧು ಮತ್ತು ಕಾವೇರಿ ಎಂಬೀ ನದ್ಯಭಿಮಾನಿದೇವತೆಗಳಿರಾ! ಈ ನೀರಿನಲ್ಲಿ ನಿಮ್ಮ ಸನ್ನಿಧಾನವನ್ನು ದಯಪಾಲಿಸಿ. ಪುಷ್ಕರ ಮುಂತಾದ ತೀರ್ಥಗಳು ಮತ್ತು ಗಂಗೆ ಮುಂತಾದ ನದಿಗಳು ಇವುಗಳ ಅಭಿಮಾನಿದೇವತೆಗಳೂ ಸಹ ನನ್ನ ಸ್ನಾನಕಾಲದಲ್ಲಿ ಇಲ್ಲಿ ಸನ್ನಿಹಿತರಾಗಿರಿ'' ಎಂದು ಪ್ರಾರ್ಥಿಸಬೇಕು.

೩೫. ಅಯೋಧ್ಯಾ, ಮಥುರೆ, ಮಾಯೆ, ಕಾಶೀ, ಕಾಂಚೀ, ಅವಂತಿಕೆ, ಪುರೀ ಮತ್ತು ದ್ವಾರಕಾಪಟ್ಟಣ ಎಂಬ ಏಳು ಕ್ಷೇತ್ರಗಳು ಮೋಕ್ಷಪ್ರದಗಳು.

೩೬. ಅನಂತರ ಅಘಮರ್ಷಣಸೂಕ್ತವನ್ನು ಜಪಿಸಿ ಪ್ರಯತ್ನಪೂರ್ವಕವಾಗಿ ನೀರಿನಲ್ಲಿ ಮುಳುಗಿ ಸ್ನಾನಾಂಗತರ್ಪಣಮಾಡಿ ಆಚಮನಮಾಡಿ ಸೂರ್ಯನಿಗೆ ಅರ್ಘ್ಯಪ್ರದಾನ ಮಾಡಬೇಕು.

೩೭. ನಾರದನೇ! ನೀರಿನಿಂದ ಹೊರಗೆ ಬಂದು ಸೂರ್ಯನನ್ನು ಧ್ಯಾನಿಸಿ ಒಗೆದ ಬಟ್ಟೆಯನ್ನು ಉಟ್ಟು ಮೇಲೊಂದು ವಸ್ತ್ರವನ್ನು ಹೊದ್ದುಕೊಂಡು ದರ್ಭಾಸನದಲ್ಲಿ ಕುಳಿತು ಸಂಧ್ಯಾದಿ ನಿತ್ಯಕರ್ಮಗಳನ್ನು ಆಚರಿಸಲಾರಂಭಿಸಬೇಕು.

**ಕುಶಾಸನೇ ಸಮಾವಿಶ್ಯ ಸಂಧ್ಯಾಕರ್ಮ ಸಮಾರಭೇತ್ ।**
**ಈಶಾನಾಭಿಮುಖೋ ವಿಪ್ರ ಗಾಯತ್ರ್ಯಾಽಽಚಮ್ಯ ವೈ ದ್ವಿಜ ॥ ೩೮ ॥**

**ಋತಮಿತ್ಯಭಿಮಂತ್ರ್ಯಾಥ ಪುನರೇವಾಚಮೇದ್ಬುಧಃ ।**
**ತತಸ್ತು ವಾರಿಣಾತ್ಮಾನಂ ವೇಷ್ಟಯಿತ್ವಾ ಸಮುಕ್ಷ್ಯ ಚ ॥ ೩೯ ॥**

**ಸಂಕಲ್ಪ್ಯ ಪ್ರಣವಾಂತೇ ತು ಋಷಿಛಂದಃಸುರಾನ್ಸ್ಮರೇತ್ ।**
**ಭೂರಾದಿಭಿರ್ವ್ಯಾಹೃತಿಭಿಃ ಸಪ್ತಭಿಃ ಪ್ರೋಕ್ಷ್ಯ ಮಸ್ತಕಂ ॥ ೪೦ ॥**

**ನ್ಯಾಸಂ ಸಮಾಚರೇನ್ಮಂತ್ರೀ ಪೃಥಗೇವ ಕರಾಂಗಯೋಃ ।**
**ವಿನ್ಯಸ್ಯ ಹೃದಯೇ ತಾರಂ ಭೂಃ ಶಿರಸ್ಯಥ ವಿನ್ಯಸೇತ್ ॥ ೪೧ ॥**

**ಭುವಃ ಶಿಖಾಯಾಂ ಸ್ವಶ್ಚೈವ ಕವಚೇ ಭೂರ್ಭುವೋಕ್ಷಿಷು ।**
**ಭೂರ್ಭುವಃಸ್ವಸ್ತಥಾತ್ರಾಸ್ತ್ರಂ ದಿಕ್ಷು ತಾಲತ್ರಯಂ ನ್ಯಸೇತ್ ॥ ೪೨ ॥**

---

೩೮-೪೧. ಬ್ರಾಹ್ಮಣನು ಈಶಾನ್ಯದಿಕ್ಕಿಗೆ ಅಭಿಮುಖವಾಗಿ ಕುಳಿತು ಆಚಮನಮಾಡಿ ಗಾಯತ್ರೀ ಮಂತ್ರ ಮತ್ತು "ಋತಂ ಚ ಸತ್ಯಂ ಚ" ಇತ್ಯಾದಿ ಮಂತ್ರ ಇವುಗಳಿಂದ ನೀರನ್ನು ಅಭಿಮಂತ್ರಿಸಿ ಪುನಃ ಆಚಮನೆ ಮಾಡಬೇಕು. ಅನಂತರ ನೀರಿನಿಂದ ತನ್ನನ್ನು ಸುತ್ತಿಕೊಂಡು ಅದನ್ನು ಚೆಲ್ಲಿ ಸಂಕಲ್ಪ ಮಾಡಿ ಪ್ರಣವಮಂತ್ರವನ್ನುಚ್ಚರಿಸಿದ ಮೇಲೆ ಋಷಿ, ಛಂದಸ್ಸು ಮತ್ತು ದೇವತೆಗಳನ್ನು ಸ್ಮರಿಸಿ, 'ಭೂಃ' ಇತ್ಯಾದಿ ಏಳು ವ್ಯಾಹೃತಿಗಳಿಂದ ತಲೆಯನ್ನು ಪ್ರೋಕ್ಷಿಸಿ, ಮಂತ್ರಜಪಮಾಡುವವನು ಕೈ ಮತ್ತು ಇತರ ಅಂಗಗಳಲ್ಲಿ ಪ್ರತ್ಯೇಕವಾಗಿ ನ್ಯಾಸ ಮಾಡಬೇಕು. ಹೃದಯುದೇಶದಲ್ಲಿ 'ಓಂ' ಕಾರವನ್ನು ನ್ಯಾಸ ಮಾಡಿ 'ಭೂಃ' ಎಂಬ ವ್ಯಾಹೃತಿಯನ್ನು ಶಿರಸ್ಸಿನಲ್ಲಿ ನ್ಯಾಸ ಮಾಡಬೇಕು.

೪೨. 'ಭುವಃ' ಎಂಬುದನ್ನು ಶಿಖೆಯಲ್ಲಿಯೂ 'ಸ್ವಃ' ಎಂಬುದನ್ನು ಎರಡು ಭುಜಗಳಲ್ಲಿಯೂ 'ಭೂರ್ಭುವಃ' ಎಂಬುದನ್ನು ನೇತ್ರಗಳಲ್ಲಿಯೂ 'ಭೂರ್ಭುವಃಸ್ವಃ' ಎಂಬುದನ್ನು ಮತ್ತು 'ಅಸ್ತ್ರಾಯಫಟ್' ಎಂಬ ಮಂತ್ರವನ್ನು ದಿಕ್ಕುಗಳಲ್ಲಿ ನ್ಯಾಸಮಾಡಿ ಮೂರು ಚಪ್ಪಾಳೆಯನ್ನು ಹೊಡೆಯಬೇಕು. ಮಂತ್ರಗಳನ್ನು ನ್ಯಾಸಮಾಡುವುದೆಂದರೆ ಆಯಾ ಮಂತ್ರಗಳನ್ನು ಹೇಳುತ್ತಾ ಆಯಾ ಸ್ಥಳಗಳನ್ನು ಮುಟ್ಟುವುದು.

ತತ ಆವಾಹಯೇತ್ಸಂಧ್ಯಾಂ ಪ್ರಾತಃ ಕೋಕನದಸ್ಥಿತಾಂ ।
ಆಗಚ್ಛ ವರದೇ ದೇವಿ ತ್ರ್ಯಕ್ಷರೇ ಬ್ರಹ್ಮವಾದಿನೀ ॥ ೪೩ ॥

ಗಾಯತ್ರಿ ಛಂದಸಾಂ ಮಾತರ್ಬ್ರಹ್ಮಯೋನೇ ನಮೋಽಸ್ತು ತೇ ।
ಮಧ್ಯಾಹ್ನೇ ವೃಷಭಾರೂಢಾಂ ಶುಕ್ಲಾಂಬರಸಮಾವೃತಾಂ ॥ ೪೪ ॥

ಸಾವಿತ್ರೀಂ ರುದ್ರಯೋನಿಂ ಚಾವಾಹಯೇದ್ರುದ್ರವಾದಿನೀಂ ।
ಸಾಯಂ ತು ಗರುಡಾರೂಢಾಂ ಪೀತಾಂಬರಸಮಾವೃತಾಂ ॥ ೪೫ ॥

ಸರಸ್ವತೀಂ ವಿಷ್ಣುಯೋನಿಮಾಹ್ವಯೇದ್ವಿಷ್ಣುವಾದಿನೀಂ ।
ಓಂಕಾರಂ ಚ ವ್ಯಾಹೃತೀಃ ಸಪ್ತ ತ್ರಿಪದಾಂ ಚ ಸಮುಚ್ಚರನ್ ॥ ೪೬ ॥

---

೪೩-೪೪. ಅನಂತರ ರಕ್ತೋತ್ಪಲದಲ್ಲಿದ್ದ ಸಂಧ್ಯೆಯನ್ನು ಬೆಳಗಿನ ಹೊತ್ತು ಆವಾಹನೆ ಮಾಡಬೇಕು. "ವರದಾತೃವು, ವರ್ಣತ್ರಯಾತ್ಮಕವು, ಬ್ರಹ್ಮಪ್ರತಿಪಾದಕವು, ಛಂದಸ್ಸುಗಳಿಗೆಲ್ಲಾ ಮಾತೃಸ್ಥಾನೀಯವು ಮತ್ತು ಬ್ರಹ್ಮ ಭೋಗಾಶ್ರಯವೂ ಆಗಿರುವ ಗಾಯತ್ರೀದೇವಿಯೇ! ಸನ್ನಿಹಿತಳಾಗು, ನಿನಗೆ ನಮಸ್ಕಾರ" ಎಂದು ಪ್ರಾರ್ಥನೆಪೂರ್ವಕವಾಗಿ ಆವಾಹನೆ ಮಾಡಬೇಕು.

೪೪-೪೫. ಮಧ್ಯಾಹ್ನ ಕಾಲದಲ್ಲಿ ಎತ್ತಿನಮೇಲೆ ಕುಳಿತಿರುವ, ಬಿಳಿಯ ವಸ್ತ್ರವನ್ನುಟ್ಟಿರುವ, ರುದ್ರಭೋಗಾಧಾರವೂ ಮತ್ತು ರುದ್ರವಾದಿಯೂ ಆಗಿರುವ ಸಾವಿತ್ರೀದೇವಿಯನ್ನು ಆವಾಹನೆ ಮಾಡಬೇಕು.

೪೫-೪೬. ಸಾಯಂಕಾಲದಲ್ಲಿ ಗರುಡನಮೇಲೆ ಕುಳಿತಿರುವ, ಪೀತಾಂಬರವನ್ನುಟ್ಟಿರುವ, ವಿಷ್ಣೂಪಜೀವ್ಯವು ವಿಷ್ಣುವಾದಿಯೂ ಆಗಿರುವ ಸರಸ್ವತೀದೇವಿಯನ್ನು ಆವಾಹನೆ ಮಾಡಬೇಕು.

೪೬-೪೭. ಓಂಕಾರ, ಏಳು ವ್ಯಾಹೃತಿಗಳು, ಪಾದತ್ರಯಾತ್ಮಕವಾದ ಗಾಯತ್ರೀಮಂತ್ರ ಇವುಗಳನ್ನು ಹೇಳುತ್ತಾ ತಲೆ ಶಿಖೆ ಇವುಗಳನ್ನು ಮುಚ್ಚಿ

ಶಿರಃ ಶಿಖಾಂ ಚ ಸಂಪೂರ್ಯ ಕುಂಭಯಿತ್ವಾ ವಿರೇಚಯೇತ್ ।
ವಾಮಮಧ್ಯಾಪರೈರ್ವಾಯುಂ ಕ್ರಮೇಣ ಪ್ರಾಣಸಂಯಮೇ ॥ ೪೭ ॥

ದ್ವಿರಾಚಮೇತ್ತತಃ ಪಶ್ಚಾತ್ಪ್ರಾತಃ ಸೂರ್ಯಶ್ಚಮೇತಿ ಚ ।
ಆಪಃ ಪುನಂತು ಮಧ್ಯಾಹ್ನೇ ಸಾಯಮಗ್ನಿಶ್ಚಮೇತಿ ಚ ॥ ೪೮ ॥

ಆಪೋಹಿಷ್ಠೇತಿ ತಿಸೃಭಿರ್ಮಾರ್ಜನಂ ಚ ತತಶ್ಚರೇತ್ ।
ಸುಮಿತ್ರಿಯಾನ ಇತ್ಯುಕ್ತ್ವಾ ನಾಸಾಸ್ಪೃಷ್ಟಜಲೇನ ಚ ॥ ೪೯ ॥

ದ್ವಿಷದ್ವರ್ಗಂ ಸಮುತ್ಸಾರ್ಯ ದ್ರುಪದಾಂ ಶಿರಸಿ ಕ್ಷಿಪೇತ್ ।
ಋತಂ ಚ ಸತ್ಯಮೇತೇನ ಕೃತ್ವಾ ಚೈವಾಘಮರ್ಷಣಂ ॥ ೫೦ ॥

ಅಂತಶ್ಚರಸಿ ಮಂತ್ರೇಣ ಸಕೃದೇವ ಪಿಬೇದಪಃ ।
ತತಃ ಸೂರ್ಯಾಯ ವಿಧಿವದ್ಗಂಧಂ ಪುಷ್ಪಂ ಜಲಾಂಜಲಿಂ ॥ ೫೧ ॥

---

ಕೊಂಡು ಎಡಮೂಗಿನಿಂದ ವಾಯುವನ್ನು ತೆಗೆದುಕೊಂಡು ಮಧ್ಯಭಾಗದಲ್ಲಿ ನಿಲ್ಲಿಸಿ ಕುಂಭಕಮಾಡಿ ಬಲಮೂಗಿನಿಂದ ವಿರೇಚನೆ ಎಂದರೆ ಹೊರಗೆಬಿಡಬೇಕು.

೪೭-೪೮. ಹೀಗೆ ಕ್ರಮವಾಗಿ ಪ್ರಾಣಾಯಾಮ ಮಾಡಿದಮೇಲೆ ಎರಡಾವರ್ತಿ ಆಚಮನೆ ಮಾಡಬೇಕು. ಅನಂತರ 'ಸೂರ್ಯಶ್ಚಮಾ' ಇತ್ಯಾದಿ ಮಂತ್ರದಿಂದ ಪ್ರಾತಃಕಾಲದಲ್ಲಿಯೂ 'ಆಪಃ ಪುನಂತು' ಇತ್ಯಾದಿ ಮಂತ್ರದಿಂದ ಮಧ್ಯಾಹ್ನದಲ್ಲಿಯೂ 'ಅಗ್ನಿಶ್ಚಮಾ' ಇತ್ಯಾದಿ ಮಂತ್ರದಿಂದ ಸಾಯಂಕಾಲದಲ್ಲಿಯೂ ನೀರನ್ನು ಅಭಿಮಂತ್ರಿಸಿ ಪ್ರಾಶನೆಮಾಡಬೇಕು.

೪೯-೫೦. 'ಆಪೋಹಿಷ್ಠಾ' ಮುಂತಾದ ಮೂರು ಋಕ್ಕುಗಳಿಂದ ಪ್ರೋಕ್ಷಣೆಮಾಡಿಕೊಳ್ಳಬೇಕು. 'ಸುಮಿತ್ರಿಯಾನ' ಇತ್ಯಾದಿ ಮಂತ್ರದಿಂದ ಅಭಿಮಂತ್ರಿಸಿ ಮೂಗಿಗೆ ಸ್ಪರ್ಶಮಾಡಿದ ಉದಕದಿಂದ ಪಾಪಪುರುಷನನ್ನು ಹೊರಡಿಸಿ ಅವನ ತಲೆಯಮೇಲೆ ಆ ನೀರನ್ನು ಚಲ್ಲಬೇಕು.

೫೦-೫೧. 'ಋತಂ ಚ ಸತ್ಯಂ' ಇತ್ಯಾದಿ ಮಂತ್ರದಿಂದ ಪಾಪಶಮನ ಮಾಡಿ 'ಅಂತಶ್ಚರಸಿ' ಎಂಬ ಮಂತ್ರದಿಂದ ಒಂದೇ ಸಾರಿ ನೀರುಕುಡಿಯಬೇಕು.

ಕ್ಷಿಪ್ತ್ವೋಪತಿಷ್ಠೇದ್ದೇವರ್ಷೇ ಭಾಸ್ಕರಂ ಸ್ವಸ್ತಿಕಾಂಜಲಿಂ ।
ಊರ್ಧ್ವಬಾಹುರಧೋಬಾಹುಃ ಕ್ರಮಾತ್ಕಲ್ಯಾದಿಕೇ ತ್ರಿಕೇ ॥ ೫೨ ॥

ಉದುತ್ಯಂ ಚಿತ್ರಂ ತಚ್ಚಕ್ಷುರಿತ್ಯೇತತ್ತ್ರಿತಯಂ ಜಪೇತ್ ।
ಸೌರಾನ್ ಶೈವಾನ್ ವೈಷ್ಣವಾಂಶ್ಚ ಮಂತ್ರಾನನ್ಯಾಂಶ್ಚ ನಾರದ ॥ ೫೩ ॥

ತೇಜೋಽಸಿ ಗಾಯತ್ರ್ಯಸೀತಿ ಪ್ರಾರ್ಥಯೇತ್ಸವಿತುರ್ಮಹಃ ।
ತತೋಂಗಾನಿ ತ್ರಿರಾವರ್ತ್ಯ ಧ್ಯಾಯೇಚ್ಛಕ್ತೀಸ್ತದಾತ್ಮಿಕಾಃ ॥ ೫೪ ॥

ಬ್ರಹ್ಮಾಣೀ ಚತುರಾನನಾಽಕ್ಷವಲಯಂ ಕುಂಭಂ ಕರೈಃ ಸ್ರುಕ್ಸ್ರುವೌ
ಬಿಭ್ರಾಣಾ ತ್ವರುಣೇಂದುಕಾಂತಿವದನಾ ಋಗ್ರೂಪಿಣೀ ಬಾಲಿಕಾ ।
ಹಂಸಾರೋಹಣಕೇಲಿಖಂಡಿಖಮಣೇರ್ಬಿಂಬಾರ್ಚಿತಾ ಭೂಷಿತಾ
ಗಾಯತ್ರೀ ಪರಿಭಾವಿತಾ ಭವತು ನಃ ಸಂಪತ್ಸಮೃದ್ಧ್ಯೈ ಸದಾ ॥ ೫೫ ॥

---

೫೧-೫೨. ಅನಂತರ ವಿಹಿತರೀತಿಯಿಂದ ಸೂರ್ಯನಿಗೆ ಗಂಧ ಪುಷ್ಪ ಮತ್ತು ಬೊಗಸೆಯಲ್ಲಿ ನೀರು ಇವುಗಳನ್ನು ಸಮರ್ಪಿಸಿ (ಮೇಲಕ್ಕೆರಚಿ) ಪ್ರಾತಃ ಕಾಲದಲ್ಲಿ ಸ್ವಸ್ತಿಕಾಂಜಲಿಯಾಗಿ, ಮಧ್ಯಾಹ್ನದಲ್ಲಿ ಬಾಹುಗಳನ್ನೆತ್ತಿಕೊಂಡು ಸಾಯಂಕಾಲದಲ್ಲಿ ಬಾಹುಗಳನ್ನು ಕೆಳಗಿರಿಸಿಕೊಂಡು ಸೂರ್ಯೋಪಸ್ಥಾನ ಮಾಡಬೇಕು.

೫೩. 'ಉದುತ್ಯಂ' ಇತ್ಯಾದಿ ಮಂತ್ರ 'ಚಿತ್ರಂ' ಇತ್ಯಾದಿ ಮಂತ್ರ ಮತ್ತು 'ತಚ್ಚಕ್ಷುಃ' ಇತ್ಯಾದಿ ಮಂತ್ರ ಈ ಮೂರು ಮಂತ್ರಗಳನ್ನೂ ಉಪ ಸ್ಥಾನಕಾಲದಲ್ಲಿ ಜಪಿಸಬೇಕು. ನಾರದನೇ! ಸೂರ್ಯರುದ್ರವಿಷ್ಣುದೇವತಾ ಮಂತ್ರಗಳನ್ನೂ ಇನ್ನೂ ಇತರ ಮಂತ್ರಗಳನ್ನೂ ಜಪಿಸಬೇಕು.

೫೪. ಸೂರ್ಯತೇಜಸ್ಸನ್ನು 'ತೇಜೋಽಸಿ, ಗಾಯತ್ರ್ಯಸಿ' ಎಂಬುದಾಗಿ ಪ್ರಾರ್ಥಿಸಬೇಕು. ಅನಂತರ ಅಂಗಗಳನ್ನು ಮೂರಾವರ್ತಿ ಸುತ್ತಿ ಸೂರ್ಯಾದಿ ಶಕ್ತಿಗಳನ್ನು ಧ್ಯಾನಿಸಬೇಕು.

೫೫. ಚತುರ್ಮುಖಬ್ರಹ್ಮನ ಪತ್ನಿಯು, ನಾಲ್ಕುಮುಖಗಳುಳ್ಳವಳು ಕಮಲಾಕ್ಷಮಣಿಯ ಸರ, ಕುಂಭ, ಸ್ರುಕ್ ಮತ್ತು ಸ್ರುವ ಇವುಗಳನ್ನು ಹಸ್ತ ಗಳಲ್ಲಿ ಧರಿಸಿರುವವಳು, ಚಂದ್ರನಂತೆ ಕಾಂತಿಯುಕ್ತವಾದ ಮುಖವುಳ್ಳವಳು,

ರುದ್ರಾಣೀ ನವಯೌವನಾ ತ್ರಿನಯನಾ ವೈಯಾಘ್ರಚರ್ಮಾಂಬರಾ
ಖಟ್ವಾಂಗತ್ರಿಶಿಖಾಕ್ಷಸೂತ್ರವಲಯಾಭೀತಿಃ ಶ್ರಿಯೈ ಚಾಸ್ತು ನಃ ।
ವಿದ್ಯುದ್ದಾಮಜಟಾಕಲಾಪವಿಲಸದ್ಬಾಲೇಂದುಮೌಲಿರ್ಮುದಾ
ಸಾವಿತ್ರೀ ವೃಷವಾಹನಾ ಸಿತತನುರ್ಧ್ಯೇಯಾ ಯಜೂರೂಪಿಣೀ ॥ ೫೬ ॥

ಧ್ಯೇಯಾ ಸಾ ಚ ಸರಸ್ವತೀ ಭಗವತೀ ಪೀತಾಂಬರಾಲಂಕೃತಾ
ಶ್ಯಾಮಾಶ್ಯಾಮತನುರ್ಜರೋಪರಿಲಸದ್ಗಾತ್ರಾಂಚಿತಾ ವೈಷ್ಣವೀ ।
ತಾರ್ಕ್ಷ್ಯಸ್ಥಾ ಮಣಿನೂಪುರಾಂಗದಲಸದ್ಗ್ರೈವೇಯಭೂಷೋಜ್ವಲಾ
ಹಸ್ತಾಲಂಕೃತಶಂಖಚಕ್ರಸುಗದಾಪದ್ಮಾ ಶ್ರಿಯೈ ಚಾಸ್ತು ನಃ ॥ ೫೭ ॥

---

ಋಗ್ವೇದಾಭಿಮಾನಿಯು, ಬಾಲೆಯು, ಹಂಸವಾಹನವನ್ನು ಹತ್ತಿ ವಿಲಾಸದಿಂದ ಖಂಡಿಸಲ್ಪಟ್ಟ ಸೂರ್ಯಬಿಂಬದಿಂದ ಅರ್ಚಿತಳು, ಅಲಂಕೃತಳೂ ಆದ ಗಾಯತ್ರೀ ದೇವಿಯು ಧ್ಯಾನದಿಂದ ಪ್ರಸನ್ನಳಾಗಿ ಯಾವಾಗಲೂ ನನಗೆ ಸಂಪದಭಿವೃದ್ಧಿಯನ್ನು ಅನುಗ್ರಹಿಸಲಿ.

೫೬. ರುದ್ರಪತ್ನಿಯು, ನೂತನ ಯುವತಿಯು, ಮೂರು ನೇತ್ರಗಳುಳ್ಳವಳು, ಹುಲಿಯಚರ್ಮವನ್ನುಟ್ಟಿರುವವಳು, ಯೋಗದಂಡ, ತ್ರಿಶೂಲ, ಕಮಲಾಕ್ಷಮಣಿಯ ಜಪಮಾಲೆ ಮತ್ತು ಅಭಯಮುದ್ರೆ ಇವುಗಳನ್ನು ಹಸ್ತಗಳಲ್ಲಿ ಧರಿಸಿರುವವಳು, ಮಿಂಚಿನ ಹಗ್ಗದಂತೆ ಹೊಳೆಯುತ್ತಿರುವ ಜಟೆಗಳ ಸಮೂಹದಿಂದ ಪ್ರಕಾಶಮಾನನಾದ ಬಾಲಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿರುವವಳು, ಎತ್ತಿನ ಮೇಲೆ ಕುಳಿತಿರುವವಳು, ಶುದ್ಧದೇಹ ಉಳ್ಳವಳು, ಯಜುರ್ವೇದಾಭಿಮಾನಿಯೂ ಆಗಿರುವ ಸಾವಿತ್ರೀದೇವಿಯನ್ನು ಸಂತೋಷದಿಂದ ಧ್ಯಾನಿಸಬೇಕು.

೫೭. ಐಶ್ವರ್ಯವಂತಳು, ಪೀತಾಂಬರವನ್ನು ಧರಿಸಿರುವವಳು, ಶ್ಯಾಮವರ್ಣ ಮತ್ತು ಇತರ ವರ್ಣದಿಂದ ಮಿಶ್ರಿತಬಣ್ಣದ ಶರೀರವುಳ್ಳವಳು, ಮುದಿತನವನ್ನು ತಿರಸ್ಕರಿಸುವ ಕಾಂತಿಯುಳ್ಳ ಶರೀರೋಪೇತಳು, ವಿಷ್ಣುಭಕ್ತಳು, ಗರುಡಾರೂಢಳು, ಹಸ್ತಭುಜಾಭರಣಗಳ ಮಣಿಗಳಿಂದ ಪ್ರಕಾಶಮಾನವಾದ ಕಂಠಾಭರಣದಿಂದ ಪ್ರಕಾಶಮಾನಳು, ಕೈಗಳಲ್ಲಿ ಶಂಖ, ಚಕ್ರ, ಗದೆ ಮತ್ತು ಪದ್ಮ ಇವುಗಳನ್ನು ಧರಿಸಿರುವವಳೂ ಆಗಿರುವ ಸರಸ್ವತೀ ದೇವಿಯು ನಮಗೆ ಸಂಪತ್ತನ್ನು ಅನುಗ್ರಹಿಸಲಿ ಎಂದು ಧ್ಯಾನಿಸಬೇಕು.

ಏವಂ ಧ್ಯಾತ್ವಾ ಜಪೇತ್ತ್ರಿಷ್ವನ್ಪ್ರಾತರ್ಮಧ್ಯಾಹ್ನಕೇ ತಥಾ ।
ಸಾಯಂಕಾಲೇ ಸಮಾಸೀನೋ ಭಕ್ತ್ಯಾ ತದ್ಗತಮಾನಸಃ ॥ ೫೮ ॥

ಸಹಸ್ರಪರಮಾಂ ದೇವೀಂ ಶತಮಧ್ಯಾಂ ದಶಾವರಾಂ ।
ತ್ರಿಪದಾಂ ಪ್ರಣವೋಪೇತಾಂ ಭೂರ್ಭುವಃಸ್ವರುಪಕ್ರಮಾಂ ॥ ೫೯ ॥

ಷಟ್ತಾರಃ ಸಂಪುಟೋ ವಾsಪಿ ವ್ರತಿನಶ್ಚ ಯತೇರ್ಜಪಃ ।
ಗೃಹಸ್ಥಸ್ಯ ಸ ತಾರಃ ಸ್ಯಾಜ್ಜಪ್ಯ ಏವಂವಿಧೋ ಮುನೇ ॥ ೬೦ ॥

ತತೋ ಜಪ್ತ್ವಾ ಯಥಾಶಕ್ತಿ ಸವಿತ್ರೇ ವಿನಿವೇದ್ಯ ಚ ।
ಗಾಯತ್ರ್ಯೈ ಚ ಸವಿತ್ರೇ ಚ ಪ್ರಕ್ಷಿಪೇದಂಜಲಿದ್ವಯಂ ॥ ೬೧ ॥

---

೫೮. ಮೇಲೆ ಹೇಳಿದ ರೀತಿಯಾಗಿ ಧ್ಯಾನಮಾಡಿ, ಪ್ರಾತಃಕಾಲ ಮತ್ತು ಮಧ್ಯಾಹ್ನಕಾಲಗಳಲ್ಲಿ ನಿಂತು, ಸಾಯಂಕಾಲದಲ್ಲಿ ಕುಳಿತು ಭಕ್ತಿಯಿಂದ ತದೇಕ ಚಿತ್ತರಾಗಿ ಜಪಮಾಡಬೇಕು.

೫೯. ಪಾದತ್ರಯವುಳ್ಳ ಪ್ರಣವಯುಕ್ತವಾದ 'ಭೂರ್ಭುವಸ್ಸ್ವಃ' ಎಂಬ ಉಪಕ್ರಮವುಳ್ಳ ಗಾಯತ್ರೀ ಮಂತ್ರವನ್ನು ಒಂದು ಸಾವಿರ ಸಾರಿ ಜಪಿಸುವುದು ಉತ್ತಮವು. ಒಂದು ನೂರಾವರ್ತಿ ಜಪಿಸುವುದು ಮಧ್ಯಮಪಕ್ಷವು. ಅದಕ್ಕೂ ಸಾಧ್ಯವಿಲ್ಲಧಿದ್ದರೆ ಹತ್ತಾವರ್ತಿಯಾದರೂ ಜಪಿಸಬೇಕು. ಅದು ಅಧಮ ಕಲ್ಪವು.

೬೦. ದೀಕ್ಷಿತ ಮತ್ತು ಸಂನ್ಯಾಸಿ ಇವರುಗಳು ತಾರ (ಓಂಕಾರ) ಷಟ್ಕವನ್ನು ಸಂಪುಟಾಕಾರವಾಗಿ ಜಪಿಸಬೇಕು. ಗೃಹಸ್ಥನು ಜಪಿಸುವ ಎಲ್ಲಾ ಮಂತ್ರಗಳನ್ನೂ ತಾರಸಹಿತವಾಗಿಯೇ ಜಪಿಸಬೇಕು.

೬೧. ಯಥಾಶಕ್ತಿ ಜಪ ಮಾಡಿದಮೇಲೆ ಅದನ್ನು ಸೂರ್ಯನಿಗೆ ನಿವೇದಿಸಿ, ಗಾಯತ್ರೀ ಮತ್ತು ಸೂರ್ಯ ಇವರಿಬ್ಬರಿಗೆ ಎರಡು ಅಂಜಲಿಗಳನ್ನು (ಎರಡು ಬೊಗಸೆ ನೀರನ್ನು) ಬಿಡಬೇಕು.

ತತೋ ವಿಸೃಜ್ಯತಾಂ ವಿಪ್ರ ಉತ್ತಮೇ ಇತಿ ಮಂತ್ರತಃ ।
ಬ್ರಹ್ಮಣೇಶೇನ ಹರಿಣಾನುಜ್ಞಾತಾ ಗಚ್ಛ ಸಾದರಂ ॥ ೬೨ ॥

ದಿಗ್ಭ್ಯೋ ದಿಗ್ದೇವತಾಭ್ಯಶ್ಚ ನಮಸ್ಕೃತ್ಯ ಕೃತಾಂಜಲಿಃ ।
ಪ್ರಾತರಾದೇಃ ಪರಂ ಕರ್ಮ ಕುರ್ಯಾದಪಿ ವಿಧಾನತಃ ॥ ೬೩ ॥

ಪ್ರಾತರ್ಮಧ್ಯದಿನೇ ಚೈವ ಗೃಹಸ್ಥಃ ಸ್ನಾನಮಾಚರೇತ್ ।
ವಾನಪ್ರಸ್ಥಶ್ಚ ದೇವರ್ಷೇ ಸ್ನಾಯಾತ್ತ್ರಿಷವಣಂ ಯತಿಃ ॥ ೬೪ ॥

ಆತುರಾಣಾಂ ತು ರೋಗಾದ್ಯೈಃ ಪಾಂಥಾನಾಂ ಚ ಸಕೃನ್ಮತಂ ।
ಬ್ರಹ್ಮಯಜ್ಞಂ ತತಃ ಕುರ್ಯಾತ್ ದರ್ಭಪಾಣಿರ್ಮುನೀಶ್ವರ ॥ ೬೫ ॥

---

೬೨. ಹೀಗೆ ಅರ್ಘ್ಯ ಬಿಟ್ಟಮೇಲೆ "ಉತ್ತಮೇಶಿಖರೇ" ಇತ್ಯಾದಿ ಮಂತ್ರದಿಂದ ಬ್ರಹ್ಮ, ಈಶ್ವರ ಮತ್ತು ಹರಿ ಇವರುಗಳಿಂದ ಅನುಜ್ಞಾತಳಾಗಿ ಸುಖವಾಗಿ ಸ್ವಸ್ಥಾನಕ್ಕೆ ಹೋಗಬೇಕೆಂದು ಗಾಯತ್ರಿಯನ್ನು ವಿಸರ್ಜನೆ ಮಾಡಬೇಕು.

೬೩. ದಿಕ್ಕುಗಳಿಗೂ ದಿಗ್ದೇವತೆಗಳಿಗೂ ಕೈಮುಗಿದು ನಮಸ್ಕಾರಮಾಡಿ ವಿಧಾನೋಕ್ತಪ್ರಕಾರ ಬೆಳಗ್ಗೆ, ಮಧ್ಯಾಹ್ನ, ಸಾಯಂಕಾಲಗಳಲ್ಲಿ ಉತ್ತಮವಾದ ಈ ಕರ್ಮವನ್ನು ಆಚರಿಸಬೇಕು.

೬೪. ನಾರದನೇ ! ಗೃಹಸ್ಥ ಮತ್ತು ವಾನಪ್ರಸ್ಥನು ಪ್ರಾತಃಕಾಲ ಮತ್ತು ಮಧ್ಯಾಹ್ನಕಾಲಗಳಲ್ಲಿ ಸ್ನಾನಮಾಡಬೇಕು. ಯತಿಯು ತ್ರಿಕಾಲ ಗಳಲ್ಲಿಯೂ ಸ್ನಾನಮಾಡಬೇಕು.

೬೫. ರೋಗಾದಿಗಳಿಂದ ಪೀಡಿತರು ಮತ್ತು ಪ್ರಯಾಣಿಕರು ಒಂದಾವರ್ತಿ ಸ್ನಾನಮಾಡಿದರೂ ಸಾಕು. ಸಂಧ್ಯಾವಂದನೆಯಾದ ಮೇಲೆ ದರ್ಭೆಯನ್ನು ಕೈಯಲ್ಲಿ ಹಿಡಿದು ಬ್ರಹ್ಮಯಜ್ಞವನ್ನು ಮಾಡಬೇಕು.

ದಿವೋದಿತಾನಿ ಕರ್ಮಾಣಿ ಪ್ರಮಾದಾದಕೃತಾನಿ ಚೇತ್ ।
ಶರ್ವರ್ಯಾಃ ಪ್ರಥಮೇ ಯಾಮೇ ತಾನಿ ಕುರ್ಯಾದ್ಯಥಾಕ್ರಮಂ ॥ ೬೬ ॥

ನೋಪಾಸ್ತೇ ಯೋ ದ್ವಿಜಃ ಸಂಧ್ಯಾಂ ಧೂರ್ತಬುದ್ಧಿರನಾಪದಿ ।
ಪಾಷಂಡಃ ಸ ಹಿ ವಿಜ್ಞೇಯಃ ಸರ್ವಧರ್ಮಬಹಿಷ್ಕೃತಃ ॥ ೬೭ ॥

ಯಸ್ತು ಸಂಧ್ಯಾದಿಕರ್ಮಾಣಿ ಕೂಟಯುಕ್ತಿವಿಶಾರದಃ ।
ಪರಿತ್ಯಜತಿ ತಂ ವಿದ್ಯಾನ್ಮಹಾಪಾತಕಿನಾಂ ವರಂ ॥ ೬೮ ॥

ಯೇ ದ್ವಿಜಾ ಅಭಿಭಾಷಂತೇ ತ್ಯಕ್ತಸಂಧ್ಯಾದಿಕರ್ಮಣಃ ।
ತೇ ಯಾಂತಿ ನರಕಾನ್ಘೋರಾನ್ಯಾವಚ್ಚಂದ್ರಾರ್ಕತಾರಕಂ ॥ ೬೯ ॥

ದೇವಾರ್ಚನಂ ತತಃ ಕುರ್ಯಾದ್ವೈಶ್ವದೇವಂ ಯಥಾವಿಧಿ ।
ತತ್ರತ್ಯಮತಿಥಿಂ ಸಮ್ಯಗನ್ನಾದ್ಯೈಶ್ಚ ಪ್ರಪೂಜಯೇತ್ ॥ ೭೦ ॥

---

೬೬. ಹಗಲು ಕರ್ತವ್ಯವೆಂದು ಹೇಳಿರುವ ಕರ್ಮಗಳನ್ನು ಪ್ರಮಾದದಿಂದ ಮಾಡದಿರುವ ಸಂದರ್ಭದಲ್ಲಿ ಅವುಗಳನ್ನು ಕ್ರಮವಾಗಿ ರಾತ್ರಿ ಪ್ರಥಮಯಾಮದಲ್ಲಿ ಮಾಡಬೇಕು.

೬೭. ದ್ವಿಜನು ಆಪತ್ತಿಲ್ಲದಿರುವಾಗ ದುರ್ಬುದ್ಧಿಯಿಂದ ಸಂಧ್ಯಾಕರ್ಮವನ್ನು ಆಚರಿಸದಿದ್ದರೆ ಸಕಲ ಧರ್ಮಬಾಹಿರನಾಗಿ ಪಾಷಂಡನೆನಿಸುವನು.

೬೮. ಕುಯುಕ್ತಿವಿಶಾರದನಾಗಿ ಸಂಧ್ಯಾದಿ ಕರ್ಮಗಳನ್ನು ಬಿಡುವ ಮನುಜನನ್ನು ಮಹಾಪಾತಕಿಗಳಲ್ಲಿ ಅಗ್ರಗಣ್ಯನೆಂದು ತಿಳಿಯಬೇಕು.

೬೯. ಸಂಧ್ಯಾವಂದನೆ ಮುಂತಾದ ನಿತ್ಯಕರ್ಮಗಳನ್ನು ಬಿಟ್ಟಿರುವವರೊಡನೆ ಮಾತನಾಡುವ ದ್ವಿಜರು ಚಂದ್ರಸೂರ್ಯರಿರುವವರೆಗೂ ಭಯಂಕರ ನರಕಗಳನ್ನು ಹೊಂದುತ್ತಾರೆ.

೭೦. ಅನಂತರ ದೇವರ ಪೂಜೆಯನ್ನು ಮತ್ತು ವಿಧಾನೋಕ್ತಪ್ರಕಾರ ವೈಶ್ವದೇವವನ್ನೂ ಮಾಡಬೇಕು. ಆ ಕಾಲದಲ್ಲಿ ಬಂದ ಅತಿಥಿಯನ್ನು ಅನ್ನದಾನಾದಿಗಳಿಂದ ಸತ್ಕರಿಸಬೇಕು.

ವಕ್ತ್ರವ್ಯಾ ಮಧುರಾ ವಾಣೀ ತೇಷ್ವಸ್ಯಭ್ಯಾಗತೇಷು ತು ।
ಜಲಾನ್ನಕಂದಮೂಲೈರ್ವಾ ಗೃಹದಾನೇನ ಚಾರ್ಚಯೇತ್ ॥ ೭೧ ॥

ಅತಿಥಿರ್ಯಸ್ಯ ಭಗ್ನಾಶೋ ಗೃಹಾತ್ಪ್ರತಿನಿವರ್ತತೇ ।
ಸ ತಸ್ಮೈ ದುಷ್ಕೃತಂ ದತ್ವಾ ಪುಣ್ಯಮಾದಯ ಗಚ್ಛತಿ ॥ ೭೨ ॥

ಅಜ್ಞಾತಗೋತ್ರನಾಮಾನಮನ್ಯಗ್ರಾಮಾದುಪಾಗತಂ ।
ವಿಪಶ್ಚಿತೋಽತಿಥಿಂ ಪ್ರಾಹುರ್ವಿಷ್ಣುವತ್ತಂ ಪ್ರಪೂಜಯೇತ್ ॥ ೭೩ ॥

ಸ್ವಗ್ರಾಮವಾಸಿನಂ ತ್ವೇಕಂ ಶ್ರೋತ್ರಿಯಂ ವಿಷ್ಣುತತ್ಪರಂ ।
ಅನ್ನಾದ್ಯೈಃ ಪ್ರತ್ಯಹಂ ವಿಪ್ರಂ ಪಿತೄನುದ್ದಿಶ್ಯ ತರ್ಪಯೇತ್ ॥ ೭೪ ॥

ಪಂಚಯಜ್ಞಪರಿತ್ಯಾಗೀ ಬ್ರಹ್ಮಹೇತ್ಯುಚ್ಯತೇ ಬುಧೈಃ ।
ಕುರ್ಯಾದಹರಹಸ್ತಸ್ಮಾತ್ಪಂಚಯಜ್ಞಾನ್ಪ್ರಯತ್ನತಃ ॥ ೭೫ ॥

---

೭೧. ಅಭ್ಯಾಗತರಾದ ಅತಿಥಿಗಳನ್ನು ಒಳ್ಳೆಯಮಾತಿನಿಂದ ಸ್ವಾಗತಿಸಿ ನೀರು, ಅನ್ನ, ಕಂದಮೂಲ ಇವುಗಳಿಂದಲೂ ವಸತಿದಾನದಿಂದಲೂ ಸತ್ಕರಿಸಬೇಕು.

೭೨. ಅತಿಥಿಯು ಮನೆಗೆ ಬಂದು ನಿರಾಶನಾಗಿ ಹಿಂತಿರುಗಿದರೆ, ಅವನು ಯಜಮಾನನಿಗೆ ಪಾಪವನ್ನು ಕೊಟ್ಟು ಅವನ ಪುಣ್ಯವನ್ನು ತೆಗೆದುಕೊಂಡು ಹೋಗುತ್ತಾನೆ.

೭೩. ಗೋತ್ರ, ಹೆಸರು ಇವುಗಳನ್ನು ತಿಳಿಯದಿರುವ ಎಂದರೆ ಅಪರಿಚಿತನಾದ ಬೇರೆ ಊರಿನಿಂದ ಬಂದವನೂ ಆದ ಯಾಚಕನನ್ನು ಜ್ಞಾನಿಗಳು ಅತಿಥಿಯೆಂದು ಹೇಳುವರು. ಅಂತಹವನನ್ನು ವಿಷ್ಣುವಿನಂತೆ ಪೂಜಿಸಬೇಕು.

೭೪. ವೇದಶಾಸ್ತ್ರಾಧ್ಯಯನಮಾಡಿರುವವನು, ವಿಷ್ಣುಭಕ್ತನೂ ಆಗಿರುವ ತನ್ನ ಗ್ರಾಮದಲ್ಲಿ ವಾಸವಾಗಿರುವ ಒಬ್ಬ ಬ್ರಾಹ್ಮಣನಿಗೆ ಪಿತೃತೃಪ್ತ್ಯರ್ಥವಾಗಿ ಪ್ರತಿದಿನವೂ ಭೋಜನಮಾಡಿಸಬೇಕು.

೭೫. ಪಂಚಯಜ್ಞಗಳನ್ನು ಬಿಟ್ಟಿರುವವನು ಬ್ರಹ್ಮಹತ್ಯೆಮಾಡಿದವನೆಂದು ಜ್ಞಾನಿಗಳು ಹೇಳಿರುತ್ತಾರೆ. ಆದುದರಿಂದ ಪ್ರತಿದಿನವೂ ಪ್ರಯತ್ನಪೂರ್ವಕವಾಗಿ ಪಂಚಯಜ್ಞಗಳನ್ನು ಮಾಡಬೇಕು.

**ದೇವಯಜ್ಞೋ ಭೂತಯಜ್ಞಃ ಪಿತೃಯಜ್ಞಸ್ತಥೈವ ಚ ।**
**ನೃಯಜ್ಞೋ ಬ್ರಹ್ಮಯಜ್ಞಶ್ಚ ಪಂಚಯಜ್ಞಾಃ ಪ್ರಚಕ್ಷತೇ ॥ ೭೬ ॥**

**ಭೃತ್ಯಮಿತ್ರಾದಿಸಂಯುಕ್ತಃ ಸ್ವಯಂ ಭುಂಜೀತವಾಗ್ಯತಃ ।**
**ದ್ವಿಜೋ ನಾಭೋಜ್ಯಮಶ್ನೀಯಾತ್ಪಾತ್ರಂ ನೈವ ಪರಿತ್ಯಜೇತ್ ॥ ೭೭ ॥**

**ಸಂಸ್ಥಾಪ್ಯ ಸ್ವಾಸನೇ ಪಾದೌ ವಸ್ತ್ರಾರ್ಧಂ ಪರಿಧಾಯ ಚ ।**
**ಮುಖೇನ ವಮಿತಂ ಭುಕ್ತ್ವಾ ಸುರಾಪೀತ್ಯುಚ್ಯತೇ ಬುಧೈಃ ॥ ೭೮ ॥**

**ಖಾದಿತಾರ್ಧಂ ಪುನಃ ಖಾದೇನ್ಮೋದಕಾಂಶ್ಚ ಫಲಾನಿ ಚ ।**
**ಪ್ರತ್ಯಕ್ಷಂ ಲವಣಂ ಚೈವ ಗೋಮಾಂಸಾಶೀತಿ ಗದ್ಯತೇ ॥ ೭೯ ॥**

**ಆಪೋಶನೇ ಹ್ಯಾಚಮನೇ ಅದ್ಯದ್ರವ್ಯೇಷು ಚ ದ್ವಿಜಃ ।**
**ಶಬ್ದಂ ನ ಕಾರಯೇದ್ವಿಪ್ರಸ್ತಂ ಕುರ್ವನ್ನಾರಕೀ ಭವೇತ್ ॥ ೮೦ ॥**

---

೭೬. ದೇವಯಜ್ಞ, ಭೂತಯಜ್ಞ, ಪಿತೃಯಜ್ಞ, ನೃಯಜ್ಞ, ಮತ್ತು ಬ್ರಹ್ಮಯಜ್ಞ, ಎಂಬಿವು ಪಂಚಯಜ್ಞಗಳೆಂದು ಉಕ್ತವಾಗಿವೆ.

೭೭ ಸೇವಕರು, ಮಿತ್ರರು ಮುಂತಾದವರೊಡನೆ ಯಜಮಾನನು ನಿಯಮದಿಂದ ಭೋಜನಮಾಡಬೇಕು. ದ್ವಿಜನು ನಿಷಿದ್ಧವಾದುದನ್ನು ತಿನ್ನ ಬಾರದು. ಊಟಮಾಡುತ್ತಿರುವ ಎಲೆಯನ್ನು ಮುಟ್ಟಿಕೊಂಡಿರಬೇಕು.

೭೮. ಆಸನದ ಕೆಳಗೆ ಪಾದಗಳನ್ನು ಇಟ್ಟುಕೊಂಡು, ವಸ್ತ್ರದ ಅರ್ಧ ಭಾಗದಿಂದ ಅದನ್ನು ಮುಚ್ಚಿಕೊಂಡು, ಬಾಯಿಯಿಂದ ಉಗಳಿದುದನ್ನು ತಿನ್ನು ವವನನ್ನು ಮಧ್ಯಪಾನಮಾಡಿದವನಂತೆ ಭಾವಿಸಬೇಕೆಂದು ಜ್ಞಾನಿಗಳು ಹೇಳುತ್ತಾರೆ.

೭೯. ಕಡುಬು, ಹಣ್ಣು ಮುಂತಾದುವನ್ನು ಕಚ್ಚಿ ಅರ್ಧ ತಿಂದು ಉಳಿದು ದನ್ನು ಪುನಃ ತಿನ್ನುವವನು ಮತ್ತು ಬರೀ ಉಪ್ಪನ್ನು ತಿನ್ನುವವನೂ ಸಹ ಮಾಂಸಭಕ್ಷಣಮಾಡಿದವನಿಗೆ ಸಮಾನನೆಂದು ತಿಳಿಯಬೇಕು.

೮೦. ಆಪೋಶನ ತೆಗೆದುಕೊಳ್ಳುವಾಗ, ಆಚಮನ ಮಾಡುವಾಗ, ತಿನ್ನು ವಾಗ ದ್ವಿಜನು ಶಬ್ದಮಾಡಬಾರದು. ಶಬ್ದಮಾಡುವವರಿಗೆ ನರಕಪ್ರಾಪ್ತಿ ಯಾಗುತ್ತದೆ.

**ಪಥ್ಯಮನ್ನಂ ಪ್ರಭುಂಜೀತ ವಾಗ್ಯತೋಽನ್ನಮಕುತ್ಸಯನ್ ।**
**ಅಮೃತೋಪಸ್ತರಣಮಸಿ ಆಪೋಶನಂ ಭುಜೇಃ ಪುರಃ ॥ ೮೧ ॥**

**ಅಮೃತಾಪಿಧಾನಮಸಿ ಭೋಜ್ಯಾಂತೇಽಪಃ ಸಕೃತ್ಪಿಬೇತ್ ।**
**ಪ್ರಾಣಾದ್ಯಾ ಆಹುತೀರ್ದತ್ವಾಽಽಚಮ್ಯ ಭೋಜನಮಾಚರೇತ್ ॥ ೮೨ ॥**

**ತತಶ್ಚಾಚಮ್ಯ ವಿಪ್ರೇಂದ್ರ ಶಾಸ್ತ್ರಚಿಂತಾಪರೋ ಭವೇತ್ ।**
**ರಾತ್ರಾವಪಿ ಯಥಾಶಕ್ತಿ ಶಯನಾಸನಭೋಜನೈಃ ॥ ೮೩ ॥**

**ಏವಂ ಗೃಹೀ ಸದಾಚಾರಂ ಕುರ್ಯಾತ್ಪ್ರತಿದಿನಂ ಮುನೇ ।**
**ಯದಾಽಽಚಾರಪರಿತ್ಯಾಗೀ ಪ್ರಾಯಶ್ಚಿತ್ತೀ ತದಾ ಭವೇತ್ ॥ ೮೪ ॥**

**ದೂಷಿತಾಂ ಸ್ವತನುಂ ದೃಷ್ಟ್ವಾ ಪಲಿತಾದ್ಯೈಶ್ಚ ಸತ್ತಮ ।**
**ಪುತ್ರೇಷು ಭಾರ್ಯಾಂ ನಿಕ್ಷಿಪ್ಯ ವನಂ ಗಚ್ಛೇತ್ಸಹೈವ ವಾ ॥ ೮೫ ॥**

---

೮೧. ವಾಙ್ನಿಯತನಾಗಿ ಅನ್ನವನ್ನು ದೂಷಿಸದೇ ಪಥ್ಯವಾದ ಅನ್ನವನ್ನು ಭೋಜನ ಮಾಡಬೇಕು. ಊಟಕ್ಕೆ ಮೊದಲು "ಅಮೃತೋಪಸ್ತರಣಮಸಿ" ಎಂಬ ಮಂತ್ರದಿಂದ ಆಪೋಶನವನ್ನು ತೆಗೆದುಕೊಳ್ಳಬೇಕು.

೮೨. ಊಟವಾದಮೇಲೆ "ಅಮೃತಾಪಿಧಾನಮಸಿ" ಎಂಬ ಮಂತ್ರದಿಂದ ಒಂದಾವರ್ತಿ ಕೈಯಲ್ಲಿ ಒಂದು ಉದ್ಧರಣೆ ನೀರನ್ನು ಹಾಕಿಕೊಂಡು ಕುಡಿಯಬೇಕು. ಪ್ರಾಣಾಪಾನಾದಿಗಳಿಗೆ ಆಹುತಿಕೊಟ್ಟು ಆಚಮನಪೂರ್ವಕವಾಗಿ ಭೋಜನಮಾಡಬೇಕು.

೮೩. ಅನಂತರ ಆಚಮನಮಾಡಿ ಶಾಸ್ತ್ರಾರ್ಥಮನನಮಾಡುವವನಾಗಬೇಕು. ರಾತ್ರಿಯಲ್ಲಿಯೂ ತನ್ನ ಶಕ್ತ್ಯನುಸಾರ ಶಯನಾಸನ ಭೋಜನಗಳಿಂದ ಅತಿಥಿಸತ್ಕಾರಪೂರ್ವಕವಾಗಿ ತಾನು ಭೋಜನಾದಿಗಳನ್ನು ಮಾಡಬೇಕು

೮೪. ಈಪ್ರಕಾರ ಗೃಹಸ್ಥನು ಪ್ರತಿದಿನವೂ ಸದಾಚಾರವನ್ನು ಅನುಷ್ಠಾನಮಾಡಬೇಕು. ನಾರದನೇ! ವಿಹಿತಾಚಾರವನ್ನು ಬಿಟ್ಟರೆ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು.

೮೫. ಸಾಧೂತ್ತಮನೇ! ಕೂದಲು ನರೆಯುವುದೇ ಮುಂತಾದ ಮುದಿತನದ ಗುರ್ತುಗಳಿಂದ ಶರೀರವು ಜೀರ್ಣವಾದುದನ್ನು ತಿಳಿದು ತನ್ನ ಹೆಂಡತಿ

**ಭವೇತ್ತ್ರಿಷವಣಸ್ನಾಯೀ ನಖಶ್ಮಶ್ರುಜಟಾಧರಃ ।**
**ಅಧಃ ಶಾಯೀ ಬ್ರಹ್ಮಚಾರೀ ಪಂಚಯಜ್ಞಪರಾಯಣಃ　　॥ ೮೬ ॥**

**ಫಲಮೂಲಾಶನೋ ನಿತ್ಯಂ ಸ್ವಾಧ್ಯಾಯನಿರತಸ್ತಥಾ ।**
**ದಯಾವಾನ್ಸರ್ವಭೂತೇಷು ನಾರಾಯಣಪರಾಯಣಃ　　॥ ೮೭ ॥**

**ವರ್ಜಯೇದ್ಗ್ರಾಮಜಾತಾನಿ ಪುಷ್ಪಾಣಿ ಚ ಫಲಾನಿ ಚ ।**
**ಅಷ್ಟೌ ಗ್ರಾಸಾಂಶ್ಚ ಭುಂಜೀತ ನ ಕುರ್ಯಾದ್ರಾತ್ರಿಭೋಜನಂ　　॥ ೮೮ ॥**

**ಅತ್ಯಂತಂ ವರ್ಜಯೇತ್ತೈಲಂ ವಾನಪ್ರಸ್ಥಸಮಾಶ್ರಮೀ ।**
**ವ್ಯವಾಯಂ ವರ್ಜಯೇಚ್ಚೈವ ನಿದ್ರಾಲಸ್ಯೇ ತಥೈವ ಚ　　॥ ೮೯ ॥**

**ಶಂಖಚಕ್ರಗದಾಪಾಣಿಂ ನಿತ್ಯಂ ನಾರಾಯಣಂ ಸ್ಮರೇತ್ ।**
**ವಾನಪ್ರಸ್ಥಃ ಪ್ರಕುರ್ವೀತ ತಪಶ್ಚಾಂದ್ರಾಯಣಾದಿಕಂ　　॥ ೯೦ ॥**

---

ಯನ್ನು ಮಕ್ಕಳ ವಶದಲ್ಲಿಟ್ಟು ಅಥವಾ ಜೊತೆಯಲ್ಲಿ ಕರೆದುಕೊಂಡು ಕಾಡಿಗೆ ಹೋಗಬೇಕು.

೮೬-೮೭. ಕಾಡಿನಲ್ಲಿ ನಿಯಮದಿಂದಿರುವುದೇ ವಾನಪ್ರಸ್ಥಾಶ್ರಮವು. ಈ ಆಶ್ರಮವನ್ನು ಸ್ವೀಕರಿಸಿದವನು ತ್ರಿಕಾಲಗಳಲ್ಲಿ ಸ್ನಾನಮಾಡುತ್ತಾ, ಉಗುರು ಮೀಸೆ, ಜಟೆ ಇವುಗಳನ್ನು ಧರಿಸಿಕೊಂಡು ಬ್ರಹ್ಮಚರ್ಯದಿಂದ ನೆಲದಮೇಲೆ ಮಲಗುತ್ತಾ, ಪಂಚಯಜ್ಞಗಳನ್ನನುಷ್ಠಾನಮಾಡುತ್ತಾ, ನಿತ್ಯವೂ ಗೆಡ್ಡೆ, ಹಣ್ಣು ಇವುಗಳನ್ನು ತಿಂದು, ವೇದಶಾಸ್ತ್ರಾಧ್ಯಯನಪರನಾಗಿ, ಸಕಲ ಪ್ರಾಣಿಗಳಲ್ಲಿಯೂ ದಯಾವಂತನೂ ಮತ್ತು ನಾರಾಯಣಧ್ಯಾನನಿರತನೂ ಆಗಬೇಕು.

೮೮. ಊರಿನಲ್ಲಿ ಬೆಳೆದ ಹೂವು, ಹಣ್ಣುಗಳನ್ನು ತೆಗೆದುಕೊಳ್ಳ ಕೂಡದು. ಎಂಟು ತುತ್ತುಗಳಷ್ಟು ಅನ್ನವನ್ನು ತಿನ್ನಬೇಕು. ರಾತ್ರಿಕಾಲದಲ್ಲಿ ಭೋಜನ ಮಾಡಬಾರದು.

೮೯. ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿದವನು ತೈಲಾಭ್ಯಂಗವನ್ನೂ ಮೈಥುನವನ್ನೂ, ನಿದ್ರೆ ಮತ್ತು ಆಲಸ್ಯ ಇವುಗಳನ್ನೂ ಸಹ ಬಿಡಬೇಕು.

೯೦. ವಾನಪ್ರಸ್ಥನು ಶಂಖಚಕ್ರಗದಾಧರನಾದ ನಾರಾಯಣನನ್ನು ಯಾವಾಗಲೂ ಧ್ಯಾನಿಸಬೇಕು. ಚಾಂದ್ರಾಯಣಾದಿ ವ್ರತಗಳನ್ನು ಆಚರಿಸಬೇಕು.

**ಸಹೇತ ಶೀತತಾಪಾದಿವಹ್ನಿಂ ಪರಿಚರೇತ್ಸದಾ ।**
**ಯದಾ ಮನಸಿ ವೈರಾಗ್ಯಂ ಜಾತಂ ಸರ್ವೇಷು ವಸ್ತುಷು ॥ ೯೦ ॥**

**ತದೈವ ಸನ್ಯಸೇದ್ವಿಪ್ರಃ ಪತಿತಸ್ತ್ವನ್ಯಥಾ ಭವೇತ್ ।**
**ವೇದಾಂತಾಭ್ಯಾಸನಿರತಃ ಶಾಂತೋ ದಾಂತೋ ಜಿತೇಂದ್ರಿಯಃ ॥ ೯೨ ॥**

**ನಿರ್ದ್ವಂದ್ವೋ ನಿರಹಂಕಾರೋ ನಿರ್ಮಮಃ ಸರ್ವದಾ ಭವೇತ್ ।**
**ಶಮಾದಿಗುಣಸಂಯುಕ್ತಃ ಕಾಮಕ್ರೋಧವಿವರ್ಜಿತಃ ॥ ೯೩ ॥**

**ನಗ್ನೋ ವಾ ಜೀರ್ಣಕೌಪೀನೋ ಭವೇನ್ಮುಂಡೋ ಯತಿರ್ದ್ವಿಜಃ ।**
**ಸಮಃ ಶತ್ರೌ ಚ ಮಿತ್ರೇ ಚ ತಥಾ ಮಾನಾಪಮಾನಯೋಃ ॥ ೯೪ ॥**

---

೯೧-೯೨. ಅವನು ಶೀತೋಷ್ಣಾದಿಗಳನ್ನು ಸಹಿಸಬೇಕು. ವಿಹಿತವಾದ ರೀತಿಯಲ್ಲಿ ಅಗ್ನಿಪರಿಚರ್ಯೆಯನ್ನು ಮಾಡಬೇಕು. ಸಕಲವಸ್ತುಗಳಲ್ಲಿಯೂ ಮನಃಪೂರ್ವಕವಾಗಿ ವೈರಾಗ್ಯ ಹುಟ್ಟಿದ ಕೂಡಲೇ ಬ್ರಾಹ್ಮಣನು ಸಂನ್ಯಾಸವನ್ನು ಸ್ವೀಕರಿಸಭೇಕು. ಹಾಗೆ ಸ್ವೀಕರಿಸದಿದ್ದರೆ ಅವನು ಪತಿತನಾಗುವನು.

೯೨-೯೩. ಸನ್ಯಾಸಿಯು ಯಾವಾಗಲೂ ವೇದಾಂತಪ್ರವಚನಾದಿಗಳಲ್ಲಿ ಆಸಕ್ತನು, ಶಾಂತಸ್ವಭಾವವುಳ್ಳವನು, ಸಹಿಷ್ಣುವು, ಜಿತೇಂದ್ರಿಯನು, ದ್ವಂದ್ವ ಎಂದರೆ ಸುಖದುಃಖಾದಿಗಳು ಪ್ರಾಪ್ತವಾದಾಗ ತತ್ಪ್ರಯುಕ್ತವಾದ ವಿಕಾರವನ್ನು ಹೊಂದದಿರುವವನು, ಅಹಂಮಮತಾಶೂನ್ಯನೂ ಆಗಿರಬೇಕು. ಸಂನ್ಯಾಸಿಯು ಶಮದಮಾದಿಗುಣಸಂಯುಕ್ತನು, ಕಾಮಕ್ರೋಧರಹಿತನೂ ಆಗಿರಬೇಕು.

೯೪. ಅವನು ವಸ್ತ್ರಹೀನನಾಗಿ ಅಥವಾ ಹಳೆಯ ಬಟ್ಟೆಯ ಕೌಪೀನವನ್ನು ಧರಿಸಿಕೊಂಡಿರಬೇಕು. ಅವನು ಶತ್ರುಮಿತ್ರರುಗಳಲ್ಲಿಯೂ, ಮಾನ ಅಥವಾ ಅವಮಾನಗಳು ಪ್ರಸಕ್ತವಾದಾಗಲೂ ಒಂದೇ ವಿಧವಾಗಿರಬೇಕು.

ಏಕರಾತ್ರಂ ವಸೇದ್ಗ್ರಾಮೇ ತ್ರಿರಾತ್ರಂ ನಗರೇ ತಥಾ ।
ಭೈಕ್ಷ್ಯೇಣ ವರ್ತಯೇನ್ನಿತ್ಯಂ ನೈಕಾನ್ನಾಶೀ ಭವೇದ್ಯತಿಃ ॥ ೯೫ ॥

ಅನಿಂದಿತದ್ವಿಜಗೃಹೇ ವ್ಯಂಗಾರೇ ಭುಕ್ತಿವರ್ಜಿತೇ ।
ವಿವಾದರಹಿತೇ ಚೈವ ಭಿಕ್ಷಾರ್ಥಂ ಪರ್ಯಟೇದ್ಯತಿಃ ॥ ೯೬ ॥

ಭವೇತ್ತ್ರಿಷವಣಸ್ನಾಯೀ ನಾರಾಯಣಪರಾಯಣಃ ।
ಜಪೇಚ್ಚ ಪ್ರಣವಂ ನಿತ್ಯಂ ಜಿತಾತ್ಮಾ ವಿಜಿತೇಂದ್ರಿಯಃ ॥ ೯೭ ॥

ಏಕಾನ್ನಾದೀ ಭವೇದ್ಯಸ್ತು ಕದಾಚಿಲ್ಲಂಪಟೋ ಯತಿಃ ।
ನ ತಸ್ಯ ನಿಷ್ಕೃತಿರ್ದೃಷ್ಟಾ ಪ್ರಾಯಶ್ಚಿತ್ತಾಯುತೈರಪಿ ॥ ೯೮ ॥

ಲೋಭಾದ್ಯದಿ ಯತಿರ್ವಿಪ್ರ ತನುಪೋಷಪರೋ ಭವೇತ್ ।
ಸ ಚಂಡಾಲಸಮೋ ಜ್ಞೇಯೋ ವರ್ಣಾಶ್ರಮವಿಗರ್ಹಿತಃ ॥ ೯೯ ॥

---

೯೫. ಯತಿಯು ಹಳ್ಳಿಯಲ್ಲಿ ಒಂದು ದಿನವೂ, ಪಟ್ಟಣದಲ್ಲಿ ಮೂರು ದಿನಗಳೂ ಭಿಕ್ಷಾನ್ನದಿಂದ ಜೀವಿಸುತ್ತಾ ವರ್ತಿಸಬೇಕು. ಅವನು ಒಬ್ಬನ ಮನೆಯ ಅನ್ನವನ್ನೇ ತಿನ್ನಬಾರದು.

೯೬. ಯತಿಯು ಅಡಿಗೆಯಾಗಿ ಬೆಂಕಿಯನ್ನು ಆರಿಸಿರುವ, ಊಟವಿಲ್ಲದಿರುವ, ಕಲಹವಿಲ್ಲದೆ ನಿರ್ದುಷ್ಟದ್ವಿಜಗೃಹಕ್ಕೆ ಭಿಕ್ಷೆಗೆ ಹೋಗಬೇಕು.

೯೭. ಅವನು ಮನಸ್ಸು ಮತ್ತು ಬಾಹ್ಯೇಂದ್ರಿಯಗಳನ್ನು ಜಯಿಸಿ ತ್ರಿಕಾಲಗಳಲ್ಲಿ ಸ್ನಾನಮಾಡುವವನಾಗಿ, ನಾರಾಯಣ ಧ್ಯಾನನಿರತನಾಗಿ, ಯಾವಾಗಲೂ ಪ್ರಣವಮಂತ್ರವನ್ನು ಜಪಿಸುತ್ತಿರಬೇಕು.

೯೮. ಯತಿಯು ಒಂದೇ ಮನೆಯಲ್ಲಿ ಊಟಮಾಡುತ್ತಾ ಒಂದುವೇಳೆ ವಿಷಯಲಂಪಟನಾದರೆ ಅಂತಹವನಿಗೆ ಸಾವಿರಾರು ಪ್ರಾಯಶ್ಚಿತ್ತ ಮಾಡಿದಾಗ್ಯೂ ಪಾಪ ನಿವೃತ್ತಿಯಾಗುವುದಿಲ್ಲ.

೯೯. ಯತಿಯು ಆಶೆಯಿಂದ ಶರೀರವನ್ನು ಪೋಷಿಸುವುದರಲ್ಲಿ ನಿರತನಾದರೆ ಅವನು ವರ್ಣಾಶ್ರಮನಿಂದಿತನಾಗಿ ಚಂಡಾಲ ಸಮಾನನಾಗುವನೆಂದು ತಿಳಿಯಬೇಕು.

ಆತ್ಮಾನಂ ಚಿಂತಯೇದ್ದೇವಂ ನಾರಾಯಣಮನಾಮಯಂ ।
ನಿರ್ದ್ವಂದ್ವಂ ನಿರ್ಮಮಂ ಶಾಂತಂ ಮಾಯಾತೀತಮಮತ್ಸರಂ ॥ ೧೦೦ ॥

ಅವ್ಯಯಂ ಪರಿಪೂರ್ಣಂ ಚ ಸದಾನಂದೈಕವಿಗ್ರಹಂ ।
ಜ್ಞಾನಸ್ವರೂಪಮಮಲಂ ಪರಂಜ್ಯೋತಿಃ ಸನಾತನಂ ॥ ೧೦೧ ॥

ಅವಿಕಾರಮನಾದ್ಯಂತಂ ಜಗಚ್ಚೈತನ್ಯಕಾರಣಂ ।
ನಿರ್ಗುಣಂ ಪರಮಂ ಧ್ಯಾಯೇದಾತ್ಮಾನಂ ಪರತಃ ಪರಂ ॥ ೧೦೨ ॥

ಪಠೇದುಪನಿಷದ್ವಾಕ್ಯಂ ವೇದಾಂತಾರ್ಥಾಂಶ್ಚ ಚಿಂತಯೇತ್ ।
ಸಹಸ್ರಶೀರ್ಷಂ ದೇವಂ ಚ ಸದಾ ಧ್ಯಾಯೇಜ್ಜಿತೇಂದ್ರಿಯಃ ॥ ೧೦೩ ॥

ಏವಂ ಧ್ಯಾನಪರೋ ಯಸ್ತು ಯತಿರ್ವಿಗತಮತ್ಸರಃ ।
ಸ ಯಾತಿ ಪರಮಾನಂದಂ ಪರಂಜ್ಯೋತಿಃ ಸನಾತನಂ ॥ ೧೦೪ ॥

---

೧೦೦. ನಿರ್ದೋಷನು, ಅದ್ವಿತೀಯನು, ಮಮತಾರಹಿತನು, ಶಾಂತಸ್ವಭಾವವುಳ್ಳವನು, ಮಾಯೆಗೆ ಬದ್ಧನಾಗದಿರುವವನು, ಮಾತ್ಸರ್ಯರಹಿತನೂ ಆಗಿರುವ ಕ್ರೀಡಾದಿಗುಣವಿಶಿಷ್ಟನಾದ ನಾರಾಯಣನನ್ನು ಯತಿಯು ಧ್ಯಾನಿಸಬೇಕು.

೧೦೧-೧೦೨. ನಾಶರಹಿತನು, ಗುಣಪರಿಪೂರ್ಣನು, ದುಃಖಮಿಶ್ರವಲ್ಲದ ಆನಂದವೇ ಶರೀರವಾಗಿ ಉಳ್ಳವನು, ಜ್ಞಾನರೂಪಿಯು, ದೋಷರಹಿತನು, ಉತ್ಕೃಷ್ಟಜ್ಯೋತಿಸ್ಸ್ವರೂಪನು, ಅನಾದಿಯು, ವಿಕಾರಶೂನ್ಯನು, ಅನಾದ್ಯನಂತನು ಜಗತ್ತಿನ ಚೈತನ್ಯಕ್ಕೆ ಕಾರಣನು, ಪ್ರಾಕೃತಗುಣರಹಿತನು, ಸರ್ವೋತ್ತಮನು ಉತ್ತಮರಾದ ಬ್ರಹ್ಮಾದಿ ದೇವತೆಗಳಿಗಿಂತಲೂ ಉತ್ತಮನೂ ಆದ ಪರಮಾತ್ಮನನ್ನು ಯತಿಯು ಧ್ಯಾನಿಸಬೇಕು.

೧೦೩. ಉಪನಿಷದ್ವಾಕ್ಯವನ್ನು ಪಠನೆಮಾಡಬೇಕು. ವೇದಾಂತಾರ್ಥಗಳನ್ನು ಮನನ ಮಾಡಬೇಕು. ಜಿತೇಂದ್ರಿಯನಾಗಿ ಸಹಸ್ರಶಿರಸ್ಸುಳ್ಳ ದೇವನನ್ನು ಸರ್ವದಾ ಧ್ಯಾನಿಸಬೇಕು.

೧೦೪. ಈ ಪ್ರಕಾರ ಮಾತ್ಸರ್ಯಾದಿರಹಿತನಾಗಿ ಭಗವದ್ಧ್ಯಾನನಿರತನಾದ ಯತಿಯು ಉತ್ಕೃಷ್ಟಾನಂದ ಮತ್ತು ಉತ್ತಮಜ್ಯೋತಿಸ್ವರೂಪನೂ ಆದ ಅನಾದಿ ಭಗವಂತನನ್ನೇ ಹೊಂದುತ್ತಾನೆ.

**ಇತ್ಯೇವಮಾಶ್ರಮಾಚಾರಾನ್ಯಃ ಕರೋತಿ ದ್ವಿಜಃ ಕ್ರಮಾತ್ ।**
**ಸ ಯಾತಿ ಪರಮಂ ಸ್ಥಾನಂ ಯತ್ರ ಗತ್ವಾ ನ ಶೋಚತಿ ॥ ೧೦೫ ॥**

**ವರ್ಣಾಶ್ರಮಾಚಾರರತಾಃ ಸರ್ವಪಾಪವಿವರ್ಜಿತಾಃ ।**
**ನಾರಾಯಣಪರಾಃ ಯಾಂತಿ ತದ್ವಿಷ್ಣೋಃ ಪರಮಂ ಪದಂ ॥ ೧೦೬ ॥**

**ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ ಪ್ರಥಮಪಾದೇ ಸದಾಚಾರೇಷು ಗೃಹಸ್ಥವಾನಪ್ರಸ್ಥಯತಿಧರ್ಮನಿರೂಪಣಂ ನಾಮ ಸಪ್ತವಿಂಶೋಽಧ್ಯಾಯಃ**

---

೧೦೫. ಈ ಪ್ರಕಾರ ವರ್ಣಾಶ್ರಮಧರ್ಮಗಳನ್ನು ಕ್ರಮವಾಗಿ ಆಚರಿಸುವ ದ್ವಿಜನು ಶೋಕರಹಿತವಾದ ಉತ್ತಮಸ್ಥಾನವನ್ನು ಪಡೆಯುತ್ತಾನೆ.

೧೦೬. ವರ್ಣಾಶ್ರಮಧರ್ಮನಿರತರು, ಸಕಲ ಪಾಪಗಳನ್ನೂ ಕಳೆದುಕೊಂಡಿರುವವರು, ನಾರಾಯಣಧ್ಯಾನನಿರತರೂ ಆಗಿರುವವರು ವಿಷ್ಣುವಿನ ಉತ್ತಮಸ್ಥಾನ ಎಂದರೆ ವೈಕುಂಠಲೋಕವನ್ನು ಪಡೆಯುತ್ತಾರೆ.

ಇಂತು ಶ್ರೀ ಬೃಹನ್ನಾರದೀಯಪುರಾಣ ಪೂರ್ವಭಾಗ ಪ್ರಥಮಪಾದ ಸದಾಚಾರ ಪ್ರಕರಣದಲ್ಲಿ ಗೃಹಸ್ಥ ವಾನಪ್ರಸ್ಥ ಯತಿಧರ್ಮಕಥನವೆಂಬ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.

**ಕಥಾಸಾರಾಂಶ**

ಈ ಅಧ್ಯಾಯದಲ್ಲಿ ಗೃಹಸ್ಥಾಶ್ರಮಧರ್ಮವನ್ನು ನಿರೂಪಿಸತೊಡಗಿ ಬೆಳಗಿನಿಂದ ರಾತ್ರಿಯವರೆಗೆ ಗೃಹಸ್ಥನ ನಡವಳಿಕೆಯ ವಿಧಾನವನ್ನು ವಿಶದವಾಗಿ ಹೇಳಿ, ಆಪದ್ಧರ್ಮಗಳನ್ನೂ ವಿವರಿಸಿ, ವಾನಪ್ರಸ್ಥಾಶ್ರಮವನ್ನು ಸ್ವೀಕರಿಸುವ ಕಾಲ, ಅದರ ಧರ್ಮ ಮುಂತಾದುವುಗಳನ್ನು ಸ್ಪಷ್ಟಪಡಿಸಿ, ಯತ್ಯಾಶ್ರಮ ಮತ್ತು ಅದರ ಧರ್ಮ, ಆಗ ಅಕಾರ್ಯವನ್ನು ಮಾಡಿದರೆ ಸಂಭವಿಸುವ ಪಾಪ ಮುಂತಾದುವುಗಳನ್ನು ವಿಸ್ತಾರವಾಗಿ ನಿರೂಪಿಸಿದೆ.

# ಅಷ್ಟಾವಿಂಶೋಽಧ್ಯಾಯಃ

ಸನಕ ಉವಾಚ

ಶೃಣುಷ್ವ ಮುನಿಶಾರ್ದೂಲ ಶ್ರಾದ್ಧಸ್ಯ ವಿಧಿಮುತ್ತಮಂ ।
ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥ ೧ ॥

ಕ್ಷಯಾಹಪೂರ್ವದಿವಸೇ ಸ್ನಾತ್ವಾ ಚೈಕಾಶನೋ ಭವೇತ್ ।
ಅಧಃಶಾಯೀ ಬ್ರಹ್ಮಚಾರೀ ನಿಶಿ ವಿಪ್ರಾನ್ನಿಮಂತ್ರಯೇತ್ ॥ ೨ ॥

ದಂತಧಾವನತಾಂಬೂಲೇ ತೈಲಾಭ್ಯಂಗಂ ತಥೈವ ಚ ।
ರತ್ಯೌಷಧಿಪರಾನ್ನಾನಿ ಶ್ರಾದ್ಧಕರ್ತಾ ವಿವರ್ಜಯೇತ್ ॥ ೩ ॥

ಅಧ್ವಾನಂ ಕಲಹಂ ಕ್ರೋಧಂ ವ್ಯವಾಯಂ ಚ ಧುರಂ ತಥಾ ।
ಶ್ರಾದ್ಧಕರ್ತಾ ಚ ಭೋಕ್ತಾ ಚ ದಿವಾಸ್ವಾಪಂ ಚ ವರ್ಜಯೇತ್ ॥ ೪ ॥

---

## ಇಪ್ಪತ್ತೆಂಟನೆಯ ಅಧ್ಯಾಯ

೧. ಸನಕನು ಹೇಳಿದನು—ಮುನಿಶ್ರೇಷ್ಠನಾದ ನಾರದನೇ! ಉತ್ತಮವಾದ ಶ್ರಾದ್ಧವಿಧಾನವನ್ನು ಹೇಳುತ್ತೇನೆ; ಕೇಳು. ಅದನ್ನು ಶ್ರವಣಮಾಡಿದರೆ ಸಕಲಪಾಪಗಳಿಂದಲೂ ವಿಮೋಚನೆಯಾಗುತ್ತದೆ ಸಂದೇಹವಿಲ್ಲ.

೨. ಶ್ರಾದ್ಧದ ಹಿಂದಿನದಿನ ಸ್ನಾನಮಾಡಿ ಒಪ್ಪತ್ತು ಭೋಜನಮಾಡಬೇಕು. ಬ್ರಹ್ಮಚರ್ಯದಿಂದ ನೆಲದಲ್ಲಿ ಮಲಗಬೇಕು. ಆ ರಾತ್ರಿ ಬ್ರಾಹ್ಮಣರನ್ನು ಆಹ್ವಾನಿಸಬೇಕು.

೩. ಶ್ರಾದ್ಧಕರ್ತನು ಆ ದಿವಸ ದಂತಧಾವನ, ತಾಂಬೂಲ, ತೈಲಾಭ್ಯಂಗ ಸಂಭೋಗ, ಔಷಧ, ಇತರರ ಮನೆಯಲ್ಲಿ ಊಟಮಾಡುವುದು ಇವುಗಳನ್ನು ತ್ಯಾಗಮಾಡಬೇಕು.

೪. ಶ್ರಾದ್ಧಕರ್ತನು ಮತ್ತು ಭೋಕ್ತೃವೂ ಸಹ ಪ್ರಯಾಣ, ಜಗಳ, ಕ್ರೋಧ, ಮೈಥುನ, ಮತ್ತು ಹಗಲುನಿದ್ರೆ ಇವುಗಳನ್ನು ಪರಿತ್ಯಾಗಮಾಡಬೇಕು.

ಶ್ರಾದ್ಧೇ ನಿಮಂತ್ರಿತೋ ಯಸ್ತು ವ್ಯವಾಯಂ ಕುರುತೇ ಯದಿ ।
ಬ್ರಹ್ಮಹತ್ಯಾಮವಾಪ್ನೋತಿ ನರಕಂ ಚಾಪಿ ಗಚ್ಛತಿ ॥ ೫ ॥

ಶ್ರಾದ್ಧೇ ನಿಯೋಜಯೇದ್ವಿಪ್ರಂ ಶ್ರೋತ್ರಿಯಂ ವಿಷ್ಣುತತ್ಪರಂ ।
ಯಥಾ ಸ್ವಾಚಾರನಿರತಂ ಪ್ರಶಾಂತಂ ಸತ್ಕುಲೋದ್ಭವಂ ॥ ೬ ॥

ರಾಗದ್ವೇಷವಿಹೀನಂ ಚ ಪುರಾಣಾರ್ಥವಿಶಾರದಂ ।
ತ್ರಿಮಧುತ್ರಿಸುಪರ್ಣಜ್ಞಂ ಸರ್ವಭೂತದಯಾಪರಂ ॥ ೭ ॥

ದೇವಪೂಜಾರತಂ ಚೈವ ಸ್ಮೃತಿತತ್ತ್ವವಿಶಾರದಂ ।
ವೇದಾಂತತತ್ತ್ವಸಂಪನ್ನಂ ಸರ್ವಲೋಕಹಿತೇ ರತಂ ॥ ೮ ॥

ಕೃತಜ್ಞಂ ಗುಣಸಂಪನ್ನಂ ಗುರುಶುಶ್ರೂಷಣೇ ರತಂ ।
ಪರೋಪದೇಶನಿರತಂ ಸಚ್ಛಾಸ್ತ್ರಕಥನೈಸ್ತಥಾ ॥ ೯ ॥

---

೫. ಶ್ರಾದ್ಧಕ್ಕೆ ಆಹ್ವಾನಿಸಲ್ಪಟ್ಟ ಬ್ರಾಹ್ಮಣನು ಸಂಭೋಗವಮಾಡಿದರೆ ಬ್ರಹ್ಮಹತ್ಯೆಮಾಡಿದ ಪಾಪಕ್ಕೆ ಭಾಗಿಯಾಗುತ್ತಾನೆ; ಮತ್ತು ನರಕಕ್ಕೂ ಹೋಗುವನು.

೬-೯. ವೇದ ಶಾಸ್ತ್ರಾಧ್ಯಯನ ಮಾಡಿರುವವನು, ವಿಷ್ಣುಧ್ಯಾನನಿರತನು, ತನ್ನ ವರ್ಣಾಶ್ರಮೋಚಿತಧರ್ಮಾನುಷ್ಠಾನಪರನು, ಶಾಂತನು, ಸದ್ವಂಶಸಂಭೂತನು, ರಾಗದ್ವೇಷವಿಲ್ಲದವನು, ಪುರಾಣಾರ್ಥಜ್ಞಾನಿಯು, ಅಮೃತವಿದ್ಯಾತ್ರಯ ಮತ್ತು ಸುಪರ್ಣವಿದ್ಯೆ ಇವುಗಳನ್ನು ತಿಳಿದಿರುವನು, ಸಕಲಪ್ರಾಣಿಗಳಲ್ಲಿಯೂ ದಯೆಯುಳ್ಳವನು, ದೇವರಪೂಜೆಯಲ್ಲಿ ಆಸಕ್ತನು, ಸ್ಮೃತಿತತ್ವವಿಜ್ಞಾನಿಯು, ವೇದಾಂತತತ್ವವಿದ್ವಾಂಸನು, ಸಕಲರಿಗೂ ಅನುಕೂಲಮಾಡುವವನು, ಕೃತಜ್ಞನು, ಗುಣಿಯು, ಗುರುಶುಶ್ರೂಷೆಯಲ್ಲಿ ಆಸಕ್ತನು ಮತ್ತು ಇತರರಿಗೆ ಸಚ್ಛಾಸ್ತ್ರತತ್ವಗಳನ್ನು ಹೇಳಿ ಸದುಪದೇಶಮಾಡುವವನೂ ಆಗಿರುವ ಬ್ರಾಹ್ಮಣನನ್ನು ಶ್ರಾದ್ಧದಲ್ಲಿ ಬ್ರಾಹ್ಮಣಾರ್ಥಕ್ಕೆ ಕರೆಯಬೇಕು.

ಏತೇ ನಿಯೋಜಿತವ್ಯಾ ವೈ ಶ್ರಾದ್ಧೇ ವಿಪ್ರ ಮುನೀಶ್ವರ ।
ಶ್ರಾದ್ಧೇ ವರ್ಜ್ಯಾನ್ಪ್ರವಕ್ಷ್ಯಾಮಿ ಶೃಣು ತಾನ್ಸುಸಮಾಹಿತಃ ॥ ೧೦ ॥

ನ್ಯೂನಾಂಗಾ ಅಧಿಕಾಂಗಾಶ್ಚ ಪ್ರಾಯಶೋ ರೋಗಿಣಸ್ತಥಾ ।
ಕುಷ್ಠೀ ಚ ಕುನಖೀ ಚೈವ ಲಂಬಕರ್ಣಃ ಕ್ಷತವ್ರತಃ ॥ ೧೧ ॥

ನಕ್ಷತ್ರಪಾಠಜೀವೀ ಚ ತಥಾ ಚ ಶವವಾಹಕಃ ।
ಕುವಾದೀ ಪರಿವೇತ್ತಾ ಚ ತಥಾ ದೇವಲಕಃ ಖಲಃ ॥ ೧೨ ॥

ನಿಂದಕೋ ಮರ್ಷಣೋ ಧೂರ್ತಸ್ತಥೈವ ಗ್ರಾಮಯಾಜಕಃ ।
ಅಸಚ್ಛಾಸ್ತ್ರಾಭಿನಿರತಃ ಪರಾನ್ನನಿರತಸ್ತಥಾ ॥ ೧೩ ॥

ವೃಷಲೀ ಸೂತಿಪೋಷ್ಟಾ ಚ ವೃಷಲೀಪತಿರೇವ ಚ ।
ಕುಂಡಶ್ಚ ಗೋಲಕಶ್ಚೈವ ಹ್ಯಯಾಜ್ಯಾನಾಂ ಚ ಯಾಜಕಃ ॥ ೧೪ ॥

---

೧೦. ಮುನೀಶ್ವರ! ಮೇಲೆ ಹೇಳಿದ ಗುಣಗಳುಳ್ಳ ಬ್ರಾಹ್ಮಣರು ಶ್ರಾದ್ಧದಲ್ಲಿ ನಿಮಂತ್ರಣಕ್ಕೆ ಯೋಗ್ಯರು; ಅಂತಹವರನ್ನೇ ಕರೆಯಬೇಕು. ಶ್ರಾದ್ಧದಲ್ಲಿ ಕರೆಯಬಾರದ ಬ್ರಾಹ್ಮಣರನ್ನು ಹೇಳುತ್ತೇನೆ. ಮುನಿಶ್ರೇಷ್ಠನೇ! ಸಾವಧಾನದಿಂದ ಆಲಿಸು.

೧೧-೧೮. ಅಂಗಹೀನ, ಹೆಚ್ಚು ಅವಯವವುಳ್ಳವರು, ಸಾಮಾನ್ಯವಾಗಿ ರೋಗದಿಂದ ನರಳುತ್ತಿರುವವರು, ಕುಷ್ಠರೋಗಿಯು, ಕುತ್ಸಿತನಖವುಳ್ಳವನು, ಜೋಲಾಡುವ ಕಿವಿಯುಳ್ಳವನು, ಸ್ವೀಕೃತ ವ್ರತಪರಿತ್ಯಾಗಿಯು, ಜೋಯಿಸನು, ಹೆಣಹೊರುವವನು, ಕೆಟ್ಟಮಾತಾಡುವವನು, ಅಣ್ಣನಿಗ ವಿವಾಹವಿಲ್ಲದಿರುವಾಗ ಮದುವೆಮಾಡಿಕೊಂಡಿರುವವನು, ಪೂಜಾರಿ, ದುಷ್ಟ, ಪರದೂಷಕ, ಅಸೂಯಾ ಪರನು, ತುಂಟನು, ಗ್ರಾಮಪುರೋಹಿತನು, ಕೆಟ್ಟ ಶಾಸ್ತ್ರದಲ್ಲಿ ಅಭಿರುಚಿಯುಳ್ಳ ವನು, ಪರಾನ್ನವನ್ನೇ ತಿನ್ನುತ್ತಿರುವವನು, ವೃಷಲೀಗರ್ಭಪೋಷಕ, ವೃಷ ಲಿಯ ಗಂಡ, ಪತಿಯಿರುವಾಗ ಪರಪುರುಷನಿಂದ ಹುಟ್ಟಿದವನು, ವಿಧವೆಯ ಮಗನು, ಕರ್ಮಮಾಡಲನರ್ಹರಿಗೆ ಕರ್ಮಮಾಡಿಸುವವನು, ಜಂಭಕ್ಕಾಗಿ ಧರ್ಮ

ದಂಭಾಚಾರೋ ವೃಥಾ ಮುಂಡೀ ಹ್ಯನ್ಯಸ್ತ್ರೀಧನತತ್ಪರಃ ।
ವಿಷ್ಣುಭಕ್ತಿವಿಹೀನಶ್ಚ ಶಿವಭಕ್ತಿಪರಾಙ್ಮುಖಃ ॥ ೧೫ ॥

ವೇದವಿಕ್ರಯಿಣಶ್ಚೈವ ವ್ರತವಿಕ್ರಯಿಣಸ್ತಥಾ ।
ಸ್ಮೃತಿವಿಕ್ರಯಿಣಶ್ಚೈವ ಮಂತ್ರವಿಕ್ರಯಿಣಸ್ತಥಾ ॥ ೧೬ ॥

ಗಾಯಕಾಃ ಕಾವ್ಯಕರ್ತಾರೋ ಭಿಷಕ್ಶಾಸ್ತ್ರೋಪಜೀವಿನಃ ।
ವೇದನಿಂದಾಪರಶ್ಚೈವ ಗ್ರಾಮಾರಣ್ಯಪ್ರದಾಹಕಃ ॥ ೧೭ ॥

ತಥಾತಿಕಾಮುಕಶ್ಚೈವ ರಸವಿಕ್ರಯಕಾರಕಃ ।
ಕೂಟಯುಕ್ತಿರತಶ್ಚೈವ ಶ್ರಾದ್ಧೇ ವರ್ಜ್ಯಾಃ ಪ್ರಯತ್ನತಃ ॥ ೧೮ ॥

ನಿಮಂತ್ರಯೀತ ಪೂರ್ವೇದ್ಯುಸ್ತಸ್ಮಿನ್ನೇವ ದಿನೇಽಥವಾ ।
ನಿಮಂತ್ರಿತೋ ಭವೇದ್ವಿಪ್ರೋ ಬ್ರಹ್ಮಚಾರೀ ಜಿತೇಂದ್ರಿಯಃ ॥ ೧೯ ॥

---

ವನ್ನು ಪ್ರದರ್ಶಿಸುತ್ತಿರುವವನು, ವ್ಯರ್ಥವಾಗಿ ತಲೆಯನ್ನು ಬೋಳಿಸಿಕೊಂಡಿರುವವನು, ಪರಸ್ತ್ರೀ, ಪರಧನ ಇವುಗಳನ್ನೇ ಅನುಭವಿಸುವವನು, ವಿಷ್ಣುಭಕ್ತಿರಹಿತನು ಮತ್ತು ದೇವತೆಗಳಲ್ಲಿ ಉದಾಸೀನನು, ವೇದ, ವ್ರತ, ಸ್ಮೃತಿ ಮತ್ತು ಮಂತ್ರ ಇವುಗಳನ್ನು ವಿಕ್ರಯುವಮಾಡುವವನು ಎಂದರೆ ವೇದಾದಿಗಳನ್ನು ಶಿಷ್ಯರಿಂದ ಕ್ಲಪ್ತವಾಗಿ ದ್ರವ್ಯ ತೆಗೆದುಕೊಂಡು ಪಾಠಹೇಳುವವನು, ವ್ರತಾನುಷ್ಠಾನ ಮಾಡಿ ದ್ರವ್ಯತೆಗೆದುಕೊಂಡು ಅದರ ಫಲವನ್ನು ಕೊಡುವವನು, ಸಂಗೀತಗಾರರು ಕವಿಗಳು, ವೈದ್ಯಶಾಸ್ತ್ರದಿಂದ ಜೀವಿಸುವವರು, ವೇದದೂಷಕರು, ಹಳ್ಳಿ, ವನ ಇವುಗಳನ್ನು ಸುಟ್ಟವನು, ಅತ್ಯಂತ ಕಾಮುಕನು, ರಸಪದಾರ್ಥಗಳನ್ನು ವಿಕ್ರಯಿಸುವವನು ಮತ್ತು ಕೂಟಯುಕ್ತಿಪರನೂ ಆಗಿರುವವರನ್ನು ಶ್ರಾದ್ಧದಲ್ಲಿ ಪ್ರಯತ್ನಪೂರ್ವಕವಾಗಿ ತ್ಯಜಿಸಬೇಕು.

೧೯. ಶ್ರಾದ್ಧದ ಹಿಂದಿನದಿನ ಅಥವಾ ಆದಿನವೇ ಬ್ರಾಹ್ಮಣರನ್ನು ಶ್ರಾದ್ಧ ಭೋಜನಕ್ಕಾಗಿ ಆಹ್ವಾನಿಸಬೇಕು. ಆಹೂತನಾದ ಬ್ರಾಹ್ಮಣನು ಜಿತೇಂದ್ರಿಯನಾಗಿ ಬ್ರಹ್ಮಚಾರಿಯಾಗಿರಬೇಕು.

ಶ್ರಾದ್ಧೇ ಕ್ಷಣಸ್ತು ಕರ್ತವ್ಯಃ ಪ್ರಸಾದಶ್ಚೇತಿ ಸತ್ತಮ ।
ನಿಮಂತ್ರಯೇದ್ದ್ವಿಜಂ ಪ್ರಾಜ್ಞಂ ದರ್ಭಪಾಣಿರ್ಜಿತೇಂದ್ರಿಯಃ ॥ ೨೦ ॥

ತತಃ ಪ್ರಾತಃ ಸಮುತ್ಥಾಯ ಪ್ರಾತಃ ಕೃತ್ಯಂ ಸಮಾಪ್ಯ ಚ ।
ಶ್ರಾದ್ಧಂ ಸಮಾಚರೇದ್ವಿದ್ವಾನ್ಕಾಲೇ ಕುತಪಸಂಜ್ಞಿತೇ ॥ ೨೧ ॥

ದಿವಸಸ್ಯಾಷ್ಟಮೇ ಭಾಗೇ ಯದಾ ಮಂದಾಯತೇ ರವಿಃ ।
ಸ ಕಾಲಃ ಕುತಪಸ್ತತ್ರ ಪಿತೄಣಾಂ ದತ್ತಮಕ್ಷಯಂ ॥ ೨೨ ॥

ಅಪರಾಹ್ಣಃ ಪಿತೄಣಾಂ ತು ದತ್ತಃ ಕಾಲಃ ಸ್ವಯಂಭುವಾ ।
ತತ್ಕಾಲ ಏವ ದಾತವ್ಯಂ ಕವ್ಯಂ ತಸ್ಮಾದ್ದ್ವಿಜೋತ್ತಮೈಃ ॥ ೨೩ ॥

ಯತ್ಕವ್ಯಂ ದೀಯತೇ ದ್ರವ್ಯೈರಕಾಲೇ ಮುನಿಸತ್ತಮ ।
ರಾಕ್ಷಸಂ ತದ್ಧಿ ವಿಜ್ಞೇಯಂ ಪಿತೄಣಾಂ ನೋಪತಿಷ್ಠತಿ ॥ ೨೪ ॥

---

೨೦. ಶ್ರಾದ್ಧದಲ್ಲಿ ಕರ್ತೃವು ಜಿತೇಂದ್ರಿಯನಾಗಿ, ದರ್ಭೆಯನ್ನು ಕೈಯಲ್ಲಿಟ್ಟುಕೊಂಡು “ ಕ್ಷಣಃ ಪ್ರಸಾದಃ ಕರ್ತವ್ಯಃ” ಎಂದು ಹೇಳಿ, ಜ್ಞಾನಿಯಾದ ದ್ವಿಜನನ್ನು ಕರೆಯಬೇಕು.

೨೧. ತರುವಾಯ ಬೆಳಗ್ಗೆ ಎದ್ದು ಪ್ರಾತರಾಹ್ನಿಕವನ್ನು ಮುಗಿಸಿಕೊಂಡು, ಜ್ಞಾನಿಯು ಕುತಪವೆಂಬ ಕಾಲದಲ್ಲಿ ಶ್ರಾದ್ಧಮಾಡಬೇಕು.

೨೨. ಹಗಲಿನ ಎಂಟನೆಯ ಭಾಗದಲ್ಲಿ ಸೂರ್ಯನು ಮಾಂದ್ಯವನ್ನು ಹೊಂದಿರುವ ಕಾಲವು ಕುತಪವೆನಿಸುವುದು. ಆಗ ಪಿತೃಗಳ ಉದ್ದೇಶದಿಂದ ಕೊಡಲ್ಪಟ್ಟುದು ಅಕ್ಷಯವಾಗುವುದು.

೨೩. ಬ್ರಹ್ಮನು ಅಪರಾಹ್ಣಕಾಲವನ್ನು ಪಿತೃಗಳಿಗೆ ಕೊಟ್ಟಿರುತ್ತಾನೆ. ಆದುದರಿಂದ ದ್ವಿಜಶ್ರೇಷ್ಠರು ಆ ಕಾಲದಲ್ಲಿಯೇ ಪಿತೃಗಳಿಗೆ ಕವ್ಯದಾನ ಮಾಡಬೇಕು.

೨೪. ಮುನಿವರ್ಯನೆ! ವಿಹಿತವಾದ ಅಪರಾಹ್ಣಕಾಲಬಿಟ್ಟು ಇತರ ಕಾಲದಲ್ಲಿ ಉತ್ತಮಪದಾರ್ಥಗಳಿಂದ ಪಿತೃಗಳಿಗೆ ಕೊಡಲ್ಪಟ್ಟ ಕವ್ಯವು ರಾಕ್ಷಸವೆಂದು ತಿಳಿಯಬೇಕು. ಆದರಿಂದ ಪಿತೃಗಳಿಗೆ ತೃಪ್ತಿಯಾಗುವುದಿಲ್ಲ.

ಕವ್ಯಂ ದತ್ತಂ ತು ಸಾಯಾಹ್ನೇ ರಾಕ್ಷಸಂ ತದ್ಭವೇದಪಿ ।
ದಾತಾ ನರಕಮಾಪ್ನೋತಿ ಭೋಕ್ತಾ ಚ ನರಕಂ ವ್ರಜೇತ್ ॥ ೨೫ ॥

ಕ್ಷಯಾಹಸ್ಯ ತಿಥಿರ್ವಿಪ್ರ ಯದಿ ಖಂಡತಿಥಿರ್ಭವೇತ್ ।
ವ್ಯಾಪ್ತ್ಯಾಽಪರಾಹ್ಣಿಕಾಯಾಂ ತು ಶ್ರಾದ್ಧಂ ಕಾರ್ಯಂ ವಿಜಾನತಾ ॥ ೨೬ ॥

ಕ್ಷಯಾಹಸ್ಯ ತಿಥಿರ್ಯಾ ತು ಹ್ಯಪರಾಹ್ಣದ್ವಯೇ ಯದಿ ।
ಪೂರ್ವಾ ಕ್ಷಯೇ ತು ಕರ್ತವ್ಯಾ ವೃದ್ಧೌ ಕಾರ್ಯಾ ತಥೋತ್ತರಾ ॥ ೨೭ ॥

ಮುಹೂರ್ತದ್ವಿತಯೇ ಪೂರ್ವದಿನೇ ಸ್ಯಾದಪರೇಽಹನಿ ।
ತಿಥಿಃ ಸಾಯಾಹ್ನಂ ಯತ್ರ ಪರಾ ಕವ್ಯಸ್ಯ ವಿಶ್ರುತಾ ॥ ೨೮ ॥

ಕೇಚಿತ್ಪೂರ್ವದಿನೇ ಪ್ರಾಹುರ್ಮುಹೂರ್ತದ್ವಿತಯೇ ಸತಿ ।
ನೈತನ್ಮತಂ ಹಿ ಸರ್ವೇಷಾಂ ಕವ್ಯದಾನೇ ಮುನೀಶ್ವರ ॥ ೨೯ ॥

---

೨೫. ಸಾಯಂಕಾಲದಲ್ಲಿ ಕೊಡಲ್ಪಟ್ಟ ಕವ್ಯವೂ ಸಹ ರಾಕ್ಷಸವಾಗುವುದು. ಅದನ್ನು ಕೊಟ್ಟವನು ಮತ್ತು ಅದನ್ನು ಸ್ವೀಕರಿಸಿ ಭೋಜನಮಾಡಿದವನೂ ಸಹ ನರಕಕ್ಕೆ ಹೋಗುವರು.

೨೬. ಬ್ರಾಹ್ಮಣನಾದ ನಾರದನೇ! ಮೃತದಿನದ ತಿಥಿಯು ಎರಡು ದಿವಸಗಳಲ್ಲಿ ಸ್ವಲ್ಪವಾಗಿ ವ್ಯಾಪಿಸಿದ್ದರೆ ಅಪರಾಹ್ಣವ್ಯಾಪ್ತಿಯಿರುವ ದಿನದಲ್ಲಿ ಶ್ರಾದ್ಧವನ್ನಾಚರಿಸಬೇಕು.

೨೭. ಮೃತದಿನದ ತಿಥಿಯು ಎರಡು ದಿನಗಳಲ್ಲಿಯೂ ಅಪರಾಹ್ಣಕಾಲದಲ್ಲಿ ವ್ಯಾಪಿಸಿದ್ದರೆ ಅಪರಾಹ್ಣವ್ಯಾಪ್ತಿಯು ಹೆಚ್ಚಾಗಿರುವ ದಿನದಲ್ಲಿ ಶ್ರಾದ್ಧವನ್ನಾಚರಿಸಬೇಕೆಂಬುದು ಜ್ಞಾನಿಗಳ ಮತ.

೨೮. ಪೂರ್ವದಲ್ಲಿ ಎರಡು ಮುಹೂರ್ತಮಾತ್ರ ತಿಥಿ ವ್ಯಾಪಿಸಿ ಪರದಿನದಲ್ಲಿ ಸಾಯಂಕಾಲದಲ್ಲಿಯೂ ವ್ಯಾಪಿಸಿದ್ದರೆ, ಆಗ ಪರದಿನವೇ ಶ್ರಾದ್ಧಾಚರಣೆಗೆ ಪ್ರಶಸ್ತವು.

೨೯. ಮುನೀಶ್ವರನೇ! ಕೆಲವರು ಪೂರ್ವದಿನದಲ್ಲಿ ಮುಹೂರ್ತದ್ವಯ ವ್ಯಾಪ್ತಿಯಿದ್ದರೂ ಆ ದಿವಸವೇ ಶ್ರಾದ್ಧಮಾಡಬೇಕೆಂದು ಹೇಳುವರು. ಶ್ರಾದ್ಧದ ವಿಷಯದಲ್ಲಿ ಇದು ಸರ್ವರಿಗೂ ಸಮ್ಮತವಲ್ಲ.

ನಿಮಂತ್ರಿತೇಷು ವಿಪ್ರೇಷು ಮಿಲಿತೇಷು ದ್ವಿಜೋತ್ತಮ ।
ಪ್ರಾಯಶ್ಚಿತ್ತವಿಶುದ್ಧಾತ್ಮಾ ತೇಭ್ಯೋऽನುಜ್ಞಾಂ ಸಮಾಹರೇತ್ ॥ ೩೦ ॥

ಶ್ರಾದ್ಧಾರ್ಥಂ ಸಮನುಜ್ಞಾತೋ ವಿಪ್ರಾನ್ಭೂಯೋ ನಿಮಂತ್ರಯೇತ್ ।
ಉಭೌ ಚ ವಿಶ್ವೇದೇವಾರ್ಥಂ ಪಿತ್ರರ್ಥಂ ತ್ರೀನ್ಯಥಾವಿಧಿ ॥ ೩೧ ॥

ದೇವತಾರ್ಥಂ ಚ ಪಿತ್ರರ್ಥಮೇಕೈಕಂ ವಾ ನಿಮಂತ್ರಯೇತ್ ।
ಶ್ರಾದ್ಧಾರ್ಥಂ ಸಮನುಜ್ಞಾತಃ ಕಾರಯೇನ್ಮಂಡಲದ್ವಯಂ ॥ ೩೨ ॥

ಚತುರಸ್ರಂ ಬ್ರಾಹ್ಮಣಸ್ಯ ತ್ರಿಕೋಣಂ ಕ್ಷತ್ರಿಯಸ್ಯ ವೈ ।
ವೈಶ್ಯಸ್ಯ ವರ್ತುಲಂ ಜ್ಞೇಯಂ ಶೂದ್ರಸ್ಯಾಭ್ಯುಕ್ಷಣಂ ಭವೇತ್ ॥ ೩೩ ॥

---

೩೦. ದ್ವಿಜೋತ್ತಮನೇ ! ಆಹೂತರಾದ ಬ್ರಾಹ್ಮಣರೆಲ್ಲರೂ ಸೇರಿದ ಮೇಲೆ ಕರ್ತೃವು ಪ್ರಾಯಶ್ಚಿತ್ತದಿಂದ ಶುದ್ಧನಾಗಿ ಆ ಬ್ರಾಹ್ಮಣರಿಂದ ಅನುಜ್ಞೆಯನ್ನು ಪಡೆಯಬೇಕು.

೩೧. ಕರ್ತೃವು ಬ್ರಾಹ್ಮಣರಿಂದ ಶ್ರಾದ್ಧಮಾಡಲಪ್ಪಣೆಯನ್ನು ಪಡೆದು ತಕ್ಕಾಲದಲ್ಲಿ ಪುನಃ ಬ್ರಾಹ್ಮಣರನ್ನು ಆಹ್ವಾನಿಸಬೇಕು. ವಿಧಾನೋಕ್ತಪ್ರಕಾರ ವಿಶ್ವೇದೇವತೆಗಳಿಗಾಗಿ ಇಬ್ಬರು, ಪಿತೃಗಳಿಗಾಗಿ ಮೂವರು ಬ್ರಾಹ್ಮಣರನ್ನು ಕರೆಯಬೇಕು.

೩೨. ಅಷ್ಟಕ್ಕೆ ಶಕ್ತಿಯಿಲ್ಲದಿದ್ದರೆ ವಿಶ್ವೇದೇವ, ಪಿತೃಸ್ಥಾನಗಳಿಗೆ ಒಬ್ಬೊಬ್ಬರಂತೆ ಇಬ್ಬರು ಬ್ರಾಹ್ಮಣರನ್ನಾದರೂ ಕರೆಯಬೇಕು. ಶ್ರಾದ್ಧಕ್ಕಾಗಿ ಅಪ್ಪಣೆಯನ್ನು ಪಡೆದನಂತರ ಎರಡು ಮಂಡಲಗಳನ್ನು ಮಾಡಬೇಕು.

೩೩. ಬ್ರಾಹ್ಮಣನು ಚದುರವಾಗಿಯೂ, ಕ್ಷತ್ರಿಯನು ಮೂರುಮೂಲೆಯಾಗಿಯೂ, ವೈಶ್ಯನು ಗುಂಡಾಗಿಯೂ, ಶೂದ್ರನು ನೀರನ್ನು ಪ್ರೋಕ್ಷಿಸಿಯೂ ಮಂಡಲವನ್ನು ಮಾಡಬೇಕು.

ಬ್ರಾಹ್ಮಣಾನಾಮಭಾವೇ ತು ಭ್ರಾತರಂ ಪುತ್ರಮೇವ ಚ ।
ಆತ್ಮಾನಂ ವಾ ನಿಯುಂಜೀತ ನ ವಿಪ್ರಂ ವೇದವರ್ಜಿತಂ ॥ ೩೪ ॥

ಪ್ರಕ್ಷಾಳ್ಯ ವಿಪ್ರಪಾದಾಂಶ್ಚ ಹ್ಯಾಚಾಂತಾನುಪವೇಶ್ಯ ಚ ।
ಯಥಾವದರ್ಚನಂ ಕುರ್ಯಾತ್ಸ್ಮರನ್ನಾರಾಯಣಂ ಪ್ರಭುಂ ॥ ೩೫ ॥

ಬ್ರಾಹ್ಮಣಾನಾಂ ತು ಮಧ್ಯೇ ಚ ದ್ವಾರದೇಶೇ ತಥೈವ ಚ ।
ಅಪಹತಾ ಇತ್ಯೃಚಾ ವೈ ಕರ್ತಾ ತು ವಿಕಿರೇತ್ತಿಲಾನ್ ॥ ೩೬ ॥

ಯವೈರ್ದರ್ಭೈಶ್ಚ ವಿಶ್ವೇಷಾಂ ದೇವಾನಾಮಿದಮಾಸನಂ ।
ದತ್ವೇತಿ ಭೂಯೋ ದದ್ಯಾಚ್ಚ ದೇವೇ ಹವ್ಯಂ ವಹೇತ್ತತಃ ॥ ೩೭ ॥

ಅಕ್ಷಯ್ಯಾಸನಯೋಃ ಷಷ್ಠೀ ದ್ವಿತೀಯಾऽऽವಾಹನೇ ಸ್ಮೃತಾ ।
ಅನ್ನದಾನೇ ಚತುರ್ಥೀ ಸ್ಯಾಚ್ಛೇಷಾಃ ಸಂಬುದ್ಧಯಃ ಸ್ಮೃತಾಃ ॥ ೩೮ ॥

---

೩೪. ವೇದಶಾಸ್ತ್ರಜ್ಞನಾದ ಬ್ರಾಹ್ಮಣನು ಸಿಕ್ಕದಿದ್ದರೆ, ಸಹೋದರ, ಅಥವಾ ಪುತ್ರ ಇಲ್ಲವೇ ತನ್ನನ್ನಾದರೂ ಬ್ರಾಹ್ಮಣನೆಂದು ನಿಯೋಜಿಸಿಕೊಳ್ಳಬೇಕು. ವೇದಾಧ್ಯಯನವಿಲ್ಲದ ಬ್ರಾಹ್ಮಣನನ್ನು ಖಂಡಿತವಾಗಿಯೂ ಕರೆಯಬಾರದು.

೩೫. ಬ್ರಾಹ್ಮಣರ ಪಾದಗಳನ್ನು ತೊಳೆದು ಆಚಮನಮಾಡಿಸಿ ನಿಯತ ಸ್ಥಾನದಲ್ಲಿ ಕೂಡಿಸಿ, ನಾರಾಯಣದೇವನನ್ನು ಸ್ಮರಿಸುತ್ತಾ ವಿಧಿವತ್ತಾಗಿ ಅರ್ಚನೆಯನ್ನು ಮಾಡಬೇಕು.

೩೬. ಶ್ರಾದ್ಧಕರ್ತನು ಬ್ರಾಹ್ಮಣರ ಮಧ್ಯದಲ್ಲಿ ಮತ್ತು ಬಾಗಿಲು ಪ್ರದೇಶದಲ್ಲಿಯೂ ''ಅಪಹತಾ'' ಎಂಬ ಋಕ್ಕನ್ನು ಹೇಳಿ ಎಳ್ಳನ್ನು ಹಾರಿಸಬೇಕು.

೩೭. ಯವ, ಮತ್ತು ದರ್ಭೆಗಳಿಂದ ವಿಶ್ವೇದೇವತೆಗಳಿಗೆ 'ಇದಮಾಸನಂ' ಎಂಬುದಾಗಿ ಒಂದುಬಾರಿ ಆಸನಕೊಟ್ಟು ಪುನಃ ಆಸನವನ್ನು ಕೊಡಬೇಕು. ಅನಂತರ ಅವರಿಗೆ ಹವ್ಯವನ್ನರ್ಪಿಸಬೇಕು.

೩೮. ಅಕ್ಷಯ್ಯೋದಕ ಮತ್ತು ಆಸನಗಳನ್ನು ಕೊಡುವಾಗ ಷಷ್ಠೀ ವಿಭಕ್ತ್ಯಂತಪದದಿಂದಲೂ, ಆವಾಹನೆ ಮಾಡುವಾಗ ದ್ವಿತೀಯಾ ವಿಭಕ್ತ್ಯಂತ

**ಆಸಾದ್ಯ ಪಾತ್ರದ್ವಿತಯಂ ದರ್ಭಶಾಖಾಸಮನ್ವಿತಂ ।**
**ತತ್ಪಾತ್ರೇ ಸೇಚಯೇಚ್ಛನ್ನೋದೇವೀತ್ಯೃಚಾ ತತಃ ॥ ೩೯ ॥**

**ಯವೋಽಸೀತಿ ಯವಾನ್ ಕ್ಷಿಪ್ತ್ವಾ ಗಂಧಪುಷ್ಪೇ ಚ ವಾಗ್ಯತಃ ।**
**ಆವಾಹಯೇತ್ತತೋ ದೇವಾನ್ವಿಶ್ವೇದೇವಾಸ್ಸ ಇತ್ಯೃಚಾ ॥ ೪೦ ॥**

**ಯಾ ದಿವ್ಯಾ ಇತಿ ಮಂತ್ರೇಣ ದದ್ಯಾದರ್ಘ್ಯಂ ಸಮಾಹಿತಃ ।**
**ಗಂಧೈಶ್ಚ ಪತ್ರಪುಷ್ಪೈಶ್ಚ ಧೂಪೈರ್ದೀಪೈರ್ಯಜೇತ್ತತಃ ॥ ೪೧ ॥**
**ದೇವೈಶ್ಚ ಸಮನುಜ್ಞಾತೋ ಯಜೇತ್ಪಿತೃಗಣಾಂಸ್ತಥಾ ।**
**ತಿಲಸಂಯುಕ್ತದರ್ಭೈಶ್ಚ ದದ್ಯಾತ್ತೇಷಾಂ ಸದಾಸನಂ ॥ ೪೨ ॥**

---

ಪದದಿಂದಲೂ, ಆವಾಹನೆ ಮಾಡುವಾಗ ದ್ವಿತೀಯಾ ವಿಭಕ್ತ್ಯಂತಪದದಿಂದಲೂ, ಅನ್ನದಾನಮಾಡುವಾಗ ಚತುರ್ಥೀ ವಿಭಕ್ತ್ಯಂತಪದದಿಂದಲೂ ಉಳಿದ ಸಂದರ್ಭ ದಲ್ಲಿ ಸಂಬೋಧನ ಪ್ರಥಮಾವಿಭಕ್ತ್ಯಂತಪದದಿಂದಲೂ ಪಿತ್ರಾದಿಗಳನ್ನು ನಿರ್ದೇ ಶಿಸಬೇಕು.

೩೯. ವಿಶ್ವೇದೇವತೆಗಳ ಮುಂದೆ ಎರಡು ದೊನ್ನೆಗಳನ್ನಿಟ್ಟು ಅದರ ಮೇಲೆ ದರ್ಭೆಯನ್ನು ಹಾಕಿ, ಅದರಲ್ಲಿ 'ಶನ್ನೋದೇವಿ' ಎಂಬ ಮಂತ್ರದಿಂದ ನೀರನ್ನು ಹಾಕಬೇಕು.

೪೦. ಅನಂತರ 'ಯವೋಸಿ' ಇತ್ಯಾದಿ ಮಂತ್ರದಿಂದ ಆ ಪಾತ್ರೆ ಗಳಲ್ಲಿ ಯವವನ್ನು ಹಾಕಿ ಗಂಧ, ಹೂವು ಮುಂತಾದುವುಗಳನ್ನು ಸಮರ್ಪಿಸಿ 'ವಿಶ್ವೇದೇವಾ ಸ' ಇತ್ಯಾದಿ ಮಂತ್ರದಿಂದ ವಿಶ್ವೇದೇವತೆಗಳನ್ನು ಆವಾವಾಹನೆ ಮಾಡಬೇಕು.

೪೧. "ಯಾದಿವ್ಯಾ" ಇತ್ಯಾದಿ ಮಂತ್ರದಿಂದ ಸಮಾಧಾನಚಿತ್ತನಾಗಿ ಅರ್ಘ್ಯಕೊಟ್ಟು ಅನಂತರ ಗಂಧ, ಪತ್ರ, ಪುಷ್ಪ, ಧೂಪ, ಮತ್ತು ದೀಪಗಳಿಂದ ವಿಶ್ವೇದೇವತೆಗಳನ್ನು ಪೂಜಿಸಬೇಕು.

೪೨. ತರುವಾಯ ದೇವತೆಗಳಿಂದ ಅಪ್ಪಣೆಪಡೆದು ಪಿತೃಗಳನ್ನು ಪೂಜಿಸಬೇಕು. ಪಿತೃಗಳಿಗೆ ಎಳ್ಳು, ದರ್ಭೆಗಳಿಂದ ಒಳ್ಳೆಯ ಆಸನವನ್ನು ಕೊಡಬೇಕು.

ಪಾತ್ರಾಣ್ಯಾಸಾದಯೇತ್ತ್ರೀಣಿ ಹ್ಯರ್ಘ್ಯಾರ್ಥಂ ಪೂರ್ವವದ್ದ್ವಿಜಃ ।
ಶನ್ನೋದೇವ್ಯಾ ಜಲಂ ಕ್ಷಿಪ್ತ್ವಾ ತಿಲೋಸೀತಿ ತಿಲಾನ್ ಕ್ಷಿಪೇತ್ ॥ ೪೩ ॥

ಉಶಂತ ಇತ್ಯೃಚಾವಾಹ್ಯ ಪಿತ್ರ್ನ್ವಿಪ್ರಸ್ಸಮಾಹಿತಃ ।
ಯಾ ದಿವ್ಯಾ ಇತಿ ಮಂತ್ರೇಣ ದದ್ಯಾದರ್ಘ್ಯಂ ಚ ಪೂರ್ವವತ್ ॥ ೪೪ ॥

ಗಂಧೈಶ್ಚ ಪತ್ರಪುಷ್ಪೈಶ್ಚ ಧೂಪೈರ್ದೀಪೈಶ್ಚ ಸತ್ತಮ ।
ವಾಸೋಭಿರ್ಭೂಷಣೈಶ್ಚೈವ ಯಥಾವಿಭವಮರ್ಚಯೇತ್ ॥ ೪೫ ॥

ತತೋನ್ನಗ್ರಾಸಮಾದಾಯ ಘೃತಯುಕ್ತಂ ವಿಚಕ್ಷಣಃ ।
ಅಗ್ನೌ ಕರಿಷ್ಯ ಇತ್ಯುಕ್ತ್ವಾ ತೇಭ್ಯೋನುಜ್ಞಾಂ ಸಮಾಹರೇತ್ ॥ ೪೬ ॥

ಕರವೈ ಕರವಾಣೀತಿ ಚ ಪೃಷ್ಟ್ವಾ ಬ್ರಾಹ್ಮಣಾ ಮುನೇ ।
ಕುರುಷ್ವ ಕ್ರಿಯತಾಂ ವೇತಿ ಕುರ್ವಿತಿ ಬ್ರೂಯುರೇವ ಚ ॥ ೪೭ ॥

---

೪೩. ಹಿಂದಿನಂತೆ ದ್ವಿಜನು ಪಿತೃಗಳ ಮುಂಭಾಗದಲ್ಲಿ ದರ್ಭೆಗಳ ಸಹಿತನಾಗಿ ಅರ್ಘ್ಯಪ್ರದಾನಕ್ಕಾಗಿ ಮೂರು ಪಾತ್ರೆಗಳನ್ನು ಇಡಬೇಕು. ಅವುಗಳಲ್ಲಿ 'ಶಂನೋದೇವಿ' ಇತ್ಯಾದಿ ಮಂತ್ರದಿಂದ ನೀರುಹಾಕಿ 'ತಿಲೋಸಿ' ಇತ್ಯಾದಿ ಮಂತ್ರದಿಂದ ಎಳ್ಳನ್ನು ಹಾಕಬೇಕು.

೪೪. ''ಉಶಂತ'' ಇತ್ಯಾದಿ ಮಂತ್ರದಿಂದ ಸಮಾಧಾನಚಿತ್ತನಾಗಿ ಪಿತೃಗಳನ್ನು ಆವಾಹನೆಮಾಡಿ, ಪೂರ್ವದಂತೆ 'ಯಾದಿವ್ಯಾ' ಇತ್ಯಾದಿ ಮಂತ್ರದಿಂದ ಅರ್ಘ್ಯಯನ್ನು ಕೊಡಬೇಕು.

೪೫. ಸಜ್ಜನಾಗ್ರಣಿಯೇ! ಗಂಧ, ಪತ್ರೆ, ಪುಷ್ಪ, ಧೂಪ, ದೀಪ, ವಸ್ತ್ರ, ಆಭರಣ ಇವುಗಳಿಂದ ತನ್ನ ವಿಭವಾನುಸಾರವಾಗಿ ಪಿತೃಗಳನ್ನು ಪೂಜಿಸಬೇಕು.

೪೬. ವಿವೇಚನಶೀಲನು ಪಾತ್ರಾಸಾದನವಾದ ಮೇಲೆ ಒಂದು ತುತ್ತು ಅನ್ನ ಮತ್ತು ತುಪ್ಪವನ್ನು ತೆಗೆದುಕೊಂಡು 'ಅಗ್ನೌಕರಿಷ್ಯೇ' ಎಂದು ಹೇಳಿ ಬ್ರಾಹ್ಮಣರಿಂದ ಅಪ್ಪಣೆಯನ್ನು ಪಡೆಯಬೇಕು.

೪೭. ನಾರದಮುನಿಯೇ! 'ಕರವೈ, ಕರವಾಣಿ' ಎಂಬುದಾಗಿ ಕೇಳಿಸಿ

**ಔಪಾಸನಾಗ್ನಿಮಾಧಾಯ ಸ್ವಗೃಹ್ಯೋಕ್ತವಿಧಾನತಃ ।**
**ಸೋಮಾಯ ಚ ಪಿತೃಮತೇ ಸ್ವಧಾ ನಮ ಇತೀರಯೇತ್ ॥ ೪೮ ॥**

**ಅಗ್ನಯೇ ಕವ್ಯವಾಹನಾಯ ಸ್ವಧಾ ನಮ ಇತೀಹ ವಾ ।**
**ಸ್ವಾಹಾಂತೇನಾಪಿ ವಾ ಪ್ರಾಜ್ಞೋ ಜುಹುಯಾತ್ಪಿತೃಯಜ್ಞವತ್ ॥ ೪೯ ॥**

**ಆಭ್ಯಾಮೇವಾಹುತಿಭ್ಯಾಂ ತು ಪಿತೄಣಾಂ ತೃಪ್ತಿರಕ್ಷಯಾ ।**
**ಅಗ್ನ್ಯಭಾವೇ ತು ವಿಪ್ರಸ್ಯ ಪಾಣೌ ಹೋಮೋ ವಿಧೀಯತೇ ॥ ೫೦ ॥**

**ಯಥಾಚಾರಂ ಪ್ರಕುರ್ವೀತ ಪಾಣಾವಗ್ನೌ ಚ ವಾ ದ್ವಿಜಃ ।**
**ನಷ್ಟಾಗ್ನಿರ್ದೂರಭಾರ್ಯಶ್ಚೇತ್ಪಾರ್ವಣೇ ಸಮುಪಸ್ಥಿತೇ ॥ ೫೧ ॥**

---

ಕೊಳ್ಳಲ್ಪಟ್ಟ ಬ್ರಾಹ್ಮಣರು 'ಕುರುಷ್ವ' ಅಥವಾ 'ಕ್ರಿಯತಾಂ' ಇಲ್ಲವೇ 'ಕುರು' ಎಂಬುದಾಗಿ ಹೇಳುವರು.

೪೮-೪೯. ತನ್ನ ಶಾಖೆಯ ಗೃಹ್ಯವಿಧಾನೋಕ್ತಪ್ರಕಾರ ಔಪಾಸನಾಗ್ನಿಯನ್ನು ಆಧಾನಮಾಡಿ, ಪ್ರಾಜ್ಞನಾದವನು "ಸೋಮಾಯ ಪಿತೃಮತೇ ಸ್ವಧಾನಮಃ" ಎಂಬುದಾಗಿಯೂ ಮತ್ತು "ಅಗ್ನಯೇ ಕವ್ಯವಾಹನಾಯ ಸ್ವಧಾ ನಮಃ" ಎಂಬುದಾಗಿಯೂ ಹೇಳಿ ಪಿತೃಯಜ್ಞದಲ್ಲಿ ಮಾಡಿದಂತೆ ಹೋಮಮಾಡಬೇಕು 'ಸ್ವಧಾ' ಎಂಬ ಶಬ್ದಸ್ಥಾನದಲ್ಲಿ 'ಸ್ವಾಹಾ' ಎಂಬ ಶಬ್ದವನ್ನು ಹೇಳಿಯಾದರೂ ಹೋಮಮಾಡಬಹುದು.

೫೦. ಈ ಎರಡು ಆಹುತಿಗಳಿಂದಲೇ ಪಿತೃಗಳಿಗೆ ಅಕ್ಷಯವಾದ ತೃಪ್ತಿಯಾಗುತ್ತದೆ. ಅಗ್ನಿಯಿಲ್ಲದಿದ್ದರೆ ಬ್ರಾಹ್ಮಣನ ಹಸ್ತದಲ್ಲಿ ಹೋಮವನ್ನು ಮಾಡಬೇಕೆಂದು ವಿಧಿಸಲ್ಪಟ್ಟಿದೆ.

೫೧-೫೨. ದ್ವಿಜನು ತನ್ನ ಸಂಪ್ರದಾಯಾನುಸಾರವಾಗಿ ವಿಪ್ರಹಸ್ತ ಅಥವಾ ಅಗ್ನಿಯಲ್ಲಾದರೂ ಹೋಮಮಾಡಬೇಕು. ತನಗೆ ಅಗ್ನಿಲೋಪವಾಗಿದ್ದಾಗ ಅಥವಾ ಹೆಂಡತಿಯು ದೂರದಲ್ಲಿದ್ದಾಗ ಪಾರ್ವಣ ಶ್ರಾದ್ಧಕಾಲವು ಸಂಭವಿಸಿದರೆ ತಾತ್ಕಾಲಿಕವಾಗಿ ಅಗ್ನ್ಯಾಧಾನವನ್ನು ಮಾಡಿ, ಅದರಲ್ಲಿ ಹೋಮಮಾಡಿ

ಸಂಧಾಯಾಗ್ನಿಂ ತತಃ ಕಾರ್ಯಂ ಕೃತ್ವಾ ತಂ ವಿಸೃಜೇತ್ಸುಧೀಃ ।
ನ ಹ್ಯಗ್ನಿರ್ದೂರಗೋ ವಿಪ್ರ ಪಾರ್ವಣೇ ಸಮುಪಸ್ಥಿತೇ ॥ ೫೨ ॥

ಋತ್ವಿಗ್ಭಿಃ ಕಾರಯೇಚ್ಛ್ರಾದ್ಧಂ ಸಾಗ್ನಿಕೈರ್ವಿಧಿವದ್ದ್ವಿಜೈಃ ।
ಕ್ಷಯಾಹೇ ಚೈವ ಸಂಪ್ರಾಪ್ತೇ ಸ್ವಸ್ಯಾಗ್ನಿರ್ದೂರಗೋ ಯದಿ ॥ ೫೩ ॥

ತಥೈವ ಭ್ರಾತರಸ್ತತ್ರ ಲೌಕಿಕಾಗ್ನಾವಪಿ ಸ್ಥಿತಾಃ ।
ಔಪಾಸನಾಗ್ನೌ ದೂರಸ್ಥೇ ಸಮೀಪೇ ಭ್ರಾತರಿ ಸ್ಥಿತೇ ॥ ೫೪ ॥

ಯದ್ಯಗ್ನೌ ಜುಹುಯಾದ್ವಾಽಪಿ ಪಾಣೌ ವಾ ಸ ಹಿ ಪಾತಕೀ ।
ಔಪಾಸನಾಗ್ನೌ ದೂರಸ್ಥೇ ಕೇಚಿದಿಚ್ಛಂತಿ ವೈ ದ್ವಿಜಾಃ ॥ ೫೫ ॥

ತಚ್ಛೇಷಂ ವಿಪ್ರಪಾತ್ರೇಷು ವಿಕಿರೇತ್ಸಂಸ್ಮರನ್ಹರಿಂ ।
ಭಕ್ಷ್ಯೈರ್ಭೋಜ್ಯೈಶ್ಚ ಲೇಹ್ಯೈಃ ಖಾದ್ಯೈರ್ವಿಪ್ರಾನ್ಪ್ರಪೂಜಯೇತ್ ॥ ೫೬ ॥

---

ಅನಂತರ ಅದನ್ನು ವಿಸರ್ಜನೆಮಾಡಬೇಕು. ಪಾರ್ವಣ ಶ್ರಾದ್ಧಕಾಲವು ಪ್ರಾಪ್ತವಾದಾಗ ಅಗ್ನಿಯು ದೂರಸ್ಥವಾಗುವುದಿಲ್ಲ. ಆಗ ಅಗ್ನಿಯು ಸನ್ನಿಹಿತವಾಗಿರುತ್ತದೆಂದು ತಾತ್ಪರ್ಯ.

೫೩. ಪಿತೃಗಳ ಮೃತತಿಥಿಯು ಬಂದಾಗ ತನಗೆ ಅಗ್ನಿಯು ದೂರಸ್ಥವಾಗಿದ್ದಲ್ಲಿ ಸಾಗ್ನಿಕರಾದ ಬ್ರಾಹ್ಮಣ ಋತ್ವಿಕ್ಕುಗಳಿಂದ ವಿಧಾನೋಕ್ತಪ್ರಕಾರ ಶ್ರಾದ್ಧವನ್ನು ಮಾಡಿಸಬೇಕು.

೫೪-೫೫. ಭ್ರಾತೃಗಳು ಲೌಕಿಕಾಗ್ನಿಯಲ್ಲಿದ್ದಾಗ್ಯೂ ಹಾಗೆಯೇ ಮಾಡಬೇಕು. ಔಪಾಸನಾಗ್ನಿಯು ತನಗೆ ದೂರಸ್ಥವಾಗಿದ್ದು, ಸಮೀಪದಲ್ಲಿ ಭ್ರಾತೃವಿದ್ದರೆ ಅಗ್ನಿಯಲ್ಲಿ ಅಥವಾ ವಿಪ್ರಹಸ್ತದಲ್ಲಿ ಹೋಮಮಾಡುವವನು ಪಾತಕಿಯಾಗುವನು. ಕೆಲವು ದ್ವಿಜರು ಔಪಾಸನಾಗ್ನಿಯು ದೂರಸ್ಥವಾಗಿದ್ದರೆ ವಿಪ್ರಹಸ್ತದಲ್ಲಿ ಹೋಮಮಾಡಬಹುದೆಂದು ಹೇಳುತ್ತಾರೆ.

೫೬. ಪಾಣಿಹೋಮಮಾಡಿ ಉಳಿದುದನ್ನು ಹರಿಸ್ಮರಣೆಮಾಡುತ್ತಾ ಬ್ರಾಹ್ಮಣರ ಎಲೆಗಳಲ್ಲಿ ಹಾಕಬೇಕು. ಭಕ್ಷ್ಯಬೋಜ್ಯ, ಗೊಜ್ಜು ಮುಂತಾದ ಲೇಹ್ಯ ಮತ್ತು ಖಾದ್ಯ ಇವುಗಳನ್ನು ಪರಿವೇಷಣಮಾಡಿ ಬ್ರಾಹ್ಮಣರನ್ನು ಸತ್ಕರಿಸಬೇಕು.

**ಅನ್ನತ್ಯಾಗಂ ತತಃ ಕುರ್ಯಾದುಭಯತ್ರ ಸಮಾಹಿತಃ ।**
**ಆಗಚ್ಛಂತು ಮಹಾಭಾಗಾ ವಿಶ್ವೇದೇವಾ ಮಹಾಬಲಾಃ ॥ ೫೭ ॥**

**ಯೇ ಹ್ಯತ್ರ ವಿಹಿತಾಃ ಶ್ರಾದ್ಧೇ ಸಾವಧಾನಾ ಭವಂತು ತೇ ।**
**ಇತಿ ಸಂಪ್ರಾರ್ಥಯೇದ್ದೇವಾನ್ಯೇದೇವಾಸಋಚಾ ನು ವೈ ॥ ೫೮ ॥**

**ತಥಾ ಸಂಪ್ರಾರ್ಥಯೇದ್ವಿಪ್ರಾನ್ಯೇ ಚ ಹೇತಿ ಋಚಾ ಪಿತ್ನ್ ।**
**ಅಮೂರ್ತಾನಾಂ ಚ ಮೂರ್ತಾನಾಂ ಪಿತೄಣಾಂ ದೀಪ್ತತೇಜಸಾಂ ॥ ೫೯ ॥**

**ನಮಸ್ಯಾಮಿ ಸದಾ ತೇಷಾಂ ಧ್ಯಾನಿನಾಂ ಯೋಗಚಕ್ಷುಷಾಂ ।**
**ಏವಂ ಪಿತ್ನಮಸ್ಕೃತ್ಯ ನಾರಾಯಣಪರಾಯಣಃ ॥ ೬೦ ॥**

**ದತ್ತಂ ಹವಿಶ್ಚ ತತ್ಕರ್ಮ ವಿಷ್ಣವೇ ವಿನಿವೇದಯೇತ್ ।**
**ತತಸ್ತೇ ಬ್ರಾಹ್ಮಣಾಸ್ಸರ್ವೇ ಭುಂಜೀರನ್ವಾಗ್ಯತಾ ದ್ವಿಜಾಃ ॥ ೬೧ ॥**

---

೫೭–೫೮. ಎರಡು ಕಡೆಗಳಲ್ಲಿಯೂ ಬಡಿಸಿದಮೇಲೆ ಪ್ರತ್ಯೇಕವಾಗಿ ಅನ್ನತ್ಯಾಗಮಾಡಬೇಕು. 'ಧನ್ಯರು, ಮಹಾಶಕ್ತಿವಂತರೂ ಆಗಿರುವ ವಿಶ್ವೇದೇವತೆಗಳಿರಾ! ದಯಮಾಡಿಸಬೇಕು; ಈ ಶ್ರಾದ್ಧದಲ್ಲಿ ವಿಹಿತವಾಗಿರುವ ಈ ಪದಾರ್ಥಗಳನ್ನು ಸಾವಧಾನವಾಗಿ ಸ್ವೀಕರಿಸಬೇಕು, ಎಂದು ಹೇಳಿ 'ಯೇದೇವಾಸ' ಇತ್ಯಾದಿ ಮಂತ್ರದಿಂದ ಅವರನ್ನು ಪ್ರಾರ್ಥಿಸಬೇಕು.

೫೯–೬೧. ಹಾಗೆಯೇ 'ಯೇಚಹಾ' ಇತ್ಯಾದಿ ಮಂತ್ರದಿಂದ ಪಿತೃಗಳನ್ನು ಪ್ರಾರ್ಥಿಸಬೇಕು. 'ಅಮೂರ್ತರು, ಮೂರ್ತರು, ಪ್ರಕಾಶಿತ ತೇಜಸ್ಸುಳ್ಳವರು, ಧ್ಯಾನಯೋಗಿಗಳು ಆದುದರಿಂದಲೇ ಯೋಗಚಕ್ಷುಸ್ಸುಳ್ಳವರೂ ಆಗಿರುವ ಆ ಪಿತೃಗಳನ್ನು ಯಾವಾಗಲೂ ನಮಸ್ಕರಿಸುವೆನು' ಎಂಬುದಾಗಿ ಪಿತೃಗಳಿಗೆ ನಮಸ್ಕಾರಮಾಡಿ ನಾರಾಯಣಧ್ಯಾನನಿರತನಾಗಿ ದತ್ತವಾದ ಹವಿಸ್ಸು ಮತ್ತು ಆ ಕರ್ಮ ಇವುಗಳನ್ನೆಲ್ಲಾ ವಿಷ್ಣುವಿಗೆ ನಿವೇದಿಸಬೇಕು. ಆಮೇಲೆ ಬ್ರಾಹ್ಮಣರೆಲ್ಲರೂ ವಾಙ್ನಿಯಮದಿಂದ ಭೋಜನಮಾಡಬೇಕು.

ಹಸತೇ ರೋದತೇ ಕೋಽಪಿ ರಾಕ್ಷಸಂ ತದ್ಭವೇದ್ಧವಿಃ ।
ಯಥಾಚಾರಂ ಪ್ರದೇಯಂ ಚ ಮಧುಮಾಂಸಾದಿಕಂ ತಥಾ ॥ ೬೨ ॥

ಶಾಕಾದಿ ಚ ಪ್ರಶಂಸೇರನ್ನಾಗ್ಯತಾ ಧೃತಭಾಜನಾಃ ।
ಯದಿ ಪಾತ್ರಂ ತ್ಯಜೇತ್ಕೋಽಪಿ ಬ್ರಾಹ್ಮಣಃ ಶ್ರಾದ್ಧಯೋಜಿತಃ ॥ ೬೩ ॥

ಶ್ರಾದ್ಧಹಂತಾ ಸ ವಿಜ್ಞೇಯೋ ನರಕಾಯೋಪಪದ್ಯತೇ ।
ಭುಂಜಾನೇಷು ಚ ವಿಪ್ರೇಷು ಹ್ಯನ್ಯೋನ್ಯಂ ಸಂಸ್ಪೃಶೇದ್ಯದಿ ॥ ೬೪ ॥

ತದನ್ನಮುತ್ಯಜನ್ಭುಕ್ತ್ವಾ ಗಾಯತ್ರ್ಯಷ್ಟಶತಂ ಜಪೇತ್ ।
ಭುಜ್ಯಮಾನೇಷು ವಿಪ್ರೇಷು ಕರ್ತಾ ಶ್ರಾದ್ಧಪರಾಯಣಃ ॥ ೬೫ ॥

ಸ್ಮರೇನ್ನಾರಾಯಣಂ ದೇವಮನಂತಮಪರಾಜಿತಂ ।
ರಕ್ಷೋಘ್ನಾನ್ವೈಷ್ಣವಾಂಶ್ಚೈವ ಪೈತೃಕಾಂಶ್ಚ ವಿಶೇಷತಃ ॥ ೬೬ ॥

---

೬೨. ಹವಿರ್ದಾನಕಾಲದಲ್ಲಿ ನಕ್ಕರೆ ಅಥವಾ ಅತ್ತರೆ ಆ ಹವಿಸ್ಸು ರಾಕ್ಷಸವೆನಿಸುವುದು- ಅವರವರ ಸಂಪ್ರದಾಯಪ್ರಕಾರ ಮಧುಮಾಂಸಮುಂತಾದುವುಗಳನ್ನು ಕೊಡಬೇಕು.

೬೩-೬೬. ಎಲೆಯನ್ನು ಹಿಡಿದುಕೊಂಡು ಪಾಕಾದಿಗಳನ್ನು ಹೊಗಳಬೇಕು. ಶ್ರಾದ್ಧದಲ್ಲಿ ನಿಮಂತ್ರಿತನಾದ ಯಾವ ಬ್ರಾಹ್ಮಣನು ಎಲೆಯನ್ನು ಬಿಡುತ್ತಾನೆಯೋ ಅಂತಹವನು ಶ್ರಾದ್ಧನಾಶಕನೆಂದು ತಿಳಿಯಬೇಕು. ಅವನು ನರಕಭಾಗಿಯಾಗುವನು. ಭೋಜನಕಾಲದಲ್ಲಿ ಬ್ರಾಹ್ಮಣರು ಒಬ್ಬರನ್ನೊಬ್ಬರು ಮುಟ್ಟಿದರೆ ಆಗ ಎಲೆಯಲ್ಲಿದ್ದ ಅನ್ನವನ್ನು ಬಿಡದೇ ಭೋಜನಮಾಡಿ ಆಮೇಲೆ ಎಂಟುನೂರು ಗಾಯತ್ರೀಮಂತ್ರಜಪವನ್ನು ಮಾಡಬೇಕು. ಬಾಹ್ಮಣರು ಭೋಜನಮಾಡುತ್ತಿರುವ ಕಾಲದಲ್ಲಿ ಶ್ರಾದ್ಧನಿರತನಾದ ಕರ್ತೃವು, ಜಯಶೀಲನು, ದೇಶಕಾಲಾಪರಿಚ್ಛಿನ್ನನೂ ಆದ ನಾರಾಯಣನನ್ನು ರಕ್ಷೋಘ್ನರಾದ ವೈಷ್ಣವರನ್ನು, ವಿಶೇಷವಾಗಿ ಪಿತೃಗಳನ್ನೂ ಸಹ ಸ್ಮರಿಸಬೇಕು.

**ಜಪೇಚ್ಚ ಪೌರುಷಂ ಸೂಕ್ತಂ ನಾಚಿಕೇತತ್ರಯಂ ತಥಾ ।**
**ತ್ರಿಮಧು ತ್ರಿಸುಪರ್ಣಂ ಚ ಪಾವಮಾನಂ ಯಜೂಂಷಿ ಚ ॥ ೬೭ ॥**

**ಸಾಮಾನ್ಯಪಿ ತಥೋಕ್ತಾನಿ ವದೇತ್ಪುಣ್ಯಪ್ರದಾಂಸ್ತಥಾ ।**
**ಇತಿಹಾಸಪುರಾಣಾನಿ ಧರ್ಮಶಾಸ್ತ್ರಾಣಿ ಚೈವ ಹಿ ॥ ೬೮ ॥**

**ಭುಂಜೀರನ್ಬ್ರಾಹ್ಮಣಾ ಯಾವತ್ತಾವದೇತಾನ್ಜಪೇದ್ದ್ವಿಜ ।**
**ಬ್ರಾಹ್ಮಣೇಷು ಚ ಭುಕ್ತೇಷು ವಿಕಿರಂ ವಿಕ್ಷಿಪೇತ್ತಥಾ ॥ ೬೯ ॥**

**ಶೇಷಮನ್ನಂ ವದೇಚ್ಚೈವ ಮಧುಸೂಕ್ತಂ ಚ ವೈ ಜಪೇತ್ ।**
**ಸ್ವಯಂ ಚ ಪಾದೌ ಪ್ರಕ್ಷಾಲ್ಯ ಸಮ್ಯಗಾಚಮ್ಯ ನಾರದ ॥ ೭೦ ॥**

**ಆಚಾಂತೇಷು ಚ ವಿಪ್ರೇಷು ಪಿಂಡಂ ನಿರ್ವಾಪಯೇತ್ತತಃ ।**
**ಸ್ವಸ್ತಿವಾಚನಕಂ ಕುರ್ಯಾದಕ್ಷಯ್ಯೋದಕಮೇವ ಚ ॥ ೭೧ ॥**

---

೬೭-೬೯. ಬಾಹ್ಮಣರು ಭೋಜನಮಾಡುವವರೆಗೂ ಶ್ರಾದ್ಧಕರ್ತನು ಪುರುಷಸೂಕ್ತ, ಕಾಠಕೋಪನಿಷತ್ತಿನಲ್ಲಿರುವ ನಾಚಿಕೇತೋಪಾಖ್ಯಾನ, ತ್ರಿಮಧು, ತ್ರಿಸುಪರ್ಣ, ಪವಮಾನಸೂಕ್ತ, ಯಜುಸ್ಸು, ಸಾಮ ಮುಂತಾದ ಪುಣ್ಯಪ್ರದ ಮಂತ್ರಗಳು ಮತ್ತು ಇತಿಹಾಸ, ಪುರಾಣ, ಧರ್ಮಶಾಸ್ತ್ರ, ಇವುಗಳನ್ನೂ ಸಹ ಪಾರಾಯಣಮಾಡಬೇಕು. ಬ್ರಾಹ್ಮಣರ ಭೋಜನವಾದಮೇಲೆ ವಿಕಿರವನ್ನು (ಪಾಣಿಹೋಮಮಾಡಿ ಉಳಿದ ಅನ್ನದ ಪಾತ್ರೆಗೆ ನೀರನ್ನು ಹಾಕಿಕೊಂಡು ಬ್ರಾಹ್ಮಣರ ಎಲೆಗೆ ಸುತ್ತುಗಟ್ಟಿ ಆ ಪಾತ್ರೆಯನ್ನು ಅಲ್ಲಿ ವಿಸರ್ಜಿಸುವುದು) ಮಾಡಬೇಕು.

೭೦-೭೧. ಉಳಿದ ಅನ್ನವನ್ನು ಸ್ವಲ್ಪ ಎಲೆಯಲ್ಲಿ ಹಾಕಿ ಮಧುಸೂಕ್ತವನ್ನು ಜಪಿಸಬೇಕು, ನಾರದನೇ ! ಹೀಗೆ ಭೋಜನವಾದಮೇಲೆ ಶ್ರಾದ್ಧಕರ್ತನು ಕಾಲು ತೊಳೆದುಕೊಂಡು ಆಚಮನವನ್ನು ಮಾಡಿ, ಬ್ರಾಹ್ಮಣರ ಹಸ್ತಪ್ರಕ್ಷಾಳನ ಆಚಮನಗಳಾದ ಮೇಲೆ ಪಿಂಡಗಳನ್ನು ತೆಗೆಯಬೇಕು. ಅನಂತರ ಸ್ವಸ್ತಿವಾಚನಮಾಡಿ ಅಕ್ಷಯ್ಯೋದಕವನ್ನು ಕೊಡಬೇಕು.

ದತ್ವಾ ಸಮಾಹಿತಃ ಕುರ್ಯಾತ್ತಥಾ ವಿಪ್ರಾಭಿವಾದನಂ ।
ಅಚಾಲಯಿತ್ವಾ ಪಾತ್ರಂ ತು ಸ್ವಸ್ತಿ ಕುರ್ವಂತಿ ಯೇ ದ್ವಿಜಾಃ ॥ ೭೨ ॥

ವತ್ಸರಂ ಪಿತರಸ್ತೇಷಾಂ ಭವಂತ್ಯುಚ್ಛಿಷ್ಟಭೋಜಿನಃ ।
ದಾತಾರೋ ನೋಽಭಿವರ್ಧಂತಾಂ ಇತ್ಯಾದ್ಯೈಃ ಸ್ಮೃತಿಭಾಷಿತೈಃ ॥ ೭೩ ॥

ಆಶೀರ್ವಚೋ ಲಭೇತ್ತೇಭ್ಯೋ ನಮಸ್ಕಾರಂ ಚರೇತ್ತತಃ ।
ದದ್ಯಾಚ್ಚ ದಕ್ಷಿಣಾಂ ಶಕ್ತ್ಯಾ ತಾಂಬೂಲಂ ಗಂಧಸಂಯುತಂ ॥ ೭೪ ॥

ನ್ಯುಬ್ಜಪಾತ್ರಮಥಾನೀಯ ಸ್ವಧಾಕಾರಮುದೀರಯೇತ್ ।
ವಾಜೇವಾಜೇ ಇತಿ ಋಚಾ ಪಿತೄನ್ದೇವಾನ್ವಿಸರ್ಜಯೇತ್ ॥ ೭೫ ॥

ಭೋಕ್ತಾ ಚ ಶ್ರಾದ್ಧಕೃತ್ತಸ್ಯಾಂ ರಜನ್ಯಾಂ ಮೈಥುನಂ ತ್ಯಜೇತ್ ।
ತಥಾ ಸ್ವಾಧ್ಯಾಯಮಧ್ವಾನಂ ಪ್ರಯತ್ನೇನ ಪರಿತ್ಯಜೇತ್ ॥ ೭೬ ॥

---

೭೨-೭೩. ಅನಂತರ ಸಮಾಧಾನಮನಸ್ಕನಾಗಿ ಬ್ರಾಹ್ಮಣರಿಗೆ ಅಭಿವಾದನಮಾಡಬೇಕು. ಎಲೆಯನ್ನು ತೆಗೆಯದೇ ಸ್ವಸ್ತಿವಾಚನವನ್ನು ಮಾಡಿದರೆ ಅಂತಹ ದ್ವಿಜರ ಪಿತೃಗಳು ಒಂದು ಸಂವತ್ಸರಪರ್ಯಂತ ಉಚ್ಛಿಷ್ಟಾನ್ನಭೋಜನ ಮಾಡುವರು. 'ದಾತಾರೋನೋಽಭಿವರ್ಧಂತಾಂ' (ನಮಗೆ ಅನ್ನದಾನಮಾಡಿದ ನಿಮ್ಮ ಕುಲವು ಅಭಿವೃದ್ಧಿಯನ್ನು ಹೊಂದಲಿ) ಮುಂತಾದ ಸ್ಮೃತಿವಚನಗಳಿಂದ ಆಶೀರ್ವಾದ ಪಡೆಯಬೇಕು.

೭೪. ಅನಂತರ ಆ ಬ್ರಾಹ್ಮಣರಿಗೆ ನಮಸ್ಕಾರಮಾಡಬೇಕು. ತನ್ನ ಶಕ್ತ್ಯನುಸಾರವಾಗಿ ಅವರಿಗೆ ಗಂಧ, ತಾಂಬೂಲ, ದಕ್ಷಿಣೆ ಇವುಗಳನ್ನು ಕೊಡಬೇಕು.

೭೫. ಅನಂತರ ಕಲಶಪಾತ್ರೆಯನ್ನು ತೆಗೆದುಕೊಂಡು "ಸ್ವಧಾ" ಎಂಬುದಾಗಿ ಹೇಳಬೇಕು. 'ವಾಜೇವಾಜೇ' ಎಂಬ ಋಕ್ಕಿನಿಂದ ಪಿತೃ ಮತ್ತು ವಿಶ್ವೇದೇವತೆಗಳನ್ನು ವಿಸರ್ಜನೆಮಾಡಬೇಕು.

೭೬. ನಿಮಂತ್ರಿತನಾದ ಬ್ರಾಹ್ಮಣನು ಮತ್ತು ಶ್ರಾದ್ಧಕರ್ತನೂ ಸಹ ಆದಿನ ರಾತ್ರಿ ಸಂಭೋಗಕರ್ಮವನ್ನು ತ್ಯಜಿಸಬೇಕು ಮತ್ತು ಆ ದಿನದಲ್ಲಿ ವೇದಾಧ್ಯಯನ, ಪ್ರಯಾಣ ಇವುಗಳನ್ನು ಪ್ರಯತ್ನಪೂರ್ವಕವಾಗಿ ಬಿಡಬೇಕು.

ಅಧ್ವಗಶ್ಚಾತುರಶ್ಚೈವ ವಿಹೀನಶ್ಚ ಧನೈಸ್ತಥಾ ।
ಆಮಶ್ರಾದ್ಧಂ ಪ್ರಕುರ್ವೀತ ಹೇಮ್ನಾ ವಾ ದ್ವಿಜಸತ್ತಮಃ ॥ ೭೭ ॥

ದ್ರವ್ಯಾಭಾವೇ ದ್ವಿಜಾಭಾವೇ ಹ್ಯನ್ನಮಾತ್ರಂ ಚ ಪಾಚಯೇತ್ ।
ಪೈತೃಕೇನ ತು ಸೂಕ್ತೇನ ಹೋಮಂ ಕುರ್ಯಾದ್ವಿಚಕ್ಷಣಃ ॥ ೭೮ ॥

ಅತ್ಯಂತಹವ್ಯಶೂನ್ಯಶ್ಚೇತ್ಸ್ವಶಕ್ತ್ಯಾ ತು ತೃಣಂ ಗವಾಂ ।
ಸ್ನಾತ್ವಾ ಚ ವಿಧಿವದ್ವಿಪ್ರ ಕುರ್ಯಾದ್ವಾ ತಿಲತರ್ಪಣಂ ॥ ೭೯ ॥

ಅಥವಾ ರೋದನಂ ಕುರ್ಯಾದತ್ಯುಚ್ಚೈರ್ವಿಜನೇ ವನೇ ।
ದರಿದ್ರೋऽಹಂ ಮಹಾಪಾಪೀ ವದನ್ನಿತಿ ವಿಚಕ್ಷಣಃ ॥ ೮೦ ॥

ಪರೇದ್ಯುಃ ಶ್ರಾದ್ಧಕೃನ್ಮರ್ತ್ಯೋ ಯೋ ನ ತರ್ಪಯತೇ ಪಿತೄನ್ ।
ತತ್ಕುಲಂ ನಾಶಮಾಯಾತಿ ಬ್ರಹ್ಮಹತ್ಯಾಂ ಚ ವಿಂದತಿ ॥ ೮೧ ॥

---

೭೭. ಪ್ರಯಾಣಿಕ, ರೋಗಿ ಅಥವಾ ಹಣವಿಲ್ಲದ ದ್ವಿಜಶ್ರೇಷ್ಠನು ಆಮಶ್ರಾದ್ಧವನ್ನು (ಅಪಕ್ವವಾದ ಹಸಿಯ ಆಹಾರಪದಾರ್ಥಗಳನ್ನೇ ಬ್ರಾಹ್ಮಣರಿಗೆ ಕೊಟ್ಟು ಮಾಡುವ ಶ್ರಾದ್ಧ) ಅಥವಾ ಸುವರ್ಣಶ್ರಾದ್ಧವನ್ನು (ದೇಯ ಪದಾರ್ಥಗಳಿಗೆಲ್ಲಾ ಪ್ರತಿನಿಧಿಯಾಗಿ ದ್ರವ್ಯವನ್ನೇ ಕೊಡುವುದು) ಮಾಡಬೇಕು.

೭೮. ದ್ರವ್ಯವಿಲ್ಲದಿದ್ದರೆ ಅಥವಾ ಬ್ರಾಹ್ಮಣರು ಸಿಕ್ಕದಿದ್ದರೆ ವಿವೇಚನಶೀಲನು ಅನ್ನವೊಂದನ್ನೇ ಮಾಡಿ ಪಿತೃಸೂಕ್ತದಿಂದ ಅಗ್ನಿಯಲ್ಲಿ ಹೋಮ ಮಾಡಬೇಕು.

೭೯. ಅತ್ಯಂತವಾಗಿ ನಿರ್ಗತಿಕನಾಗಿ ಹವ್ಯಪದಾರ್ಥವೇ ಇಲ್ಲದಿದ್ದಲ್ಲಿ ತನ್ನ ಶಕ್ತ್ಯನುಸಾರ ಹುಲ್ಲನ್ನಾದರೂ ತಂದು ಹಸುವಿಗೆ ಹಾಕಬೇಕು. ವಿಧಾನೋಕ್ತಪ್ರಕಾರ ಸ್ನಾನಮಾಡಿ ತಿಲತರ್ಪಣಮಾಡಬೇಕು.

೮೦. ಯಾವುದಕ್ಕೂ ಗತಿಯಿಲ್ಲದಿದ್ದರೆ ವಿವೇಕಿಯಾದವನು ನಾನು ಬಡವ ಮಹಾಪಾಪಿಷ್ಠ ಮುಂತಾಗಿ ಗಟ್ಟಿಯಾಗಿ ಹೇಳುತ್ತಾ ನಿರ್ಜನವಾದ ಕಾಡಿನಲ್ಲಿ ಅಳಬೇಕು.

೮೧. ಶ್ರಾದ್ಧವಾದ ಮಾರನೆಯ ದಿವಸ ಕರ್ತೃವು ಪಿತೃತರ್ಪಣವನ್ನು

**ಶ್ರಾದ್ಧಂ ಕುರ್ವಂತಿ ಯೇ ಮರ್ತ್ಯಾಃ ಶ್ರದ್ಧಾವಂತೋ ಮುನೀಶ್ವರ ।**
**ನ ತೇಷಾಂ ಸಂತತಿಚ್ಛೇದಃ ಸಂಪನ್ನಾಸ್ತೇ ಭವಂತಿ ಚ　　॥ ೮೨ ॥**

**ಪಿತೄನ್ಯಜಂತಿ ಯೇ ಶ್ರಾದ್ಧೇ ತೈಸ್ತು ವಿಷ್ಣುಃ ಪ್ರಪೂಜಿತಃ ।**
**ತಸ್ಮಿಂಸ್ತುಷ್ಟೇ ಜಗನ್ನಾಥೇ ಸರ್ವಾಸ್ತುಷ್ಯಂತಿ ದೇವತಾಃ　　॥ ೮೩ ॥**

**ಪಿತರೋ ದೇವತಾಶ್ಚೈವ ಗಂಧರ್ವಾಪ್ಸರಸಸ್ತಥಾ ।**
**ಯಕ್ಷಾಶ್ಚ ಸಿದ್ಧಾ ಮನುಜಾ ಹರಿರೇವ ಸನಾತನಃ　　॥ ೮೪ ॥**

**ಯೇನೇದಮಖಿಲಂ ಜಾತಂ ಜಗತ್ಸ್ಥಾವರಜಂಗಮಂ ।**
**ತಸ್ಮಾದ್ದಾತಾ ಚ ಭೋಕ್ತಾ ಚ ಸರ್ವಂ ವಿಷ್ಣುಃ ಸನಾತನಃ　　॥ ೮೫ ॥**

---

ಮಾಡದಿದ್ದರೆ ಅವನ ವಂಶವು ನಾಶವಾಗುತ್ತದೆ. ಬ್ರಹ್ಮಹತ್ಯೆಯೂ ಸಂಭವಿಸುತ್ತದೆ.

೮೨. ಮುನೀಶ್ವರನೇ! ಆದರದಿಂದ ಶ್ರಾದ್ಧಮಾಡುವ ಜನರಿಗೆ ಸಂತಾನ ವಿಚ್ಛೇದವಾಗುವುದಿಲ್ಲ; ಅಂತಹವರು ಸಂಪನ್ನರೂ ಆಗುವರು.

೮೩. ಶ್ರಾದ್ಧಮಾಡಿ ಪಿತೃಗಳನ್ನು ಪೂಜಿಸಿದರೆ ವಿಷ್ಣುವು ತನ್ನನ್ನು ಪೂಜಿಸಿದರೆಂಬ ಭಾವನೆಯಿಂದ ಅಂತಹವರ ವಿಷಯದಲ್ಲಿ ಪ್ರೀತನಾಗುವನು. ಅವನು ತುಷ್ಟನಾದರೆ ಜಗದೊಡೆಯನಾದ ಪರಮಾತ್ಮನ ಸಂತೋಷದಿಂದ ಸಕಲ ದೇವತೆಗಳೂ ಸಂತುಷ್ಟರಾಗುವರು.

೮೪. ಪಿತೃಗಳು, ದೇವತೆಗಳು, ಗಂಧರ್ವರು, ಅಪ್ಸರರು ಯಕ್ಷರು, ಸಿದ್ಧರು ಮತ್ತು ಮನುಷ್ಯರೂ ಸಹ ಸನಾತನನಾದ ಶ್ರೀಹರಿಯ ಅಧೀನರಾಗಿರುವರು.

೮೫. ಸನಾತನನಾದ ವಿಷ್ಣುವೇ ಈ ಚರಾಚರಾತ್ಮಕ ಸಕಲ ಪ್ರಪಂಚಕ್ಕೂ ಸೃಷ್ಟ್ಯಾದಿಕರ್ತೃವಾಗಿರುವುದರಿಂದ ಕರ್ತೃ, ಭೋಕ್ತೃ ಮುಂತಾದ ಸಕಲರೂ ಆ ಭಗವಂತನ ಅಧೀನರಾಗಿ ವರ್ತಿಸುವರು. ಆದಕಾರಣ ಅವನು ಸಂತುಷ್ಟನಾದರೆ ಸಕಲರೂ ಸಂತೋಷಿಸಿದಂತೆಯೇ ಸರಿ.

**ಯದಸ್ತಿ ವಿಪ್ರ ಯನ್ನಾಸ್ತಿ ದೃಶ್ಯಂ ಚಾದೃಶ್ಯಮೇವ ಚ ।**
**ಸರ್ವಂ ವಿಷ್ಣುಮಯಂ ಜ್ಞೇಯಂ ತಸ್ಮಾದನ್ಯನ್ನ ವಿದ್ಯತೇ ॥ ೮೬ ॥**

**ಆಧಾರಭೂತೋ ವಿಶ್ವಸ್ಯ ಸರ್ವಭೂತಾತ್ಮಕೋಽವ್ಯಯಃ ।**
**ಅನೌಪಮ್ಯಸ್ವಭಾವಶ್ಚ ಭಗವಾನ್ ಹವ್ಯಕವ್ಯಭುಕ್ ॥ ೮೭ ॥**

**ಪರಬ್ರಹ್ಮಾಭಿಧೇಯೋ ಯ ಏಕ ಏವ ಜನಾರ್ದನಃ ।**
**ಕರ್ತಾ ಕಾರಯಿತಾ ಚೈವ ಸರ್ವಂ ವಿಷ್ಣುಃ ಸನಾತನಃ ॥ ೮೮ ॥**

**ಇತ್ಯೇವಂ ತೇ ಮುನಿಶ್ರೇಷ್ಠ ಶ್ರಾದ್ಧಸ್ಯ ವಿಧಿರುತ್ತಮಃ ।**
**ಕಥಿತಃ ಕುರ್ವತಾಮೇವಂ ಪಾಪಂ ಸದ್ಯೋ ವಿಲೀಯತೇ ॥ ೮೯ ॥**

---

೮೬. ಬ್ರಾಹ್ಮಣೋತ್ತಮನಾದ ನಾರದನೇ ! ಈಗಿರುವುದು ಈಗಿಲ್ಲದಿರುವುದು ಎಂದರೆ ಹಿಂದೆ ಇದ್ದುದು ಅಥವ ಮುಂದೆ ಇರಬಹುದಾದುದು, ದೃಗ್ಗೋಚರವಾಗಿರುವುದು ಮತ್ತು ದೃಗ್ಗೋಚರವಾಗದಿರುವುದು ಎಲ್ಲವೂ ವಿಷ್ಣ್ವಧೀನವೆಂದು ತಿಳಿಯಬೇಕು. ಅವನ ಅಧೀನವಲ್ಲವಾದುದಾವುದೂ ಇಲ್ಲ.

೮೭-೮೮. ಪ್ರಪಂಚಕ್ಕೆ ಆಶ್ರಯನು, ಸಕಲಪ್ರಾಣಿಗಳಿಗೂ ಅಂತರ್ಯಾಮಿಯು, ನಾಶರಹಿತನು ಅಸದೃಶವಾದ ಸ್ವಭಾವವುಳ್ಳವನು, ಷಡ್ಗುಣೈಶ್ವರ್ಯಸಂಪನ್ನನು, ಹವ್ಯ ಮತ್ತು ಕವ್ಯಗಳಿಗೆ ಭೋಕ್ತೃವು, ಪರಬ್ರಹ್ಮಪದವಾಚ್ಯನೂ ಆಗಿರುವ ಜನಾರ್ದನನು ಒಬ್ಬನೇ ಸ್ವತಂತ್ರಕರ್ತನು ಮತ್ತು ಸನಾತನನಾದ ಅವನೇ ಸಕಲ ನಿಯಾಮಕನಾಗಿ ಪರತಂತ್ರ ಜಗತ್ತಿನಿಂದ ವಿಹಿತವಾದ ಕಾಲದಲ್ಲಿ ಅದರ ಕರ್ತವ್ಯವನ್ನು ಮಾಡಿಸುವವನಾಗಿರುವ ಕಾರಣ ಸಕಲ ಶಬ್ದವಾಚ್ಯನು, ಪೂರ್ಣನೂ ಆಗಿರುವನು.

೮೯. ಮುನಿಶ್ರೇಷ್ಠ ! ನಿನಗಾಗಿ ಉತ್ಕೃಷ್ಟಶ್ರಾದ್ಧವಿಧಾನವನ್ನು ಹೇಳಿದೆನು. ಈಪ್ರಕಾರ ಶ್ರಾದ್ಧಮಾಡುವವರಿಗೆ ತಕ್ಷಣದಲ್ಲಿ ಸಮಸ್ತ ಪಾಪನಿವಾರಣೆಯಾಗುತ್ತದೆ

**ಯ ಇದಂ ಪಠತೇ ಭಕ್ತ್ಯಾ ಶ್ರಾದ್ಧಕಾಲೇ ದ್ವಿಜೋತ್ತಮಃ |**
**ಪಿತರಸ್ತಸ್ಯ ತುಷ್ಯಂತಿ ಸಂತತಿಶ್ಚೈವ ವರ್ಧತೇ ॥ ೯೦ ॥**

**ಇತಿ ಶ್ರೀಬೃಹನ್ನಾರದೀಯ ಪುರಾಣೇ ಪೂರ್ವಭಾಗೇ ಪ್ರಥಮಪಾದೇ ಶ್ರಾದ್ಧಕ್ರಿಯಾವರ್ಣನಂ ನಾಮಾಷ್ಟವಿಂಶೋಽಧ್ಯಾಯಃ**

---

೯೦. ಈ ಶ್ರಾದ್ಧಕ್ರಿಯಾವಿಧಾನವನ್ನು ಶ್ರಾದ್ಧಕಾಲದಲ್ಲಿ ಭಕ್ತಿಯಿಂದ ಪಠನಮಾಡುವ ದ್ವಿಜೋತ್ತಮನ ಪಿತೃಗಳು ಸುಪ್ರೀತರಾಗುತ್ತಾರೆ. ಅವನ ವಂಶವೂ ಸಹ ಅಭಿವೃದ್ಧಿಯಾಗುವುದು.

ಇಂತು ಶ್ರೀಬೃಹನ್ನಾರದೀಯಪುರಾಣದೊಳು ಪೂರ್ವಭಾಗ ಪ್ರಥಮಪಾದದಲ್ಲಿ ಶ್ರಾದ್ಧಕ್ರಿಯಾಕಲಾಪವರ್ಣನವೆಂಬ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.

### ಕಥಾಸಾರಾಂಶ

ಈ ಅಧ್ಯಾಯದಲ್ಲಿ ಶ್ರಾದ್ಧವಿಧಾನವು ವಿಶದವಾಗಿ ನಿರೂಪಿತವಾಗಿದೆ. ಶ್ರಾದ್ಧದ ಪೂರ್ವದಿನದಲ್ಲಿ ಅನುಸರಿಸದೇಕಾದ ನಿಯಮ ಮತ್ತು ಶ್ರಾದ್ಧಮಾಡುವ ಕ್ರಮ, ನಿಮಂತ್ರಣಯೋಗ್ಯ ಬ್ರಾಹ್ಮಣ ಗುಣವರ್ಣನೆ, ತ್ಯಾಜ್ಯಬ್ರಾಹ್ಮಣರ ಸ್ವರೂಪ, ವಿಹಿತಕಾಲ, ಅಕಾಲದಲ್ಲಿ ಮಾಡಿದರೆ ಸಂಭವಿಸುವ ಅನರ್ಥ, ಕರ್ತೃ ನಿಯಮ, ಪರದಿನಕರ್ತವ್ಯ, ಶ್ರಾದ್ಧಾರ್ಹದ್ರವ್ಯ ಮತ್ತು ಆಮಶ್ರಾದ್ಧ, ಸುವರ್ಣ ಶ್ರಾದ್ಧ ಇವುಗಳು ಎಂತಹ ಸಂದರ್ಭದಲ್ಲಿ ಕರ್ತವ್ಯವೆಂಬುದು, ವಿಷ್ಣುಮಹಿಮಾತಿಶಯ ಮುಂತಾದುವು ಉಕ್ತವಾಗಿವೆ.

# ಏಕೋನತ್ರಿಂಶೋಽಧ್ಯಾಯಃ

---

**ಸನಕ ಉವಾಚ**

ತಿಥೀನಾಂ ನಿರ್ಣಯಂ ವಕ್ಷ್ಯೇ ಪ್ರಾಯಶ್ಚಿತ್ತವಿಧಿಂ ತಥಾ ।
ಶೃಣುಷ್ವ ತನ್ಮುನಿಶ್ರೇಷ್ಠ ಕರ್ಮಸಿದ್ಧಿರ್ಯತೋ ಭವೇತ್ ॥ ೧ ॥

ಶ್ರೌತಂ ಸ್ಮಾರ್ತಂ ವ್ರತಂ ದಾನಂ ಯಚ್ಚಾನ್ಯತ್ಕರ್ಮ ವೈದಿಕಂ ।
ಅನಿರ್ಣೀತಾಸು ತಿಥಿಷು ನ ಕಿಂಚಿತ್ಫಲತಿ ದ್ವಿಜ ॥ ೨ ॥

ಏಕಾದಶ್ಯಷ್ಟಮೀ ಷಷ್ಠೀ ಪೌರ್ಣಮಾಸೀ ಚತುರ್ದಶೀ ।
ಅಮಾವಾಸ್ಯಾ ತೃತೀಯಾ ಚ ಹ್ಯುಪವಾಸವ್ರತಾದಿಷು ॥ ೩ ॥

ಪರವಿದ್ಧಾಃ ಪ್ರಶಸ್ತಾಃ ಸ್ಯುರ್ನಗ್ರಾಹ್ಯಾಃ ಪೂರ್ವಸಂಯುತಾಃ ।
ನಾಗವಿದ್ಧಾ ತು ಯಾ ಷಷ್ಠೀ ಶಿವವಿದ್ಧಾ ತು ಸಪ್ತಮೀ ॥ ೪ ॥

---

## ಇಪ್ಪತ್ತೊಂಭತ್ತನೆಯ ಅಧ್ಯಾಯವು

೧. ಸನಕನು ಹೇಳಿದನು—ನಾರದಮುನಿವರ್ಯ! ಕರ್ಮಸಿದ್ಧಿಗೆ ಸಾಧಕವಾದ ತಿಥಿನಿರ್ಣಯ ಮತ್ತು ಪ್ರಾಯಶ್ಚಿತ್ತವಿಧಾನ ಇವುಗಳನ್ನು ಹೇಳುತ್ತೇನೆ ಕೇಳು.

೨. ದ್ವಿಜನೇ! ಶ್ರುತಿವಿಹಿತ ಮತ್ತು ಸ್ಮೃತ್ಯುಕ್ತಗಳಾದ ವ್ರತ, ದಾನ ಮತ್ತು ಇತರ ವೈದಿಕಕರ್ಮಗಳು ತಿಥಿನಿರ್ಣಯವಿಲ್ಲದೆ ಯಾವುದೋ ಒಂದು ದಿನದಲ್ಲಿ ಮಾಡಲ್ಪಟ್ಟರೆ ಅಂತಹ ಕರ್ಮವು ಸ್ವಲ್ಪವೂ ಸಫಲವಾಗುವುದಿಲ್ಲ.

೩-೫. ಏಕಾದಶೀ, ಅಷ್ಟಮೀ, ಷಷ್ಠೀ, ಪೌರ್ಣಮಾ, ಚತುರ್ದಶೀ, ಅಮಾವಾಸ್ಯೆ, ತೃತೀಯಾ ಈ ತಿಥಿಗಳಲ್ಲಿ ಉಪವಾಸವ್ರತಾದಿಗಳನ್ನು ಆಚರಿಸಲು ಇವು ಪರವಿದ್ಧವಾಗಿದ್ದರೆ ಎಂದರೆ ಮುಂದಿನ ತಿಥಿಯಿಂದ ಕೂಡಿದ್ದರೆ ಪ್ರಶಸ್ತವಾದುವು. ಪೂರ್ವವಿದ್ಧವಾದ ಈ ತಿಥಿಗಳಲ್ಲಿ ಉಪವಾಸ ವ್ರತಾದಿಗಳನ್ನು

ದಶಮ್ಯೇಕಾದಶೀ ವಿದ್ಧಾ ನೋಪೋಷ್ಯಾಃ ಸ್ಯುಃ ಕದಾಚನ ।
ದರ್ಶಂ ಚ ಪೌರ್ಣಮಾಸೀಂ ಚ ಸಪ್ತಮೀಂ ಪಿತೃವಾಸರಂ ॥ ೫ ॥

ಪೂರ್ವವಿದ್ಧಂ ಪ್ರಕುರ್ವಾಣೋ ನರಕಾಯೋಪಪದ್ಯತೇ ।
ಕೃಷ್ಣಪಕ್ಷೇ ಪೂರ್ವವಿದ್ಧಾಂ ಸಪ್ತಮೀಂ ಚ ಚತುರ್ದಶೀಂ ॥ ೬ ॥

ಪ್ರಶಸ್ತಾಂ ಕೇಚಿದಾಹುಶ್ಚ ತೃತೀಯಾಂ ನವಮೀಂ ತಥಾ ।
ವ್ರತಾದೀನಾಂ ತು ಸರ್ವೇಷಾಂ ಶುಕ್ಲಪಕ್ಷೋ ವಿಶಿಷ್ಯತೇ ॥ ೭ ॥

ಅಪರಾಣ್ಹಾಚ್ಚ ಪೂರ್ವಾಣ್ಹಂ ಗ್ರಾಹ್ಯಂ ಶ್ರೇಷ್ಠತರಂ ಯತಃ ।
ಅಸಂಭವೇ ವ್ರತಾದೀನಾಂ ಯದಿ ಪೌರ್ವಾಣ್ಹಿಕೇ ತಿಥಿಃ ॥ ೮ ॥

ಮುಹೂರ್ತದ್ವಿತಯಂ ಗ್ರಾಹ್ಯಂ ಭಗವತ್ಯುದಿತೇ ರವೌ ।
ಪ್ರದೋಷವ್ಯಾಪಿನೀ ಗ್ರಾಹ್ಯಾ ತಿಥಿರ್ನಕ್ತವ್ರತೇ ಸದಾ ॥ ೯ ॥

---

ಆಚರಿಸಬಾರದು. ಪಂಚಮೀವಿದ್ಧವಾದ ಷಷ್ಠೀತಿಥಿ, ಷಷ್ಠೀವಿದ್ಧವಾದ ಸಪ್ತಮೀ ತಿಥಿಮತ್ತು ಏಕಾದಶೀ ವಿದ್ಧವಾದ ದಶಮೀ ಈ ತಿಥಿಗಳಲ್ಲಿ ಯಾವಾಗಲೂ ಉಪವಾಸವನ್ನು ಮಾಡಬಾರದು. ಅಮಾವಾಸ್ಯೆ, ಪೂರ್ಣಿಮಾ, ಸಪ್ತಮೀ, ತಂದೆತಾಯಿಗಳ ಶ್ರಾದ್ಧದ ದಿನ ಈ ತಿಥಿಗಳು ಅದರ ಹಿಂದಿನ ತಿಥಿಗಳಿಂದ ವಿದ್ಧವಾಗಿದ್ದಾಗ ಕರ್ಮಾಚರಣೆಯನ್ನು ಮಾಡುವವರು ನರಕಕ್ಕೆ ಭಾಗಿಯಾಗುತ್ತಾರೆ.

೬-೭. ಕೃಷ್ಣಪಕ್ಷದಲ್ಲಿ ಸಪ್ತಮೀ, ಚತುರ್ದಶೀ, ತದಿಗೆ ಮತ್ತು ನವಮೀ ಈ ತಿಥಿಗಳು ಪೂರ್ವತಿಥಿಯಿಂದ ವಿದ್ಧವಾದುವುಗಳೇ ಕರ್ಮಾಚರಣೆಗೆ ಪ್ರಶಸ್ತವೆಂದು ಕೆಲವರು ಹೇಳುತ್ತಾರೆ. ಸಮಸ್ತ ವ್ರತಾದಿಗಳಿಗೂ ಶುಕ್ಲಪಕ್ಷವೇ ಉತ್ತಮ.

೮-೯. ಅಪರಾಣ್ಹಕ್ಕಿಂತಲೂ ಪೂರ್ವಾಣ್ಹವೇ ಉತ್ತಮವಾದುದರಿಂದ ಆಕಾಲದಲ್ಲಿಯೇ ವ್ರತಾದಿಗಳನ್ನಾಚರಿಸಬೇಕು. ವ್ರತಾದಿಗಳಿಗೆ ಪೂರ್ವಾಣ್ಹ ಕಾಲದಲ್ಲಿ ವಿಹಿತತಿಥಿಯು ಸಂಭವಿಸದಿದ್ದಲ್ಲಿ ಸೂರ್ಯೋದಯವಾದ ಮೇಲೆ ಎರಡು ಮುಹೂರ್ತಪರ್ಯಂತಕಾಲದಲ್ಲಿರುವ ತಿಥಿಯು ಗ್ರಾಹ್ಯವು. ರಾತ್ರಿಯಕಾಲದಲ್ಲಿ ಕರ್ತವ್ಯವ್ರತಗಳಿಗೆ ಪ್ರದೋಷಕಾಲದಲ್ಲಿರುವ ತಿಥಿಯೇ ಗ್ರಾಹ್ಯವು.

ಉಪೋಷಿತವ್ಯಂ ನಕ್ಷತ್ರಂ ಯೇನಾಸ್ತಂ ಯಾತಿ ಭಾಸ್ಕರಃ ।
ತಿಥಿನಕ್ಷತ್ರಸಂಯೋಗವಿಹಿತವ್ರತಕರ್ಮಣಿ ॥ ೧೦ ॥

ಪ್ರದೋಷವ್ಯಾಪಿನೀ ಗ್ರಾಹ್ಯಾ ತ್ವನ್ಯಥಾ ನಿಷ್ಫಲಂ ಭವೇತ್ ।
ಅರ್ಧರಾತ್ರಾದಧೋ ಯಾ ತು ನಕ್ಷತ್ರವ್ಯಾಪಿನೀ ತಿಥಿಃ ॥ ೧೧

ಸೈವ ಗ್ರಾಹ್ಯಾ ಮುನಿಶ್ರೇಷ್ಠ ನಕ್ಷತ್ರವಿಹಿತವ್ರತೇ ।
ಯದ್ಯರ್ಧರಾತ್ರಯೋರ್ವ್ಯಾಪ್ತಂ ನಕ್ಷತ್ರಂ ತು ದಿನದ್ವಯೇ ॥ ೧೨ ॥

ತತ್ಪುಣ್ಯಂ ತಿಥಿಸಂಯುಕ್ತಂ ನಕ್ಷತ್ರಂ ಗ್ರಾಹ್ಯಮುಚ್ಯತೇ ।
ಅರ್ಧರಾತ್ರದ್ವಯೇ ಸ್ಯಾತಾಂ ನಕ್ಷತ್ರಂ ಚ ತಿಥಿರ್ಯದಿ ॥ ೧೩ ॥

ಕ್ಷಯೇ ಪೂರ್ವಾ ಪ್ರಶಸ್ತಾ ಸ್ಯಾದ್ವೃದ್ಧೌ ಕಾರ್ಯಾ ತಥೋತ್ತರಾ ।
ಅರ್ಧರಾತ್ರದ್ವಯವ್ಯಾಪ್ತಾ ತಿಥಿರ್ನಕ್ಷತ್ರಸಂಯುತಾ ॥ ೧೪ ॥

---

೧೦. ತಿಥಿ ಮತ್ತು ನಕ್ಷತ್ರ ಇವುಗಳ ಸಂಬಂಧದಿಂದ ಕರ್ತವ್ಯವಾದ ವ್ರತಕರ್ಮದಲ್ಲಿ ಅದೇ ನಕ್ಷತ್ರವಿರುವಾಗ ಸೂರ್ಯಾಸ್ತಮಯವಾದರೆ ಆ ನಕ್ಷತ್ರವು ಕಳೆಯುವವರೆಗೂ ಉಪವಾಸಮಾಡಬೇಕು.

೧೧. ಪ್ರದೋಷಕಾಲವ್ಯಾಪಿಯಾದ ತಿಥಿಯೇ ರಾತ್ರಿ ವ್ರತಾಚರಣೆಗೆ ಗ್ರಾಹ್ಯವು. ಹಾಗಿಲ್ಲದ ತಿಥಿಯಲ್ಲಿ ಮಾಡಿದ ವ್ರತವು ನಿಷ್ಫಲವಾಗುವುದು. ನಕ್ಷತ್ರ ಪ್ರಯುಕ್ತವಾಗಿ ವಿಧಿಸಲ್ಪಟ್ಟ ವ್ರತಾಚರಣೆಗೆ ಅರ್ಧರಾತ್ರಿಗಿಂತ ಕಮ್ಮಿಯಾಗಿ ನಕ್ಷತ್ರವ್ಯಾಪ್ತವಾದ ತಿಥಿಯೇ ಪ್ರಶಸ್ತಕಾಲವು.

೧೨-೧೬. ಪೂರ್ವೋತ್ತರ ದಿನಗಳಲ್ಲಿ ಅರ್ಧರಾತ್ರಿಯ ಕಾಲದಲ್ಲಿ ನಕ್ಷತ್ರವು ವ್ಯಾಪ್ತವಾಗಿದ್ದರೆ ಯಾವ ದಿನದಲ್ಲಿ ನಕ್ಷತ್ರವು ತಿಥಿಸಂಯುಕ್ತವಾಗುತ್ತದೆಯೋ ಅದೇ ಪ್ರಶಸ್ತವೆಂದು ಉಕ್ತವಾಗಿದೆ. ನಕ್ಷತ್ರ, ತಿಥಿ ಇವೆರಡು ಎರಡು ಅರ್ಧರಾತ್ರಿಗಳಲ್ಲಿ ವ್ಯಾಪಿಸಿದ್ದರೆ ಕ್ಷಯಪಕ್ಷದಲ್ಲಿ ಪೂರ್ವದಿನವು ಪ್ರಶಸ್ತವು ವೃದ್ಧಿಪಕ್ಷದಲ್ಲಿ ಉತ್ತರದಿನವು ಪಶಸ್ತವೆಂದು ತಿಳಿಯಬೇಕು. ತಿಥಿ, ನಕ್ಷತ್ರ ಇವುಗಳೆರಡೂ ವೃದ್ಧಿ ಹ್ರಾಸಶೂನ್ಯವಾಗಿ ಎರಡು ಅರ್ಧರಾತ್ರಿಗಳಲ್ಲಿ ವ್ಯಾಪಿಸಿದ್ದರೆ ಎರಡು ದಿವಸಗಳಲ್ಲಿಯೂ ವ್ರತಾನುಷ್ಠಾನವನ್ನು ಮಾಡಬೇಕು. ಜ್ಯೇಷ್ಠಾ ಸಹಿತ

ಹ್ರಾಸವೃದ್ಧಿವಿಶೂನ್ಯಾ ಚೇದ್ಗ್ರಾಹ್ಯಾ ಪೂರ್ವಾ ತಥಾಪರಾ ।
ಜ್ಯೇಷ್ಠಾಸಂಮಿಶ್ರಿತಂ ಮೂಲಂ ರೋಹಿಣೀ ವಹ್ನಿಸಂಯುತಾ ॥ ೧೫ ॥

ಮೈತ್ರೇಣ ಸಂಯುತಾ ಜ್ಯೇಷ್ಠಾ ಸಂತಾನಾದಿ ವಿನಾಶಿನೀ ।
ತತಃ ಸ್ಯುಸ್ತಿಥಯಃ ಪುಣ್ಯಾಃ ಕರ್ಮಾನುಷ್ಠಾನತೋ ದಿವಾ ॥ ೧೬ ॥

ರಾತ್ರಿವ್ರತೇಷು ಸರ್ವೇಷು ರಾತ್ರಿಯೋಗೋ ವಿಶಿಷ್ಯತೇ ।
ತಿಥಿರ್ನಕ್ಷತ್ರಯೋಗೇನ ಯಾ ಪುಣ್ಯಾ ಪರಿಕೀರ್ತಿತಾ ॥ ೧೭ ॥

ತಸ್ಯಾಂ ತು ತದ್ವ್ರತಂ ಕಾರ್ಯಂ ಸೈವ ಕಾರ್ಯಾ ವಿಚಕ್ಷಣೈಃ ।
ಉದಯವ್ಯಾಪಿನೀ ಗ್ರಾಹ್ಯಾ ಶ್ರವಣದ್ವಾದಶೀವ್ರತೇ ॥ ೧೮ ॥

ಸೂರ್ಯೇಂದುಗ್ರಹಣೇ ಯಾವತ್ತಾವದ್ಗ್ರಾಹ್ಯಾ ಜಪಾದಿಷು ।
ಸಂಕ್ರಾಂತಿಷು ತು ಸರ್ವಾಸು ಪುಣ್ಯಕಾಲೋ ನಿಗದ್ಯತೇ ॥ ೧೯ ॥

---

ವಾದ ಮೂಲಾನಕ್ಷತ್ರ, ವಹ್ನಿ (ಕೃತ್ತಿಕಾ) ಯುಕ್ತವಾದ ರೋಹಿಣೀನಕ್ಷತ್ರ, ಮೈತ್ರ (ಅನೂರಾಧ) ಯುತವಾದ ಜ್ಯೇಷ್ಠಾನಕ್ಷತ್ರ ಇವುಗಳು ವ್ರತಾಚರಣೆಗೆ ಪ್ರಶಸ್ತವಲ್ಲ. ಅಂತಹ ಕಾಲದಲ್ಲಿ ವ್ರತಮಾಡಿದರೆ ಸಂತಾನಾದಿಗಳು ನಾಶವಾಗುತ್ತವೆ. ಹಗಲಿನಲ್ಲಿ ಕರ್ಮಗಳನ್ನಾಚರಿಸಲು ಯೋಗ್ಯವಾದ ತಿಥಿಗಳು ಪುಣ್ಯಕರ ತಿಥಿಗಳೆನಿಸುವುವು.

೧೭-೧೮. ರಾತ್ರಿಕಾಲದಲ್ಲಿ ಮಾಡುವ ಸಮಸ್ತ ವ್ರತಗಳಲ್ಲಿಯೂ ರಾತ್ರಿಯೋಗವೇ ಶ್ರೇಷ್ಠವು. ನಕ್ಷತ್ರಯೋಗದಿಂದ ಪುಣ್ಯಕರವೆಂದು ವಿಹಿತವಾಗಿರುವ ತಿಥಿಯಲ್ಲಿಯೇ ಆ ವ್ರತವನ್ನು ಆಚರಿಸಬೇಕು. ಜ್ಞಾನಿಗಳು ಅಂತಹುದನ್ನೇ ಮಾಡಬೇಕು. ಶ್ರವಣದ್ವಾದಶೀವ್ರತಕ್ಕೆ ಉದಯವ್ಯಾಪ್ತಿಯೇ ಪ್ರಶಸ್ತವು.

೧೯. ಸೂರ್ಯಚಂದ್ರಗ್ರಹಣಗಳಲ್ಲಿ ಸ್ಪರ್ಶಕಾಲದಿಂದ ಮೋಕ್ಷಪರ್ಯಂತವಾಗಿ ಜಪಾದಿಗಳಿಗೆ ಯೋಗ್ಯಕಾಲವು. ಸಕಲ ಸಂಕ್ರಮಣಗಳಲ್ಲಿಯೂ ಪುಣ್ಯಕಾಲವನ್ನು ಹೇಳುವೆನು.

ಸ್ನಾನದಾನಜಪಾದೀನಾಂ ಕುರ್ವತಾಮಕ್ಷಯಂ ಫಲಂ ।
ತತ್ರ ಕರ್ಕಟಕೋ ಜ್ಞೇಯೋ ದಕ್ಷಿಣಾಯನಸಂಕ್ರಮಃ ॥ ೨೦ ॥

ಪೂರ್ವತೋ ಘಟಿಕಾಸ್ತ್ರಿಂಶತ್ಪುಣ್ಯಕಾಲಂ ವಿದುರ್ಬುಧಾಃ ।
ವೃಷಭೇ ವೃಶ್ಚಿಕೇ ಚೈವ ಸಿಂಹೇ ಕುಂಭೇ ತಥೈವ ಚ ॥ ೨೧ ॥

ಪೂರ್ವಮಷ್ಟಮುಹೂರ್ತಾಸ್ತು ಗ್ರಾಹ್ಯಾ ಸ್ನಾನಜಪಾದಿಷು ।
ತುಲಾಯಾಂ ಚೈವ ಮೇಷೇ ಚ ಪೂರ್ವತಃ ಪರತಸ್ತಥಾ ॥ ೨೨ ॥

ಜ್ಞೇಯಾ ದಶೈವ ಘಟಿಕಾ ದತ್ತಸ್ಯಾಕ್ಷಯತಾವಹಾಃ ।
ಕನ್ಯಾಯಾಂ ಮಿಥುನೇ ಚೈವ ಮೀನೇ ಧನುಷಿ ಚ ದ್ವಿಜ ॥ ೨೩ ॥

ಘಟಿಕಾಃ ಷೋಡಶ ಜ್ಞೇಯಾಃ ಪರತಃ ಪುಣ್ಯದಾಯಕಾಃ ।
ಮಾಕರಂ ಸಂಕ್ರಮಂ ಪ್ರಾಹುರುತ್ತರಾಯಣಸಂಜ್ಞಕಂ ॥ ೨೪ ॥

---

೨೦. ಆಸಮಯದಲ್ಲಿ ಸ್ನಾನ, ದಾನ, ಜಪ ಮುಂತಾದುವುಗಳನ್ನು ಮಾಡುವವರಿಗೆ ಅಕ್ಷಯವಾದ ಫಲವು ಬರುತ್ತದೆ. ಆ ಸಂಕ್ರಮಣಗಳಲ್ಲಿ ಕರ್ಕಾಟಕಸಂಕ್ರಮಣವು ದಕ್ಷಿಣಾಯನ ಪುಣ್ಯಕಾಲವೆಂದು ತಿಳಿಯಬೇಕು.

೨೧. ಆ ಸಂಕ್ರಮಣದಲ್ಲಿ ಸಂಕ್ರಮಣಕ್ಕೆ ಪೂರ್ವದ ಮೂವತ್ತು ಘಳಿಗೆಗಳು ಪುಣ್ಯಕಾಲವೆಂದು ಜ್ಞಾನಿಗಳು ತಿಳಿದಿರುವರು. ವೃಷಭ, ವೃಶ್ಚಿಕ, ಸಿಂಹ ಮತ್ತು ಕುಂಭ ಈ ನಾಲ್ಕು ಸಂಕ್ರಮಣಗಳಲ್ಲಿ ಪೂರ್ವ ಹದಿನಾರು ಘಳಿಗೆಯು ಕಾಲ ಸ್ನಾನ, ದಾನ, ಜಪ ಮುಂತಾದುವುಗಳಿಗೆ ಯೋಗ್ಯವಾದ ಪರ್ವಕಾಲವು.

೨೨-೨೪. ತುಲಾ ಮತ್ತು ಮೇಷಸಂಕ್ರಮಣಗಳಲ್ಲಿ ಹಿಂದೆ ಮತ್ತು ಮುಂದೆಯೂ ಸಹ ಹತ್ತು ಘಳಿಗೆಗಳು ಮಾತ್ರ ದಾನಾದಿ ಕರ್ಮಗಳಿಗೆ ಅಕ್ಷಯಕಾರಕವಾದ ಪುಣ್ಯಕಾಲವು. ದ್ವಿಜನೇ! ಕನ್ಯಾ, ಮಿಥುನ, ಮೀನ, ಧನುಸ್ಸು ಈ ಸಂಕ್ರಮಣಗಳಲ್ಲಿ ಸಂಕ್ರಮಣಪ್ರವೇಶಾನಂತರ ಹದಿನಾರು ಘಳಿಗೆಗಳು ಪುಣ್ಯಕಾಲವು. ಮಕರಸಂಕ್ರಮಣಕ್ಕೆ ಉತ್ತರಾಯಣಪುಣ್ಯಕಾಲವೆಂದು ಹೆಸರು.

ಪರಾಸ್ತ್ರಿಂಶಚ್ಚ ಘಟಿಕಾಶ್ಚತ್ವಾರಿಂಶಚ್ಚ ಪೂರ್ವವತ್ ।
ಆದಿತ್ಯಶೀತಕಿರಣೌ ಗ್ರಾಹ್ಯಾವಸ್ತಂ ಗತೌ ಯದಿ ॥ ೨೫ ॥

ಸ್ನಾತ್ವಾ ಭುಂಜೀತ ವಿಪ್ರೇಂದ್ರ ಪರೇದ್ಯುಃ ಶುದ್ಧಮಂಡಲಂ ।
ದೃಷ್ಟಚಂದ್ರಾ ಸಿನೀವಾಲೀ ನಷ್ಟಚಂದ್ರಾ ಕುಹೂಃ ಸ್ಮೃತಾ ॥ ೨೬ ॥

ಅಮಾವಾಸ್ಯಾ ದ್ವಿಧಾ ಪ್ರೋಕ್ತಾ ವಿದ್ವದ್ಭಿರ್ಧರ್ಮಲಿಪ್ಸುಭಿಃ ।
ಸಿನೀವಾಲೀ ದ್ವಿಜೈರ್ಗ್ರಾಹ್ಯಾ ಸಾಗ್ನಿಕೈಃ ಶ್ರಾದ್ಧಕರ್ಮಣಿ ॥ ೨೭ ॥

ಕುಹೂಃಸ್ತ್ರೀಭಿಸ್ತಥಾ ಶೂದ್ರೈರಪಿ ವಾSನಗ್ನಿಕೈಸ್ತಥಾ ।
ಅಪರಾಹ್ಣದ್ವಯವ್ಯಾಪಿನ್ಯಮಾವಾಸ್ಯಾ ತಿಥಿರ್ಯದಿ ॥ ೨೮ ॥

ಕ್ಷಯೇ ಪೂರ್ವಾ ತು ಕರ್ತವ್ಯಾ ವೃದ್ಧೌ ಕಾರ್ಯಾ ತಥೋತ್ತರಾ ।
ಅಮಾವಾಸ್ಯಾ ಪ್ರತೀತಾ ಚೇನ್ಮಧ್ಯಾಹ್ನಾತ್ಪರತೋ ಯದಿ ॥ ೨೯ ॥

---

೨೫-೨೬. ಉತ್ತರಾಯಣದಲ್ಲಿ ಮುಂದಿನ ಮೂವತ್ತು ಘಳಿಗೆಗಳು ಅಥವಾ ನಲವತ್ತು ಘಳಿಗೆಗಳು ಪರ್ವಕಾಲವು. ಸೂರ್ಯಚಂದ್ರರು ಗ್ರಸ್ತರಾಗಿ ಅಸ್ತಮಯವಾದರೆ ಪರದಿನದಲ್ಲಿ ಶುದ್ಧಮಂಡಲವನ್ನು ನೋಡಿ ಸ್ನಾನಮಾಡಿ ಭೋಜನಮಾಡಬೇಕು. ಚಂದ್ರನು ಸೂಕ್ಷ್ಮವಾಗಿ ಕಾಣಿಸುವ ಅಮಾವಾಸ್ಯೆಯು ಸಿನೀವಾಲೀ ಎನಿಸುವುದು. ಸಂಪೂರ್ಣವಾಗಿ ಚಂದ್ರನು ಕ್ಷಯಿಸಿದ ಅಮಾವಾಸ್ಯೆಯು ಕುಹೂ ಎನಿಸುವುದು.

೨೭. ಹೀಗೆ ಸಿನೀವಾಲೀ ಮತ್ತು ಕುಹೂ ಎಂಬುದಾಗಿ ಅಮಾವಾಸ್ಯೆಯು ಎರಡು ವಿಧವೆಂದು ಧರ್ಮಾಕಾಂಕ್ಷಿಗಳಾದ ವಿದ್ವಾಂಸರು ಹೇಳುವರು. ಸಾಗ್ನಿಕರಾದ ದ್ವಿಜರು ಶ್ರಾದ್ಧಕರ್ಮದಲ್ಲಿ ಸಿನೀವಾಲಿಯನ್ನು ಪರಿಗ್ರಹಿಸಬೇಕು.

೨೮-೨೯. ಕುಹೂ ಸಂಜ್ಞಿಕವಾದ ಅಮಾವಾಸ್ಯೆಯು ಸ್ತ್ರೀ ಶೂದ್ರರು ಮತ್ತು ಅನಗ್ನಿಕರಿಗೆ ಗ್ರಾಹ್ಯವು. ಅಮಾವಾಸ್ಯೆಯ ತಿಥಿಯು ಅಪರಾಹ್ಣದ್ವಯವ್ಯಾಪಿಯಾಗಿದ್ದರೆ ಕ್ಷಯಪಕ್ಷದಲ್ಲಿ ಪೂರ್ವದಿನದಲ್ಲಿಯೂ, ವೃದ್ಧಿಪಕ್ಷದಲ್ಲಿ ಪರದಿನದಲ್ಲಿಯೂ ದರ್ಶಾದಿಗಳನ್ನಾಚರಿಸಬೇಕು.

ಭೂತವಿದ್ಧೇತಿ ವಿಖ್ಯಾತಾ ಸದ್ಭಿಃ ಶಾಸ್ತ್ರವಿಶಾರದೈಃ ।
ಅತ್ಯಂತ ಕ್ಷಯಪಕ್ಷೇ ತು ಪರೇದ್ಯುರ್ನಾಪರಾಣ್ಹಗಾ ॥ ೩೦ ॥

ತತ್ರ ಗ್ರಾಹ್ಯಾ ಸಿನೀವಾಲೀ ಸಾಯಾಹ್ನವ್ಯಾಪಿನೀ ತಿಥಿಃ ।
ಅರ್ವಾಚೀನಕ್ಷಯೇ ಚೈವ ಸಾಯಾಹ್ನವ್ಯಾಪಿನೀ ತಥಾ ॥ ೩೧ ॥

ಸಿನೀವಾಲೀ ಪರಾಗ್ರಾಹ್ಯಾ ಸರ್ವಥಾ ಶ್ರಾದ್ಧಕರ್ಮಣಿ ।
ಅತ್ಯಂತ ತಿಥಿವೃದ್ಧೌ ತು ಭೂತವಿದ್ಧಾಂ ಪರಿತ್ಯಜೇತ್ ॥ ೩೨ ॥

ಗ್ರಾಹ್ಯಾ ಸ್ಯಾದಪರಾಣ್ಹಸ್ಥಾ ಕುಹೂಃ ಪೈತೃಕರ್ಮಣಿ ।
ಯಥಾರ್ವಾಚೀನವೃದ್ಧೌ ತು ಸಂತ್ಯಾಜ್ಯಾ ಭೂತಸಂಯುತಾ ॥ ೩೩ ॥

ಪರೇದ್ಯುರ್ವಿಬುಧಶ್ರೇಷ್ಠೈಃ ಕುಹೂರ್ಗ್ರಾಹ್ಯಾ ಪರಾಣ್ಹಗಾ ।
ಮಧ್ಯಾಹ್ನದ್ವಿತಯೇ ವ್ಯಾಪ್ತಾಹ್ಯಮಾವಾಸ್ಯಾತಿಥಿರ್ಯದಿ ॥ ೩೪ ॥

---

೨೯-೩೦. ಮಧ್ಯಾಹ್ನದಮೇಲೆ ಅಮಾವಾಸ್ಯೆ ತಿಥಿಯು ಬಂದರೆ ಅದನ್ನು ಭೂತವಿದ್ಧಾ ಎಂಬುದಾಗಿ ಶಾಸ್ತ್ರಾಭಿಜ್ಞರಾದ ಸಜ್ಜನರು ಹೇಳುತ್ತಾರೆ.

೩೦-೩೧. ಅತ್ಯಂತ ಕ್ಷಯಪಕ್ಷವಾಗಿದ್ದು ಮುಂದಿನ ದಿವಸ ಅಪರಾಣ್ಹದಲ್ಲಿ ಅಮಾವಾಸ್ಯೆಯಿಲ್ಲದಿದ್ದರೆ ಅಂತಹ ಸಂದರ್ಭದಲ್ಲಿ ಸಾಯಾಹ್ನವ್ಯಾಪಿಯಾದ ಸಿನೀವಾಲೀತಿಥಿಯು ಶ್ರಾದ್ಧಾದಿಗಳಿಗೆ ಗ್ರಾಹ್ಯವು.

೩೧-೩೨. ಅರ್ವಾಚೀನ ಕ್ಷಯ ಎಂದರೆ ಮಧ್ಯಮಕ್ಷಯಪಕ್ಷದಲ್ಲಿ ಶ್ರಾದ್ಧಕರ್ಮಕ್ಕೆ ಸಾಯಂಕಾಲವ್ಯಾಪಿಯಾದ ಸಿನೀವಾಲೀತಿಥಿಯೇ ಗ್ರಾಹ್ಯವು. ಅತ್ಯಂತತಿಥಿವೃದ್ಧಿಪಕ್ಷದಲ್ಲಿ ಭೂತವಿದ್ಧತಿಥಿಯನ್ನು ಬಿಡಬೇಕು.

೩೩. ಪಿತೃಶ್ರಾದ್ಧದಲ್ಲಿ ಅಪರಾಣ್ಹಕಾಲದಲ್ಲಿರುವ ಕುಹೂ ಎಂಬ ಅಮಾವಾಸ್ಯೆಯ ತಿಥ್ಯಂಶವೇ ಗ್ರಾಹ್ಯವು. ಹಿಂದಿನಂತೆಯೇ; ಅರ್ವಾಚೀನವೃದ್ಧಿಪಕ್ಷದಲ್ಲಿ ಭೂತವಿದ್ಧವಾದ ಕುಹೂ ಎಂಬ ಅಮಾವಾಸ್ಯೆಯನ್ನು ತ್ಯಜಿಸಬೇಕು.

೩೪-೩೫. ಪರದಿನ ಅಪರಾಣ್ಹಕಾಲವ್ಯಾಪಿಯಾದ ಕುಹೂತಿಥ್ಯಂಶವು ಜ್ಞಾತಿವರೇಣ್ಯರಿಗೆ ಗ್ರಾಹ್ಯವಾಗಿದೆ. ಅಮಾವಾಸ್ಯೆತಿಥಿಯು ಎರಡು ದಿನಗಳ

ತತ್ರೇಚ್ಛಯಾ ಚ ಸಂಗ್ರಾಹ್ಯಾ ಪೂರ್ವಾ ವಾಽಥ ಪರಾಽಥವಾ ।
ಅನ್ವಾಧಾನಂ ಪ್ರವಕ್ಷ್ಯಾಮಿ ಮತಂ ಸಂಪೂರ್ಣಪರ್ವಣಿ ॥ ೩೫ ॥

ಪ್ರತಿಪದ್ದಿವಸೇ ಕುರ್ಯಾದ್ಯಾಗಂ ಚ ಮುನಿಸತ್ತಮ ।
ಪರ್ವಣೋ ಯಶ್ಚತುರ್ಥಾಂಶ ಆದ್ಯಾಃ ಪ್ರತಿಪದಸ್ತ್ರಯಃ ॥ ೩೬ ॥

ಯಾಗಕಾಲಸ್ಸವಿಜ್ಞೇಯಃ ಪ್ರಾತರುಕ್ತೋ ಮನೀಷಿಭಿಃ ।
ಮಧ್ಯಾಹ್ನದ್ವಿತಯೇ ಸ್ಯಾತಾಮಮಾವಾಸ್ಯಾ ಚ ಪೂರ್ಣಿಮಾ ॥ ೩೭ ॥
ಪರೇದ್ಯುರೇವ ವಿಪ್ರೇಂದ್ರ ಸದ್ಯಃ ಕಾಲೋ ವಿಧೀಯತೇ ॥ ೩೮ ॥

ಪೂರ್ವದ್ವಯೇ ಪರೇದ್ಯುಃ ಸ್ಯಾತ್ಸಂಗವಾತ್ಪರತೋ ಯದಿ ।
ಸದ್ಯಃ ಕಾಲಃ ಪರೇದ್ಯುಃ ಸ್ಯಾದ್ಜ್ಞೇಯಮೇವಂ ತಿಥಿಕ್ಷಯೇ ॥ ೩೯ ॥

---

ಲ್ಲಿಯೂ ಮಧ್ಯಾಹ್ನವ್ಯಾಪಿಯಾಗಿದ್ದರೆ ತನ್ನ ಇಚ್ಛಾನುಸಾರವಾಗಿ ಪೂರ್ವ ಅಥವಾ ಪರವನ್ನು ಪರಿಗ್ರಹಿಸಬೇಕು.

೩೫. ಸಂಪೂರ್ಣಪರ್ವ ಎಂದರೆ ತುಂಬಿದ ಪೂರ್ಣಿಮಾ ಮತ್ತು ಅಮಾವಾಸ್ಯೆಗಳಲ್ಲಿ ಕರ್ತವ್ಯವಾದ ಅನ್ವಾಧಾನವಿಧಾನವನ್ನು ಹೇಳುತ್ತೇನೆ ಕೇಳು.

೩೬-೩೮. ಮುನಿಶ್ರೇಷ್ಠನೇ ! ಪಾಡ್ಯದ ದಿನ ಯಾಗಮಾಡಬೇಕು, ಪರ್ವತಿಥಿಯ ನಾಲ್ಕನೆಯ ಭಾಗ ಮತ್ತು ಪಾಡ್ಯದ ಮೊದಲನೆಯ ಮೂರು ಭಾಗಗಳೂ ಸಹ ಯಾಗಕಾಲವೆಂದು ತಿಳಿಯಬೇಕು. ಅದರಲ್ಲಿಯೂ ಪ್ರಾತಃಕಾಲವು ಪ್ರಶಸ್ತವೆಂದು ಜ್ಞಾನಿಗಳು ಹೇಳುತ್ತಾರೆ. ಅಮಾವಾಸ್ಯೆ ಮತ್ತು ಪೂರ್ಣಿಮಾ ಇವೆರಡೂ, ಎರಡು ದಿನಗಳಲ್ಲಿಯೂ ಮಧ್ಯಾಹ್ನಕಾಲದಲ್ಲಿದ್ದರೆ ಪರದಿನವೇ ಪ್ರಶಸ್ತವೆಂದು ವಿಹಿತವಾಗಿದೆ.

೩೯. ಅಮಾವಾಸ್ಯೆ ಮತ್ತು ಪೂರ್ಣಿಮೆಗಳೆರಡೂ ಪರದಿನದಲ್ಲಿ ಸಂಗಮಕಾಲಕ್ಕಿಂತ ಮುಂದೆ ವ್ಯಾಪಿಸಿದ್ದಲ್ಲಿ ತಿಥಿಕ್ಷಯಪಕ್ಷವಾಗಿದ್ದರೆ ಪರದಿನವೇ ಸದ್ಯಃಕಾಲವೆಂಬುದಾಗಿ ತಿಳಿದು ಅದರಲ್ಲಿಯೇ ಕರ್ಮಾನುಷ್ಠಾನಮಾಡಬೇಕು.

ಸರ್ವೈರೇಕಾದಶೀ ಗ್ರಾಹ್ಯಾ ದಶಮೀಪರಿವರ್ಜಿತಾ ।
ದಶಮ್ಯಾ ಸಂಯುತಾ ಹಂತಿ ಪುಣ್ಯಂ ಜನ್ಮತ್ರಯಾರ್ಜಿತಂ ॥ ೪೦ ॥

ಏಕಾದಶೀ ಕಲಾಮಾತ್ರಾ ದ್ವಾದಶ್ಯಾಂ ತು ಪ್ರತೀಯತೇ ।
ದ್ವಾದಶೀ ಚ ತ್ರಯೋದಶ್ಯಾಮಸ್ತಿ ಚೇತ್ಸಾ ಪರಾ ಸ್ಮೃತಾ ॥ ೪೧ ॥

ಸಂಪೂರ್ಣೈಕಾದಶೀ ಶುದ್ಧಾ ದ್ವಾದಶ್ಯಾಂ ಚ ಪ್ರತೀಯತೇ ।
ತ್ರಯೋದಶೀ ಚ ರಾತ್ರ್ಯಂತೇ ತತ್ರ ವಕ್ಷ್ಯಾಮಿ ನಿರ್ಣಯಂ ॥ ೪೨ ॥

ಪೂರ್ವಾ ಗೃಹಸ್ಥೈಃ ಕಾರ್ಯಾ ಸ್ಯಾದುತ್ತರಾ ಯತಿಭಿಸ್ತಥಾ ।
ಗೃಹಸ್ಥಾ ವೃದ್ಧಿಮಿಚ್ಛಂತಿ ಯತಯೋ ಮೋಕ್ಷಂ ಯತೀಶ್ವರಾಃ ॥ ೪೩ ॥

---

೪೦. ಸರ್ವರೂ ದಶಮೀಸಂಬಂಧವಿಲ್ಲದ ಏಕಾದಶೀತಿಥಿಯನ್ನೇ ಉಪವಾಸಾದಿವ್ರತಕ್ಕೆ ಉಪಯೋಗಿಸಕೊಳ್ಳಬೇಕು. ದಶಮೀತಿಥಿಯಿಂದ ಕೂಡಿದ ಏಕಾದಶೀತಿಥಿಯು ಮೂರು ಜನ್ಮಗಳಲ್ಲಿ ಸಂಪಾದಿಸಿದ ಪುಣ್ಯವನ್ನು ನಾಶ ಮಾಡುತ್ತದೆ.

೪೧. ದ್ವಾದಶಿಯ ದಿನದಲ್ಲಿ ಏಕಾದಶೀತಿಥಿಯು ಕಲಾಮಾತ್ರ ಕಂಡು ಬಂದರೆ ಅದು ಮತ್ತು ತ್ರಯೋದಶಿಯ ದಿನದಲ್ಲಿ ಕಾಣಿಸುವ ದ್ವಾದಶೀತಿಥಿಯೂ ಸಹ ಉತ್ತಮವೆಂದು ಉಕ್ತವಾಗಿದೆ.

೪೨. ಏಕಾದಶೀತಿಥಿಯು ಶುದ್ಧವಾಗಿ ಸಂಪೂರ್ಣವಾಗಿದ್ದರೆ, ದ್ವಾದಶಿಯ ದಿನ ರಾತ್ರ್ಯಂತದಲ್ಲಿ ತ್ರಯೋದಶಿಯಿದ್ದರೆ ಆಗ ಕರ್ತವ್ಯನಿರ್ಣಯವನ್ನು ಹೇಳುತ್ತೇನೆ.

೪೩. ಗೃಹಸ್ಥಾಶ್ರಮಿಗಳು ವೃದ್ಧಿಯನ್ನು ಅಪೇಕ್ಷಿಸುತ್ತಾರೆ. ಯತಿಶ್ರೇಷ್ಠರು ಮೋಕ್ಷವನ್ನು ಬಯಸುತ್ತಾರೆ. ಆದುದರಿಂದ ಪೂರ್ವ ಎಂದರೆ ಶುದ್ಧೈಕಾದಶಿಯನ್ನು ಗೃಹಸ್ಥರು, ಮುಂದಿನದು ಎಂದರೆ ಪೂರ್ವೋಕ್ತದ್ವಾದಶಿಯನ್ನು ಯತಿಗಳೂ ಆಚರಿಸಬೇಕು.

ದ್ವಾದಶ್ಯಾಂ ತು ಕಲಾಯಾಂ ವಾ ಯದಿ ಲಭ್ಯೇತ ಪಾರಣಾ ।
ತದಾನೀಂ ದಶಮೀ ವಿದ್ಧಾಪ್ಯುಪೋಷ್ಯೈಕಾದಶೀ ತಿಥಿಃ ॥ ೪೪ ॥

ಶುಕ್ಲೇ ವಾ ಯದಿ ಕೃಷ್ಣೇ ಭವೇದೇಕಾದಶೀದ್ವಯಂ ।
ಗೃಹಸ್ಥಾನಾಂ ತು ಪೂರ್ವೋಕ್ತಾ ಯತೀನಾಮುತ್ತರಾ ಸ್ಮೃತಾ ॥ ೪೫ ॥

ದ್ವಾದಶ್ಯಾಂ ವಿದ್ಯತೇ ಕಿಂಚಿದ್ದಶಮೀ ಸಂಯುತಾ ಯದಿ ।
ದಿನಕ್ಷಯೇ ದ್ವಿತೀಯೈವ ಸರ್ವೇಷಾಂ ಪರಿಕೀರ್ತಿತಾ ॥ ೪೬ ॥

ವಿದ್ಧಾಪ್ಯೇಕಾದಶೀ ಗ್ರಾಹ್ಯಾ ಪರತೋ ದ್ವಾದಶೀ ನಚೇತ್ ।
ಅವಿದ್ಧಾಪಿ ನಿಷಿದ್ಧೈವ ಪರತೋ ದ್ವಾದಶೀ ಯದಿ ॥ ೪೭ ॥

ಏಕಾದಶೀ ದ್ವಾದಶೀ ಚ ರಾತ್ರಿಶೇಷೇ ತ್ರಯೋದಶೀ ।
ದ್ವಾದಶದ್ವಾದಶೀಪುಣ್ಯಂ ತ್ರಯೋದಶ್ಯಾಂ ತು ಪಾರಣೇ ॥ ೪೮ ॥

---

೪೪. ಕಲಾಮಾತ್ರ ದ್ವಾದಶಿಯಲ್ಲಾದರೂ ಪಾರಣೆಯು ಲಭಿಸುವುದಾದರೆ ಆಗ ದಶಮೀವಿದ್ಧವಾದಾಗ್ಯೂ ಏಕಾದಶೀ ತಿಥಿಯಲ್ಲಿ ಉಪವಾಸ ಮಾಡಬೇಕು.

೪೫. ಶುಕ್ಲಪಕ್ಷ ಅಥವಾ ಕೃಷ್ಣಪಕ್ಷದಲ್ಲಿ ಎರಡು ಏಕಾದಶಿಗಳು ಸಂಭವಿಸಿದರೆ ಮೊದಲನೆಯದು ಗೃಹಸ್ಥರಿಗೂ ಎರಡನೆಯದು ಯತಿಗಳಿಗೂ ಕರ್ತವ್ಯವೆಂದು ಉಕ್ತವಾಗಿದೆ.

೪೬. ದ್ವಾದಶಿಯ ದಿನ ಸ್ವಲ್ಪ ದಶಮೀತಿಥಿಯಿಂದ ಸಹಿತವಾದ ಏಕಾದಶೀ ತಿಥಿಯಿದ್ದರೆ ದಿನಕ್ಷಯವಾಗಿರುವ ಸಂದರ್ಭದಲ್ಲಿ ಎರಡನೆಯ ದಿವಸವೇ ಸರ್ವರಿಗೂ ಉಪವಾಸ (ಏಕಾದಶಿಯ ಅನುಷ್ಠಾನ) ವೆಂದು ಉಕ್ತವಾಗಿದೆ.

೪೭. ದ್ವಾದಶಿಗೆ ಪರದಿನವ್ಯಾಪ್ತಿಯಿಲ್ಲದಿದ್ದಲ್ಲಿ ವಿದ್ಧವಾದರೂ ಸಹ ಏಕಾದಶಿಯು ಗ್ರಾಹ್ಯವು. ದ್ವಾದಶಿಗೆ ಪರದಿನವ್ಯಾಪ್ತಿಯಿದ್ದರೆ ವಿದ್ಧವಲ್ಲದಿದ್ದಾಗ್ಯೂ ಅದು ನಿಷಿದ್ಧವೆಂದು ನಿರ್ಣಯವು.

೪೮. ಏಕಾದಶೀ ದ್ವಾದಶೀತಿಥಿಯು ಅದರ ರಾತ್ರಿಯ ಶಿಷ್ಟಭಾಗದಲ್ಲಿ ತ್ರಯೋದಶಿಯ ಸಂಬಂಧವಿದ್ದಾಗ ತ್ರಯೋದಶಿಯ ಭಾಗದಲ್ಲಿ ಪಾರಣೆಮಾಡಿದರೆ ಹನ್ನೆರಡು ದ್ವಾದಶಿಗಳ ಪುಣ್ಯವು ಬರುತ್ತದೆ.

ಏಕಾದಶೀ ಕಲಾಮಾತ್ರಾ ವಿದ್ಯತೇ ದ್ವಾದಶೀದಿನೇ ।
ದ್ವಾದಶೀ ಚ ತ್ರಯೋದಶ್ಯಾಂ ನಾಸ್ತಿ ವಾ ವಿದ್ಯತೇಽಥವಾ ॥ ೪೯ ॥

ವಿದ್ಧಾಪ್ಯೇಕಾದಶೀ ತತ್ರ ಪೂರ್ವಾ ಸ್ಯಾದ್ಗೃಹಿಣಾಂ ತದಾ ।
ಯತಿಭಿಶ್ಚೋತ್ತರಾ ಗ್ರಾಹ್ಯಾ ಹ್ಯವೀರಾಭಿಸ್ತಥೈವ ಚ ॥ ೫೦ ॥

ಸಂಪೂರ್ಣೈಕಾದಶೀ ಶುದ್ಧಾ ದ್ವಾದಶ್ಯಾಂ ನಾಸ್ತಿ ಕಿಂಚನ ।
ದ್ವಾದಶೀ ಚ ತ್ರಯೋದಶ್ಯಾಮಸ್ತಿ ತತ್ರ ಕಥಂ ಭವೇತ್ ॥ ೫೧ ॥

ಪೂರ್ವಾ ಗೃಹಸ್ಥೈಃ ಕಾರ್ಯಾತ್ರ ಯತಿಭಿಶ್ಚೋತ್ತರಾ ತಿಥಿಃ ।
ಉಪೋಷ್ಯೈವ ದ್ವಿತೀಯೇತಿ ಕೇಚಿದಾಹುಶ್ಚ ಭಕ್ತಿತಃ ॥ ೫೨ ॥

ಏಕಾದಶೀ ಯಥಾ ವಿದ್ಧಾ ದ್ವಾದಶ್ಯಾಂ ನ ಪ್ರತೀಯತೇ ।
ದ್ವಾದಶೀ ಚ ತ್ರಯೋದಶ್ಯಾಂ ನಾಸ್ತಿ ತತ್ರ ಕಥಂ ಭವೇತ್ ॥ ೫೩ ॥

---

೪೯-೫೦. ದ್ವಾದಶಿಯ ದಿನ ಏಕಾದಶಿಯು ಕಲಾಮಾತ್ರವಿದ್ದು, ತ್ರಯೋದಶಿಯಲ್ಲಿ ದ್ವಾದಶಿಯು ಇಲ್ಲದಿದ್ದರೂ ಅಥವಾ ಇದ್ದರೂ ಆಗ ವಿದ್ಧವಾಗಿ ದ್ದಾಗ್ಯೂ ಹಿಂದಿನದಿನವೇ ಏಕಾದಶಿಯು ಗೃಹಸ್ಥರಿಗೆ ಕರ್ತವ್ಯವು. ಯತಿ ಮತ್ತು ಪತಿಪುತ್ರಹೀನರಾದ ಸ್ತ್ರೀಯರು ಪರದಿನದಲ್ಲಿ ಏಕಾದಶಿಯನ್ನಾಚರಿಸಬೇಕು.

೫೧. ಸಂಪೂರ್ಣವಾಗಿ ಶುದ್ಧೈಕಾದಶಿಯು, ದ್ವಾದಶಿಯ ದಿನ ತಿಥ್ಯಂತರ ಸಂಪರ್ಕವಿಲ್ಲದೇ ಇದ್ದು, ದ್ವಾದಶಿಯು ತ್ರಯೋದಶಿಯಲ್ಲಿದ್ದರೆ ಆಗ ಹೇಗೆ ಆಚರಿಸಬೇಕು ?

೫೨. ಅಂತಹ ಸಂದರ್ಭದಲ್ಲಿ ಗೃಹಸ್ಥರು ಪೂರ್ವತಿಥಿಯಲ್ಲಿಯೂ, ಯತಿಗಳು ಉತ್ತರತಿಥಿಯಲ್ಲಿಯೂ ಉಪವಾಸಮಾಡಬೇಕು. ಕೆಲವರು ಎರಡನೆಯ ದಿನದಲ್ಲಿಯೇ ಸರ್ವರೂ ಉಪವಾಸಮಾಡಬೇಕೆಂದು ಹೇಳುತ್ತಾರೆ.

೫೩. ಏಕಾದಶಿಯು ವಿದ್ಧವಾಗಿ ದ್ವಾದಶಿಯಲ್ಲಿಲ್ಲದೆಯೂ, ದ್ವಾದಶಿಯು ತ್ರಯೋದಶಿಯಲ್ಲಿಲ್ಲದೆಯೂ ಇದ್ದಾಗ ಹೇಗೆ ಆಚರಿಸಬೇಕು ?

ಉಪ್ರೋಷ್ಯಾ ದ್ವಾದಶೀ ಶುದ್ಧಾ ಸರ್ವೈರೇವ ನ ಸಂಶಯಃ ।
ಕೇಚಿದಾಹುಶ್ಚ ಪೂರ್ವಾಂ ತು ತನ್ಮತಂ ನ ಸಮಂಜಸಂ ॥ ೫೪ ॥

ಸಂಕ್ರಾಂತೌ ರವಿವಾರೇ ಚ ಪಾತಗ್ರಹಣಯೋಸ್ತಥಾ ।
ಪಾರಣಂ ಚೋಪವಾಸಂ ಚ ನ ಕುರ್ಯಾತ್ಪುತ್ರವಾನ್ಗೃಹೀ ॥ ೫೫ ॥

ಅರ್ಕೇಽಹ್ನಿ ಪರ್ವರಾತ್ರೌ ಚ ಚತುರ್ದಶ್ಯಷ್ಟಮೀ ದಿವಾ ।
ಏಕಾದಶ್ಯಾಮಹೋರಾತ್ರಂ ಭುಕ್ತ್ವಾ ಚಾಂದ್ರಾಯಣಂ ಚರೇತ್ ॥ ೫೬ ॥

ಆದಿತ್ಯಗ್ರಹಣೇ ಪ್ರಾಪ್ತೇ ಪೂರ್ವಯಾಮತ್ರಯೇ ತಥಾ ।
ನಾದ್ಯಾದ್ವೈ ಯದಿ ಭುಂಜೀತ ಸುರಾಪೇನ ಸಮೋ ಭವೇತ್ ॥ ೫೭ ॥

ಅನ್ವಾಧಾನೇಷ್ಟಿಮಧ್ಯೇ ತು ಗ್ರಹಣೇ ಚಂದ್ರಸೂರ್ಯಯೋಃ ।
ಪ್ರಾಯಶ್ಚಿತ್ತಂ ಮುನಿಶ್ರೇಷ್ಠ ಕರ್ತವ್ಯಂ ತತ್ರ ಯಾಜ್ಞಿಕೈಃ ॥ ೫೮ ॥

---

೫೪. ಎಲ್ಲರೂ ಶುದ್ಧ ದ್ವಾದಶಿಯ ದಿನವೇ ಉಪವಾಸಮಾಡಬೇಕು. ಪೂರ್ವದಿನವೇ ಉಪವಾಸಮಾಡಬೇಕೆಂದು ಕೆಲವರು ಹೇಳುತ್ತಾರೆ. ಆ ಮತವು ಸರಿಯಾದುದಲ್ಲ.

೫೫. ಪುತ್ರವಂತನಾದ ಗೃಹಸ್ಥನು ಸಂಕ್ರಮಣ, ಭಾನುವಾರ, ವ್ಯತೀಪಾತ, ಗ್ರಹಣ ಈ ದಿನಗಳಲ್ಲಿ ಪಾರಣೆಯಾಗಲೀ, ಉಪವಾಸವಾಗಲೀ ಮಾಡಬಾರದು.

೫೬. ಸೋಮವಾರ ಹಗಲು, ಪರ್ವದಿನಗಳ ರಾತ್ರಿ ಮತ್ತು ಚತುರ್ದಶಿ ಅಷ್ಟಮಿದಿನಗಳ ಹಗಲು, ಏಕಾದಶಿಯಲ್ಲಿ ಹಗಲು ರಾತ್ರಿ ಈ ಕಾಲಗಳಲ್ಲಿ ಭೋಜನಮಾಡಿದರೆ ಚಾಂದ್ರಾಯಣವ್ರತವನ್ನಾಚರಿಸಬೇಕು.

೫೭. ಸೂರ್ಯಗ್ರಹಣವು ಬಂದಾಗ ಅದಕ್ಕೆ ಹಿಂದೆ ಮೂರು ಯಾಮಗಳಲ್ಲಿ ಭೋಜನಮಾಡಬಾರದು. ಆಗ ಭೋಜನಮಾಡಿದರೆ ಅಂತಹವನು ಮದ್ಯಪಾನಮಾಡಿದವನಿಗೆ ಸಮಾನನಾಗುವನು.

೫೮. ಅನ್ವಾಧಾನೇಷ್ಟಿಯನ್ನು ಮಾಡುತ್ತಿರುವಾಗ ಅದರ ಮಧ್ಯದಲ್ಲಿ ಚಂದ್ರಸೂರ್ಯರ ಗ್ರಹಣ ಬಂದರೆ ಮುನಿಶ್ರೇಷ್ಠನೇ! ಅಂತಹ ಸಂದರ್ಭದಲ್ಲಿ ಯಾಜ್ಞಿಕರು ಪ್ರಾಯಶ್ಚಿತ್ತವನ್ನು ಮಾಡಬೇಕು.

ಚಂದ್ರೋಪರಾಗೇ ಜುಹುಯಾದ್ದಶಮೋ ಸೋಮ ಇತ್ಯೃಚಾ ।
ಆಪ್ಯಾಯಸ್ವ ಋಚಾ ಚೈವ ಸೋಮಪಾಸ್ತ ಇತಿ ದ್ವಿಜ ॥ ೫೯ ॥

ಸೂರ್ಯೋಪರಾಗೇ ಜುಹುಯಾದುದುತ್ಯಂ ಜಾತವೇದಸಂ ।
ಆಸತ್ಯೇ ನೋ ದ್ವಯಂ ಚೈವ ತ್ರಯೋ ಮಂತ್ರಾ ಉದಾಹೃತಾಃ ॥ ೬೦ ॥

ಏವಂ ತಿಥಿಂ ವಿನಿಶ್ಚಿತ್ಯ ಸ್ಮೃತಿಮಾರ್ಗೇಣ ಪಂಡಿತಃ ।
ಯಃ ಕರೋತಿ ವ್ರತಾದೀನಿ ತಸ್ಯ ಸ್ಯಾದಕ್ಷಯಂ ಫಲಂ ॥ ೬೧ ॥

ವೇದಪ್ರಣಿಹಿತೋ ಧರ್ಮೋ ಧರ್ಮೈಸ್ತುಷ್ಯತಿ ಕೇಶವಃ ।
ತಸ್ಮಾದ್ಧರ್ಮಪರಾ ಯಾಂತಿ ತದ್ವಿಷ್ಣೋಃ ಪರಮಂ ಪದಂ ॥ ೬೨ ॥

---

೫೯. ಚಂದ್ರಗ್ರಹಣದಲ್ಲಿ 'ದಶಮೋ ಸೋಮ' 'ಆಪ್ಯಾಯಸ್ವ' 'ಸೋಮಪಾಸ್ತೇ' ಎಂಬೀ ಮಂತ್ರಗಳಿಂದ ಹೋಮಮಾಡಬೇಕು.

೬೦. ಸೂರ್ಯಗ್ರಹಣವಾದಾಗ 'ಉದುತ್ಯಂ ಜಾತವೇದಸಂ' ಮತ್ತು 'ಆಸತ್ಯೇ ನೋ' ಇತ್ಯಾದಿ ಮಂತ್ರದ್ವಯ ಈರೀತಿ ಮೂರು ಮಂತ್ರಗಳಿಂದ ಹೋಮಮಾಡಬೇಕು ಎಂಬುದಾಗಿ ಹೋಮಕ್ಕಾಗಿ ಮಂತ್ರಗಳು ಉಕ್ತವಾಗಿವೆ.

೬೧. ಪಂಡಿತನು ಸ್ಮೃತ್ಯುಕ್ತಪ್ರಕಾರ ಮೇಲೆ ಹೇಳಿದಂತೆ ತಿಥಿಗಳನ್ನು ನಿರ್ಣಯಿಸಿಕೊಂಡು ವ್ರತಾದಿಗಳ ಅನುಷ್ಠಾನವನ್ನು ಮಾಡಿದರೆ ಅಕ್ಷಯ ಫಲವು ಸಂಭವಿಸುತ್ತದೆ.

೬೨. ವೇದದಲ್ಲಿ ಕರ್ತವ್ಯವೆಂದು ವಿಧಿಸಲ್ಪಟ್ಟಿರುವುದೇ ಧರ್ಮವು. ಕೇಶವನು ಧರ್ಮಗಳಿಂದ ಸಂತೋಷಿಸುವನು. ಆದುದರಿಂದ ಧರ್ಮಾಚರಣೆಯಲ್ಲಿ ನಿರತರಾದವರು ವಿಷ್ಣುವಿನ ಪರಮಪದ ಎಂದರೆ ವೈಕುಂಠಾದಿ ಲೋಕವನ್ನು ಪಡೆಯುತ್ತಾರೆ.

ಧರ್ಮಾನ್ಯೇ ಕರ್ತುಮಿಚ್ಛಂತಿ ತೇ ವೈ ಕೃಷ್ಣಸ್ವರೂಪಿಣಃ ।
ತಸ್ಮಾತ್ತಾಂಸ್ತು ಭವವ್ಯಾಧಿಃ ಕದಾಚಿನ್ನೈವ ಬಾಧತೇ　　　॥ ೬೩ ॥

**ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ ಪ್ರಥಮಪಾದೇ ತಿಥ್ಯಾದಿನಿರ್ಣಯೋ ನಾಮೈಕೋನತ್ರಿಂಶೋಽಧ್ಯಾಯಃ**



---

೬೩. ಧರ್ಮಗಳನ್ನು ಮಾಡಬೇಕೆಂದಪೇಕ್ಷಿಸುವವರು ಶ್ರೀಕೃಷ್ಣನ ವಿಶೇಷಸನ್ನಿಧಾನಪಾತ್ರರಾಗುವರು. ಆದುದರಿಂದ ಸಂಸಾರಬಂಧವು ಅಂತಹವರನ್ನು ಯಾವಾಗಲೂ ಬಾಧಿಸುವುದೇ ಇಲ್ಲ.

ಇಂತು ಶ್ರೀಬೃಹನ್ನಾರದೀಯಪುರಾಣದೊಳು ಪೂರ್ವಭಾಗ ಪ್ರಥಮಪಾದದಲ್ಲಿ ತಿಥ್ಯಾದಿ ನಿರ್ಣಯವೆಂಬ ಇಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

**ಕಥಾಸಾರಾಂಶ**

ಶ್ರೌತ ಸ್ಮಾರ್ತ ವ್ರತದಾನಾದಿಗಳಿಗೆ ಪ್ರಶಸ್ತವಾದ ತಿಥಿಗಳ ನಿರ್ಣಯ, ಪೂರ್ವಾಪರ ವೇಧಾದಿಗಳು ಬಂದಾಗ ಗ್ರಾಹ್ಯಾಗ್ರಾಹ್ಯ ವಿವೇಚನೆ, ಹನ್ನೆರಡು ಸಂಕ್ರಮಣಗಳ ಪರ್ವಕಾಲದ ವಿಚಾರ, ದಶಮೀ ಏಕಾದಶೀ ದ್ವಾದಶೀಯೆಂಬ ದಿನತ್ರಯಗಳಲ್ಲಿನ ಕರ್ತವ್ಯನಿರೂಪಣೆ, ಅದರಲ್ಲಿ ವೇಧಾದಿಗಳ ವಿವರ, ಮಧ್ಯದಲ್ಲಿ ಸಂಭವಿಸುವ ಲೋಪಗಳಿಗೆ ಪ್ರಾಯಶ್ಚಿತ್ತ, ಧರ್ಮ, ಫಲ ಮುಂತಾದವುಗಳು ವಿಸ್ತಾರವಾಗಿ ಈ ಅಧ್ಯಾಯದಲ್ಲಿ ಸಂಗ್ರಹಿಸಲ್ಪಟ್ಟಿವೆ.



## ತ್ರಿಂಶೋಽಧ್ಯಾಯಃ

**ಸನಕ ಉವಾಚ**

**ಪ್ರಾಯಶ್ಚಿತ್ತವಿಧಿಂ ವಕ್ಷ್ಯೇ ಶೃಣು ನಾರದ ಸಾಂಪ್ರತಂ ।**
**ಪ್ರಾಯಶ್ಚಿತ್ತವಿಶುದ್ಧಾತ್ಮಾ ಸರ್ವಕರ್ಮಫಲಂ ಲಭೇತ್ ॥ ೧ ॥**

**ಪ್ರಾಯಶ್ಚಿತ್ತವಿಹೀನೈಸ್ತು ಯತ್ಕರ್ಮ ಕ್ರಿಯತೇ ಮುನೇ ।**
**ತತ್ಸರ್ವಂ ನಿಷ್ಫಲಂ ಪ್ರೋಕ್ತಂ ರಾಕ್ಷಸೈಃ ಪರಿಸೇವಿತಂ ॥ ೨ ॥**

**ಕಾಮಕ್ರೋಧವಿಹೀನಾಶ್ಚ ಸರ್ವಶಾಸ್ತ್ರವಿಶಾರದಾಃ ।**
**ಪ್ರಷ್ಟವ್ಯಾ ಬ್ರಾಹ್ಮಣಾ ಧರ್ಮೇ ಸರ್ವಧರ್ಮಫಲೇಚ್ಛುಭಿಃ ॥ ೩ ॥**

**ಪ್ರಾಯಶ್ಚಿತ್ತಾನಿ ಚೀರ್ಣಾನಿ ನಾರಾಯಣಪರಾಙ್ಮುಖೈಃ ।**
**ನಿಷುನ್ಪ ನಂತಿ ವಿಪ್ರೇಂದ್ರ ಸುರಾಭಾಂಡಮಿವಾಪಗಾಃ ॥ ೪ ॥**

---

### ಮೂವತ್ತನೆಯ ಅಧ್ಯಾಯವು

೧. ಸನಕನು ಹೇಳಿದನು—ನಾರದನೇ! ಈಗ ಪ್ರಾಯಶ್ಚಿತ್ತವಿಧಾನವನ್ನು ಹೇಳುತ್ತೇನೆ ಕೇಳು. ಪ್ರಾಯಶ್ಚಿತ್ತದಿಂದ ಪರಿಶುದ್ಧನಾದ ಮನುಜನು ಸಮಸ್ತ ಕರ್ಮಗಳ ಫಲವನ್ನೂ ಹೊಂದುವನು.

೨. ಮುನಿಯೇ! ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದಿರುವವರು ಮಾಡುವ ಕರ್ಮವೆಲ್ಲವೂ ರಾಕ್ಷಸರಿಂದ ಸೇವಿಸಲ್ಪಟ್ಟು ನಿಷ್ಫಲವಾಗುತ್ತವೆ.

೩. ಧರ್ಮಫಲವನ್ನು ಬಯಸುವವರು ಕಾಮ ಕ್ರೋದಗಳಿಲ್ಲದ, ಸಕಲ ಶಾಸ್ತ್ರಪಂಡಿತರಾದ ಬ್ರಾಹ್ಮಣರನ್ನು ಪ್ರಶ್ನೆಮಾಡಿ ಧರ್ಮವನ್ನು ಗ್ರಹಿಸಬೇಕು.

೪. ನದಿಗಳು ಮದ್ಯಪಾತ್ರೆಯನ್ನು ಹೇಗೆ ಶುದ್ಧಿಮಾಡಲಾರವೋ ಅದರಂತೆ ನಾರಾಯಣನ ಅನುಗ್ರಹಕ್ಕೆ ಪಾತ್ರರಲ್ಲದವರಿಂದ ಕೃತವಾದ ಪ್ರಾಯಶ್ಚಿತ್ತಗಳು ಅವರನ್ನು ಪುನೀತರನ್ನಾಗಿ ಮಾಡಲಾರವು.

ಬ್ರಹ್ಮಹಾ ಚ ಸುರಾಪೀ ಚ ಸ್ತೇಯೀ ಚ ಗುರುತಲ್ಪಗಃ ।
ಮಹಾಪಾತಕಿನಸ್ತ್ವೇತೇ ತತ್ಸಂಸರ್ಗೀ ಚ ಪಂಚಮಃ ॥ ೫ ॥

ಯಸ್ತು ಸಂವತ್ಸರಂ ಹ್ಯೇತೈಃ ಶಯನಾಸನಭೋಜನೈಃ ।
ಸಂವಸೇತ್ಸಹ ತಂ ವಿದ್ಯಾತ್ಪತಿತಂ ಸರ್ವಕರ್ಮಸು ॥ ೬ ॥

ಅಜ್ಞಾನಾದ್ಬ್ರಾಹ್ಮಣಂ ಹತ್ವಾ ಚೀರವಾಸಾ ಜಟೀ ಭವೇತ್ ।
ಸ್ವೇನೈವ ಹತವಿಪ್ರಸ್ಯ ಕಪಾಲಮಪಿ ಧಾರಯೇತ್ ॥ ೭ ॥

ತದಭಾವೇ ಮುನಿಶ್ರೇಷ್ಠ ಕಪಾಲಂ ಹ್ಯನ್ಯಮೇವ ವಾ ।
ತದ್ದ್ರವ್ಯಂ ಧ್ವಜದಂಡೇ ತು ಧೃತ್ವಾ ವನಚರೋ ಭವೇತ್ ॥ ೮ ॥

---

೫. ಬ್ರಹ್ಮಹತ್ಯೆ, ಮದ್ಯಪಾನ, ಸುವರ್ಣವನ್ನು ಕದಿಯುವಿಕೆ, ಗುರುಪತ್ನೀಗಮನ, ಇವುಗಳಲ್ಲಿ ಒಂದೊಂದನ್ನು ಮಾಡಿದರೂ ಮಹಾಪಾತಕಿಗಳೆನಿಸುವರು. ಇಂತಹವರ ಸಹವಾಸವನ್ನು ಮಾಡುವವನು ಐದನೆಯ ಮಹಾಪಾತಕಿಯು ಹೀಗೆ ಒಟ್ಟು ಐದು ಜನ ಮಹಾಪಾತಕಿಗಳು.

೬. ಮೇಲೆ ಹೇಳಿದ ಪಂಚ ಮಹಾಪಾತಕಿಗಳೊಡನೆ ಒಂದು ವರ್ಷಪರ್ಯಂತವಾಗಿ ಮಲಗುವುದು, ಕೂಡುವುದು, ಊಟಮಾಡುವುದು ಮುಂತಾಗಿ ಸಹವಾಸಮಾಡುವವನನ್ನು ಸಮಸ್ತ ವಿಹಿತಕರ್ಮಗಳಲ್ಲಿಯೂ ಪತಿತನೆಂದು ತಿಳಿಯಬೇಕು.

೭. ತಿಳಿಯದೇ ಬ್ರಾಹ್ಮಣನನ್ನು ಸಂಹರಿಸಿದರೆ ನಾರು ಬಟ್ಟೆಗಳನ್ನುಟ್ಟು, ಜಟಾಧಾರಿಯಾಗಿ ತಾನು ಕೊಂದ ಬ್ರಾಹ್ಮಣನ ಕಪಾಲವನ್ನು ಧರಿಸಬೇಕು.

೮. ಮುನಿವರ್ಯನೇ! ಅದಿಲ್ಲದಿದ್ದರೆ ಅನ್ಯಕಪಾಲ, ಹತಶವಸಂಬಂಧಿಯಾದ ದ್ರವ್ಯ, ಧ್ವಜ ಮತ್ತು ದಂಡ ಇವುಗಳನ್ನು ಧರಿಸಿಕೊಂಡು ಕಾಡಿನಲ್ಲಿ ಸಂಚರಿಸಬೇಕು.

ವನ್ಯಾಹಾರೋ ವಸೇತ್ತತ್ರ ವಾರಮೇಕಂ ಮಿತಾಶನಃ ।
ಸಮ್ಯಕ್ಸಂಧ್ಯಾಮುಪಾಸೀತ ತ್ರಿಕಾಲಂ ಸ್ನಾನಮಾಚರೇತ್ ॥ ೯ ॥

ಅಧ್ಯಯನಾಧ್ಯಾಪನಾದೀನ್ವರ್ಜಯೇತ್ಸಂಸ್ಮರೇದ್ಧರಿಂ ।
ಬ್ರಹ್ಮಚಾರೀ ಭವೇನ್ನಿತ್ಯಂ ಗಂಧಮಾಲ್ಯಾದಿ ವರ್ಜಯೇತ್ ॥ ೧೦ ॥

ತೀರ್ಥಾನ್ಯನುವಸೇಚ್ಚೈವ ಪುಣ್ಯಾಂಶ್ಚೈವಾಶ್ರಮಾಂಸ್ತಥಾ ।
ಯದಿ ವನ್ಯೈರ್ನಜೀವೇತ ಗ್ರಾಮೇ ಭಿಕ್ಷಾಂ ಸಮಾಚರೇತ್ ॥ ೧೧ ॥

ದ್ವಾದಶಾಬ್ದಂ ವ್ರತಂ ಕುರ್ಯಾದೇವಂ ಹರಿಪರಾಯಣಃ ।
ಬ್ರಹ್ಮಹಾ ಶುದ್ಧಿಮಾಪ್ನೋತಿ ಕರ್ಮಾರ್ಹಶ್ಚೈವ ಜಾಯತೇ ॥ ೧೨ ॥

---

೯. ಅಲ್ಲಿ ಪ್ರಾತರ್ಮಧ್ಯಾಹ್ನಸಾಯಂಕಾಲಗಳಲ್ಲಿ ಸ್ನಾನಮಾಡುತ್ತಾ, ಕಾಡಿನಲ್ಲಿ ಸಿಕ್ಕಬಹುದಾದ ಗೆಡ್ಡೆಗೆಣಸುಗಳನ್ನು ಒಂದೇ ಹೊತ್ತು ಮಿತವಾಗಿ ಸೇವಿಸುತ್ತಾ, ವಿಹಿತವಾದ ಕಾಲತ್ರಯಗಳಲ್ಲಿ ಸಂಧ್ಯಾವಂದನೆಯನ್ನು ಮಾಡಿಕೊಂಡಿರಬೇಕು.

೧೦. ವೇದಶಾಸ್ತ್ರಾಧ್ಯಯನ, ಅಧ್ಯಾಪನ (ಪಾಠಹೇಳುವುದು) ಮುಂತಾದುವನ್ನು ಬಿಟ್ಟು ಕೇವಲ ಹರಿಸ್ಮರಣೆಮಾಡುತ್ತಿರಬೇಕು. ಯಾವಾಗಲೂ ಬ್ರಹ್ಮಚಾರಿಯಾಗಿದ್ದು ಗಂಧಮಾಲ್ಯಾದಿಗಳನ್ನು ತ್ಯಜಿಸಬೇಕು.

೧೧. ತೀರ್ಥ ಮತ್ತು ಪುಣ್ಯಕರವಾದ ಆಶ್ರಮಗಳು ಇವುಗಳಲ್ಲಿ ವಾಸಮಾಡಿಕೊಂಡಿರಬೇಕು. ಹೀಗೆ ಕಾಡಿನಲ್ಲಿ ಜೀವಿಸದಿದ್ದರೆ ಗ್ರಾಮದಲ್ಲಿ ಭಿಕ್ಷಾಟನೆಮಾಡಿಕೊಂಡಿರಬೇಕು.

೧೨. ಬ್ರಹ್ಮಹತ್ಯೆಯನ್ನು ಮಾಡಿದವನು ಈರೀತಿ ಹರಿಭಕ್ತನಾಗಿ ಹನ್ನೆರಡು ವರ್ಷಗಳ ಕಾಲ ವ್ರತವನ್ನಾಚರಿಸಿದರೆ ಶುದ್ಧನು ಮತ್ತು ಶ್ರೌತ ಸ್ಮಾರ್ತಕರ್ಮಗಳಿಗೆ ಅರ್ಹನೂ ಆಗುತ್ತಾನೆ.

ವ್ರತಮಧ್ಯೇ ಮೃಗೈರ್ವಾಪಿ ರೋಗೈರ್ವಾಪಿ ನಿಷೂದಿತಃ ।
ಗೋನಿಮಿತ್ತಂ ದ್ವಿಜಾರ್ಥಂ ವಾ ಪ್ರಾಣಾನ್ವಾಪಿ ಪರಿತ್ಯಜೇತ್ ॥ ೧೩ ॥

ಯದ್ವಾ ದದ್ಯಾದ್ದ್ವಿಜೇಂದ್ರಾಣಾಂ ಗವಾಮಯುತಮುತ್ತಮಂ ।
ಏತೇಷ್ವನ್ಯತಮಂ ಕೃತ್ವಾ ಬ್ರಹ್ಮಹಾ ಶುದ್ಧಿಮಾಪ್ನುಯಾತ್ ॥ ೧೪ ॥

ದೀಕ್ಷಿತಂ ಕ್ಷತ್ರಿಯಂ ಹತ್ವಾ ಚರೇದ್ಧಿ ಬ್ರಹ್ಮಹವ್ರತಂ ।
ಅಗ್ನಿಪ್ರವೇಶನಂ ವಾಽಪಿ ಮರುತ್ಪ್ರಪತನಂ ತಥಾ ॥ ೧೫ ॥

ದೀಕ್ಷಿತಂ ಬ್ರಾಹ್ಮಣಂ ಹತ್ವಾ ದ್ವಿಗುಣವ್ರತಮಾಚರೇತ್ ।
ಆಚಾರ್ಯಾದಿವಧೇ ಚೈವ ವ್ರತಮುಕ್ತಂ ಚತುರ್ಗುಣಂ ॥ ೧೬ ॥

ಹತ್ವಾ ತು ವಿಪ್ರಮಾತ್ರಂ ಚ ಚರೇತ್ಸಂವತ್ಸರಂ ವ್ರತಂ ।
ಏವಂ ವಿಪ್ರಸ್ಯ ಗದಿತಃ ಪ್ರಾಯಶ್ಚಿತ್ತವಿಧಿರ್ದ್ವಿಜ ॥ ೧೭ ॥

---

೧೩. ಈ ವ್ರತದ ಮಧ್ಯಕಾಲದಲ್ಲಿ ಮೃಗಗಳು ತಿಂದು ಅಥವಾ ರೋಗಗಳು ಬಂದು ಸತ್ತರೂ ಅವನು ಶುದ್ಧನಾಗುವನು. ಗೋವು ಮತ್ತು ಬ್ರಾಹ್ಮಣರನ್ನು ರಕ್ಷಿಸುವುದಕ್ಕಾಗಿ ಪ್ರಾಣಬಿಟ್ಟರೂ ಶುದ್ಧನಾಗುವನು.

೧೪. ಅಥವಾ ಅವನು ಉತ್ತಮವಾದ ಹತ್ತುಸಾವಿರ ಗೋವುಗಳನ್ನು ದ್ವಿಜಶ್ರೇಷ್ಠರಿಗೆ ದಾನಮಾಡಬೇಕು. ಇವುಗಳ ಪೈಕಿ ಯಾವುದಾದರೊಂದನ್ನು ಮಾಡಿ ಬ್ರಹ್ಮಹತ್ಯೆಮಾಡಿದವನು ಶುದ್ಧಿಯನ್ನು ಹೊಂದಬೇಕು.

೧೫. ದೀಕ್ಷೆಯನ್ನು ಸ್ವೀಕರಿಸದ ಕ್ಷತ್ರಿಯನನ್ನು ಸಂಹರಿಸಿದರೂ ಉಕ್ತವಾದ ಬ್ರಹ್ಮಹತ್ಯೆಯ ಪ್ರಾಯಶ್ಚಿತ್ತವನ್ನೇ ಆಚರಿಸಬೇಕು. ಅಥವಾ ಅಗ್ನಿಪ್ರವೇಶ ಮಾಡಬೇಕು. ಇಲ್ಲವೇ ಗಾಳಿಯಲ್ಲಿ ಬಿದ್ದು ಸಾಯಬೇಕು.

೧೬. ದೀಕ್ಷೆಯಿಂದ ಕೂಡಿದ ಬ್ರಾಹ್ಮಣನನ್ನು ಕೊಂದರೆ ಮೇಲೆ ಹೇಳಿದುದಕ್ಕೆ ಎರಡರಷ್ಟು ವ್ರತವನ್ನಾಚರಿಸಬೇಕು ಆಚಾರ್ಯರು ಮುಂತಾದವರನ್ನು ಸಂಹರಿಸಿದರೆ ನಾಲ್ಕರಷ್ಟು ವ್ರತಾನುಷ್ಠಾನ ಮಾಡಬೇಕು.

೧೭. ಬ್ರಾಹ್ಮಣಜಾತಿಯವರನ್ನು ಕೊಂದರೆ ಒಂದು ವರ್ಷಕಾಲ ವ್ರತವನ್ನಾಚರಿಸಬೇಕು. ಈರೀತಿಯಾಗಿ ಬ್ರಾಹ್ಮಣನಿಗೆ ಪ್ರಾಯಶ್ಚಿತ್ತವಿಧಾನವು ಹೇಳಲ್ಪಟ್ಟಿದೆ.

ದ್ವಿಗುಣಂ ಕ್ಷತ್ರಿಯಸ್ಯೋಕ್ತಂ ತ್ರಿಗುಣಂ ತು ವಿಶಃ ಸ್ಮೃತಂ ।
ಬ್ರಾಹ್ಮಣಂ ಹಂತಿ ಯಃ ಶೂದ್ರಸ್ತಂ ಮುಸಲ್ಯಂ ವಿದುರ್ಬುಧಾಃ ॥ ೧೮ ॥

ರಾಜ್ಞೈವ ಶಿಕ್ಷಾ ಕರ್ತವ್ಯಾ ಇತಿ ಶಾಸ್ತ್ರೇಷು ನಿಶ್ಚಯಃ ।
ಬ್ರಾಹ್ಮಣೀನಾಂ ವಧೇತ್ವರ್ಧಂ ಪಾದಃ ಸ್ಯಾತ್ಕನ್ಯಕಾವಧೇ ॥ ೧೯ ॥

ಹತ್ವಾऽನುಪನೀತಾಂಶ್ಚ ತಥಾ ಪಾದವ್ರತಂ ಚರೇತ್ ।
ಹತ್ವಾ ತು ಕ್ಷತ್ರಿಯಂ ವಿಪ್ರಃ ಷಡಬ್ದಂ ಕೃಚ್ಛ್ರಮಾಚರೇತ್ ॥ ೨೦ ॥

ಸಂವತ್ಸರತ್ರಯಂ ವೈಶ್ಯಂ ಶೂದ್ರಂ ಹತ್ವಾ ತು ವತ್ಸರಂ ।
ದೀಕ್ಷಿತಸ್ಯ ಸ್ತ್ರಿಯಂ ಹತ್ವಾ ಬ್ರಾಹ್ಮಣೀಂ ಚಾಷ್ಟವತ್ಸರಾನ್ ॥ ೨೧ ॥

ಬ್ರಹ್ಮಹತ್ಯಾವ್ರತಂ ಕೃತ್ವಾ ಶುದ್ಧೋ ಭವತಿ ನಿಶ್ಚಿತಂ ।
ಪ್ರಾಯಶ್ಚಿತ್ತವಿಧಾನಂ ತು ಸರ್ವತ್ರ ಮುನಿಸತ್ತಮ ॥ ೨೨ ॥

---

೧೮. ಕ್ಷತ್ರಿಯನಿಗೆ ಬ್ರಾಹ್ಮಣನ ಎರಡರಷ್ಟು ಪ್ರಾಯಶ್ಚಿತ್ತವೂ, ವೈಶ್ಯನಿಗೆ ಮೂರರಷ್ಟೂ ಉಕ್ತವಾಗಿದೆ. ಬ್ರಾಹ್ಮಣನನ್ನು ಸಂಹರಿಸುವ ಶೂದ್ರನನ್ನು ಜ್ಞಾನಿಗಳು ಮುಸಲ್ಯ (ಒನಕೆಯಿಂದ ಕೊಲ್ಲಲರ್ಹನು) ಎನ್ನುವರು.

೧೯. ಶಿಕ್ಷೆಗಳನ್ನೆಲ್ಲಾ ರಾಜರೇ ಮಾಡಬೇಕೆಂದು ಶಾಸ್ತ್ರದ ನಿರ್ಣೀತವಾದ ಅಭಿಪ್ರಾಯವು. ಬ್ರಾಹ್ಮಣಸ್ತ್ರೀಯರ ವಧೆಯನ್ನು ಮಾಡಿದರೆ ಅರ್ಧವ್ರತವು, ಕನ್ಯೆಯನ್ನು ಸಂಹರಿಸಿದರೆ ಕಾಲುಭಾಗವ್ರತವೂ ಪ್ರಾಯಶ್ಚಿತ್ತವು.

೨೦-೨೧. ಉಪನಯನವಾಗದಿರುವವರನ್ನು ಸಂಹರಿಸಿದರೂ ಸಹ ಕಾಲುಭಾಗ ಪ್ರಾಯಶ್ಚಿತ್ತವನ್ನಾಚರಿಸಬೇಕು. ಬ್ರಾಹ್ಮಣನು ಕ್ಷತ್ರಿಯನನ್ನು ಸಂಹರಿಸಿದರೆ ಆರು ವರ್ಷ ಕೃಚ್ಛ್ರವ್ರತವನ್ನು, ವೈಶ್ಯನನ್ನು ಕೊಂದರೆ ಮೂರು ವರ್ಷ ಕೃಚ್ಛ್ರವ್ರತವನ್ನು, ಶೂದ್ರನನ್ನು ಕೊಂದರೆ ಒಂದೇವರ್ಷ ಕೃಚ್ಛ್ರವ್ರತವನ್ನೂ ಮಾಡಬೇಕು.

೨೧-೨೨. ದೀಕ್ಷಿತನ ಪತ್ನಿಯಾದ ಬ್ರಾಹ್ಮಣಸ್ತ್ರೀಯನ್ನು ಸಂಹರಿಸಿದರೆ ಬ್ರಹ್ಮಹತ್ಯೆಗೆ ಉಕ್ತವಾದ ಪ್ರಾಯಶ್ಚಿತ್ತವನ್ನು ಎಂಟು ವರ್ಷಗಳು ಮಾಡಿದರೆ ಖಂಡಿತವಾಗಿಯೂ ಶುದ್ಧನಾಗುತ್ತಾನೆ. ಮುನಿವರ್ಯನೇ! ಹೀಗೆ ಸರ್ವತ್ರ ಪ್ರಾಯಶ್ಚಿತ್ತವಿಧಾನವನ್ನು ತಿಳಿಯಬೇಕು.

ವೃದ್ಧಾತುರಸ್ತ್ರೀಬಾಲಾನಾಮರ್ಧಮುಕ್ತಂ ಮನೀಷಿಭಿಃ ।
ಗೌಡೀ ಪೈಷ್ಟೀ ಚ ಮಾಧ್ವೀ ಚ ವಿಜ್ಞೇಯಾ ತ್ರಿವಿಧಾಃ ಸುರಾಃ ॥ ೨೩ ॥

ಚಾತುರ್ವರ್ಣ್ಯೈರಪೇಯಾಸ್ಯಾತ್ತಥಾ ಸ್ತ್ರೀಭಿಶ್ಚ ನಾರದ ।
ಕ್ಷೀರಂ ಘೃತಂ ವಾ ಗೋಮೂತ್ರಮೇತೇಷ್ವನ್ಯತಮಂ ಮುನೇ ॥ ೨೪ ॥

ಸ್ನಾತ್ವಾಽಽರ್ದ್ರವಾಸಸಾಯುಕ್ತೋ ನಾರಾಯಣಮನುಸ್ಮರನ್ ।
ಪಕ್ವಾಯಸನಿಭಂ ಕೃತ್ವಾ ಪಿಬೇಚ್ಚೈವೋದಕಂ ತತಃ ॥ ೨೫ ॥

ತತ್ತು ಲೌಹೇನ ಪಾತ್ರೇಣ ಹ್ಯಾಯಸೇನಾಥವಾ ಪಿಬೇತ್ ।
ತಾಮ್ರೇಣ ವಾಥ ಪಾತ್ರೇಣ ತತ್ಪೀತ್ವಾ ಮರಣಂ ವ್ರಜೇತ್ ॥ ೨೬ ॥

ಸುರಾಪೀ ಶುದ್ಧಿಮಾಪ್ನೋತಿ ನಾನ್ಯಥಾ ಶುದ್ಧಿರಿಷ್ಯತೇ ।
ಅಜ್ಞಾನಾಜ್ಜಲಬುದ್ಧ್ಯಾ ಸುರಾಂ ಪೀತ್ವಾ ದ್ವಿಜಶ್ಚರೇತ್ ॥ ೨೭ ॥

---

೨೩. ಆದರೆ ಮುದುಕರು, ರೋಗಿಗಳು ಮತ್ತು ಸ್ತ್ರೀಯರು ಇವರುಗಳಿಗೆ ಉಕ್ತಪ್ರಾಯಶ್ಚಿತ್ತದಲ್ಲಿ ಅರ್ಧಭಾಗವನ್ನು ಜ್ಞಾನಿಗಳು ನಿಯಮಿಸಿದ್ದಾರೆ. ಮದ್ಯವು ಗೌಡಿ, ಪೈಷ್ಟಿ, ಮಾಧ್ವಿ ಎಂದು ಮೂರು ವಿಧವಾಗಿ ವಿಭಾಗಿಸಲ್ಪಟ್ಟಿದೆ.

೨೪-೨೫. ಆ ತ್ರಿವಿಧಮದ್ಯವೂ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕುವರ್ಣಗಳ ಸ್ತ್ರೀಪುರುಷರು ಪಾನಮಾಡಲರ್ಹವಲ್ಲ. ನಾರದಮುನಿಯೇ! ಮದ್ಯಪಾನಮಾಡಿದ ಮನುಜನು ಸ್ನಾನಮಾಡಿ ಒದ್ದೆಬಟ್ಟೆಯನ್ನುಟ್ಟು ನಾರಾಯಣಸ್ಮರಣೆಮಾಡುತ್ತಾ ಹಾಲು, ತುಪ್ಪ, ಗಂಜಲ, ಇವುಗಳಲ್ಲೊಂದನ್ನು ಕಾದ ಕಬ್ಬಿಣದಂತೆ ಕೆಂಪಗೆ ಕಾಯಿಸಿ ಕುದಿಯುತ್ತಿರುವಾಗ ಹಾಗೆಯೇ ಕುಡಿಯಬೇಕು. ಅನಂತರ ನೀರುಕುಡಿಯಬೇಕು.

೨೬ ಆ ನೀರನ್ನೂ ಸಹ ಕಂಚು, ಕಬ್ಬಿಣ, ತಾಮ್ರ ಇವುಗಳಲ್ಲೊಂದು ಲೋಹದ ಪಾತ್ರೆಯಿಂದ ಕುಡಿದು ಸಾಯಬೇಕು.

೨೭-೨೮. ಹಾಗೆಮಾಡಿದರೇನೇ ಮದ್ಯಪಾಯಿಯು ಶುದ್ಧನಾಗುವನು. ಬೇರೆ ಉಪಾಯದಿಂದ ಅವನಿಗೆ ಶುದ್ಧಿಯಿಲ್ಲ. ಅಜ್ಞಾನದಿಂದ ಅಥವಾ ನೀರು

ಬ್ರಹ್ಮಹತ್ಯಾ ವ್ರತಂ ಸಮ್ಯಕ್ತ್ಯಚ್ಚಿಹ್ನಪರಿವರ್ಜಿತಃ ।
ಯದಿ ರೋಗನಿವೃತ್ಯರ್ಥಮೌಷಧಾರ್ಥಂ ಸುರಾಂ ಪಿಬೇತ್ ॥ ೨೮ ॥

ತಸ್ಯೋಪನಯನಂ ಭೂಯಸ್ತಥಾ ಚಾಂದ್ರಾಯಣದ್ವಯಂ ।
ಸುರಾಸಂಸ್ಪೃಷ್ಟಪಾನಂ ತು ಸುರಾಭಾಂಡೋದಕಂ ತಥಾ ॥ ೨೯ ॥

ಸುರಾಪಾನಸಮಂ ಪ್ರಾಹುಸ್ತಥಾ ಚಾರ್ದ್ರಸ್ಯ ಭಕ್ಷಣಂ ।
ತಾಲಂ ಚ ಪಾನಸಂ ಚೈವ ದ್ರಾಕ್ಷಂ ಖಾರ್ಜೂರಸಂಭವಂ ॥ ೩೦ ॥

ಮಾಧುಕಂ ಶೈಲಮಾರಿಷ್ಟಂ ಮೈರೇಯಂ ನಾರಿಕೇಳಜಂ ।
ಗೌಡೀ ಮಾಧ್ವೀ ಸುರಾ ಮದ್ಯಮೇವಮೇಕಾದಶಸ್ಮೃತಾಃ ॥ ೩೧ ॥

---

ಎಂಬ ಭ್ರಾಂತಿ ಯಿಂದ ದ್ವಿಜನು ಮದ್ಯಪಾನಮಾಡಿದರೆ ಅವನ ಚಿಹ್ನೆಯನ್ನು ಬಿಟ್ಟು ಬ್ರಹ್ಮಹತ್ಯೆಯ ಪ್ರಾಯಶ್ಚಿತ್ತವೆಂದು ಉಕ್ತವಾಗಿರುವ ವ್ರತವನ್ನು ಚೆನ್ನಾಗಿ ಆಚರಿಸಬೇಕು.

೨೮-೩೦ ರೋಗಪರಿಹಾರಕ್ಕಾಗಿ ಔಷಧರೂಪದಿಂದ ಮದ್ಯಪಾನ ಮಾಡಿದವನಿಗೆ ಪುನಃ ಉಪನಯನವನ್ನು ಮಾಡಿಕೊಂಡು ಎರಡಾವರ್ತಿ ಚಾಂದ್ರಾಯಣವನ್ನಾಚರಿಸುವುದೇ ಪ್ರಾಯಶ್ಚಿತ್ತವು. ಮದ್ಯ ಮಿಶ್ರವಾದ ಕ್ಷೀರಾದಿಗಳ ಪಾನ ಮತ್ತು ಮದ್ಯದ ಪಾತ್ರೆಯಲ್ಲಿನ ಜಲಪಾನವೂ ಸಹ ಮದ್ಯಪಾನ ಸಮಾನವೆಂದು ಹೇಳಿರುತ್ತಾರೆ. ಅದರಂತೆಯೇ ಆರ್ದ್ರಭಕ್ಷಣವೂ ಸಹ ಸುರಾಪಾನಸಮವು.

೩೦-೩೧. ತಾಲ (ತಾಳೆಯ ಮರದಲ್ಲಿ ತೆಗೆದುದು), ಪಾನಸ (ಹಲಸಿನ ಮರದಲ್ಲಿ ತೆಗೆದುದು), ದ್ರಾಕ್ಷ (ದ್ರಾಕ್ಷಿಯಿಂದ ಪರಿಣತವಾದುದು), ಖರ್ಜೂರ (ಉತ್ತತ್ತಿಗಿಡದಿಂದ ತೆಗೆದುದು), ಮಾಧುಕ (ಮಧುಸಂಬಂಧಿಯಾದುದು), ಶೈಲ, ಆರಿಷ್ಟ, ಮೈರೇಯ, ನಾರಿಕೇಳಜ (ತೆಂಗಿನಗಿಡದಲ್ಲಿ ತೆಗೆದುದು), ಗೌಡಿ ಮತ್ತು ಮಾಧ್ವಿ ಎಂಬುದಾಗಿ ಮದ್ಯವು ಹನ್ನೊಂದು ವಿಧವಾಗಿದೆ.

ಏತೇಷ್ವನ್ಯತಮಂ ವಿಪ್ರೋ ನ ಪಿಬೇದ್ವೈ ಕದಾಚನ ।
ಏತೇಷ್ವನ್ಯತಮಂ ಯಸ್ತು ಪಿಬೇದಜ್ಞಾನತೋ ದ್ವಿಜಃ ॥ ೩೨ ॥

ತಸ್ಯೋಪನಯನಂ ಭೂಯಸ್ತಪ್ತಕೃಚ್ಛ್ರಂ ಚರೇತ್ತಥಾ ।
ಸಮಕ್ಷಂ ವಾ ಪರೋಕ್ಷಂ ವಾ ಬಲಾಚ್ಚೌರ್ಯೇಣ ವಾ ತಥಾ ॥ ೩೩ ॥

ಪರಸ್ವಾನಾಮುಪಾದಾನಂ ಸ್ತೇಯಮಿತ್ಯುಚ್ಯತೇ ಬುಧೈಃ ।
ಸುವರ್ಣಸ್ಯ ಪ್ರಮಾಣಂ ತು ಮನ್ವಾದ್ಯೈಃ ಪರಿಭಾಷಿತಂ ॥ ೩೪ ॥

ವಕ್ಷ್ಯೇ ಶೃಣುಷ್ವ ವಿಪ್ರೇಂದ್ರ ಪ್ರಾಯಶ್ಚಿತ್ತೋಕ್ತಿಸಾಧನಂ ।
ಗವಾಕ್ಷಾಗತಮಾರ್ತಂಡರಶ್ಮಿಮಧ್ಯೇ ಪ್ರದೃಶ್ಯತೇ ॥ ೩೫ ॥

ತ್ರಸರೇಣುಪ್ರಮಾಣಂ ತು ರಜಇತ್ಯುಚ್ಯತೇ ಬುಧೈಃ ।
ತ್ರಸರೇಣ್ವಷ್ಟಕಂ ನಿಷ್ಕಸ್ತತ್ತ್ರಯಂ ರಾಜಸರ್ಷಪಃ ॥ ೩೬ ॥

---

೩೨-೩೩. ಇವುಗಳಲ್ಲಿ ಯಾವುದನ್ನೂ ಯಾವಾಗಲೂ ಬ್ರಾಹ್ಮಣರು ಕುಡಿಯಬಾರದು. ದ್ವಿಜನು ಅಜ್ಞಾನದಿಂದ ಇವುಗಳಲ್ಲಾವುದಾದರೊಂದನ್ನು ಪಾನಮಾಡಿದರೆ ಅವನು ತಿರುಗಿ ಉಪನಯನಮಾಡಿಕೊಂಡು ತಪ್ತಕೃಚ್ಛ್ರ ವ್ರತವನ್ನಾಚರಿಸಬೇಕು.

೩೩-೩೪. ಎದುರಿಗೆ ಕಾಣಿಸುವಂತೆ ಅಥವಾ ಇನ್ನೊಂದರಲ್ಲಿ ಮಿಶ್ರಿತವಾಗಿ ಕಾಣಿಸದಂತೆ, ಬಲಾತ್ಕಾರದಿಂದ ಅಥವಾ ಕಳ್ಳತನದಿಂದ ಇತರರ ಸ್ವತ್ತನ್ನು ಅಪಹರಿಸುವುದು ಸ್ತೇಯವೆಂದು ಜ್ಞಾನಿಗಳಿಂದ ಉಕ್ತವಾಗಿದೆ.

೩೪-೩೫. ಮನು ಮುಂತಾದವರಿಂದ ಉಕ್ತವಾದ ಪ್ರಾಯಶ್ಚಿತ್ತವನ್ನು ಹೇಳಲು ಸಾಧಕವಾದ ಬಂಗಾರದ ಪರಿಮಾಣವನ್ನು ಹೇಳುತ್ತೇನೆ. ವಿಪ್ರವರ್ಯನೇ! ಕೇಳು.

೩೫-೩೬. ಗವಾಕ್ಷರಂಧ್ರದಿಂದ ಬಂದಿರುವ ಸೂರ್ಯರಶ್ಮಿಯ ಮಧ್ಯದಲ್ಲಿ ತ್ರ್ಯಣುಕದಷ್ಟು ಪರಿಮಿತಿಯುಳ್ಳದಾಗಿ ಕಾಣಿಸುವ ಸೂಕ್ಷ್ಮಭಾಗವು ರಜಸ್ಸು

ಗೌರಸರ್ಷಪಸ್ತತ್ತ್ರಯಂ ಸ್ಯಾತ್ತತ್ ಷಟ್ಕಂ ಯವ ಉಚ್ಯತೇ ।
ಯವತ್ರಯಂ ಕೃಷ್ಣಲಃ ಸ್ಯಾನ್ಮಾಷಸ್ತತ್ಪಂಚಕಂ ಸ್ಮೃತಃ ॥ ೩೭ ॥

ಮಾಷಷೋಡಶಮಾನಂ ಸ್ಯಾತ್ಸುವರ್ಣಮಿತಿ ನಾರದ ।
ಹೃತಾ ಬ್ರಹ್ಮಸ್ವಮಜ್ಞಾನಾದ್ದ್ವಾದಶಾಬ್ದಂ ತು ಪೂರ್ವವತ್ ॥ ೩೮ ॥

ಕಪಾಲಧ್ವಜಹೀನಂ ತು ಬ್ರಹ್ಮಹತ್ಯಾ ವ್ರತಂ ಚರೇತ್ ।
ಗುರೂಣಾಂ ಯಜ್ಞಕರ್ತ್ತೄಣಾಂ ಧರ್ಮಿಷ್ಠಾನಾಂ ತಥೈವ ಚ ॥ ೩೯ ॥

ಶ್ರೋತ್ರಿಯಾಣಾಂ ದ್ವಿಜಾನಾಂ ತು ಹೃತ್ವಾ ಹೇಮೈವಮಾಚರೇತ್ ।
ಕೃತಾನುತಾಪೋ ದೇಹೇ ಚ ಸಂಪೂರ್ಣೇ ಲೇಪಯೇದ್ಘೃತಂ ॥ ೪೦ ॥

ಕರೀಷಛಾದಿತೋ ದಗ್ಧಃ ಸ್ತೇಯಪಾಪಾದ್ವಿಮುಚ್ಯತೇ ।
ಬ್ರಹ್ಮಸ್ವಂ ಕ್ಷತ್ರಿಯೋ ಹೃತ್ವಾ ಪಶ್ಚಾತ್ತಾಪಮವಾಪ್ಯ ಚ ॥ ೪೧ ॥

---

ಎಂದು ಜ್ಞಾನಿಗಳಿಂದ ಉಕ್ತವಾಗಿದೆ. ಅಂತಹ ಎಂಟು ತ್ರ್ಯಣುಕಗಳು ಸೇರಿದರೆ ಅದು ನಿಷ್ಕವೆನಿಸುವುದು. ಅಂತಹ ಮೂರು ನಿಷ್ಕಗಳನ್ನು ಸೇರಿಸಿದರೆ ಅದು ರಾಜಸಾಸವೆಯೆನಿಸುವುದು.

೩೭. ಮೂರು ರಾಜಸಾಸುವೆಗಳು ಒಂದು ಗೌರಸರ್ಷಪವೆನಿಸುವುದು. ಅದರ ಆರರಷ್ಟಕ್ಕೆ ಯವವೆಂದು ಹೆಸರು. ಮೂರು ಯವಗಳು ಒಂದು ಕೃಷ್ಣಲವಾಗುವುದು. ಐದು ಕೃಷ್ಣಲಗಳು ಒಂದು ಮಾಷವು.

೩೮-೩೯. ಹದಿನಾರು ಮಾಷದಷ್ಟು ಪರಿಮಿತಿಯುಳ್ಳದು ಸುವರ್ಣವೆನಿಸುವುದು. ನಾರದನೇ! ತಿಳಿಯದೇ ಬ್ರಾಹ್ಮಣನ ಸ್ವತ್ತನ್ನು ಅಪಹರಿಸಿದವನು ಹಿಂದೆ ಹೇಳಿದಂತೆ ಬ್ರಹ್ಮಹತ್ಯಾವ್ರತವನ್ನು ಕಪಾಲಧ್ವಜರಹಿತನಾಗಿ ಹನ್ನೆರಡು ವರ್ಷಕಾಲ ಮಾಡಬೇಕು.

೩೯-೪೦. ಗುರುಗಳು, ಯಜ್ಞಕರ್ತರು, ಪುಣ್ಯವಂತರು ಮತ್ತು ಶ್ರೋತ್ರಿಯರೂ ಆದ ದ್ವಿಜರ ಬಂಗಾರವನ್ನು ಅಪಹರಿಸಿದವರು ಮುಂದೆ ಹೇಳುವ ಪ್ರಾಯಶ್ಚಿತ್ತವನ್ನಾಚರಿಸಬೇಕು.

೪೦-೪೧. ಪಶ್ಚಾತ್ತಾಪಪಟ್ಟು ಶರೀರಕ್ಕೆಲ್ಲಾ ತುಪ್ಪಹಚ್ಚಿ, ಬೆರಣಿಯಿಂದ ಮುಚ್ಚಿ, ಬೆಂಕಿಹಚ್ಚಿದರೆ ಸ್ತೇಯಪಾಪವು ಪರಿಹಾರವಾಗುತ್ತದೆ.

ಪುನರ್ದದಾತಿ ತಸ್ಯೈವ ತದ್ವಿಧಾನಂ ಶೃಣುಷ್ವ ಮೇ ।
ತತ್ರ ಸಾಂತಪನಂ ಕೃತ್ವಾ ದ್ವಾದಶಾಹೋಪವಾಸತಃ ॥ ೪೨ ॥

ಶುದ್ಧಿಮಾಪ್ನೋತಿ ದೇವರ್ಷೇ ಹ್ಯನ್ಯಥಾ ಪತಿತೋ ಭವೇತ್ ।
ರತ್ನಾಸನಮನುಷ್ಯಸ್ತ್ರೀಧೇನುಭೂಮ್ಯಾದಿಕೇಷು ಚ ॥ ೪೩ ॥

ಸುವರ್ಣಸದೃಶೇಷ್ವೇಷು ಪ್ರಾಯಶ್ಚಿತ್ತಾರ್ಧಮುಚ್ಯತೇ ।
ತ್ರಸರೇಣುಸಮಂ ಹೇಮ ಹೃತ್ವಾ ಕುರ್ಯಾತ್ಸಮಾಹಿತಃ ॥ ೪೪ ॥

ಪ್ರಾಣಾಯಾಮದ್ವಯಂ ಸಮ್ಯಕ್ತೇನ ಶುಧ್ಯತಿ ಮಾನವಃ ।
ಪ್ರಾಣಾಯಾಮತ್ರಯಂ ಕುರ್ಯಾದ್ಧೃತ್ವಾ ನಿಷ್ಕಪ್ರಮಾಣಕಂ ॥ ೪೫ ॥

---

೪೧-೪೨. ಕ್ಷತ್ರಿಯನು ಬ್ರಹ್ಮಸ್ವವನ್ನಪಹರಿಸಿ ಪಶ್ಚಾತ್ತಾಪಹೊಂದಿ ಪುನಃ ಆ ಬ್ರಾಹ್ಮಣನಿಗೇ ಕೊಡುವವನಿಗೆ ಪ್ರಾಯಶ್ಚಿತ್ತವಿಧಾನವನ್ನು ಹೇಳುತ್ತೇನೆ; ದೇವರ್ಷಿಯೇ! ಕೇಳು.

೪೨-೪೩. ಅಂತಹವನು ಸಾಂತಪನವ್ರತವನ್ನು ಮಾಡಿ ಹನ್ನೆರಡು ದಿನ ಉಪವಾಸಮಾಡುವುದರಿಂದ ಶುದ್ಧಿಯನ್ನು ಹೊಂದುವನು. ಹಾಗೆ ಮಾಡದಿದ್ದರೆ ಅವನು ಪತಿತನಾಗುವನು.

೪೩-೪೪. ರತ್ನ, ಆಸನ, ಮನುಷ್ಯ, ಹೆಂಗಸು, ಗೋವು, ಭೂಮಿ ಮುಂತಾದುವು ಸುವರ್ಣಕ್ಕೆ ಸಮಾನವು. ಅವನ್ನು ಅಪಹರಿಸಿದರೆ ಉಕ್ತ ಪ್ರಾಯಶ್ಚಿತ್ತದಲ್ಲಿ ಅರ್ಧಭಾಗವನ್ನು ಆಚರಿಸಬೇಕೆಂದು ವಿಹಿತವಾಗಿದೆ.

೪೪-೪೫. ತ್ರ್ಯಣುಕಪರಿಮಾಣದಷ್ಟು ಬಂಗಾರವನ್ನಪಹರಿಸುವ ಮಾನವನು ಸಮಾಧಾನಚಿತ್ತದಿಂದ ಎರಡಾವರ್ತಿ ಪ್ರಾಣಾಯಾಮವನ್ನು ಮಾಡಬೇಕು. ಆದರಿಂದ ಅವನು ಚೆನ್ನಾಗಿ ಪರಿಶುದ್ಧನಾಗುವನು. ನಿಷ್ಕದಷ್ಟು ತೂಕವುಳ್ಳ ಸುವರ್ಣವನ್ನು ಅಪಹರಿಸಿದರೆ ಮೂರಾವರ್ತಿ ಪ್ರಾಣಾಯಾಮವನ್ನು ಮಾಡಬೇಕು.

ಪ್ರಾಣಾಯಾಮಾಶ್ಚ ಚತ್ವಾರೋ ರಾಜಸರ್ಷಪಮಾತ್ರಕೇ ।
ಗೌರಸರ್ಷಪಮಾನಂ ತು ಹೃತ್ವಾ ಹೇಮ ವಿಚಕ್ಷಣಃ ॥ ೪೬ ॥

ಸ್ನಾತ್ವಾ ಚ ವಿಧಿವಜ್ಜಪ್ಯಾದ್ಗಾಯತ್ರ್ಯಷ್ಟಸಹಸ್ರಕಂ ।
ಯವಮಾತ್ರಸುವರ್ಣಸ್ಯ ಸ್ತೇಯಾಚ್ಛುದ್ಧೋ ಭವೇದ್ದ್ವಿಜಃ ॥ ೪೭ ॥

ಆಸಾಯಂ ಪ್ರಾತರಾರಭ್ಯ ಜಪ್ತ್ವಾ ವೈ ವೇದಮಾತರಂ ।
ಹೇಮ ಕೃಷ್ಣಲಮಾತ್ರಂ ತು ಹೃತ್ವಾ ಸಾಂತಪನಂ ಚರೇತ್ ॥ ೪೮ ॥

ಮಾಷಪ್ರಮಾಣೇ ಹೇಮ್ನಸ್ತು ಪ್ರಾಯಶ್ಚಿತ್ತಂ ನಿಗದ್ಯತೇ ।
ಗೋಮೂತ್ರಪಕ್ವಯವಭುಗ್ವರ್ಷೇಣೈಕೇನ ಶುದ್ಧ್ಯತಿ ॥ ೪೯ ॥

ಸಂಪೂರ್ಣಸ್ಯ ಸುವರ್ಣಸ್ಯ ಸ್ತೇಯಂ ಕೃತ್ವಾ ಮುನೀಶ್ವರ ।
ಬ್ರಹ್ಮಹತ್ಯಾವ್ರತಂ ಕುರ್ಯಾದ್ದ್ವಾದಶಾಬ್ದಂ ಸಮಾಹಿತಃ ॥ ೫೦ ॥

---

೪೬-೪೭. ರಾಜಸಾಸುವೆಯಷ್ಟು ಬಂಗಾರವನ್ನಪಹರಿಸಿದರೆ ನಾಲ್ಕು ಪ್ರಾಣಾಯಾಮಗಳೇ ಪ್ರಾಯಶ್ಚಿತ್ತವು. ವಿವೇಚನಶೀಲನು ಗೌರಸರ್ಷಪದಷ್ಟು ತೂಕವುಳ್ಳ ಬಂಗಾರವನ್ನು ಅಪಹರಿಸಿದರೆ ಸ್ನಾನಮಾಡಿ ಗಾಯತ್ರಿಯನ್ನು ಎಂಟುಸಾವಿರ ಆವರ್ತಿ ವಿಧಿವತ್ತಾಗಿ ಜಪಿಸಬೇಕು.

೪೭-೪೮. ದ್ವಿಜನು ಯವಪರಿಮಿತ ಸುವರ್ಣವನ್ನು ಕದ್ದರೆ ಪ್ರಾತಃಕಾಲದಿಂದ ಸಾಯಂಕಾಲದ ವರೆಗೂ ಗಾಯತ್ರೀ ಮಂತ್ರವನ್ನು ಜಪಿಸಿ ಪರಿಶುದ್ಧನಾಗಬೇಕು. ಕೃಷ್ಣಲದಷ್ಟು ಬಂಗಾರವನ್ನು ಕದ್ದವನು ಸಾಂತಪನವ್ರತವನ್ನು ಮಾಡಿ ಶುದ್ಧನಾಗಬೇಕು.

೪೯. ಮಾಷ (ಉದ್ದಿನಕಾಳು) ದಷ್ಟು ಬಂಗಾರವನ್ನು ಕದ್ದವನಿಗೆ ಪ್ರಾಯಶ್ಚಿತ್ತವನ್ನು ಹೇಳುತ್ತೇನೆ—ಗಂಗಾಜಲದಿಂದ ಬೇಯಿಸಲ್ಪಟ್ಟ ಯವ ಧಾನ್ಯವನ್ನು ಒಂದು ವರ್ಷಕಾಲ ತಿನ್ನುವುದರಿಂದ ಶುದ್ಧನಾಗುವನು.

೫೦. ಮುನೀಶ್ವರನೇ! ಸಂಪೂರ್ಣ ಸುವರ್ಣದಷ್ಟು ತೂಕ ಬಂಗಾರವನ್ನು ಕದ್ದವನು ಸಮಾಧಾನದಿಂದ ಬ್ರಹ್ಮಹತ್ಯೆಗೆ ವಿಹಿತವಾದ ಪ್ರಾಯಶ್ಚಿತ್ತವನ್ನು ಹನ್ನೆರಡು ವರ್ಷಗಳ ಕಾಲ ಆಚರಿಸಿ ಪರಿಶುದ್ಧನಾಗಬೇಕು.

ಸುವರ್ಣಮಾನಾನ್ನ್ಯೂನೇ ತು ರಜತಸ್ತೇಯಕರ್ಮಣಿ ।
ಕುರ್ಯಾತ್ಸಾಂತಪನಂ ಸಮ್ಯಗನ್ಯಥಾ ಪತಿತೋ ಭವೇತ್ ॥ ೫೧ ॥

ದಶ ನಿಷ್ಕಾಂತಪರ್ಯಂತಮೂರ್ಧ್ವಂ ನಿಷ್ಕಚತುಷ್ಟಯಾತ್ ।
ಹೃತ್ವಾ ಚ ರಜತಂ ವಿದ್ವಾನ್ಕುರ್ಯಾಚ್ಚಾಂದ್ರಾಯಣಂ ಮುನೇ ॥ ೫೨ ॥

ದಶಾದಿಶತನಿಷ್ಕಾಂತಂ ಯಃ ಸ್ತೇಯೀ ರಜತಸ್ಯ ತು ।
ಚಾಂದ್ರಾಯಣದ್ವಯಂ ತಸ್ಯ ಪ್ರೋಕ್ತಂ ಪಾಪವಿಶೋಧಕಂ ॥ ೫೩ ॥

ಶತಾದೂರ್ಧ್ವಂ ಸಹಸ್ರಾಂತಂ ಪ್ರೋಕ್ತಂ ಚಾಂದ್ರಾಯಣತ್ರಯಂ ।
ಸಹಸ್ರಾದಧಿಕಸ್ತೇಯೇ ಬ್ರಹ್ಮಹತ್ಯಾ ವ್ರತಂ ಚರೇತ್ ॥ ೫೪ ॥

---

೫೧. ಸುವರ್ಣತೂಕಕ್ಕಿಂತ ಕಮ್ಮಿಯಾಗಿ ಬೆಳ್ಳಿಯನ್ನು ಕದ್ದರೆ ಸಾಂತಪನವ್ರತವನ್ನು ಚೆನ್ನಾಗಿ ಮಾಡಬೇಕು. ಅದನ್ನು ಮಾಡದಿದ್ದರೆ ಪತಿತನಾಗುವನು.

೫೨. ನಾಲ್ಕು ನಿಷ್ಕಕ್ಕಿಂತಲೂ ಹೆಚ್ಚಾಗಿಹತ್ತು ನಿಷ್ಕಗಳವರಗೆ ಬೆಳ್ಳಿಯನ್ನು ಕದ್ದವನು ಚಾಂದ್ರಾಯಣವ್ರತವನ್ನಾಚರಿಸಬೇಕು.

೫೩. ಹತ್ತರಿಂದ ನೂರು ನಿಷ್ಕಗಳವರೆಗೆ ಬೆಳ್ಳಿಯನ್ನು ಕದ್ದವನು ಎರಡಾವರ್ತಿ ಚಾಂದ್ರಾಯಣವ್ರತವನ್ನಾಚರಿಸಿದರೆ ಪಾಪಪರಿಹಾರವಾಗುತ್ತದೆಂದು ಉಕ್ತವಾಗಿದೆ.

೫೪. ನೂರಕ್ಕಿಂತ ಹೆಚ್ಚಾಗಿ ಸಾವಿರ ನಿಷ್ಕಗಳವರೆಗೆ ರಜತವನ್ನು ಕದ್ದರೆ ಚಾಂದ್ರಾಯಣವ್ರತವು ಪ್ರಾಯಶ್ಚಿತ್ತವು. ಸಾವಿರಕ್ಕಿಂತ ಹೆಚ್ಚಾಗಿ ರಜತವನ್ನು ಕದ್ಧರೆ ಬ್ರಹ್ಮಹತ್ಯೆಗೆ ವಿಹಿತವಾದ ಪ್ರಾಯಶ್ಚಿತ್ತವನ್ನು ಆಚರಿಸಬೇಕು.

ಕಾಂಸ್ಯಪಿತ್ತಲಮುಖ್ಯೇಷು ಹ್ಯಯಸ್ಕಾಂತೇ ತಥೈವ ಚ ।
ಸಹಸ್ರನಿಷ್ಕಮಾನೇ ತು ಪರಾಕಂ ಪರಿಕೀರ್ತಿತಂ ॥ ೫೫ ॥

ಪ್ರಾಯಶ್ಚಿತ್ತಂ ತು ರತ್ನಾನಾಂ ಸ್ತೇಯೇ ರಾಜತವತ್ಸ್ಮೃತಂ ।
ಗುರುತಲ್ಪಗತಾನಾಂ ಚ ಪ್ರಾಯಶ್ಚಿತ್ತಮುದೀರ್ಯತೇ ॥ ೫೬ ॥

ಅಜ್ಞಾನಾನ್ಮಾತರಂ ಗತ್ವಾ ತತ್ಸಪತ್ನೀಮಥಾಪಿ ವಾ ।
ಸ್ವಯಮೇವ ಸ್ವಮುಷ್ಕಂ ತು ಛಿಂದ್ಯಾತ್ಪಾಪಮುದೀರಯನ್ ॥ ೫೭ ॥

ಸ್ವವರ್ಣೋತ್ತಮವರ್ಣಸ್ತ್ರೀಗಮನೇ ತ್ವವಿಚಾರತಃ ।
ಬ್ರಹ್ಮಹತ್ಯಾವ್ರತಂ ಕುರ್ಯಾದ್ದ್ವಾದಶಾಬ್ದಂ ಸಮಾಹಿತಃ ॥ ೫೮ ॥

ಸ್ವಮತ್ಯಾಭ್ಯಾಸತೋ ಗಚ್ಛೇತ್ಸವರ್ಣಾಂ ಚೋತ್ತಮಾಂ ತಥಾ ।
ಕಾರೀಷವಹ್ನಿನಾ ದಗ್ಧಃ ಶುದ್ಧಿಂ ಯಾತಿ ದ್ವಿಜೋತ್ತಮಃ ॥ ೫೯ ॥

---

೫೫. ಕಂಚು ಹಿತ್ತಾಳೆ ಮುಂತಾದುವು, ಅಯಸ್ಕಾಂತಶಿಲೆ ಇವುಗಳನ್ನು ಸಾವಿರ ನಿಷ್ಕದಷ್ಟು ಕದ್ದವನಿಗೆ ಪರಾಕವ್ರತವು ಪ್ರಾಯಶ್ಚಿತ್ತವೆಂದು ಉಕ್ತವಾಗಿದೆ.

೫೬. ರತ್ನಗಳ ಅಪಹಾರಕ್ಕೂ ಬೆಳ್ಳಿಯ ಅಪಹಾರದಂತೆ ಪ್ರಾಯಶ್ಚಿತ್ತವನ್ನಾಚರಿಸಬೇಕು. ಇನ್ನು ಗುರುಪತ್ನೀಗಮನಮಾಡಿದವನಿಗೆ ಪ್ರಾಯಶ್ಚಿತ್ತವನ್ನು ಹೇಳುವೆನು.

೫೭. ಅಜ್ಞಾನದಿಂದ ತಾಯಿ ಅಥವಾ ಮಲತಾಯಿಯ ಸಂಗಮಾಡಿದವನು ತಾನು ಮಾಡಿದ ಪಾಪಕೃತ್ಯವನ್ನು ಹೇಳಿ ತನ್ನ ವೃಷಣವನ್ನು ತಾನೇ ಛೇದನಮಾಡಿಕೊಳ್ಳಬೇಕು.

೫೮. ವಿಚಾರಮಾಡದೇ ತನಗಿಂತಲೂ ಉತ್ತಮಜಾತಿಯ ಸ್ತ್ರೀಸಂಗಮಾಡಿದವನು ಸಮಾಧಾನದಿಂದ ಹನ್ನೆರಡುವರ್ಷಗಳ ಕಾಲ ಬ್ರಹ್ಮಹತ್ಯಾಪ್ರಾಯಶ್ಚಿತ್ತವ್ರತವನ್ನು ಮಾಡಬೇಕು.

೫೯. ಸಮಾನಜಾತಿ ಅಥವಾ ಉತ್ತಮಜಾತಿಯ ಸ್ತ್ರೀಸಂಗವನ್ನು ಬುದ್ಧಿಪೂರ್ವಕವಾಗಿ ಅನೇಕಾವರ್ತಿ ಮಾಡಿದವನು ಬೆರಣಿ ಬೆಂಕಿಯಿಂದ ದಹಿಸಲ್ಪಟ್ಟವನಾಗಿ ಶುದ್ಧನಾಗುವನು.

ರೇತಃ ಸೇಕಾತ್ಪೂರ್ವಮೇವ ನಿವೃತ್ತೋ ಯದಿ ಮಾತರಿ ।
ಬ್ರಹ್ಮಹತ್ಯಾವ್ರತಂ ಕುರ್ಯಾದ್ರೇತಃಸೇಕೇಽಗ್ನಿದಾಹನಂ ॥ ೬೦ ॥

ಸವರ್ಣೋತ್ತಮವರ್ಣಾಸು ನಿವೃತ್ತೋ ವೀರ್ಯಸೇಚನಾತ್ ।
ಬ್ರಹ್ಮಹತ್ಯಾವ್ರತಂ ಕುರ್ಯಾನ್ನವಾಬ್ದಾನ್ವಿಷ್ಣುತತ್ಪರಃ ॥ ೬೧ ॥

ವೈಶ್ಯಾಯಾಂ ಪಿತೃಪತ್ನ್ಯಾಂ ತು ಷಡಬ್ದಂ ವ್ರತಮಾಚರೇತ್ ।
ಗತ್ವಾ ಶೂದ್ರಾಂ ಗುರೋರ್ಭಾರ್ಯಾಂ ತ್ರಿವರ್ಷಂ ವ್ರತಮಾಚರೇತ್ ॥ ೬೨ ॥

ಮಾತೃಷ್ವಸಾರಂ ಚ ಪಿತೃಷ್ವಸಾರಮಾ-
ಚಾರ್ಯಭಾರ್ಯಾಂ ಶ್ವಶುರಸ್ಯ ಪತ್ನೀಂ ।
ಪಿತೃವ್ಯಭಾರ್ಯಾಮಥ ಮಾತುಲಾನೀಂ
ಪುತ್ರೀಂ ಚ ಗಚ್ಛೇದ್ಯದಿ ಕಾಮಮುಗ್ಧಃ ॥ ೬೩ ॥

---

೬೦. ಮಾತೃಸಂಗವನ್ನು ಮಾಡಿ ರೇತಸ್ಸು ಬೀಳುವುದಕ್ಕೆ ಮುಂಚೆ ನಿವೃತ್ತನಾದರೆ ಅಂತಹವನು ಬ್ರಹ್ಮಹತ್ಯಾಪ್ರಾಯಶ್ಚಿತ್ತವ್ರತವನ್ನು ಆಚರಿಸಬೇಕು. ರೇತಸ್ಸೇಚನಮಾಡಿದರೆ ಅಂತಹವನನ್ನು ಸುಡಬೇಕು.

೬೧. ಸಮಾನಜಾತಿ ಅಥವಾ ಉತ್ತಮಜಾತಿಯ ಸ್ತ್ರೀಯರಲ್ಲಿ ಸಂಗಮಾಡಿ ವೀರ್ಯಸ್ಖಲನಕ್ಕಿಂತ ಮುಂಚೆ ನಿವೃತ್ತನಾದರೆ ಅಂತಹವನು ವಿಷ್ಣುಧ್ಯಾನನಿರತನಾಗಿ ಒಂಭತ್ತು ವರ್ಷಗಳು ಬ್ರಹ್ಮಹತ್ಯಾಪ್ರಾಯಶ್ಚಿತ್ತವ್ರತವನ್ನಾಚರಿಸಬೇಕು.

೬೨. ಪಿತೃಪತ್ನಿಯಾದ ವೈಶ್ಯಸ್ತ್ರೀಯಲ್ಲಿ ಸಂಗಮಾಡಿದರೆ ಆರು ವರ್ಷ ವ್ರತಮಾಡಬೇಕು. ಗುರುಪತ್ನಿಯಾದ ಶೂದ್ರಸ್ತ್ರೀಸಂಗಮಾಡಿದವನು ಮೂರು ವರ್ಷಕಾಲ ಬ್ರಹ್ಮಹತ್ಯಾಪ್ರಾಯಶ್ಚಿತ್ತವ್ರತವನ್ನಾಚರಿಸಿದರೆ ಶುದ್ಧನಾಗುತ್ತಾನೆ.

೬೩–೬೪. ಕಾಮದಿಂದ ಮೋಹಿತನಾಗಿ ತಾಯಿಯ ತಂಗಿ, ತಂದೆಯ ತಂಗಿ, ಗುರುಪತ್ನೀ, ಮಾವನ ಹೆಂಡತಿ, ಚಿಕ್ಕಪ್ಪನ ಹೆಂಡತಿ, ಸೋದರಮಾವನ ಹೆಂಡತಿ ಮತ್ತು ಮಗಳು ಇವರ ಸಂಗವನ್ನು ಎರಡು ದಿನಗಳು ಮಾಡಿದವನು

ದಿನದ್ವಯೇ ಬ್ರಹ್ಮಹತ್ಯಾವ್ರತಂ ಕುರ್ಯಾದ್ಯಥಾವಿಧಿ ।
ಏಕಸ್ಮಿನ್ನೇವ ದಿವಸೇ ಬಹುವಾರಂ ತ್ರಿವಾರ್ಷಿಕಂ ॥ ೬೪ ॥

ಏಕವಾರಂ ಗತೇ ಹ್ಯಬ್ದಂ ವ್ರತಂ ಕೃತ್ವಾ ವಿಶುಧ್ಯತಿ ।
ದಿನತ್ರಯೇ ಗತೇ ವಹ್ನಿದಗ್ಧಃ ಶುದ್ಧ್ಯೇತ ನಾನ್ಯಥಾ ॥ ೬೫ ॥

ಚಾಂಡಾಲೀಂ ಪುಲ್ಕಸೀಂ ಚೈವ ಸ್ನುಷಾಂ ಚ ಭಗಿನೀಂ ತಥಾ ।
ಮಿತ್ರಸ್ತ್ರಿಯಂ ಶಿಷ್ಯಪತ್ನೀಂ ಯಸ್ತು ವೈ ಕಾಮತೋ ವ್ರಜೇತ್ ॥ ೬೬ ॥

ಬ್ರಹ್ಮಹತ್ಯಾವ್ರತಂ ಕುರ್ಯಾತ್ಸ ಷಡಬ್ದಂ ಮುನೀಶ್ವರ ।
ಅಕಾಮತೋ ವ್ರಜೇದ್ಯಸ್ತು ಸೋಽಬ್ದಕೃಚ್ಛ್ರಂ ಸಮಾಚರೇತ್ ॥ ೬೭ ॥

ಮಹಾಪಾತಕಿಸಂಸರ್ಗೇ ಪ್ರಾಯಶ್ಚಿತ್ತಂ ನಿಗದ್ಯತೇ ।
ಪ್ರಾಯಶ್ಚಿತ್ತವಿಶುದ್ಧಾತ್ಮಾ ಸರ್ವಕರ್ಮಫಲಂ ಲಭೇತ್ ॥ ೬೮ ॥

---

ವಿಧಾನೋಕ್ತಪ್ರಕಾರ ಬ್ರಹ್ಮಹತ್ಯೆಗೆ ವಿಹಿತವಾದ ಪ್ರಾಯಶ್ಚಿತ್ತವನ್ನು ಮಾಡಬೇಕು. ಒಂದೇ ದಿನದಲ್ಲಿ ಬಹುಬಾರಿ ಸಂಗಮಾಡಿದರೆ ಮೂರು ವರ್ಷಪ್ರಾಯಶ್ಚಿತ್ತವ್ರತವನ್ನು ಮಾಡಬೇಕು.

೬೫. ಒಂದಾವರ್ತಿ ಸಂಗಮಾಡಿದರೆ ಸಂವತ್ಸರವ್ರತವನ್ನು ಮಾಡಿ ಶುದ್ಧನಾಗಬೇಕು. ಮೂರು ದಿನಗಳು ಸಂಗಮಾಡಿದವನು ಬೆಂಕಿಯಿಂದ ಸುಡಲ್ಪಟ್ಟರೆ ಶುದ್ಧನಾಗುವನು. ಉಪಾಯಾಂತರದಿಂದ ಶುದ್ಧನಾಗುವುದಿಲ್ಲ.

೬೬-೬೭. ಚಂಡಾಲಸ್ತ್ರೀ, ಪುಲ್ಕಸಜಾತಿಸ್ತ್ರೀ, ಸೊಸೆ, ತಂಗಿ, ಸ್ನೇಹಿತನ ಹೆಂಡತಿ, ಶಿಷ್ಯಪತ್ನೀ ಇವರುಗಳಲ್ಲಿ ಕಾಮದಿಂದ ಸಂಗಮಾಡಿದರೆ ಅವನು ಆರು ವರ್ಷ ಬ್ರಹ್ಮಹತ್ಯಾಪ್ರಾಯಶ್ಚಿತ್ತವ್ರತವನ್ನು ಮಾಡಬೇಕು. ಮುನಿವರ್ಯ! ಕಾಮಾತುರನಲ್ಲದೇ ಕಾರಣಾಂತರದಿಂದ ಮೇಲ್ಕಂಡ ಸ್ತ್ರೀಸಂಗಮಾಡಿದರೆ ಅಂತಹವನು ಅಬ್ದಕೃಚ್ಛ್ರವನ್ನಾಚರಿಸಿ ಶುದ್ಧನಾಗಬೇಕು.

೬೮. ಮಹಾಪಾತಕಿಗಳ ಸಹವಾಸಮಾಡಿದರೆ ಅದಕ್ಕೆ ಪ್ರಾಯಶ್ಚಿತ್ತವನ್ನು ಹೇಳುತ್ತೇನೆ ಕೇಳು—ಈ ರೀತಿ ವಿಹಿತಪ್ರಾಯಶ್ಚಿತ್ತವನ್ನು ಆಚರಿಸಿ ಅದರಿಂದ ಪರಿಶುದ್ಧನಾದ ಆತ್ಮನು ಸಕಲ ಕರ್ಮಗಳ ಫಲವನ್ನು ಹೊಂದುವನು.

ಯಸ್ಯ ಯೇನ ಭವೇತ್ಸಂಗೋ ಬ್ರಹ್ಮಹಾದಿಚತುರ್ಷ್ವಪಿ ।
ತತ್ತದ್ವ್ರತಂ ಸ ನಿರ್ವರ್ತ್ಯ ಶುದ್ಧಿಮಾಪ್ನೋತ್ಯಸಂಶಯಂ ॥ ೬೯ ॥

ಅಜ್ಞಾನಾತ್ಪಂಚರಾತ್ರಂ ತು ಸಂಗಮೇಭಿಃ ಕರೋತಿ ಯಃ ।
ಕಾಯಕೃಚ್ಛ್ರಂ ಚರೇತ್ಸಮ್ಯಗನ್ಯಥಾ ಪತಿತೋ ಭವೇತ್ ॥ ೭೦ ॥

ದ್ವಾದಶರಾತ್ರಸಂಸರ್ಗೇ ಮಹಾಸಾಂತಪನಂ ಸ್ಮೃತಂ ।
ಸಂಗಂ ಕೃತ್ವಾರ್ಧಮಾಸಂ ತು ದ್ವಾದಶಾಹಮುಪಾವಸೇತ್ ॥ ೭೧ ॥

ಪರಾಕೋ ಮಾಸಸಂಸರ್ಗೇ ಚಾಂದ್ರಮಾಸತ್ರಯೇ ಸ್ಮೃತಂ ।
ಕೃತ್ವಾ ಸಂಗಂ ತು ಷಣ್ಮಾಸಂ ಚರೇಚ್ಚಾಂದ್ರಾಯಣದ್ವಯಂ ॥ ೭೨ ॥

---

೬೯. ಬ್ರಹ್ಮಹತ್ಯಾದಿ ನಾಲ್ಕು ಮಹಾಪಾಪಗಳನ್ನು ಮಾಡಿದವರ ಪೈಕಿ ಯಾವನು ಯಾವ ಪಾಪಮಾಡಿದವನ ಸಹವಾಸಮಾಡುತ್ತಾನೆಯೋ ಅವನು ಆ ಪಾಪಕ್ಕೆ ವಿಹಿತವಾದ ಪ್ರಾಯಶ್ಚಿತ್ತವನ್ನು ಮಾಡಿಕೊಂಡು ಶುದ್ಧಿಯನ್ನು ಪಡೆಯಬೇಕು. ಸಂದೇಹವಿಲ್ಲ.

೭೦. ತಿಳಿಯದೆ ಈ ಮಹಾಪಾಪಿಗಳ ಸಂಸರ್ಗವನ್ನು ಐದು ದಿನಗಳು ಮಾಡುವವನು ಕಾಯಕೃಚ್ಛ್ರವ್ರತವನ್ನು ಆಚರಿಸಬೇಕು. ಇಲ್ಲದಿದ್ದರೆ ಅವನು ಪತಿತನಾಗುವನು.

೭೧. ಹನ್ನೆರಡು ದಿನಗಳು ಈ ಮಹಾಪಾಪಿಗಳ ಸಂಬಂಧಮಾಡಿದವನು ಮಹಾಸಾಂತಪನವ್ರತವನ್ನು, ಅರ್ಧತಿಂಗಳು ಸಂಗಮಾಡಿದವನು ಹನ್ನೆರಡು ದಿನಗಳು ಉಪವಾಸವನ್ನು ಆಚರಿಸಬೇಕು.

೭೨. ಒಂದು ತಿಂಗಳು ಮಹಾಪಾತಕಿಸಂಸರ್ಗಮಾಡಿದವನು ಪರಾಕವ್ರತವನ್ನೂ ಮೂರು ಚಾಂದ್ರಮಾನತಿಂಗಳು ಸಂಸರ್ಗಮಾಡಿದವನು ಆರು ತಿಂಗಳುಕಾಲ ಎರಡು ಚಾಂದ್ರಾಯಣವ್ರತವನ್ನೂ ಆಚರಿಸಬೇಕು.

ಕಿಂಚಿನ್ನ್ಯೂನಾಬ್ದಸಂಗೇ ತು ಷಣ್ಮಾಸವ್ರತಮಾಚರೇತ್ ।
ಏತಚ್ಚ ತ್ರಿಗುಣಂ ಪ್ರೋಕ್ತಂ ಜ್ಞಾನಾತ್ಸಂಗೇ ಯಥಾಕ್ರಮಂ ॥ ೭೩ ॥

ಮಂಡೂಕಂ ನಕುಲಂ ಕಾಕಂ ವರಾಹಂ ಮೂಷಕಂ ತಥಾ ।
ಮಾರ್ಜಾರಾಜಾವಿಕಂ ಶ್ವಾನಂ ಹತ್ವಾ ಕುಕ್ಕುಟಕಂ ತಥಾ ॥ ೭೪ ॥

ಕೃಚ್ಛ್ರಾರ್ಧಮಾಚರೇದ್ವಿಪ್ರೋಽತಿಕೃಚ್ಛ್ರಂ ಚಾಶ್ವಹಾ ಚರೇತ್ ।
ತಪ್ತಕೃಚ್ಛ್ರಂ ಕರಿವಧೇ ಪರಾಕಂ ಗೋವಧೇ ಸ್ಮೃತಂ ॥ ೭೫ ॥

ಕಾಮತೋ ಗೋವಧೇ ನೈವ ಶುದ್ಧಿರ್ದೃಷ್ಟಾ ಮನೀಷಿಭಿಃ ।
ಪಾನಶಯ್ಯಾಸನಾದ್ಯೇಷು ಪುಷ್ಪಮೂಲಫಲೇಷು ಚ ॥ ೭೬ ॥

ಭಕ್ಷ್ಯಭೋಜ್ಯಾಪಹಾರೇಷು ಪಂಚಗವ್ಯವಿಶೋಧನಂ ।
ಶುಷ್ಕಕಾಷ್ಠತೃಣಾನಾಂ ಚ ದ್ರುಮಾಣಾಂ ಚ ಗುಡಸ್ಯ ಚ ॥ ೭೭ ॥

---

೭೩. ಒಂದು ವರ್ಷಕ್ಕೆ ಸ್ವಲ್ಪ ಕಮ್ಮಿಯಾಗಿ ಸಂಗಮಾಡಿದವನು ಆರು ತಿಂಗಳು ವ್ರತಮಾಡಬೇಕು. ಜ್ಞಾನಪೂರ್ವಕವಾಗಿ ಪಾಪಿಸಂಗಮಾಡಿದರೆ ಕ್ರಮವಾಗಿ ಉಕ್ತಪ್ರಾಯಶ್ಚಿತ್ತಗಳಿಗೆ ಮೂರರಷ್ಟು ವ್ರತವನ್ನು ಆಚರಿಸಬೇಕು.

೭೪–೭೫. ಬ್ರಾಹ್ಮಣನು ಕಪ್ಪೆ, ಮುಂಗಸೀ, ಕಾಗೆ, ಹಂದಿ, ಇಲಿ, ಬೆಕ್ಕು, ಮೇಕೆ, ಕುರಿ, ನಾಯಿ ಮತ್ತು ಕೋಳಿ ಇವುಗಳನ್ನು ಕೊಂದರೆ ಕೃಚ್ಛ್ರಾರ್ಧವ್ರತವನ್ನಾಚರಿಸಬೇಕು. ಕುದುರೆಯನ್ನು ಕೊಂದವನು ಅತಿ ಕೃಚ್ಛ್ರವನ್ನೂ, ಆನೆಯನ್ನು ಕೊಂದವನು ತಪ್ತಕೃಚ್ಛ್ರವನ್ನೂ ಗೋವಧೆಮಾಡಿ ದವನು ಪರಾಕವ್ರತವನ್ನೂ ಮಾಡಿ ಶುದ್ಧನಾಗಬೇಕು.

೭೬-೭೭. ಇಚ್ಛಾಪೂರ್ವಕವಾಗಿ ಗೋವಧೆ ಮಾಡಿದವನಿಗೆ ಶುದ್ಧಿಯು ಜ್ಞಾನಿಗಳಿಗೆ ಗೋಚರವಾಗಿಲ್ಲ. ಎಂದರೆ ಅವನಿಗೆ ಪ್ರಾಯಶ್ಚಿತ್ತವಿಲ್ಲ. ಆ ಪಾಪ ಫಲವನ್ನು ಅನುಭವಿಸಿಯೇ ತೀರಬೇಕು. ಪಾನ, ಶಯ್ಯಾ, ಆಸನ, ಮುಂತಾ ದುವು, ಹೂವು, ಗೆಡ್ಡೆ, ಹಣ್ಣು, ಭಕ್ಷ್ಯ ಮತ್ತು ಭೋಜ್ಯ ಇವುಗಳನ್ನು ಅಪಹರಿ ಸಿದರೆ ಪಂಚಗವ್ಯವನ್ನು ತೆಗೆದುಕೊಂಡು ಶುದ್ಧನಾಗಬೇಕು.

**ಚರ್ಮವಸ್ತ್ರಾಮಿಷಾಣಾಂ ಚ ತ್ರಿರಾತ್ರಂ ಸ್ಯಾದಭೋಜನಂ ।**
**ಟಿಟ್ಟಿಭಂ ಚಕ್ರವಾಕಂ ಚ ಹಂಸಂ ಕಾರಂಡವಂ ತಥಾ ॥ ೭೮ ॥**

**ಉಲೂಕಂ ಸಾರಸಂ ಚೈವ ಕಪೋತಂ ಜಾಲಪಾದಕಂ ।**
**ಶುಕಂ ಚಾಪಂ ಬಲಾಕಂ ಚ ಶಿಂಶುಮಾರಂ ಚ ಕಚ್ಛಪಂ ॥ ೭೯ ॥**

**ಏತೇಷ್ವನ್ಯತಮಂ ಹತ್ವಾ ದ್ವಾದಶಾಹಮಭೋಜನಂ ।**
**ಪ್ರಾಜಾಪತ್ಯವ್ರತಂ ಕುರ್ಯಾದ್ರೇತೋವಿಣ್ಮೂತ್ರಭೋಜನೇ ॥ ೮೦ ॥**

**ಚಾಂದ್ರಾಯಣತ್ರಯಂ ಪ್ರೋಕ್ತಂ ಶೂದ್ರೋಚ್ಛಿಷ್ಟಸ್ಯ ಭೋಜನೇ ।**
**ರಜಸ್ವಲಾಂ ಚ ಚಾಂಡಾಲಂ ಮಹಾಪಾತಕಿನಂ ತಥಾ ॥ ೮೧ ॥**

**ಸೂತಿಕಾಂ ಪತಿತಂ ಚೈವ ಉಚ್ಛಿಷ್ಟಂ ರಜಕಾದಿಕಂ ।**
**ಸ್ಪೃಷ್ಟ್ವಾ ಸ ಚೈಲಂ ಸ್ನಾಯೀತ ಘೃತಂ ಸಂಪ್ರಾಶಯೇತ್ತಥಾ ॥ ೮೨ ॥**

---

೭೭-೭೮. ಒಣಗಿದ ಕಟ್ಟಿಗೆ, ಹುಲ್ಲು, ವೃಕ್ಷಗಳು, ಬೆಲ್ಲ, ಚರ್ಮ, ಬಟ್ಟೆ ಮತ್ತು ಮಾಂಸ ಇವುಗಳನ್ನು ಕದ್ದರೆ ಮೂರು ದಿನಗಳು ಊಟಮಾಡ ಕೂಡದು.

೭೮-೮೦. ಟಿಟ್ಟಿಭ ಎಂದರೆ ಸಿಡಿಮಿಡಿಹಕ್ಕಿ, ಚಕ್ರವಾಕಪಕ್ಷಿ, ಹಂಸ, ಕಾರಂಡವ (ನೀರುಹಕ್ಕಿ) ಉಲೂಕ (ಗೂಬೆ) ಸಾರಸಪಕ್ಷಿ, ಕಪೋತ, ಜಾಲ ಪಾದಕ, ಗಿಳಿ, ಚಾಪ, ಬಲಾಕ, ಶಿಂಶುಮಾರ ಮತ್ತು ಕಚ್ಛಪ ಏಂಬ ಪಕ್ಷ್ಯಾದಿ ವಿಶೇಷಗಳ ಪೈಕಿ ಯಾವುದನ್ನು ಸಂಹರಿಸಿದರೂ ಹನ್ನೆರಡು ದಿನ ಭೋಜನ ವಿಲ್ಲದೇ ಇರಬೇಕು. ರೆತಸ್ಸು, ಮೂತ್ರ, ಮಲ ಇವುಗಳನ್ನು ತಿಂದರೆ ಪ್ರಾಜಾ ಪತ್ಯವ್ರತವನ್ನು ಮಾಡಬೇಕು.

೮೧-೮೨. ಶೂದ್ರನ ಎಂಜಲನ್ನು ತಿಂದರೆ ಮೂರು ಚಾಂದ್ರಾಯಣ ವ್ರತವನ್ನಾಚರಿಸಬೇಕು. ದ್ವಿಜನು ರಜಸ್ವಲೆ (ಮುಟ್ಟಾದವಳು) ಹೊಲೆಯ, ಮಹಾಪಾತಕಮಾಡಿದವನು, ಪ್ರಸವಿಸಿದವಳು, ಪತಿತ, ಎಂಜಲು ಮತ್ತು ಅಗಸ ಮುಂತಾದವರನ್ನು ಮುಟ್ಟಿದರೆ ತಾನುಟ್ಟಿದ್ದ ಬಟ್ಟೆಸಹಿತವಾಗಿ ಸ್ನಾನಮಾಡಿ ಹಾಗೆಯೇ ತುಪ್ಪವನ್ನು ಕುಡಿಯಬೇಕು.

ಗಾಯತ್ರೀಂ ಚ ವಿಶುದ್ಧಾತ್ಮಾ ಜಪೇದಷ್ಟಶತಂ ದ್ವಿಜಃ ।
ಏತೇಷ್ವನ್ಯತಮಂ ಸ್ಪೃಷ್ಟ್ವಾ ತ್ವಜ್ಞಾನಾದ್ಯದಿ ಭೋಜನೇ ॥ ೮೩ ॥

ತ್ರಿರಾತ್ರೋಪೋಷಣಾಚ್ಛುಧ್ಯೇತ್ಪಂಚಗವ್ಯಾಶನಾದ್ದ್ವಿಜಃ ।
ಸ್ನಾನದಾನಜಪಾದೌ ಚ ಭೋಜನಾದೌ ಚ ನಾರದ ॥ ೮೪ ॥

ಏಷಾಮನ್ಯತಮಸ್ಯಾಪಿ ಶಬ್ದಂ ಯಃ ಶೃಣುಯಾದ್ವದೇತ್ ।
ಉದ್ವಮೇದ್ಭುಕ್ತಮನ್ನಂ ಚ ಸ್ನಾತ್ವಾಚೋಪವಸೇತ್ತಥಾ ॥ ೮೫ ॥

ದ್ವಿತೀಯೇಽಹ್ನಿ ಘೃತಂ ಪ್ರಾಶ್ಯ ಶುದ್ಧಿಮಾಪ್ನೋತಿ ನಾರದ ।
ವ್ರತಾದಿಮಧ್ಯೇ ಯದ್ಯೇಷಾಂ ಶೃಣುಯಾದ್ಧ್ವನಿಮುತ್ತಮಾ ॥ ೮೬ ॥

ಅಷ್ಟೋತ್ತರಸಹಸ್ರಂ ಜಪೇದ್ವೈ ವೇದಮಾತರಂ ।
ಪಾಪಾನಾಮಧಿಕಂ ಪಾಪಂ ದ್ವಿಜದೈವತನಿಂದನಂ ॥ ೮೭ ॥

---

೮೩-೮೪. ಹೀಗೆ ಪರಿಶುದ್ಧನಾಗಿ ಗಾಯತ್ರೀಮಂತ್ರವನ್ನು ನೂರೆಂಟಾವರ್ತಿ ಜಪಿಸಬೇಕು. ಮೇಲ್ಕಂಡ ರಜಸ್ವಲೆ ಮುಂತಾದವರ ಪೈಕಿ ಯಾರನ್ನಾದರೂ ಮುಟ್ಟಿ ತಿಳಿಯದೆ ಊಟಮಾಡಿದರೆ ದ್ವಿಜನು ಮೂರು ದಿನ ಉಪವಾಸ ಮಾಡಿ ಪಂಚಗವ್ಯವನ್ನು ಕುಡಿದು ಶುದ್ಧನಾಗಬೇಕು.

೮೪-೮೫. ನಾರದನೇ! ಸ್ನಾನ, ದಾನ, ಜಪ, ಮುಂತಾದುವು ಭೋಜನಾದಿಗಳು ಇವುಗಳನ್ನು ಮಾಡುತ್ತಿರುವ ಕಾಲದಲ್ಲಿ ಮೇಲ್ಕಂಡವರಲ್ಲಿ ಯಾರೊಬ್ಬರ ಶಬ್ದವನ್ನು ಕೇಳಿದರೆ ಅಥವಾ ಅವರ ಸಂಗಡ ಮಾತನಾಡಿದರೆ ಅದುವರೆಗೆ ತಿಂದನ್ನವನ್ನು ವಾಂತಿಮಾಡಿ ನಂತರ ಸ್ನಾನಮಾಡಿ ಹಾಗೆಯೇ ಉಪವಾಸ ಮಾಡಬೇಕು.

೮೬-೮೭. ಆಮೇಲೆ ಎರಡನೆಯ ದಿನ ಘೃತಪ್ರಾಶನೆಮಾಡಿ ಶುದ್ಧಿಯನ್ನು ಪಡೆಯಬೇಕು. ವ್ರತಾದಿಗಳನ್ನು ಮಾಡುತ್ತಿರುವಾಗ ಮಧ್ಯಕಾಲದಲ್ಲಿ ಇವರ ಧ್ವನಿಯನ್ನು ಕೇಳಿದರೆ ಗಾಯತ್ರಿಯನ್ನು ಒಂದು ಸಾವಿರದೆಂಟಾವರ್ತಿ ಜಪಿಸಬೇಕು. ಪಾಪಗಳಲ್ಲೆಲ್ಲಾ ಹೆಚ್ಚಿನದು ದ್ವಿಜರು ಮತ್ತು ದೇವತೆಗಳ ನಿಂದೆಯು.

ನ ದೃಷ್ಟಾ ನಿಷ್ಕೃತಿಸ್ತಸ್ಯ ಸರ್ವಶಾಸ್ತ್ರೇಷು ನಾರದ ।
ಮಹಾಪಾತಕತುಲ್ಯಾನಿ ಯಾನಿ ಪ್ರೋಕ್ತಾನಿ ಸೂರಿಭಿಃ ॥ ೮೮ ॥

ಪ್ರಾಯಶ್ಚಿತ್ತಂ ತು ತೇಷಾಂ ಚ ಕುರ್ಯಾದೇವಂ ಯಥಾವಿಧಿ ।
ಪ್ರಾಯಶ್ಚಿತ್ತಾನಿ ಯಃ ಕುರ್ಯಾನ್ನಾರಾಯಣಪರಾಯಣಃ ॥ ೮೯ ॥

ತಸ್ಯ ಪಾಪಾನಿ ನಶ್ಯಂತಿ ಹ್ಯನ್ಯಥಾ ಪತಿತೋ ಭವೇತ್ ।
ಯಸ್ತು ರಾಗಾದಿನಿರ್ಮುಕ್ತೋ ಹ್ಯನುತಾಪಸಮನ್ವಿತಃ ॥ ೯೦ ॥

ಸರ್ವಭೂತದಯಾಯುಕ್ತೋ ವಿಷ್ಣುಸ್ಮರಣತತ್ಪರಃ ।
ಮಹಾಪಾತಕಯುಕ್ತೋ ವಾ ಯುಕ್ತೋ ವಾ ಸರ್ವಪಾತಕೈಃ ॥ ೯೧ ॥

ವಿಮುಕ್ತ ಏವ ಪಾಪೇಭ್ಯೋ ಜ್ಞೇಯೋ ವಿಷ್ಣುಪರೋ ಯತಃ ।
ನಾರಾಯಣಮನಾದ್ಯಂತಂ ವಿಶ್ವಾಕಾರಮನಾಮಯಂ ॥ ೯೨ ॥

---

೮೮–೮೯. ನಾರದನೇ! ಸಮಸ್ತಶಾಸ್ತ್ರಗಳಲ್ಲಿಯೂ ವಿಮರ್ಶಿಸಲಾಗಿ ಈ ನಿಂದೆಯೆಂಬ ಪಾಪಕ್ಕೆ ಪರಿಹಾರೋಪಾಯವನ್ನು ಕಾಣದೇ ಜ್ಞಾನಿಗಳು ಮಹಾಪಾತಕ, ಅದರ ಸಮಾನಪಾತಕ ಇವುಗಳಿಗೆ ವಿಧಿಸಿರುವ ಪ್ರಾಯಶ್ಚಿತ್ತವನ್ನೇ ವಿಧಿವತ್ತಾಗಿ ನಿಂದಕನು ಮಾಡಬೇಕೆಂದು ನಿರ್ಣಯಿಸಿರುವರು.

೮೯-೯೦. ನಾರಾಯಣನ ಭಕ್ತನಾಗಿ ಪ್ರಾಯಶ್ಚಿತ್ತಗಳನ್ನು ಮಾಡಿಕೊಳ್ಳುವವನಿಗೆ ಪಾಪಗಳು ಹೋಗುತ್ತವೆ. ಹಾಗೆ ಮಾಡದಿದ್ದರೆ ಅವನು ಪತಿತನಾಗುವನು.

೯೦–೯೨. ಮಹಾಪಾತಕವನ್ನು ಮಾಡಿರಲಿ, ಸಕಲ ಪಾಪಗಳನ್ನೂ ಮಾಡಿರಲಿ ಅವನು ರಾಗದ್ವೇಷಾದಿಗಳನ್ನು ಬಿಟ್ಟು ಪಶ್ಚಾತ್ತಾಪದಿಂದ ಕೂಡಿ, ಸರ್ವಪ್ರಾಣಿಗಳಲ್ಲಿಯೂ ದಯೆಯುಳ್ಳವನಾಗಿ ವಿಷ್ಣುಧ್ಯಾನನಿರತನಾದರೆ ಅವನು ವಿಷ್ಣುಭಕ್ತನಾದುದರಿಂದ ಪಾಪವಿಮುಕ್ತನಾಗುವನೆಂದು ತಿಳಿಯಬೇಕು.

೯೨–೯೩. ಉತ್ಪತ್ತಿನಾಶಶೂನ್ಯನು, ಜ್ಞಾನಾನಂದಾದಿ ಪೂರ್ಣವಾದ

**ಯಸ್ತು ಸಂಸ್ಮರತೇ ಮರ್ತ್ಯಃ ಸ ಮುಕ್ತಃ ಪಾಪಕೋಟಿಭಿಃ ।**
**ಸ್ಮೃತೋ ವಾ ಪೂಜಿತೋ ವಾऽಪಿ ಧ್ಯಾತಃ ಪ್ರಣಮಿತೋऽಪಿ ವಾ ॥ ೯೩ ॥**

**ನಾಶಯತ್ಯೇವ ಪಾಪಾನಿ ವಿಷ್ಣುರ್ಹೃದ್ಗಮನಸ್ಸತಾಂ ।**
**ಸಂಪರ್ಕಾದ್ಯದಿ ವಾ ಮೋಹಾದ್ಯಸ್ತು ಪೂಜಯತೇ ಹರಿಂ ॥ ೯೪ ॥**

**ಸರ್ವಪಾಪವಿನಿರ್ಮುಕ್ತಸ್ಸ ಪ್ರಯಾತಿ ಹರೇಃ ಪದಂ ।**
**ಸಕೃತ್ಸಂಸ್ಮರಣಾದ್ವಿಷ್ಣೋರ್ನಶ್ಯಂತಿ ಕ್ಲೇಶಸಂಚಯಾಃ ॥ ೯೫ ॥**

**ಸ್ವರ್ಗಾದಿಭೋಗಪ್ರಾಪ್ತಿಸ್ತು ತಸ್ಯ ವಿಪ್ರಾನುಮೀಯತೇ ।**
**ಮಾನುಷಂ ದುರ್ಲಭಂ ಜನ್ಮ ಪ್ರಾಪ್ಯತೇ ಯೈರ್ಮುನೀಶ್ವರ ॥ ೯೬ ॥**

**ತತ್ರಾಪಿ ಹರಿಭಕ್ತಿಸ್ತು ದುರ್ಲಭಾ ಪರಿಕೀರ್ತಿತಾ ।**
**ತಸ್ಮಾತ್ತಡಿಲ್ಲತಾಲೋಲಂ ಮಾನುಷ್ಯಂ ಪ್ರಾಪ್ಯ ದುರ್ಲಭಂ ॥ ೯೭ ॥**

---

ಆಕಾರವುಳ್ಳವನು, ದೋಷರಹಿತನೂ ಆಗಿರುವ ನಾರಾಯಣನನ್ನು ಧ್ಯಾನಿಸುವ ಮನುಷ್ಯನು ಕೋಟ್ಯಂತರ ಪಾಪಗಳಿಂದ ಬಿಡುಗಡೆಯನ್ನು ಹೊಂದುವನು.

೯೩-೯೪. ಸಜ್ಜನರ ಹೃದಯಗತನಾದ ವಿಷ್ಣುವು ಸ್ಮರಣೆ, ಪೂಜೆ, ಧ್ಯಾನ, ನಮಸ್ಕಾರ ಇವುಗಳಿಂದ ಪಾಪಗಳನ್ನು ಖಂಡಿತವಾಗಿಯೂ ನಾಶ ಪಡಿಸುತ್ತಾನೆ.

೯೪-೯೫. ಸಹವಾಸದಿಂದ ಅಥವಾ ಮೋಹದಿಂದಲಾದರೂ ಹರಿಯನ್ನು ಪೂಜಿಸುವವನು ಸಮಸ್ತಪಾಪಗಳನ್ನೂ ಪರಿಹರಿಸಿಕೊಂಡು ಹರಿಪದ ಎಂದರೆ ವೈಕುಂಠಲೋಕಕ್ಕೆ ಹೋಗುವನು.

೯೫-೯೬. ಬ್ರಾಹ್ಮಣನಾದ ನಾರದನೇ! ಒಂದಾವರ್ತಿ ವಿಷ್ಣುವಿನ ಸ್ಮರಣೆಮಾಡುವ ಮಾತ್ರದಿಂದಲೇ ದುಃಖಸಮೂಹಗಳು ನಾಶವಾಗುತ್ತವೆ. ಆದುದರಿಂದ ಅಂತಹ ವಿಷ್ಣುಧ್ಯಾತೃವಿಗೆ ಸ್ವರ್ಗಾದಿ ಭೋಗಪ್ರಾಪ್ತಿಯು ಸಂಭವಿಸುತ್ತದೆ ಎಂದು ಯುಕ್ತಿಯಿಂದ ಸಿದ್ಧಿಸುತ್ತದೆ.

೯೬-೯೮. ಮುನಿವರ್ಯನೇ! ಮನುಷ್ಯ ಜನ್ಮವು ಅತ್ಯಂತ ದುರ್ಲಭವು. ಅಂತಹುದು ಬಂದಾಗ್ಯೂ ಹರಿಭಕ್ತಿಯುಂಟಾಗುವುದು ಇನ್ನೂ ದುರ್ಲಭವೆಂದು

**ಹರಿಂ ಸಂಪೂಜಯೇದ್ಭಕ್ತ್ಯಾ ಪಶುಪಾಶವಿಮೋಚನಂ ।**
**ಸರ್ವೇಽಂತರಾಯಾ ನಶ್ಯಂತಿ ಮನಃಶುದ್ಧಿಶ್ಚ ಜಾಯತೇ ॥ ೯೮ ॥**

**ಪರಂ ಮೋಕ್ಷಂ ಲಭೇಚ್ಚೈವ ಪೂಜಿತೇ ತು ಜನಾರ್ದನೇ ।**
**ಧರ್ಮಾರ್ಥಕಾಮಮೋಕ್ಷಾಖ್ಯಾಃ ಪುರುಷಾರ್ಥಾಃ ಸನಾತನಾಃ ॥ ೯೯ ॥**

**ಹರಿಪೂಜಾಪರಾಣಾಂ ತು ಸಿಧ್ಯಂತ್ಯತ್ರ ನ ಸಂಶಯಃ ।**
**ಪುತ್ರದಾರಗೃಹಕ್ಷೇತ್ರಧನಧಾನ್ಯಾಭಿಧಾವತೀಂ ॥ ೧೦೦ ॥**

**ಲಬ್ಧ್ವೇಮಾಂ ಮಾನುಷೀಂ ವೃತ್ತಿಂ ರೇ ರೇ ದರ್ಪಂ ತು ಮಾ ಕೃಥಾಃ ।**
**ಸಂತ್ಯಜ್ಯ ಕಾಮಂ ಕ್ರೋಧಂ ಚ ಲೋಭಂ ಮೋಹಂ ಮದಂ ತಥಾ ॥೧೦೧॥**

**ಪರಾಪವಾದಂ ನಿಂದಾಂ ಚ ಭಜಧ್ವಂ ಭಕ್ತಿತೋ ಹರಿಂ ।**
**ವ್ಯಾಪಾರಾನ್ಸಕಲಾಂಸ್ತ್ಯಕ್ತ್ವಾ ಪೂಜಯಧ್ವಂ ಜನಾರ್ದನಂ ॥ ೧೦೨ ॥**

---

ಉಕ್ತವಾಗಿದೆ. ಆದುದರಿಂದ ದುರ್ಲಭವಾದ, ಮಿಂಚಿನ ಬಳ್ಳಿಯಂತೆ ಅಶಾಶ್ವತವಾದ ಈ ಮನುಷ್ಯಜನ್ಮವನ್ನು ಹೊಂದಿ ಮನುಷ್ಯರ ಬಂಧವನ್ನು ಹೋಗಲಾಡಿಸುವ ಶ್ರೀಹರಿಯನ್ನು ಭಕ್ತಿಯಿಂದ ಪೂಜಿಸಬೇಕು. ಅದರಿಂದ ಸಮಸ್ತ ವಿಘ್ನಗಳೂ ಪರಿಹಾರವಾಗುತ್ತವೆ. ಚಿತ್ತಶುದ್ಧಿಯೂ ಉಂಟಾಗುತ್ತದೆ.

೯೯ ೧೦೦. ನಾರಾಯಣನನ್ನು ಪೂಜಿಸಿದರೆ ಉತ್ಕೃಷ್ಟವಾದ ಮೋಕ್ಷವು ಲಭಿಸುತ್ತದೆ. ಪುರಾತನಗಳಾದ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ಪುರುಷಾರ್ಥಗಳು ಹರಿಪೂಜೆಯಲ್ಲಿ ನಿರತರಾದವರಿಗೆ ಖಂಡಿತವಾಗಿಯೂ ಸಿದ್ಧವಾಗಿರುತ್ತವೆ ಸಂಶಯವಿಲ್ಲ.

೧೦೦-೧೦೨. ಜೀವನೇ! ಮಕ್ಕಳು ಹೆಂಡತಿ, ಮನೆ, ಜಮೀನು, ಹಣ, ಧಾನ್ಯ ಇವುಗಳನ್ನೇ ಚಿಂತಿಸುತ್ತಿರುವ ಈ ಮಾನುಷವೃತ್ತಿಯನ್ನು ಅವಲಂಬಿಸಿ ಅಹಂಕಾರಪಡಬೇಡ. ಕಾಮ, ಕ್ರೋಧ, ಲೋಭ, ಮೋಹ, ಮದ, ಪರಾಪವಾದ ಮತ್ತು ನಿಂದೆ ಇವುಗಳನ್ನು ಬಿಟ್ಟು ಭಕ್ತಿಯಿಂದ ಹರಿಯನ್ನು ಭಜಿಸು. ಇತರ ಸಕಲ ವ್ಯಾಪಾರಗಳನ್ನೂ ಬಿಟ್ಟು ಜನಾರ್ದನನ್ನು ಪೂಜಿಸು.

ನಿಕಟಾ ಏವ ದೃಶ್ಯಂತೇ ಕೃತಾಂತನಗರದ್ರುಮಾಃ ।
ಯಾವನ್ನಾಯಾತಿ ಮರಣಂ ಯಾವನ್ನಾಯಾತಿ ವೈ ಜರಾ ॥ ೧೦೩ ॥

ಯಾವನ್ನೇಂದ್ರಿಯವೈಕಲ್ಯಂ ತಾವದೇವಾರ್ಚಯೇದ್ಧರಿಂ ।
ಧೀಮಾನ್ನ ಕುರ್ಯಾದ್ವಿಶ್ವಾಸಂ ಶರೀರೇಽಸ್ಮಿನ್ವಿನಶ್ವರೇ ॥ ೧೦೪ ॥

ನಿತ್ಯಂ ಸನ್ನಿಹಿತೋ ಮೃತ್ಯುಃ ಸಂಪದತ್ಯಂತಚಂಚಲಾ ।
ಆಸನ್ನಮರಣೋ ದೇಹಸ್ತಸ್ಮಾದ್ದರ್ಪಂ ವಿಮುಂಚತ ॥ ೧೦೫ ॥

ಸಂಯೋಗಾ ವಿಪ್ರಯೋಗಾಂತಾಃ ಸರ್ವಂ ಚ ಕ್ಷಣಭಂಗುರಂ ।
ಏತದ್ಜ್ಞಾತ್ವಾ ಮಹಾಭಾಗ ಪೂಜಯಸ್ವ ಜನಾರ್ದನಂ ॥ ೧೦೬ ॥

ಆಶು ಯಾಸ್ಯಥ ತೇನೈವ ಮೋಕ್ಷಮತ್ಯಂತದುರ್ಲಭಂ ।
ಭಕ್ತ್ಯಾ ಯಜತಿ ಯೋ ವಿಷ್ಣುಂ ಮಹಾಪಾತಕವಾನಪಿ ॥ ೧೦೭ ॥

---

೧೦೩-೧೦೪. ಯಮಪಟ್ಟಣದ ವೃಕ್ಷಗಳು ಹತ್ತಿರವಾಗಿಯೇ ಕಾಣುತ್ತಿವೆ. ಮುಪ್ಪು, ಕಣ್ಣು, ಕಿವಿ, ಮುಂತಾದ ಇಂದ್ರಿಯಗಳ ಶಕ್ತಿ ಕುಂದುವುದು, ಮರಣ ಇವುಗಳು ಬರುವಷ್ಟರಲ್ಲಿಯೇ ಹರಿಯನ್ನು ಪೂಜಿಸಿ ಸಾಧನಮಾಡಿಕೊಳ್ಳಬೇಕು. ಬುದ್ಧಿವಂತನಾದವನು ಈ ನಶ್ವರವಾದ ಶರೀರದಲ್ಲಿ ಅಭಿಮಾನವಿಡಬಾರದು.

೧೦೫. ಮೃತ್ಯುವು ಯಾವಾಗಲೂ ಹತ್ತಿರದಲ್ಲಿಯೇ ಇರುತ್ತದೆ. ಐಶ್ವರ್ಯವೋ ಅತ್ಯಂತ ಚಂಚಲವು. ಶರೀರವೋ ಮರಣೋನ್ಮುಖವು. ಆದುದರಿಂದ ಗರ್ವವನ್ನು ಬಿಡಿ.

೧೦೬. ಹುಟ್ಟಿದ ಮೊದಲು ಸಾಯುವವರೆಗೂ ಸಂಭವಿಸುವುದೆಲ್ಲವೂ ಅಶಾಶ್ವತವಾದುವು. ಧನ್ಯನೇ! ಈ ತತ್ವವನ್ನು ತಿಳಿದು ಜನಾರ್ದನನನ್ನು ಪೂಜಿಸು.

೧೦೭-೧೦೮. ಆದಕಾರಣ ಭಗವತ್ಪೂಜೆಮಾಡಿ, ಅದರಿಂದಲೇ ಅತ್ಯಂತ ದುರ್ಲಭವಾದ ಮೋಕ್ಷವನ್ನು ಬೇಗ ಹೊಂದು. ಭಕ್ತಿಯಿಂದ ವಿಷ್ಣುವನ್ನು

ಸೋऽಪಿ ಯಾತಿ ಪರಂ ಸ್ಥಾನಂ ಯತ್ರ ಗತ್ವಾ ನ ಶೋಚತಿ ।
ಸರ್ವತೀರ್ಥಾನಿ ಯಜ್ಞಾಶ್ಚ ಸಾಂಗಾ ವೇದಾಶ್ಚ ಸತ್ತಮ ॥ ೧೦೮ ॥

ನಾರಾಯಣಾರ್ಚನಸ್ಯೈತೇ ಕಲಾಂ ನಾರ್ಹಂತಿ ಷೋಡಶೀಂ ।
ಕಿಂ ವೈ ವೇದೈರ್ಮಖೈಃ ಶಾಸ್ತ್ರೈಃ ಕಿಂ ವಾ ತೀರ್ಥನಿಷೇವಣೈಃ ॥ ೧೦೯ ॥
ವಿಷ್ಣುಭಕ್ತಿವಿಹೀನಾನಾಂ ಕಿಂ ತಪೋಭಿರ್ವ್ರತೈರಪಿ ॥ ೧೧೦ ॥

ಯಜಂತಿ ಯೇ ವಿಷ್ಣುಮನಂತಮೂರ್ತಿಂ
ನಿರೀಹಮೋಂಕಾರಗತಂ ವರೇಣ್ಯಂ ।
ವೇದಾಂತವೇದ್ಯಂ ಭವರೋಗವೈದ್ಯಂ
ತೇ ಯಾಂತಿ ಮರ್ತ್ಯಾಃ ಪದಮಚ್ಯುತಸ್ಯ ॥ ೧೧೧ ॥

---

ಪೂಜಿಸುವವನು ಮಹಾಪಾತಕಿಯಾಗಿದ್ದಾಗ್ಯೂ ದುಃಖರಹಿತವಾದ ಉತ್ತಮ ಸ್ಥಾನವನ್ನು ಪಡೆಯುತ್ತಾನೆ.

೧೦೮-೧೧೦. ಸಾಧೂತ್ತಮನೇ! ಸಮಸ್ತ ತೀರ್ಥಗಳು, ಯಜ್ಞಗಳು ಮತ್ತು ಷಡಂಗಸಹಿತವಾದ ವೇದಗಳು ಇವುಗಳೆಲ್ಲವೂ ನಾರಾಯಣಪೂಜೆಯ ಹದಿನಾರನೆಯ ಒಂದಂಶಕ್ಕೂ ಸಮಾನವಾಗಲಾರದು. ವಿಷ್ಣುಭಕ್ತಿರಹಿತರಾದ ವರಿಗೆ ವೇದ, ಯಜ್ಞ, ಶಾಸ್ತ್ರ, ತೀರ್ಥಸೇವನೆ, ತಪಸ್ಸು, ವ್ರತ ಇವುಗಳಿಂದೇನು ಫಲ? ಎಂದರೆ ವಿಷ್ಣುಭಕ್ತಿಯಿಲ್ಲದೆ ವೇದಾಧ್ಯಯನಾದಿ ಯಾವ ಸತ್ಕರ್ಮಮಾಡಿ ದಾಗ್ಯೂ ಅದು ನಿಷ್ಫಲವಾಗುತ್ತದೆ. ಭಕ್ತಿಯಿಂದ ಮಾಡಿದುದು ಸಫಲವಾಗುತ್ತದೆ. ಕರ್ಮವನ್ನು ಮಾಡುವ ಅಧಿಕಾರಮಾತ್ರವೇ ನಮಗಿರುವುದು, ಅದರ ಫಲವನ್ನಾದರೋ ಈಶ್ವರನೇ ಕೊಡಬೇಕು. ಆದುದರಿಂದ ಅವನಲ್ಲಿ ಭಕ್ತಿಮಾಡಿ ಅನುಗ್ರಹ ಸಂಪಾದಿಸಿದರೇ ಇತರ ಕರ್ಮವೆಲ್ಲವೂ ಸಫಲವಾಗುತ್ತದೆಯಾದಕಾರಣ ಭಕ್ತಿಯು ಮುಖ್ಯ ಕರ್ತವ್ಯವೆಂದು ಭಾವ.

೧೧೧. ಅಪರಿಚ್ಛಿನ್ನಶರೀರನು, ನಿಸ್ಪೃಹನು, ಓಂಕಾರವಾಚ್ಯನು, ಸರ್ವೋತ್ತಮನು, ಉಪನಿಷತ್ತುಗಳಿಂದ ಪರಮ ಮುಖ್ಯ ಪ್ರತಿಪಾದ್ಯನು ಮತ್ತು ಸಂಸಾರವೆಂಬ ವ್ಯಾಧಿಯನ್ನು ನಾಶಮಾಡುವವನೂ ಆಗಿರುವ ವಿಷ್ಣುವನ್ನು ಪೂಜಿಸುವ ಮನುಷ್ಯರು ಅಚ್ಯುತನ ಪಾದಾರವಿಂದವನ್ನು ಪಡೆಯುವರು.

ಅನಾದಿಮಾತ್ಮಾನಮನಂತಶಕ್ತಿಮಾ
ಧಾರಭೂತಂ ಜಗತಃ ಸುರೇಡ್ಯಂ ।
ಜ್ಯೋತಿಃಸ್ವರೂಪಂ ಪರಮಚ್ಯುತಾಖ್ಯಂ
ಸ್ಮೃತ್ವಾ ಸಮಭ್ಯೇತಿ ನರಃ ಶ್ರೇಯಂ ॥ ೧೧೨ ॥

ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ ಪ್ರಥಮಪಾದೇ ಪ್ರಾಯಶ್ಚಿತ್ತವಿಧಿರ್ನಾಮ ತ್ರಿಂಶೋಽಧ್ಯಾಯಃ

---

೧೧೨. ಉತ್ಪತ್ತಿಶೂನ್ಯನು, ಸರ್ವಸ್ವಾಮಿಯು, ಅಪರಿಮಿತ ಶಕ್ತಿಯುಳ್ಳವನು, ಜಗತ್ತಿಗೆ ಆಧಾರಭೂತನು, ದೇವತೆಗಳಿಂದ ಸ್ತುತ್ಯನು, ಪ್ರಕಾಶಸ್ವರೂಪನು, ಉತ್ಕೃಷ್ಟನೂ ಆಗಿರುವ ಭಗವಂತನನ್ನು ಸ್ಮರಿಸುವುದರಿಂದ ಮನುಷ್ಯನು ಸ್ನೇಹಿತನಂತೆ ಹಿತಕರ್ತನಾದ ಅಚ್ಯುತನೆಂಬ ಪರಮಾತ್ಮನನ್ನು ಹೊಂದುತ್ತಾನೆ.

ಇಂತು ಶ್ರೀಬೃಹನ್ನಾರದೀಯಪುರಾಣ ಪೂರ್ವಭಾಗ ಪ್ರಥಮಪಾದದಲ್ಲಿ
ಪ್ರಾಯಶ್ಚಿತ್ತವಿಧಾನವೆಂಬ ಮೂವತ್ತನೆಯ ಅಧ್ಯಾಯವು
ಮುಗಿದುದು.

### ಕಥಾಸಾರಾಂಶ

ಅಜ್ಞಾನ ಅಥವಾ ಜ್ಞಾನಪೂರ್ವಕವಾಗಿ ಮಾಡಿದ ಪಂಚಮಹಾಪಾತಕಗಳಿಗೆ ಪ್ರಾಯಶ್ಚಿತ್ತಗಳು, ಸುವರ್ಣ ಮುಂತಾದ ಅಳತೆಗಳು, ಗೋವು ಮುಂತಾದ ಪ್ರಾಣಿವಧೆಗೆ ಪ್ರಾಯಶ್ಚಿತ್ತ, ಭಕ್ತಿಯು ಪರಮಸಾಧನವೆಂಬುದು, ಹರಿಪೂಜೆಯ ಮಹಿಮೆ, ಮನುಷ್ಯ ಜನ್ಮದ ದೌರ್ಲಭ್ಯ, ಆಗ ಅವಶ್ಯಕರ್ತವ್ಯ ಮತ್ತು ತ್ಯಾಜ್ಯ ಮುಂತಾದವು ವಿಸ್ತಾರವಾಗಿ ನಿರೂಪಿತವಾಗಿವೆ.

# ಏಕತ್ರಿಂಶೋಽಧ್ಯಾಯಃ

---

**ನಾರದ ಉವಾಚ**

**ಕಥಿತೋ ಭವತಾ ಸಮ್ಯಗ್ವರ್ಣಾಶ್ರಮವಿಧಿರ್ಮುನೇ ।**
**ಇದಾನೀಂ ಶ್ರೋತುಮಿಚ್ಛಾಮಿ ಯಮಮಾರ್ಗಂ ಸುದುರ್ಗಮಂ ॥ ೧ ॥**

**ಸನಕ ಉವಾಚ**

**ಶೃಣು ವಿಪ್ರ ಪ್ರವಕ್ಷ್ಯಾಮಿ ಯಮಮಾರ್ಗಂ ಸುದುರ್ಗಮಂ ।**
**ಸುಖದಂ ಪುಣ್ಯಶೀಲಾನಾಂ ಪಾಪಿನಾಂ ಭಯದಾಯಕಂ ॥ ೨ ॥**

**ಷಡಶೀತಿಸಹಸ್ರಾಣಿ ಯೋಜನಾನಾಂ ಮುನೀಶ್ವರ ।**
**ಯಮಮಾರ್ಗಸ್ಯ ವಿಸ್ತಾರಃ ಕಥಿತಃ ಪೂರ್ವಸೂರಿಭಿಃ ॥ ೩ ॥**

---

## ಮೂವತ್ತೊಂದನೆಯ ಅಧ್ಯಾಯ

೧. ಸನಕಮುನಿಯೇ! ನಿನ್ನಿಂದ ವರ್ಣಾಶ್ರಮವಿಧಾನವು ಚೆನ್ನಾಗಿ ಉಪದೇಶಿಸಲ್ಪಟ್ಟಿತು. ಈಗ ಸಂಚರಿಸಲಶಕ್ಯವಾದ ಯಮಮಾರ್ಗವನ್ನು ತಿಳಿಯಲಿಚ್ಛಿಸುವೆನು ಎಂದು ನಾರದನು ಕೇಳಿದನು.

೨. ಸನಕನು ಹೇಳಿದನು—ಬ್ರಾಹ್ಮಣನೇ! ಕೇಳು. ಪುಣ್ಯವಂತರಿಗೆ ಸುಖಪ್ರದವು, ಪಾಪಿಷ್ಠರಿಗೆ ಭಯಂಕರವೂ ಆಗಿರುವ ಅತ್ಯಂತ ದುರ್ಗಮವಾದ ಯಮಮಾರ್ಗವನ್ನು ಹೇಳುತ್ತೇನೆ.

೩. ಮುನಿಶ್ರೇಷ್ಠನೇ! ಹಿರಿಯರಾದ ಜ್ಞಾನಿಗಳು ಯಮಮಾರ್ಗವು ಎಂಭತ್ತಾರುಸಾವಿರ ಯೋಜನ ವಿಸ್ತಾರವುಳ್ಳದೆಂದು ಹೇಳಿದ್ದಾರೆ.

ಯೇ ನರಾ ದಾನಶೀಲಾಸ್ತು ತೇ ಯಾಂತಿ ಸುಖಿನೋ ದ್ವಿಜ ।
ಧರ್ಮಶೂನ್ಯಾ ನರಾ ಯಾಂತಿ ದುಃಖೇನ ಭೃಶಮರ್ದಿತಾಃ ॥ ೪ ॥

ಅತಿಭೀತಾ ವಿವಸ್ತ್ರಾಶ್ಚ ಶುಷ್ಕಕಂಠೋಷ್ಠತಾಲುಕಾಃ ।
ಕ್ರಂದಂತೋ ವಿಸ್ವರಂ ದೀನಾಃ ಪಾಪಿನೋ ಯಾಂತಿ ತತ್ಪಥಿ ॥ ೫ ॥

ಹನ್ಯಮಾನಾ ಯಮಭಟೈಃ ಪ್ರತೋದಾದ್ಯೈಸ್ತಥಾಯುಧೈಃ ।
ಇತಸ್ತತಃ ಪ್ರಧಾವಂತೋ ಯಾಂತಿ ದುಃಖೇನ ತತ್ಪಥಿ ॥ ೬ ॥

ಕ್ವಚಿತ್ಪಂಕಃ ಕ್ವಚಿದ್ವಹ್ನಿಃ ಕ್ವಚಿತ್ಸಂತಪ್ತಸೈಕತಂ ।
ಕ್ವಚಿದ್ವೈ ಲವರೂಪೇಣ ತೀಕ್ಷ್ಣಧಾರಾಃ ಶಿಲಾಃ ಕ್ವಚಿತ್ ॥ ೭ ॥

ಕ್ವಚಿತ್ಕಂಟಕವೃಕ್ಷಾಶ್ಚ ದುಃಖಾರೋಹಶಿಲಾ ನಗಾಃ ।
ಗಾಢಾಂಧಕಾರಾಶ್ಚ ಗುಹಾಃ ಕಂಟಕಾವರಣಂ ಮಹತ್ ॥ ೮ ॥

---

೪. ದ್ವಿಜನೇ! ದಾನಶೀಲರಾದ ಮನುಷ್ಯರು ಸುಖದಿಂದ ಪ್ರಯಾಣ ಮಾಡುವರು. ಧರ್ಮವನ್ನು ಮಾಡದಿರುವವರು ಅತ್ಯಂತ ದುಃಖಪೀಡಿತರಾಗಿ ಪ್ರಯಾಣಮಾಡುವರು.

೫. ಆ ಯಮಮಾರ್ಗದಲ್ಲಿ ಪಾಪಿಷ್ಠರು ಬಹಳ ಭಯಪಡುತ್ತಾ, ಬಟ್ಟೆಯಿಲ್ಲದೇ, ಗಂಟಲು ತುಟಿ ದವಡೆಗಳನ್ನು ಒಣಗಿಸಿಕೊಂಡು, ಅಪಸ್ವರ ದಿಂದ ಅಳುತ್ತಾ ದೀನರಾಗಿ ಹೋಗುತ್ತಾರೆ.

೬. ಬೆತ್ತ ಮುಂತಾದ ಆಯುಧಗಳಿಂದ ಯಮಭಟರಿಂದ ಹಿಂಸಿಸಲ್ಪ ಡುವವರಾಗಿ ಅಲ್ಲಲ್ಲಿ ಓಡಾಡುತ್ತಾ ಬಹುಕಷ್ಟದಿಂದ ಆ ಯಮಮಾರ್ಗದಲ್ಲಿ ಪ್ರಯಾಣಮಾಡುತ್ತಾರೆ.

೭-೧೧. ಸ್ವಲ್ಪ ದೂರ ಕೆಸರು, ಆಮೇಲೆ ಬೆಂಕಿ, ಕೆಲವೆಡೆಗಳಲ್ಲಿ ಕಾದ ಮರಳು, ಇನ್ನು ಕೆಲವು ಸ್ಥಾನಗಳಲ್ಲಿ ಸೂಕ್ಷ್ಮವಾದ ಮೊನಚಾದ ಕಲ್ಲುಗಳು, ಕೆಲವು ಸ್ಥಳಗಳಲ್ಲಿ ಮುಳ್ಳುಗಿಡಗಳು, ಕಷ್ಟದಿಂದ ಹತ್ತಬೇಕಾದ ಕಲ್ಲುಗಳುಳ್ಳ ಬೆಟ್ಟಗಳು, ಕಗ್ಗತ್ತಲೆಯುಳ್ಳ ಗುಹೆಗಳು, ದೊಡ್ಡ ದೊಡ್ಡ ಮುಳ್ಳಿನ ಪೊದೆಗಳು, ಪ್ರಾಕಾರದ ಕೊನೆಗೆ ಹತ್ತುವುದು, ಗುಹೆಯಲ್ಲಿ ಪ್ರವೇಶಿಸುವುದು, ಹಿಟ್ಟುಕಲ್ಲು,

ವಹ್ನ್ಯಾಗಾರೋಹಣಂ ಚೈವ ಕಂದರಸ್ಯ ಪ್ರವೇಶನಂ ।
ಶರ್ಕರಾಶ್ಚ ತಥಾ ಲೋಷ್ಟಾಃ ಸೂಚೀತುಲ್ಯಾಶ್ಚ ಕಂಟಕಾಃ ॥ ೯ ॥

ಶೈವಾಲಂ ಚ ಕ್ವಚಿನ್ಮಾರ್ಗೇ ಕ್ವಚಿತ್ಕೀಚಕಪಂಕ್ತಯಃ ।
ಕ್ವಚಿದ್ವ್ಯಾಘ್ರಾಶ್ಚ ಗರ್ಜಂತೇ ವರ್ಧಂತೇ ಚ ಕ್ವಚಿಜ್ಜ್ವರಾಃ ॥ ೧೦ ॥

ಏವಂ ಬಹುವಿಧಕ್ಲೇಶಾಃ ಪಾಪಿನೋ ಯಾಂತಿ ನಾರದ ।
ಪಾಶೇನ ಯಂತ್ರಿತಾಃ ಕೇಚಿತ್ಕೃಷ್ಯಮಾಣಾಸ್ತಥಾಂಕುಶೈಃ ।
ಶಸ್ತ್ರಾಸ್ತ್ರೈಸ್ತಾಡ್ಯಮಾನಾಶ್ಚ ಪೃಷ್ಠತೋ ಯಾಂತಿ ಪಾಪಿನಃ ॥ ೧೨ ॥

ನಾಸಾಗ್ರಪಾಶಕೃಷ್ಟಾಶ್ಚ ಕೇಚಿದಾಂತ್ರೈಶ್ಚ ಬಂಧಿತಾಃ ।
ವಹಂತಶ್ಚಾಯಸಾಂ ಭಾರಂ ಶಿಶ್ನಾಗ್ರೇಣ ಪ್ರಯಾಂತಿ ವೈ ॥ ೧೩ ॥

---

ಕಟ್ಟಿಗೆ, ಸೂಜಿಯಂತಿರುವ ಮುಳ್ಳು, ದಾರಿಯ ಕೆಲವೆಡೆಯಲ್ಲಿ ಪಾಚಿ, ಇನ್ನು ಕೆಲವು ಸ್ಥಳಗಳಲ್ಲಿ ಬಿದುರುಪೊದೆಗಳು, ಕೆಲವು ಸ್ಥಳಗಳಲ್ಲಿ ಹುಲಿಗಳ ಗರ್ಜನೆ, ಕೆಲವು ಸ್ಥಳಗಳಲ್ಲಿ ಜ್ವರವೃದ್ಧಿ ಇವುಗಳುಳ್ಳ ಯಮಮಾರ್ಗದಲ್ಲಿ ಪಾಪಿಗಳು ಹೋಗುತ್ತಿರುವರು. ನಾರದನೇ! ಈ ಪ್ರಕಾರ ಪಾಪಿಗಳು ಬಹು ವಿಧವಾಗಿ ಕಷ್ಟಪಡುತ್ತಾ ಕೂಗಿಕೊಳ್ಳುತ್ತಾ ಅಳುತ್ತಾ, ಬಳಲುತ್ತಾ ಹೋಗುತ್ತಿರುವರು.

೧೨. ಕೆಲವರು ಹಗ್ಗದಿಂದ ಕಟ್ಟಲ್ಪಟ್ಟವರು, ಅಂಕುಶಗಳಿಂದ ಸೆಳೆಯಲ್ಪಡುತ್ತಿರುವವರು ಕೆಲವರು, ಶಸ್ತ್ರಾಸ್ತ್ರಗಳಿಂದ ಹಿಂಸಿಸಲ್ಪಟ್ಟವರಾಗಿ ಕೆಲವು ಪಾಪಿಗಳು ಪೃಷ್ಠದಿಂದ ದೇಕುತ್ತಿರುವರು.

೧೩. ಹಗ್ಗದಿಂದ ಮೂಗಿನ ಕೊನೆಯ ಭಾಗವನ್ನು ಕಟ್ಟಿ ಎಳೆಯಿಸಿಕೊಳ್ಳಲ್ಪಡುವವರು ಕೆಲವರು, ಇನ್ನು ಕೆಲವರು ನರಗಳಿಂದ ಬಂಧಿತರು, ಶಿಶ್ನಾಗ್ರದಿಂದ ಕಬ್ಬಿಣದ ತುಂಡನ್ನು ಎಳೆದುಕೊಂಡು ಕೆಲವು ಪಾಪಿಗಳು ನಡೆಯುತ್ತಿರುವರು.

ಅಯೋಭಾರದ್ವಯಂ ಕೇಚಿನ್ನಾಸಾಗ್ರೇಣ ತಥಾ ಪರೇ ।
ಕರ್ಣಾಭ್ಯಾಂ ಚ ತಥಾ ಕೇಚಿದ್ವಹಂತೋ ಯಾಂತಿ ಪಾಪಿನಃ ॥ ೧೪ ॥

ಕೇಚಿಚ್ಚ ಸ್ಖಲಿತಾ ಯಾಂತಿ ತಾಡ್ಯಮಾನಾಸ್ತಥಾ ಪರೇ ।
ನಿರುಚ್ಛ್ವಾಸತಯಾ ಕೇಚಿತ್ಕೇಚಿದಾಚ್ಛನ್ನಲೋಚನಾಃ ॥ ೧೫ ॥

ಛಾಯಾಜಲವಿಹೀನೇ ತು ಪಥಿ ಯಾಂತ್ಯತಿದುಃಖಿತಾಃ ।
ಶೋಚಂತಃ ಸ್ವಾನಿ ಕರ್ಮಾಣಿ ಜ್ಞಾನಾಜ್ಞಾನಕೃತಾನಿ ಚ ॥ ೧೬ ॥

ಯೇ ತು ನಾರದ ಧರ್ಮಿಷ್ಠಾ ದಾನಶೀಲಾ ಸುಬುದ್ಧಯಃ ।
ಅತೀವ ಸುಖಸಂಪನ್ನಾಸ್ತೇ ಯಾಂತಿ ಧರ್ಮಮಂದಿರಂ ॥ ೧೭ ॥

ಅನ್ನದಾಸ್ತು ಮುನಿಶ್ರೇಷ್ಠ ಭುಂಜಂತಃ ಸ್ವಾದು ಯಾಂತಿ ವೈ ।
ನೀರದಾ ಯಾಂತಿ ಸುಖಿನಃ ಪಿಬಂತಃ ಕ್ಷೀರಮುತ್ತಮಂ ॥ ೧೮ ॥

---

೧೪. ಕೆಲವರು ಪಾಪಿಗಳು ಎರಡು ಭಾರ ತೂಕವುಳ್ಳ ಕಬ್ಬಿಣವನ್ನು ನಾಸಾಗ್ರದಿಂದಲೂ, ಇನ್ನು ಕೆಲವರು ಕಿವಿಗಳಿಂದಲೂ ಹೊತ್ತುಕೊಂಡು ಹೋಗುತ್ತಿರುವರು.

೧೫. ಕೆಲವರು ಎಡವಿಬೀಳುತ್ತಾ, ಕೆಲವರು ಏಟುತಿನ್ನುತ್ತಾ, ಕೆಲವರು ನಿಟ್ಟುಸಿರುಬಿಡುತ್ತಾ, ಇನ್ನುಕೆಲವರು ಕಣ್ಣು ಕಟ್ಟಿಸಿಕೊಂಡು ಹೋಗುತ್ತಿರುವರು.

೧೬. ಪಾಪಿಷ್ಠರು ನೆರಳು ನೀರು ಇಲ್ಲದ ಮಾರ್ಗದಲ್ಲಿ ಬಹು ಕಷ್ಟ ಪಡುತ್ತಾ, ಜ್ಞಾನಪೂರ್ವಕವಾಗಿ ಅಥವಾ ಅಜ್ಞಾನದಿಂದ ತಾವು ಮಾಡಿದ ಕರ್ಮಗಳನ್ನು ಕುರಿತು ದುಃಖಿಸುತ್ತಾ ಪ್ರಯಾಣಮಾಡುತ್ತಿರುವರು.

೧೭. ನಾರದನೇ! ಧರ್ಮಿಷ್ಠರು, ದಾನಪರರು ಮತ್ತು ಸದ್ಬುದ್ಧಿಯುಳ್ಳವರೂ ಆಗಿರುವವರು ಬಹು ಸುಖದಿಂದ ಧರ್ಮರಾಜನ ಮಂದಿರಕ್ಕೆ ಹೋಗುವರು.

೧೮. ಅನ್ನದಾನಿಗಳು ಮಧುರವಾದ ಆಹಾರವನ್ನು ತಿನ್ನುತ್ತಾ ಹೋಗುವರು. ಉದಕದಾನಮಾಡಿದವರು ಹಾಲು ಕುಡಿಯುತ್ತಾ ಸುಖಿಗಳಾಗಿ ಪ್ರಯಾಣ ಮಾಡುವರು.

ತಕ್ರದಾ ದಧಿದಾಶ್ಚೈವ ತತ್ತದ್ಭೋಗಂ ಲಭಂತಿ ವೈ ।
ಘೃತದಾ ಮಧುದಾಶ್ಚೈವ ಕ್ಷೀರದಾಶ್ಚ ದ್ವಿಜೋತ್ತಮ ॥ ೧೯ ॥

ಸುಧಾಪಾನಂ ಪ್ರಕುರ್ವಂತೋ ಯಾಂತಿ ವೈ ಧರ್ಮಮಂದಿರಂ ।
ಶಾಕದಾಃ ಪಾಯಸಂ ಭುಂಜನ್ ದೀಪದೋ ಜ್ವಲಯನ್ದಿಶಃ ॥ ೨೦ ॥

ವಸ್ತ್ರದೋ ಮುನಿಶಾರ್ದೂಲ ಯಾತಿ ದಿವ್ಯಾಂಬರಾವೃತಃ ।
ಪರಿಷ್ಕಾರಪ್ರದೋ ಯಾತಿ ಸ್ತೂಯಮಾನೋಽಮರೈಃ ಪಥಿ ॥ ೨೧ ॥

ಗೋದಾನೇನ ನರೋ ಯಾತಿ ಸರ್ವಸೌಖ್ಯಸಮನ್ವಿತಃ ।
ಭೂಮಿದೋ ಗೃಹದಶ್ಚೈವ ವಿಮಾನೇ ಸರ್ವಸಂಪದಿ ॥ ೨೨ ॥

ಅಪ್ಸರೋಗಣಸಂಕೀರ್ಣೇ ಕ್ರೀಡನ್ಯಾತಿ ವೃಷಾಲಯಂ ।
ಹಯದೋ ಯಾನದಶ್ಚಾಪಿ ಗಜದಶ್ಚ ದ್ವಿಜೋತ್ತಮ ॥ ೨೩ ॥

---

೧೯-೨೦. ಮಜ್ಜಿಗೆ, ಮೊಸರು ಇವುಗಳನ್ನು ದಾನಮಾಡಿದವರು ಆಯಾಯಾ ಭೋಗವನ್ನು ಅನುಭವಿಸುವರು. ತುಪ್ಪ, ಮಧು, ಕ್ಷೀರ ಇವುಗಳನ್ನು ದಾನಮಾಡಿದವರು ಅಮೃತಪಾನಮಾಡುತ್ತಾ ಧರ್ಮರಾಜನ ಆಸ್ಥಾನಕ್ಕೆ ಬರುವರು. ಶಾಕದಾನವನ್ನು ಮಾಡಿದವರು ಪಾಯಸವನ್ನು ತಿನ್ನುತ್ತಲೂ, ದೀಪದಾನಿಗಳು ದಿಕ್ಕುಗಳನ್ನು ಪ್ರಕಾಶಪಡಿಸುತ್ತಲೂ ಧರ್ಮಮಂದಿರಕ್ಕೆ ಪ್ರಯಾಣಮಾಡುತ್ತಾರೆ.

೨೧. ವಸ್ತ್ರವನ್ನು ದಾನಮಾಡಿದವನು ಒಳ್ಳೆಯ ಬಟ್ಟೆಯನ್ನು ಧರಿಸಿಕೊಂಡು ಹೋಗುವನು. ಅಲಂಕಾರದಾತನು ದಾರಿಯಲ್ಲಿ ದೇವತೆಗಳಿಂದ ಹೊಗಳಿಸಿಕೊಳ್ಳುತ್ತಾ ಧರ್ಮಮಂದಿರಕ್ಕೆ ಹೋಗುತ್ತಾನೆ.

೨೨-೨೩. ಗೋದಾನದಿಂದ ಮನುಷ್ಯನು ಸಕಲ ಭೋಗಗಳನ್ನೂ ಅನುಭವಿಸುತ್ತಾ ಪ್ರಯಾಣಮಾಡುವನು. ಭೂಮಿದಾಸಿಯು, ಗೃಹದಾತೃವೂ ಸಹ ಸಕಲ ಸಂಪತ್ತು ಮತ್ತು ಅಪ್ಸರಸ್ತ್ರೀಸಂಘ ಇವರಿಂದ ಕೂಡಿದ ವಿಮಾನದಲ್ಲಿ ಕ್ರೀಡಿಸುತ್ತಾ ಧರ್ಮಮಂದಿರಕ್ಕೆ ಹೋಗುತ್ತಾರೆ.

ಧರ್ಮಾಲಯಂ ವಿಮಾನೇನ ಯಾತಿ ಭೋಗಾನ್ವಿತೇನ ವೈ ।
ಅನಡುದ್ವಾ ಮುನಿಶ್ರೇಷ್ಠ ಯಾನಾರೂಢಾಃ ಪ್ರಯಾಂತಿ ವೈ ॥ ೨೪ ॥

ಫಲದಃ ಪುಷ್ಪದಶ್ಚಾಪಿ ಯಾತಿ ಸಂತೋಷಸಂಯುತಃ ।
ತಾಂಬೂಲದೋ ನರೋ ಯಾತಿ ಪ್ರಹೃಷ್ಟೋ ಧರ್ಮಮಂದಿರಂ ॥ ೨೫ ॥

ಮಾತಾಪಿತ್ರೋಶ್ಚ ಶುಶ್ರೂಷಾಂ ಕೃತವಾನ್ಯೋ ನರೋತ್ತಮಃ ।
ಸ ಯಾತಿ ಪರಿತುಷ್ಟಾತ್ಮಾ ಪೂಜ್ಯಮಾನೋ ದಿವಿ ಸ್ಥಿತೈಃ ॥ ೨೬ ॥

ಶುಶ್ರೂಷಾಂ ಕುರುತೇ ಯಸ್ತು ಯತೀನಾಂ ವ್ರತಚಾರಿಣಾಂ ।
ದ್ವಿಜಾಗ್ರ್ಯಬ್ರಾಹ್ಮಣಾನಾಂ ಚ ಸ ಯಾತ್ಯತಿಸುಖಾನ್ವಿತಃ ॥ ೨೭ ॥

ಸರ್ವಭೂತದಯಾಯುಕ್ತಃ ಪೂಜ್ಯಮಾನೋಽಮರೈರ್ದ್ವಿಜಃ ।
ಸರ್ವಭೋಗಾನ್ವಿತೇನಾಸೌ ವಿಮಾನೇನ ಪ್ರಯಾತಿ ಚ ॥ ೨೮ ॥

---

೨೩-೨೪. ದ್ವಿಜಶ್ರೇಷ್ಠನೇ! ಗಾಡಿ ಮುಂತಾದ ಗಮನಸಾಧನ ವಸ್ತು, ಕುದುರೆ ಮತ್ತು ಆನೆ ಇವುಗಳನ್ನು ದಾನಮಾಡಿದವನು ಭೋಗಸಹಿತವಾದ ವಿಮಾನದಿಂದ ಧರ್ಮರಾಜನ ಆಸ್ಥಾನಕ್ಕೆ ಹೋಗುವನು. ಎತ್ತನ್ನು ದಾನ ಮಾಡಿದವನು ಯಾನಾರೂಢನಾಗಿ ಹೋಗುವನು.

೨೫ ಫಲ ಮತ್ತು ಪುಷ್ಪದಾನಮಾಡಿದವನು ಮತ್ತು ತಾಂಬೂಲದಾನಿಗಳು ಸಂತೋಷಯುಕ್ತರಾಗಿ ಧರ್ಮರಾಜಮಂದಿರಕ್ಕೆ ಹೋಗುವರು.

೨೬. ಮಾತಾಪಿತೃಗಳ ಸೇವೆಯನ್ನು ಮಾಡಿದ ಮನುಷ್ಯೋತ್ತಮನು ದ್ಯುಲೋಕದಲ್ಲಿರುವ ದೇವತೆಗಳಿಂದ ಸತ್ಕರಿಸಲ್ಪಟ್ಟವನಾಗಿ ಸಂತೋಷಚಿತ್ತನಾಗಿ ಧರ್ಮಮಂದಿರಕ್ಕೆ ಪ್ರಯಾಣಮಾಡುವನು.

೨೭. ವ್ರತನಿಷ್ಠರಾದ ಯತಿಗಳು, ದ್ವಿಜಶ್ರೇಷ್ಠರಾದ ಬ್ರಾಹ್ಮಣರು ಇವರ ಸೇವೆಯನ್ನು ಮಾಡಿದವನು ಇವರೆಲ್ಲರೂ ಸುಖವಾಗಿ ಪ್ರಯಾಣಮಾಡುವರು.

೨೮. ಸಕಲ ಪ್ರಾಣಿಗಳಲ್ಲಿಯೂ ದಯೆಯನ್ನು ಮಾಡುವ ದ್ವಿಜನು ದೇವತೆಗಳಿಂದ ಸತ್ಕರಿಸಲ್ಪಡುವವನಾಗಿ ಸಕಲ ಭೋಗಯುಕ್ತವಾದ ವಿಮಾನದಿಂದ ಪ್ರಯಾಣಮಾಡುವನು.

ವಿದ್ಯಾದಾನರತೋ ಯಾತಿ ಪೂಜ್ಯಮಾನೋಽಬ್ಜಸೂನುಭಿಃ ।
ಪುರಾಣಪಾಠಕೋ ಯಾತಿ ಸ್ತೂಯಮಾನೋ ಮುನೀಶ್ವರೈಃ ॥ ೨೯ ॥

ಏವಂ ಧರ್ಮಪರಾ ಯಾಂತಿ ಸುಖಂ ಧರ್ಮಸ್ಯ ಮಂದಿರಂ ।
ಯಮಶ್ಚತುರ್ಮುಖೋ ಭೂತ್ವಾ ಶಂಖಚಕ್ರಗದಾಸಿಭೃತ್ ॥ ೩೦ ॥

ಪುಣ್ಯಕರ್ಮರತಂ ಸಮ್ಯಕ್ಸ್ನೇಹಾನ್ಮಿತ್ರಮಿವಾರ್ಚತಿ ।
ಭೋ ಭೋ ಬುದ್ಧಿಮತಾಂ ಶ್ರೇಷ್ಠ ನರಕಕ್ಲೇಶಭೀರುಭಿಃ ॥ ೩೧ ॥

ಯುಷ್ಮಾಭಿಃ ಸಾಧಿತಂ ಪುಣ್ಯಮತ್ರಾಮುತ್ರ ಸುಖಾವಹಂ ।
ಮನುಷ್ಯಜನ್ಮ ಯಃ ಪ್ರಾಪ್ಯ ಸುಕೃತಂ ನ ಕರೋತಿ ಚ ॥ ೩೨ ॥

ಸ ಏವ ಪಾಪಿನಾಂ ಶ್ರೇಷ್ಠ ಆತ್ಮಘಾತಂ ಕರೋತಿ ಚ ।
ಅನಿತ್ಯಂ ಪ್ರಾಪ್ಯ ಮಾನುಷ್ಯಂ ನಿತ್ಯಂ ಯಸ್ತು ನ ಸಾಧಯೇತ್ ॥ ೩೩ ॥

---

೨೯. ವಿದ್ಯಾದಾನದಲ್ಲಿ ಆಸಕ್ತಿಯುಳ್ಳವನು ಬ್ರಹ್ಮಾದಿ ದೇವತೆಗಳಿಂದ ಪೂಜಿಸಲ್ಪಡುತ್ತಾ ಪ್ರಯಾಣಮಾಡುವನು. ಪುರಾಣ ಹೇಳುವವನು ಮುನೀಶ್ವರರಿಂದ ಸ್ತೋತ್ರಮಾಡಿಸಿಕೊಳ್ಳಲ್ಪಟ್ಟವನಾಗಿ ಪ್ರಯಾಣಮಾಡುವನು.

೩೦. ಈ ಪ್ರಕಾರ ಧರ್ಮನಿರತರಾದವರು ಸುಖವಾಗಿ ಧರ್ಮಮಂದಿರಕ್ಕೆ ಹೋಗುವರು. ಯಮನು ನಾಲ್ಕು ಮುಖಗಳುಳ್ಳವನಾಗಿ, ಶಂಖ, ಚಕ್ರ, ಗದಾ, ಖಡ್ಗಧಾರಿಯಾಗಿ ಪುಣ್ಯಕರ್ಮಮಾಡಿದವನನ್ನು ಸ್ನೇಹದಿಂದ ಮಿತ್ರರಂತೆ ಚೆನ್ನಾಗಿ ಪೂಜಿಸುತ್ತಾನೆ.

೩೧-೩೫. ಯಮಧರ್ಮನು ಸುಕೃತಶಾಲಿಗಳನ್ನು ಕುರಿತು ಜ್ಞಾನಿಶ್ರೇಷ್ಠರೇ! ನರಕದಲ್ಲಿ ಸಂಭವಿಸುವ ಕ್ಲೇಶಕ್ಕೆ ಭಯಪಟ್ಟು ನೀವು ಮಾಡಿರುವ ಪುಣ್ಯವು ಇಲ್ಲಿ ಮತ್ತು ಪರಲೋಕದಲ್ಲಿಯೂ ಸಹ ಸುಖಪ್ರದವು. ಮನುಷ್ಯಜನ್ಮವನ್ನು ಹೊಂದಿ ಪುಣ್ಯಕರ್ಮಗಳನ್ನು ಮಾಡದಿರುವವನು ಪಾಪಿಷ್ಠನಾಗಿ ಆತ್ಮಹತ್ಯೆಯನ್ನು ಮಾಡಿಕೊಳ್ಳುತ್ತಾನೆ. ಅನಿತ್ಯವಾದ ಮನುಷ್ಯಜನ್ಮ ಪಡೆದು ನಿತ್ಯಲೋಕಕ್ಕೆ ಸಾಧನಮಾಡಿಕೊಳ್ಳದಿರುವವನು ಘೋರನರಕಕ್ಕೆ ಹೋಗುವನು. ಅವನಿಗಿಂತ ಬೇರೆ ಮೂಢನಿಲ್ಲ. ಈ ದೇಹವು ಯಾತನಾಸ್ಥಾನ, ಮಲಮೂತ್ರಾದಿ

ಸ ಯಾತಿ ನರಕಂ ಘೋರಂ ಕೋಽನ್ಯಸ್ತಸ್ಮಾದಚೇತನಃ ।
ಶರೀರಂ ಯಾತನಾರೂಪಂ ಮಲಾದ್ಯೈಃ ಪರಿದೂಷಿತಂ ॥ ೩೪ ॥

ತಸ್ಮಿನ್ನೋ ಯಾತಿ ವಿಶ್ವಾಸಂ ತಂ ವಿದ್ಯಾದಾತ್ಮಘಾತಕಂ ।
ಸರ್ವೇಷು ಪ್ರಾಣಿನಃ ಶ್ರೇಷ್ಠಾಸ್ತೇಷು ವೈ ಬುದ್ಧಿಜೀವಿನಃ ॥ ೩೫ ॥

ಬುದ್ಧಿಮತ್ಸು ನರಾಃ ಶ್ರೇಷ್ಠಾ ನರೇಷು ಬ್ರಾಹ್ಮಣಾಸ್ತಥಾ ।
ಬ್ರಾಹ್ಮಣೇಷು ಚ ವಿದ್ವಾಂಸೋ ವಿದ್ವತ್ಸು ಕೃತಬುದ್ಧಯಃ ॥ ೩೬ ॥

ಕೃತಬುದ್ಧಿಷು ಕರ್ತಾರಃ ಕರ್ತೃಷು ಬ್ರಹ್ಮವಾದಿನಃ ।
ಬ್ರಹ್ಮವಾದಿಷ್ವಪಿ ತಥಾ ಶ್ರೇಷ್ಠೋ ನಿರ್ಮಮ ಉಚ್ಯತೇ ॥ ೩೭ ॥

ಏತೇಭ್ಯೋಽಪಿ ಪರೋ ಜ್ಞೇಯೋ ನಿತ್ಯಂ ಧ್ಯಾನಪರಾಯಣಃ ।
ತಸ್ಮಾತ್ಸರ್ವಪ್ರಯತ್ನೇನ ಕರ್ತವ್ಯೋ ಧರ್ಮಸಂಗ್ರಹಃ ॥ ೩೮ ॥

---

ಗಳಿಂದ ತುಂಬಿ ಕಶ್ಮಲವಾಗಿದೆ. ಅಂತಹುದರಲ್ಲಿ ಅಭಿಮಾನವಿಡುವವನು ಆತ್ಮ ಘಾತುಕನೆಂದು ತಿಳಿಯಬೇಕು. ಸಕಲ ಭೂತಗಳಲ್ಲಿಯೂ ಪ್ರಾಣಿಗಳು ಉತ್ತಮ. ಅವುಗಳಲ್ಲಿಯೂ ಬುದ್ಧಿಜೀವಿಗಳಾದ ಮನುಷ್ಯರು ಶ್ರೇಷ್ಠರು.

೩೬-೩೭. ಬುದ್ಧಿಯುಳ್ಳ ಪ್ರಾಣಿಗಳಲ್ಲಿ ಮನುಷ್ಯರು, ಅವರಲ್ಲಿಯೂ ಬ್ರಾಹ್ಮಣರು, ಅವರಲ್ಲಿಯೂ ವಿದ್ವಾಂಸರು, ಅವರಲ್ಲಿಯೂ ತತ್ತ್ವನಿರ್ಣಯದಿಂದ ಪಕ್ವಮನಸುಳ್ಳವರು, ಅವರಲ್ಲಿಯೂ ವಿಹಿತರೀತಿಯಲ್ಲಿ ಅನುಷ್ಠಾನಮಾಡುವವರು ಅವರಲ್ಲಿಯೂ ಬ್ರಹ್ಮನಿಷ್ಠರು, ಅವರಲ್ಲಿಯೂ ಅಹಂಕಾರ ಮಮಕಾರಗಳನ್ನು ಬಿಟ್ಟಿರುವವರೂ ಉತ್ತಮರೆಂದು ತಿಳಿಯಬೇಕು.

೩೮. ಇವರೆಲ್ಲರಿಗಿಂತಲೂ ಸದಾ ಧ್ಯಾನನಿರತರಾದವರು ಉತ್ತಮಾಧಿಕಾರಿಗಳೆಂದು ನಿರ್ಣಯ. ಆದುದರಿಂದ ಸಕಲ ಪ್ರಯತ್ನದಿಂದಲೂ ಧರ್ಮವನ್ನು ಸಂಪಾದಿಸಬೇಕು.

ಸರ್ವತ್ರ ಪೂಜ್ಯತೇ ಜಂತುರ್ಧರ್ಮವಾನ್ನಾತ್ರ ಸಂಶಯಃ ।
ಗಚ್ಛಸ್ವ ಪುಣ್ಯಂ ಮತ್ಸ್ಥಾನಂ ಸರ್ವಭೋಗಸಮನ್ವಿತಂ ॥ ೩೯ ॥

ಅಸ್ತಿ ಚೇದ್ದುಷ್ಕೃತಂ ಕಿಂಚಿತ್ಪಶ್ಚಾದತ್ರೈವ ಭೋಕ್ಷ್ಯಸೇ ।
ಏವಂ ಯಮಸ್ತಮಭ್ಯರ್ಚ್ಯ ಪ್ರಾಪಯಿತ್ವಾ ಚ ಸದ್ಗತಿಂ ॥ ೪೦ ॥

ಆಹೂಯ ಪಾಪಿನಶ್ಚೈವ ಕಾಲದಂಡೇನ ತರ್ಜಯೇತ್ ।
ಪ್ರಲಯಾಂಬುದನಿರ್ಘೋಷೋ ಹ್ಯಂಜನಾದ್ರಿಸಮಪ್ರಭಃ ॥ ೪೧ ॥

ವಿದ್ಯುತ್ಪ್ರಭಾಯುಧೈರ್ಭೀಮೋ ದ್ವಾತ್ರಿಂಶದ್ಭುಜಸಂಯುತಃ ।
ಯೋಜನತ್ರಯವಿಸ್ತಾರೋ ರಕ್ತಾಕ್ಷೋ ದೀರ್ಘನಾಸಿಕಃ ॥ ೪೨ ॥

---

೩೯. ಧರ್ಮವನ್ನು ಸಂಪಾದಿಸಿದ ಪ್ರಾಣಿಯು ಎಲ್ಲಾ ಕಡೆಯಲ್ಲಿಯೂ ಸತ್ಕರಿಸಲ್ಪಡುತ್ತಾನೆ. ನೀನು ಧರ್ಮವನ್ನು ಸಂಗ್ರಹಿಸಿರುವುದರಿಂದ ಪುಣ್ಯವಂತರಿಗೆ ನಿಯತವಾಗಿರುವ, ಸಕಲ ಭೋಗಸಾಧನೆಗಳಿಂದ ಕೂಡಿರುವ, ನನ್ನ ಸ್ಥಾನಕ್ಕೆ ಹೋಗು.

೪೦. ಏನಾದರೂ ಸ್ವಲ್ಪ ಪಾಪವಿದ್ದಲ್ಲಿ ಪುಣ್ಯವನ್ನನುಭವಿಸಿದನಂತರ ಅದನ್ನು ಇಲ್ಲಿಯೇ ಅನುಭವಿಸುವೆಯೆಂದು ಹೇಳಿ ಯಮನು ಅವನನ್ನು ಪೂಜಿಸಿ ಸದ್ಗತಿಯನ್ನು ಹೊಂದಿಸುವನು.

೪೧–೪೨. ಪ್ರಳಯಕಾಲದ ಮೇಘಧ್ವನಿಯಂತೆ ಶಬ್ದಮಾಡುವ ಅಂಜನಾಚಲಸದೃಶ ತೇಜಸ್ಸುಳ್ಳ, ಮಿಂಚಿನಂತೆ ಹೊಳೆಯುತ್ತಿರುವ ಆಯುಧಗಳಿಂದ ಭಯಂಕರನಾದ, ಮೂವತ್ತೆರಡು ಭುಜಗಳಿಂದ ಕೂಡಿದ, ಮೂರುಗಾವುದ ವಿಸ್ತಾರವುಳ್ಳ ಶರೀರವನ್ನು ಧರಿಸಿದ, ಕೆಂಪುಕಣ್ಣು, ಉದ್ದಮೂಗು, ಕೋರೆಹಲ್ಲಿಂದ ಘೋರವಾದ ಮುಖ, ಬಾವಿಗಳಿಗೆ ಸಮಾನವಾದ ಭಯಂಕರನೇತ್ರ ಇವುಗಳುಳ್ಳ, ಜ್ವರಾದಿಗಳಿಂದ ಕೂಡಿದ ಯಮನು ಪಾಪಿಗಳನ್ನು ಕರೆದು ಯಮದಂಡವನ್ನು ತಲೆಯಮೇಲೆ ಇರಿಸಿ ಗದರಿಸುವನು.

ದಂಷ್ಟ್ರಾಕರಾಲವದನೋ ವಾಪೀತುಲ್ಯೋಗ್ರಲೋಚನಃ ।
ಮೃತ್ಯುಜ್ವರಾದಿಭಿರ್ಯುಕ್ತಶ್ಚಿತ್ರಗುಪ್ತೋಽಪಿ ಭೀಷಣಃ ॥ ೪೩ ॥

ಸರ್ವೇ ದೂತಾಶ್ಚ ಗರ್ಜಂತಿ ಯಮತುಲ್ಯವಿಭೀಷಣಾಃ ।
ತತೋ ಬ್ರವೀತಿ ತಾನ್ಸರ್ವಾನ್ಕಂಪಮಾನಾಂಶ್ಚ ಪಾಪಿನಃ ॥ ೪೪ ॥

ಶೋಚತಃ ಸ್ವಾನಿ ಕರ್ಮಾಣಿ ಚಿತ್ರಗುಪ್ತೋ ಯಮಾಜ್ಞಯಾ ।
ಭೋ ಭೋ ಪಾಪಾ ದುರಾಚಾರಾ ಅಹಂಕಾರಪ್ರಹರ್ಷಿತಾಃ ॥ ೪೫ ॥

ಕಿಮರ್ಥಮಾರ್ಜಿತಂ ಪಾಪಂ ಯುಷ್ಮಾಭಿರವಿವೇಕಿಭಿಃ ।
ಕಾಮಕ್ರೋಧಾದಿದುಷ್ಟೇನ ಸಲೋಭೇನ ತು ಚೇತಸಾ ॥ ೪೬ ॥

ಯದ್ಯತ್ಪಾಪತರಂ ತತ್ತತ್ಕಿಮರ್ಥಂ ಚರಿತಂ ಜನಾಃ ।
ಕೃತವಂತಃ ಪುರಾ ಯೂಯಂ ಪಾಪಾನ್ಯತ್ಯಂತಹರ್ಷಿತಾಃ ॥ ೪೭ ॥

ತಥೈವ ಯಾತನಾ ಭೋಜ್ಯಾಃ ಕಿಂ ವೃಥಾ ಹ್ಯತಿದುಃಖಿತಾಃ ।
ಭೃತ್ಯಮಿತ್ರಕಲತ್ರಾರ್ಥಂ ದುಷ್ಕೃತಂ ಚರಿತಂ ಯಥಾ ॥ ೪೮ ॥

---

೪೪–೪೫. ಭಯಂಕರನಾದ ಚಿತ್ರಗುಪ್ತನು, ಯಮನಂತೆ ಘೋರರೂಪವನ್ನು ತಾಳಿದ ಸಕಲ ದೂತರೂ ಸಹ ಗರ್ಜನೆಯನ್ನು ಮಾಡುತ್ತಾರೆ. ಅನಂತರ ಯಮನ ಅಪ್ಪಣೆಯಿಂದ ಚಿತ್ರಗುಪ್ತನು ತಮ್ಮ ಕರ್ಮಗಳನ್ನು ಕುರಿತು ದುಃಖಿಸಿ ನಡುಗುತ್ತಿರುವ ಆ ಸಕಲ ಪಾಪಿಗಳನ್ನು ಕುರಿತು ಮಾತನಾಡುತ್ತಾನೆ.

೪೫–೪೬. ಅಹಂಕಾರದಿಂದ ಹಿಗ್ಗುತ್ತಾ ಅವಿವೇಕಿಗಳಾದ ನೀವು ಪಾಪವನ್ನು ಏಕೆ ಸಂಪಾದಿಸಿದಿರಿ ?

೪೬-೪೭. ನೀವು ಕಾಮ, ಕ್ರೋಧ, ಲೋಭಗಳಿಂದ ಕಲುಷಿತವಾದ ಮನಸ್ಸಿನಿಂದ ಉತ್ಕೃಷ್ಟ ಪಾಪಕೃತ್ಯಗಳನ್ನು ಏಕೆ ಮಾಡಿರುವಿರಿ ? ಜನರೇ ! ನೀವು ಪೂರ್ವದಲ್ಲಿ ನಗುತ್ತಾ ಪಾಪಕರ್ಮಗಳನ್ನೆಸಗಿದಿರಿ.

೪೮-೪೯. ಆದುದರಿಂದ ಈ ಯಾತನೆಗಳನ್ನೂ ಸಹ ನೀವು ಹಾಗೆಯೇ ಅಂದರೆ ಸಂತೋಷದಿಂದ ಅನುಭವಿಸಬೇಕು. ಈಗ ದುಃಖಪಡುವುದರಿಂದ

**ತಥಾ ಕರ್ಮವಶಾತ್ಪ್ರಾಪ್ತಾ ಯೂಯಮತ್ರಾತಿದುಃಖಿತಾಃ ।**
**ಯುಷ್ಮಾಭಿಃ ಪೋಷಿತಾ ಯೇ ತು ಪುತ್ರಾದ್ಯಾ ಅನ್ಯತೋ ಗತಾಃ ॥ ೪೯ ॥**

**ಯುಷ್ಮಾಕಮೇವ ತತ್ಪಾಪಂ ಪ್ರಾಪ್ತಂ ಕಿಂ ದುಃಖಕಾರಣಂ ।**
**ಯಥಾ ಕೃತಾನಿ ಪಾಪಾನಿ ಯುಷ್ಮಾಭಿಃ ಸುಬಹೂನಿ ವೈ ॥ ೫೦ ॥**

**ತಥಾ ಪ್ರಾಪ್ತಾನಿ ದುಃಖಾನಿ ಕಿಮರ್ಥಮಿಹ ದುಃಖಿತಾಃ ।**
**ವಿಚಾರಯಧ್ವಂ ಯೂಯಂ ತು ಯುಷ್ಮಾಭಿಶ್ಚರಿತಂ ಪುರಾ ॥ ೫೧ ॥**

**ಯಮಃ ಕರಿಷ್ಯತೇ ದಂಡಂ ಇತಿ ಕಿಂ ನ ವಿಚಾರಿತಂ ।**
**ದರಿದ್ರೇಽಪಿ ಚ ಮೂರ್ಖೇ ಚ ಪಂಡಿತೇ ವಾ ಶ್ರಿಯಾಽನ್ವಿತೇ ॥ ೫೨ ॥**

**ಕಾಂದಿಶೀಕೇ ಚ ವೀರೇ ಚ ಸಮವರ್ತೀ ಯಮಃ ಸ್ಮೃತಃ ।**
**ಚಿತ್ರಗುಪ್ತೇರಿತಂ ವಾಕ್ಯಂ ಶ್ರುತ್ವಾ ತೇ ಪಾಪಿನಸ್ತದಾ ॥ ೫೩ ॥**

---

ಏನು ಫಲ? ಆಳುಗಳು, ಸ್ನೇಹಿತರು, ಹೆಂಡತಿ ಮುಂತಾದವರಿಗಾಗಿ ಮಾಡಿದ ದುಷ್ಕೃತ್ಯಗಳಿಂದ ನೀವು ಅತ್ಯಂತ ದುಃಖಕ್ಕೀಡಾಗಿ ಇಲ್ಲಿಗೆ ಬಂದಿರುತ್ತೀರಿ. ನಿಮ್ಮಿಂದ ಪೋಷಿಸಲ್ಪಟ್ಟ ಮಕ್ಕಳು, ಹೆಂಡತಿ ಮುಂತಾದವರೆಲ್ಲರೂ ಅವರವರ ಕರ್ಮಾನುಗುಣವಾಗಿ ಬೇರೆ ಬೇರೆ ಸ್ಥಳಗಳಿಗೆ ಹೋದರು.

೫೦-೫೧. ನೀವು ಮಾಡಿದ ಪಾಪದಿಂದಲೇ ಈ ದುಃಖವು ನಿಮಗೆ ಬಂದಿದೆ. ಇದಕ್ಕೆ ಬೇರೆ ಕಾರಣವಿಲ್ಲ. ನೀವು ಎಂತೆಂತಹ ಪಾಪಕೃತ್ಯಗಳನ್ನು ಮಾಡಿರುವಿರೋ ಅವಕ್ಕನುಸಾರವಾಗಿಯೇ ದುಃಖವು ಬಂದಿದೆ. ಇಲ್ಲಿ ಸುಮ್ಮನೆ ಅಳುವುದರಿಂದೇನು ಫಲ? ನೀವು ಹಿಂದೆ ಮಾಡಿದುದನ್ನೆಲ್ಲಾ ವಿಚಾರಮಾಡಿಕೊಳ್ಳಿರಿ.

೫೨-೫೩. ಪಾಪಮಾಡುವಾಗ ಯಮನು ಶಿಕ್ಷಿಸುವನೆಂದು ನೀವು ವಿಚಾರ ಮಾಡಲಿಲ್ಲವೇನು? ಯಮನು ಬಡವ, ಮೂರ್ಖ, ಪಂಡಿತ, ಶ್ರೀಮಂತ ಭಯದಿಂದ ಓಡುವವನು ಮತ್ತು ಪರಾಕ್ರಮಶಾಲಿ ಇವರೆಲ್ಲರಲ್ಲಿಯೂ ಸಮದೃಷ್ಟಿ ಎಂದರೆ ಅವರವರು ಮಾಡಿದ ಪುಣ್ಯಪಾಪಗಳಿಗನುಗುಣವಾಗಿ ಫಲವನ್ನು ಕೊಡುವವನು ಎಂಬುದಾಗಿ ಉಕ್ತವಾಗಿದೆ.

**ಶೋಚಂತಃ ಸ್ವಾನಿ ಕರ್ಮಾಣಿ ತೂಷ್ಣೀಂ ತಿಷ್ಠಂತಿ ಭೀಷಿತಾಃ ।**
**ಯಮಾಜ್ಞಾಕಾರಿಣಃ ಕ್ರೂರಾಶ್ಚಂಡಾ ದೂತಾ ಭಯಾನಕಾಃ ॥ ೫೪ ॥**

**ಚಂಡಾಲಾದ್ಯಾಃ ಪ್ರಸಹ್ಯೈತಾನ್ನರಕೇಷು ಕ್ಷಿಪಂತಿ ಚ ।**
**ಸ್ವದುಷ್ಕರ್ಮಫಲಂ ತೇ ತು ಭುಕ್ತ್ವಾಂತೇ ಪಾಪಶೇಷತಃ ॥ ೫೫ ॥**

**ಮಹೀತಲಂ ಚ ಸಂಪ್ರಾಪ್ಯ ಭವಂತಿ ಸ್ಥಾವರಾದಯಃ ।**

**ನಾರದ ಉವಾಚ**

**ಭಗವನ್ಸಂಶಯೋ ಜಾತೋ ಮಚ್ಚೇತಸಿ ದಯಾನಿಧೇ ॥ ೫೬ ॥**

**ತ್ವಂ ಸಮರ್ಥೋಽಸಿ ತಚ್ಛೇತ್ತುಂ ಯತೋ ನೋ ಹ್ಯಗ್ರಜೋ ಭವಾನ್ ।**
**ಧರ್ಮಾಶ್ಚ ವಿವಿಧಾಃ ಪ್ರೋಕ್ತಾಃ ಪಾಪಾನ್ಯಪಿ ಬಹೂನಿ ಚ ॥ ೫೭ ॥**

---

೫೩-೫೪. ಹೀಗೆ ಚಿತ್ರಗುಪ್ತನು ಹೇಳಿದ ಮಾತನ್ನು ಕೇಳಿ ಆ ಪಾಪಿಗಳು ಅದರಿಂದ ಭೀತರಾಗಿ, ತಮ್ಮ ಕರ್ಮಗಳನ್ನು ಕುರಿತು ದುಃಖಿಸುತ್ತಾ ಸುಮ್ಮನಾಗುವರು.

೫೪-೫೫. ಯಮನ ಅಪ್ಪಣೆಯಂತೆ ಕೆಲಸವನ್ನು ಮಾಡುವ, ಉಗ್ರರು, ಆಗ್ರಹಿಗಳು, ಭಯಾನಕರೂ ಆದ ಚಂಡಾಲಾದಿಗಳು ಈ ಪಾಪಿಗಳನ್ನು ಕಟ್ಟಿ ನರಕದಲ್ಲಿ ಹಾಕುತ್ತಾರೆ.

೫೫-೫೬. ಆ ಪಾಪಿಗಳಾದರೋ ತಮ್ಮ ದುಷ್ಕರ್ಮಫಲವನ್ನು ಅನುಭವಿಸಿ ಕೊನೆಗೆ ಉಳಿದ ಪಾಪಫಲವನ್ನು ಅನುಭವಿಸುವುದಕ್ಕಾಗಿ ಭೂಲೋಕಕ್ಕೆ ಬಂದು ಸ್ಥಾವರ(ವೃಕ್ಷಾದಿಗಳು) ಮುಂತಾದ ಕರ್ಮಾನುರೂಪವಾದ ಜನ್ಮವನ್ನು ಪಡೆಯುತ್ತಾರೆ.

೫೬-೫೭. ದಯಾಸಾಗರನಾದ ಪೂಜ್ಯ ಸನಕನೇ! ನನ್ನ ಮನಸ್ಸಿನಲ್ಲಿ ಒಂದು ಸಂಶಯವುಂಟಾಗಿದೆ. ಅಣ್ಣನಾದ ನೀನೇ ಅದನ್ನು ಪರಿಹರಿಸಲು ಸಮರ್ಥನು. ಆದುದರಿಂದ ಅದನ್ನು ಕೇಳುತ್ತೇನೆ, ಉತ್ತರಹೇಳಬೇಕೆಂದು ಪ್ರಾರ್ಥಿಸಿ ನಾರದನು ಪ್ರಶ್ನೆಮಾಡಿದನು.

ಚಿರಭೋಜ್ಯಂ ಫಲಂ ತೇಷಾಮುಕ್ತಂ ಬಹುವಿದಾ ತ್ವಯಾ ।
ದಿನಾಂತೇ ಬ್ರಹ್ಮಣಃ ಪ್ರೋಕ್ತೋ ನಾಶೋ ಲೋಕತ್ರಯಸ್ಯ ವೈ　॥ ೫೮ ॥

ಪರಾರ್ಧದ್ವಿತಯಾಂತೇ ತು ಬ್ರಹ್ಮಾಂಡಸ್ಯಾಪಿ ಸಂಕ್ಷಯಃ ।
ಗ್ರಾಮದಾನಾದಿಪುಣ್ಯಾನಾಂ ತ್ವಯ್ಯೈವ ವಿಧಿನಂದನ　॥ ೫೯ ॥

ಕಲ್ಪಕೋಟಿಸಹಸ್ರೇಷು ಮಹಾನ್ಭೋಗ ಉದಾಹೃತಃ ।
ಸರ್ವೇಷಾಮೇವ ಲೋಕಾನಾಂ ವಿನಾಶಃ ಪ್ರಾಕೃತೇ ಲಯೇ　॥ ೬೦ ॥

ಏಕಃ ಶಿಷ್ಯತ ಏವೇತಿ ತ್ವಯಾ ಪ್ರೋಕ್ತಂ ಜನಾರ್ದನಃ ।
ಏಷ ಮೇ ಸಂಶಯೋ ಜಾತಸ್ತಂ ಭವಾಂಶ್ಛೇತ್ತುಮರ್ಹಸಿ　॥ ೬೧ ॥

---

೫೭-೫೮. ಬಹು ವಿಷಯಗಳನ್ನು ತಿಳಿದುಕೊಂಡಿರುವ ನೀನು ನಾನಾ ವಿಧವಾದ ಧರ್ಮಗಳು ಪಾಪಗಳು ಇವುಗಳನ್ನು ಮತ್ತು ಬಹಳಕಾಲ ಅನುಭವಿಸಬೇಕಾದ ಅವುಗಳ ಫಲವನ್ನೂ ಸಹ ಹೇಳಿರುವೆ.

೫೮-೫೯. ಚತುರ್ಮುಖಬ್ರಹ್ಮನಿಗೆ ಒಂದು ದಿನ ಕಳೆದರೆ ಮೂರು ಲೋಕಗಳು ನಾಶವಾಗುತ್ತವೆ. ಇದಕ್ಕೆ ಅವಾಂತರ ಪ್ರಳಯ ಅಥವಾ ದಿನ ಪ್ರಳಯ ಎಂದು ಹೆಸರು. ಎರಡು ಪರಾರ್ಧಗಳು ಕಳೆದರೆ ಬ್ರಹ್ಮಾಂಡವೆಲ್ಲವೂ ನಾಶವಾಗುತ್ತದೆ.

೫೯-೬೦. ಬ್ರಹ್ಮಪುತ್ರನಾದ ಸನಕನೇ! ನೀನೇ ಗ್ರಾಮದಾನ ಮುಂತಾದ ಪುಣ್ಯಕರ್ಮಗಳಿಗೆ ಕೋಟಿಸಹಸ್ರಕಲ್ಪಗಳ ಪರ್ಯಂತವಾಗಿ ಮಹಾಭೋಗವು ಫಲವೆಂಬುದಾಗಿ ಹೇಳಿರುವೆ. ಪ್ರಾಕೃತ ಲಯದಲ್ಲಿ ಸಕಲ ಲೋಕಗಳೂ ನಾಶವಾಗುತ್ತವೆ.

೬೧-೬೨. ಆಗ ಜನಾರ್ದನನೊಬ್ಬನೇ ಉಳಿದಿರುತ್ತಾನೆಂತಲೂ ನೀನೇ ಹೇಳಿರುವೆ. ಆದುದರಿಂದ ಈ ಪಾಕೃತ ಪ್ರಳಯವಾಗುವಷ್ಟರಲ್ಲಿ ಬಹುಕಾಲ

**ಪುಣ್ಯಪಾಪೋಪಭೋಗಾನಾಂ ಸಮಾಪ್ತಿರ್ನಾಸ್ಯ ಸಂಪ್ಲವೇ ।**

**ಸನಕ ಉವಾಚ**

**ಸಾಧು ಸಾಧು ಮಹಾಪ್ರಾಜ್ಞ ಗುಹ್ಯಾದ್ಗುಹ್ಯತಮಂ ತ್ವಿದಂ ॥ ೬೨ ॥**

**ಪೃಷ್ಟಂ ತತ್ತೇಽಭಿಧಾಸ್ಯಾಮಿ ಶೃಣುಷ್ವ ಸುಸಮಾಹಿತಃ ।**
**ನಾರಾಯಣೋಽಕ್ಷರೋಽನಂತಃ ಪರಂ ಜ್ಯೋತಿಃ ಸನಾತನಃ ॥ ೬೩ ॥**

**ವಿಶುದ್ಧೋ ನಿರ್ಗುಣೋ ನಿತ್ಯೋ ಮಾಯಾಮೋಹವಿವರ್ಜಿತಃ ।**
**ನಿರ್ಗುಣೋಽಪಿ ಪರಾನಂದಃ ಗುಣವಾನಿವ ಭಾತಿ ಯಃ ॥ ೬೪ ॥**

**ಬ್ರಹ್ಮವಿಷ್ಣುಶಿವಾದ್ಯೈಸ್ತು ಭೇದವಾನಿವ ಲಕ್ಷ್ಯತೇ ।**
**ಗುಣೋಪಾಧಿಕಭೇದೇಷು ತ್ರಿಷ್ವೇತೇಷು ಸನಾತನಃ ॥ ೬೫ ॥**

---

ಅನುಭವಿಸಬೇಕಾದ ಪುಣ್ಯಪಾಪಕರ್ಮಗಳ ಫಲೋಪಭೋಗವು ಮುಗಿಯುವ ಬಗೆ ಹೇಗೆಂದು ಸಂಶಯವುಂಟಾಗಿದೆ. ಅದನ್ನು ನೀನೇ ಪರಿಹರಿಸಬೇಕು.

೬೨. ಸನಕನು ಹೇಳಿದನು—ಮಹಾಜ್ಞಾನಿಯಾದ ನಾರದನೇ! ಒಳ್ಳೆಯದು, ಒಳ್ಳೆಯದು. ನೀನು ಕೇಳಿರುವುದು ಅತ್ಯಂತ ಗೋಪ್ಯವಾದ ವಿಷಯವು. ಆದರೂ ಅದನ್ನು ನಾನು ನಿನಗೆ ಹೇಳುವೆನು; ಸಮಾಧಾನಚಿತ್ತನಾಗಿ ಕೇಳು.

೬೩-೬೫. ನಾಶರಹಿತನು, ಪರಿಪೂರ್ಣನು ಉತ್ಕೃಷ್ಟಜ್ಯೋತಿಸ್ವರೂಪನು, ಪುರಾತನನು, ನಿರ್ದೋಷನು, ಪ್ರಾಕೃತಗುಣರಹಿತನು, ನಿತ್ಯನು, ಮಾಯೆಯೆಂಬ ಮೋಹವಿಲ್ಲದವನೂ ಆದ ನಾರಾಯಣನು ನಿರ್ಗುಣ ಎಂದರೆ ಪ್ರಾಕೃತ ಗುಣರಹಿತನಾದಾಗ್ಯೂ ಉತ್ಕೃಷ್ಟಾನಂದಸ್ವರೂಪನು ಮತ್ತು ಅಪ್ರಾಕೃತ ಶುಭಗುಣವಂತನೂ ಆಗಿ ಪ್ರಕಾಶಮಾನನಾಗಿರುವವನು, ಬ್ರಹ್ಮ ವಿಷ್ಣು ಶಿವ ಮುಂತಾದ ಅನಂತನಾಮಧೇಯಗಳಿಂದ ಕರೆಯಲ್ಪಟ್ಟು ಭಿನ್ನನಂತೆ ತೋರುವವನೂ ಆಗಿ ಎಂದರೆ ಅನಂತಶಬ್ದವಾಚ್ಯನಾಗಿ ಅನಂತವಸ್ತುಗಳಲ್ಲಿ ಏಕರೂಪದಿಂದಿರುವನು.

ಸಂಯೋಜ್ಯ ಮಾಯಯಾಮಖಿಲಂ ಜಗತ್ಕಾರ್ಯಂ ಕರೋತಿ ಚ ।
ಬ್ರಹ್ಮರೂಪೇಣ ಸೃಜತಿ ವಿಷ್ಣುರೂಪೇಣ ಪಾತಿ ಚ ॥ ೬೬ ॥

ಅಂತೇ ಚ ರುದ್ರರೂಪೇಣ ಸರ್ವಮತ್ತೀತಿ ನಿಶ್ಚಿತಂ ।
ಪ್ರಳಯಾಂತೇ ಸಮುತ್ಥಾಯ ಬ್ರಹ್ಮರೂಪೀ ಜನಾರ್ದನಃ ॥ ೬೭ ॥

ಚರಾಚರಾತ್ಮಕಂ ವಿಶ್ವಂ ಯಥಾಪೂರ್ವಮಕಲ್ಪಯತ್ ।
ಸ್ಥಾವರಾದ್ಯಾಶ್ಚ ವಿಪ್ರೇಂದ್ರ ಯತ್ರ ಯತ್ರ ವ್ಯವಸ್ಥಿತಾಃ ॥ ೬೮ ॥

ಬ್ರಹ್ಮಾ ತಜ್ಜಗತ್ಸರ್ವಂ ಯಥಾಪೂರ್ವಂ ಕರೋತಿ ವೈ ।
ತಸ್ಮಾತ್ಕೃತಾನಾಂ ಪಾಪಾನಾಂ ಪುಣ್ಯಾನಾಂ ಚೈವ ಸತ್ತಮ ॥ ೬೯ ॥

ಅವಶ್ಯಮೇವ ಭೋಕ್ತವ್ಯಂ ಕರ್ಮಣಾಂ ಹ್ಯಕ್ಷಯಂ ಫಲಂ ।
ನಾಭುಕ್ತಂ ಕ್ಷೀಯತೇ ಕರ್ಮ ಕಲ್ಪಕೋಟಿಶತೈರಪಿ ॥ ೭೦ ॥

---

೬೫–೬೬. ಅವನು ಗುಣಗಳನಿಮಿತ್ತದಿಂದ ಭಿನ್ನರಾದ ಬ್ರಹ್ಮಾದಿಗಳಲ್ಲಿ ತನ್ನ ಇಚ್ಛಾಶಕ್ತಿಯನ್ನು ಸಂಯೋಜನೆಮಾಡಿ ತಾನೇ ಸನ್ನಿಹಿತನಾಗಿದ್ದುಗೊಂಡು ಸಕಲ ಜಗತ್ಕಾರ್ಯಗಳನ್ನೂ ಮಾಡುತ್ತಾನೆ.

೬೬–೬೭. ಬ್ರಹ್ಮಗತರೂಪದಿಂದ ಸೃಷ್ಟಿಯನ್ನೂ, ವಿಷ್ಣುರೂಪದಿಂದ ರಕ್ಷಣೆಯನ್ನೂ, ಕೊನೆಯಲ್ಲಿ ರುದ್ರಗತರೂಪದಿಂದ ಸಮಸ್ತ ಜಗತ್ಸಂಹಾರವನ್ನೂ ಮಾಡುತ್ತಾನೆ.

೬೭–೬೮. ಪ್ರಳಯಾವಸಾನದಲ್ಲಿ ಜನಾರ್ದನನು ಎದ್ದು ಬ್ರಹ್ಮನಲ್ಲಿ ಸನ್ನಿಹಿತನಾಗಿ ಪೂರ್ವಕಲ್ಪದಂತೆ ಚರಾಚರಾತ್ಮಕ ಪ್ರಪಂಚವನ್ನು ಸೃಷ್ಟಿಸಿದನು.

೬೮–೬೯. ಪೂರ್ವಕಲ್ಪದಲ್ಲಿ ಸ್ಥಾವರಾದಿಗಳು ಎಲ್ಲೆಲ್ಲಿ ವ್ಯವಸ್ಥಿತವಾಗಿದ್ದವೋ ಹಾಗೆಯೇ ಬ್ರಹ್ಮನು ಆ ಜಗತ್ತೆಲ್ಲವನ್ನೂ ನಿರ್ಮಾಣಮಾಡುತ್ತಾನೆಂಬುದು ಶ್ರುತ್ಯಾದಿಗಳಲ್ಲಿ ಪ್ರಸಿದ್ಧವು.

೬೯–೭೦. ಸಾಧೂತ್ತಮನೇ! ಮಾಡಿದ ಪಾಪಪುಣ್ಯಗಳ ಅಕ್ಷಯ ಫಲವನ್ನು ಅನುಭವಿಸಿಯೇ ತೀರಬೇಕು. ಕೋಟ್ಯಂತರ ಶತಕಲ್ಪಗಳಾದಾಗ್ಯೂ ಪುಣ್ಯಪಾಪಕರ್ಮಗಳು ಅನುಭವಿಸದೆ ನಷ್ಟವಾಗುವುದಿಲ್ಲ. ಆದುದರಿಂದ ಮಾಡಿದ ಶುಭಾಶುಭ ಕರ್ಮಫಲವನ್ನು ಅನುಭವಿಸಿಯೇ ತೀರಬೇಕು.

**ಅವಶ್ಯಮೇವ ಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ ।**
**ಯೋ ದೇವಃ ಸರ್ವಲೋಕಾನಾಮಂತರಾತ್ಮಾ ಜಗನ್ಮಯಃ ।**
**ಸರ್ವಕರ್ಮಫಲಂ ಭುಂಕ್ತೇ ಪರಿಪೂರ್ಣಃ ಸನಾತನಃ ॥ ೭೧ ॥**

**ಯೋಽಸೌ ವಿಶ್ವಂಭರೋ ದೇವೋ ಗುಣಭೇದವ್ಯವಸ್ಥಿತಃ ।**
**ಸೃಜತ್ಯವತಿ ಚಾತ್ತ್ಯೇತತ್ಸರ್ವಂ ಸರ್ವಭುಗವ್ಯಯಃ ॥ ೭೨ ॥**

**ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ ಪ್ರಥಮಪಾದೇ ಯಮದೂತಕೃತ್ಯನಿರೂಪಣಂ ನಾಮೈಕತ್ರಿಂಶೋಽಧ್ಯಾಯಃ**

---

೭೧. ಸಲಕ ಲೋಕಾಂತರ್ಯಾಮಿಯು, ಜಗನ್ನಿಯಾಮಕನು, ಗುಣಪರಿಪೂರ್ಣನು, ಅನಾದ್ಯನಂತನೂ ಆಗಿರುವ ದೇವನು ಸಕಲ ಕರ್ಮಫಲದಲ್ಲಿಯೂ ಸಾರವಾದಂಶವನ್ನು ಭೋಗಿಸುವನು.

೭೨. ಸತ್ವರಜಸ್ತಮೋಗುಣಗಳ ಭೇದವ್ಯವಸ್ಥಾನುಸಾರವಾಗಿ ಜಗತ್ತಿಗೆ ಸೃಷ್ಟಿಸ್ಥಿತಿಸಂಹಾರಗಳನ್ನು ಮಾಡುವ, ಜಗದ್ರಕ್ಷಕನಾದ ನಾರಾಯಣನು ಸರ್ವಸಾರಭೋಕ್ತೃವು ಮತ್ತು ನಾಶರಹಿತನೂ ಆಗಿರುವನು.

ಇಂತು ಶ್ರೀಬೃಹನ್ನಾರದೀಯಪುರಾಣ ಪೂರ್ವಭಾಗ ಪ್ರಥಮಪಾದದಲ್ಲಿ
ಯಮದೂತಕೃತ್ಯನಿರೂಪಣೆಯೆಂಬ ಮುವತ್ತೊಂದನೆಯ
ಅಧ್ಯಾಯವು ಮುಗಿದುದು.

## ಕಥಾಸಾರಾಂಶ.

ಈ ಅಧ್ಯಾಯದಲ್ಲಿ ನಾರದನು ಕೇಳಿದ ಯಮಮಾರ್ಗವನ್ನು ಸನಕನು ನಿರೂಪಿಸಿರುವನು. ಯಮಲೋಕದ ದಾರಿಯು ಎಂಭತ್ತಾರು ಸಾವಿರಯೋಜನ ವಿಸ್ತಾರವಿದೆ. ಆ ದಾರಿಯಲ್ಲಿ ಪುಣ್ಯವಂತರು ತಾವು ಮಾಡಿದ ದಾನಧರ್ಮಗಳಿಂದ ಶುಭಫಲವನ್ನು ಅನುಭವಿಸುತ್ತಾ ಅನಾಯಾಸವಾಗಿ ಪ್ರಯಾಣಮಾಡುವರು. ಪಾಪಿಗಳು ನಾನಾ ವಿಧಕಷ್ಟಗಳನ್ನು ಅನುಭವಿಸುತ್ತಾ ಹೋಗುವರು ಮುಂತಾಗಿ ಪಾಪಿಗಳಿಗೆ ಸಂಭವಿಸುವ ಕ್ಲೇಶವನ್ನು ವಿಶದಪಡಿಸಿ, ಧರ್ಮಫಲಗಳನ್ನೂ ವಿಸ್ತಾರವಾಗಿ ಹೇಳಿ, ಪುಣ್ಯವಂತರನ್ನು ವಿಚಾರಮಾಡುವ ಧರ್ಮರಾಜನ ಸ್ವರೂಪ, ಪಾಪಿಗಳನ್ನು ವಿಚಾರಮಾಡಿ ಶಿಕ್ಷಿಸುವ ಯಮಸ್ವರೂಪ ಮತ್ತು ಸ್ಥಾನ, ಶಿಕ್ಷಾಪ್ರಕಾರ ಇವುಗಳು ಉಕ್ತವಾಗಿವೆ. ಅನಂತರ ಸೃಷ್ಟಿಪ್ರಳಯಾದಿಗಳನ್ನು ನಿರೂಪಿಸಿ ಈ ಅಧ್ಯಾಯವು ಕೊನೆಗೊಂಡಿದೆ.

# ದ್ವಾತ್ರಿಂಶೋಽಧ್ಯಾಯಃ

---

## ಸನಕ ಉವಾಚ

ಏವಂ ಕರ್ಮಪಾಶನಿಯಂತ್ರಿತಜಂತವಃ ಸ್ವರ್ಗಾದಿಪುಣ್ಯಸ್ಥಾನೇಷು ಪುಣ್ಯಭೋಗಮನುಭೂಯ ಯಾತನಾಸು ಚ ಅತೀವ ದುಃಖಕರಂ ಪಾಪ-ಫಲಮನುಭೂಯ ಪ್ರಕ್ಷೀಣಕರ್ಮಾವಶೇಷೇಣಾಮುಂ ಲೋಕಮಾಗತ್ಯ ಸರ್ವಭಯವಿಹ್ವಲೇಷು ಮೃತ್ಯುಬಾಧಾಸಂಯುತೇಷು ಸ್ಥಾವರಾದಿಷು ಜಾಯಂತೇ ॥

ವೃಕ್ಷಗುಲ್ಮಲತಾವಲ್ಲೀಗಿರಯಶ್ಚ ತೃಣಾನಿ ಚ ।
ಸ್ಥಾವರಾ ಇತಿ ವಿಖ್ಯಾತಾ ಮಹಾಮೋಹಸಮನ್ವಿತಾಃ ॥ ೧ ॥

ಸ್ಥಾವರತ್ವೇ ಪೃಥಿವ್ಯಾಮುಪ್ತಬೀಜಾನಿ ಜಲಸೇಕಾನುಪದಂ ಸುಸಂ-ಸ್ಕಾರಸಾಮಗ್ರೀವಶಾದಂತರೂಷ್ಮಪ್ರಪಾಟಿತಾನ್ಯುಚ್ಛೂನತ್ವಮಾಪಾದ್ಯ ತ-ತೋ ಮೂಲಭಾವಂ ತನ್ಮೂಲಾದಂಕುರೋತ್ಪತ್ತಿಸ್ತಸ್ಮಾದಪಿ ಪರ್ಣಕಾಂಡ-ನಾಲಾದಿಕಂ ಕಾಂಡೇಷು ಚ ಪ್ರಸವಮಾಪದ್ಯಂತೇ । ತೇಷು ಚ ಪುಷ್ಪ-ಸಂಭವಃ ॥ ೨ ॥

---

## ಮೂವತ್ತೆರಡನೆಯ ಅಧ್ಯಾಯವು

೧. ಸನಕನು ಹೇಳಿದನು—ಈ ಪ್ರಕಾರ ಕರ್ಮವೆಂಬ ಪಾಶದಿಂದ ಬದ್ಧರಾದ ಪ್ರಾಣಿಗಳು ಸ್ವರ್ಗ ಮುಂತಾದ ಪುಣ್ಯಸ್ಥಾನಗಳಲ್ಲಿ ಪುಣ್ಯಫಲವನ್ನೂ, ನರಕಗಳಲ್ಲಿ ಅತ್ಯಂತ ದುಃಖಕರವಾದ ಪಾಪಫಲವನ್ನೂ ಸಹ ಅನುಭವಿಸುವುದರಿಂದ ಕೆಲವು ಕರ್ಮಗಳನ್ನು ಹೋಗಲಾಡಿಸಿಕೊಳ್ಳುವರು. ಉಳಿದ ಕರ್ಮ ಫಲನ್ನು ಅನುಭವಿಸುವುದಕ್ಕೋಸ್ಕರ ಈ ಭೂಲೋಕಕ್ಕೆ ಬಂದು ಸಕಲಭಯಗಳು, ಮೃತ್ಯುಬಾಧೆ ಇವುಗಳಿಂದ ಕೂಡಿರುವ ಸ್ಥಾವರಾದಿಜನ್ಮವನ್ನು ಹೊಂದುವರು. ಗಿಡ, ಬೇಲಿ, ಲತೆ, ಬಳ್ಳಿ, ಬೆಟ್ಟ, ಹುಲ್ಲು ಇವುಗಳು ಸ್ಥಾವರಗಳೆನಿಸುವುವು. ಅವು ಮಹಾಮೋಹದಿಂದ ಕೂಡಿರುತ್ತವೆ.

೨. ಸ್ಥಾವರಜನ್ಮದಲ್ಲಿ ಭೂಮಿಯಲ್ಲಿ ನಾಟಿದ ಬೀಜಗಳು ನೀರು ಹುಯಿದ ಕೂಡಲೇ ಒಳ್ಳೆಯ ಸಂಸ್ಕಾರ ಎಂದರೆ ಅಗೆಯುವುದು ಮುಂತಾದುವುಗಳಿಂದ ಒಳಗೆ

**ತಾನಿ ಪುಷ್ಪಾಣಿ ಕಾನಿಚಿದಫಲಾನಿ ಕಾನಿಚಿತ್ಫಲಹೇತುಭೂತಾನಿ ತೇಷು ಪುಷ್ಪೇಷು ವೃದ್ಧಭಾವೇಷು ಸತ್ಸು ತತ್ಪುಷ್ಪಮೂಲಭೂತತುಷೋತ್ಪತ್ತಿರ್ಜಾಯತೇ । ತೇಷು ತೇಷು ಭೋಕ್ತೄಣಾಂ ಪ್ರಾಣಿನಾಂ ಸಂಸ್ಕಾರಸಾಮಗ್ರೀವಶಾದ್ಧಿಮರಶ್ಮಿಕಿರಣಾಸನ್ನತಯಾ ತದೋಷಧಿರಸಸ್ತುಷಾಂತಃ ಪ್ರವಿಶ್ಯ ಕ್ಷೀರಭಾವಂ ಸಮೇತ್ಯ ಸ್ವಕಾಲೇ ತಂಡುಲಾಕಾರತಾಮುಪಗಮ್ಯ ಪ್ರಾಣಿನಾಂ ಭೋಗಸಂಸ್ಕಾರವಶಾತ್ಸಂವತ್ಸರೇ ಫಲಿನಃ ಸ್ಯುಃ ॥ ೩ ॥**

**ಸ್ಥಾವರತ್ವೇಽಪಿ ಬಹುಕಾಲಂ ವಾಯ್ವಾದಿಭಿರ್ಭಂಜನಭೇದನದವಾಗ್ನಿದಹನಶೀತಾತಪಾದಿದುಃಖಮನುಭೂಯ ಮ್ರಿಯಂತೇ । ತತಶ್ಚ ಕ್ರಿಮಯೋ ಭೂತ್ವಾ ಸದಾ ದುಃಖಬಹುಲಾಃ ಕ್ಷಣಾರ್ಧಂ ಜೀವಂತಃ ಕ್ಷಣಾರ್ಧಂ ಮ್ರಿಯಮಾಣಾ ಬಲವತ್ಪ್ರಾಣಿಪೀಡಾಯಾಂ ನಿವಾರಯಿತುಮಕ್ಷಮಾಃ ಶೀತವಾತಾದಿಕ್ಲೇಶಭೂಯಿಷ್ಠಾ ನಿತ್ಯಂ ಕ್ಷುದ್ಬಾಧಿತಾಃ ಮಲಮೂತ್ರಾದಿಷು ಸಂಚರಂತೋ ದುಃಖಮನುಭವಂತಿ ॥ ೪ ॥**

---

ಶಾಖವುಂಟಾಗಿ ಅದರಿಂದ ಭಾಗಿಸಲ್ಪಟ್ಟು, ಮೊಳಕೆಯಾಗಿ ಬೇರುಬಿಟ್ಟು ಆ ಮೂಲದಿಂದ ಅಂಕುರುವು ಹುಟ್ಟುತ್ತದೆ. ಅದರಿಂದ ಎಲೆ, ದಂಟು, ನಾಳ ಮುಂತಾದುವುಗಳೂ ಕಾಂಡಗಳಲ್ಲಿ ಶಾಖೆಗಳೂ ಅವುಗಳಲ್ಲಿ ಪುಷ್ಪಗಳೂ ಸಹ ಉಂಟಾಗುತ್ತವೆ.

೩. ಆ ಪುಷ್ಪಗಳಲ್ಲಿ ಕೆಲವು ಫಲವನ್ನು ಹುಟ್ಟಿಸುವುದಿಲ್ಲ. ಕೆಲವು ಫಲವನ್ನು ಹುಟ್ಟಿಸುವುವು. ಆ ಪುಷ್ಪಗಳು ಮುದಿಯಾಗಲು ಅವಕ್ಕೆ ಮೂಲ ಭೂತವಾದ ತುಷಾ ಎಂದರೆ ಹೊಟ್ಟು ಹುಟ್ಟುತ್ತದೆ. ಅನುಭವಿಸುವ ಪ್ರಾಣಿ ವರ್ಗದ ಅದೃಷ್ಟಾನುಸಾರವಾಗಿ ಆ ತುಷಗಳು ಚಂದ್ರಕಿರಣಸಂಬದ್ಧವಾಗಿ ಅವುಗಳ ಒಳಭಾಗದಲ್ಲಿ ಧಾನ್ಯರಸವು ಪ್ರವೇಶಿಸಿ ಹಾಲಾಗಿ ಪರಿಣಮಿಸಿ ಕೆಲವು ತಿಂಗಳು ಕಳೆದಮೇಲೆ ಯೋಗ್ಯಕಾಲದಲ್ಲಿ ಬತ್ತದ ಆಕಾರವನ್ನು ಹೊಂದಿ ಪ್ರಾಣಿಗಳ ಭೋಗಾದೃಷ್ಟಾನುಗುಣವಾಗಿ ಒಂದು ಸಂವತ್ಸರದಲ್ಲಿ ಫಲಪ್ರದ ವಾಗುವುವು.

೪. ಸ್ಥಾವರಜನ್ಮದಲ್ಲಿಯೂ ಅವು ಬಹುಕಾಲಪರ್ಯಂತವಾಗಿ ವಾಯು ಮುಂತಾದುವುಗಳಿಂದ ಭಂಜನ, ಛೇದನ, ಕಾಡುಗಿಚ್ಚಿನಿಂದ ಸುಡಲ್ಪಡುವುದು, ಹಿಮ, ಬಿಸಿಲುಗಳ ದುಃಖಾನುಭವ ಇವುಗಳಿಂದ ಸಾಯುತ್ತವೆ. ತರು

ತತ ಏವ ಪಶುಯೋನಿಮಾಗತ್ಯ ಬಲವದ್ಬಾಧೋದ್ವೇಜಿತಾ ವೃಥೋದ್ವೇಗಭೂಯಿಷ್ಠಾಃ ಕ್ಷುತ್‌ಕ್ಲಾಂತಾ ನಿತ್ಯಂ ವನಚಾರಿಣೋ ಮಾತೃಷ್ವಪಿ ವಿಷಯಾತುರಾ ವಾತಾದಿಕ್ಲೇಶಬಹುಲಾಃ ಕಸ್ಮಿಂಶ್ಚಿಜ್ಜನ್ಮನಿ ತೃಣಾಶನಾಃ ಕಸ್ಮಿಂಶ್ಚಿಜ್ಜನ್ಮನಿ ಮಾಂಸಾಮೇಧ್ಯಾದ್ಯದನಾಃ ಕಸ್ಮಿಂಶ್ಚಿಜ್ಜನ್ಮನಿ ಕಂದಮೂಲಫಲಾಶನಾ ದುರ್ಬಲಪ್ರಾಣಿಪೀಡಾನಿರತಾ ದುಃಖಮನುಭವಂತಿ ॥ ೫ ॥

ಅಂಡಜತ್ವೇಽಪಿ ವಾತಾಶನಾ ಮಾಂಸಾಮೇಧ್ಯಾದ್ಯಶನಾಶ್ಚ ಪರಪೀಡಾಪರಾಯಣಾ ನಿತ್ಯಂ ದುಃಖಬಹುಲಾ ಗ್ರಾಮ್ಯಪಶುಯೋನಿಮಾಗತಾ ಅಪಿ ಸ್ವಜಾತಿವಿಯೋಗಭಾರೋದ್ವಹನಪಾಶಾದಿಬಂಧನತಾಡನಹಲಾದಿಧಾರಣಾದಿಸರ್ವದುಃಖಾನ್ಯನುಭವಂತಿ ॥ ೬ ॥

---

ವಾಯು ಕ್ರಿಮಿಗಳಾಗಿ ಹುಟ್ಟಿ, ಸರ್ವದಾ ಅತ್ಯಂತದುಃಖವನ್ನು ಅನುಭವಿಸುತ್ತಾ ಅರ್ಧಕ್ಷಣಬದುಕಿರುವುದು, ಮರು ಅರ್ಧಕ್ಷಣದಲ್ಲಿಯೇ ಸಾಯುವುದು, ಬಲಿಷ್ಠ ಪ್ರಾಣಿಗಳ ಬಾಧೆಯಿಂದ ತಪ್ಪಿಸಿಕೊಳ್ಳಲು ಅಸಮರ್ಥವಾಗಿ ಶೀತವಾತಾದಿ ಕ್ಲೇಶದಲ್ಲಿ ಮುಳುಗಿ ಯಾವಾಗಲೂ ಹಸಿವೆಯಿಂದ ಬಳಲುತ್ತಾ ಮಲಮೂತ್ರಾದಿಗಳಲ್ಲಿ ಸಂಚರಿಸುತ್ತಾ ದುಃಖವನ್ನು ಅನುಭವಿಸುತ್ತವೆ.

೫. ಅನಂತರದಲ್ಲಿ ಪಶುಜನ್ಮವನ್ನು ಹೊಂದಿ ಬಲಿಷ್ಠಪ್ರಾಣಿಗಳ ಬಾಧೆಯಿಂದ ಭಯಪಡುತ್ತಾ ವ್ಯರ್ಥವಾಗಿ ದುಃಖವನ್ನು ತುಂಬಿಕೊಂಡು ಹಸಿವಿನಿಂದ ಬಳಲಿ ಯಾವಾಗಲೂ ಕಾಡಿನಲ್ಲಿ ಸಂಚರಿಸುತ್ತಾ ತಾಯಿಯಲ್ಲಿಯೂ ಸಹ ವಿಷಯಭೋಗವನ್ನು ಬಯಸುತ್ತಾ ವಾತಾದಿಕ್ಲೇಶದಿಂದ ಕೂಡಿ, ಒಂದು ಜನ್ಮದಲ್ಲಿ ಹುಲ್ಲನ್ನೂ, ಇನ್ನೊಂದು ಜನ್ಮದಲ್ಲಿ ಮಾಂಸ ಅಮೇಧ್ಯ ಮುಂತಾದುವನ್ನೂ, ಮತ್ತೊಂದು ಜನ್ಮದಲ್ಲಿ ಗೆಡ್ಡೆ ಗೆಣಸು ಫಲ ಇವುಗಳನ್ನು ತಿನ್ನುತ್ತಾ, ದುರ್ಬಲ ಪ್ರಾಣಿಗಳನ್ನು ಹಿಂಸಿಸುತ್ತಾ ದುಃಖವನ್ನನುಭವಿಸುತ್ತವೆ.

೬. ಅಂಡಜಪ್ರಾಣಿಗಳ ಜನ್ಮದಲ್ಲಿಯೂ ಗಾಳಿಯನ್ನು ಆಹಾರವಾಗಿ ಉಳ್ಳವುಗಳು, ಮಾಂಸ, ಅಮೇಧ್ಯ ಮುಂತಾದುವುಗಳನ್ನು ತಿನ್ನುವವುಗಳೂ ಆಗಿ ಯಾವಾಗಲೂ ಹೆಚ್ಚಾಗಿ ದುಃಖಪಡುತ್ತಾ ಗ್ರಾಮಗಳಲ್ಲಿರುವ ಪಶುಯೋನಿಗಳಲ್ಲಿ ಜನ್ಮತಾಳಿದಾಗ್ಯೂ ತನ್ನ ಜಾತಿಯವರ ವಿರಹ, ಭಾರವನ್ನು

**ಏವಂ ಬಹುಯೋನಿಷು ಸಂಭ್ರಾಂತಾಃ ಕ್ರಮೇಣ ಮಾನುಷಂ ಜನ್ಮ ಪ್ರಾಪ್ನುವಂತಿ । ಕೇಚಿಚ್ಚ ಪುಣ್ಯವಿಶೇಷಾದ್ವ್ಯುತ್ಕ್ರಮೇಣಾಪಿ ಮನುಷ್ಯಜನ್ಮಾಶ್ನುವತೇ ॥ ೭ ॥**

**ಮನುಷ್ಯಜನ್ಮನಾಪಿ ಚ ಚರ್ಮಕಾರ ಚಂಡಾಲ ವ್ಯಾಧನಾಪಿತ ರಜಕ ಕುಂಭಕಾರಲೋಹಕಾರಸ್ವರ್ಣಕಾರ ತಂತುವಾಯ ಸೌಚಿಕಜಟಿಲಸಿದ್ಧಧಾವಕ ಲೇಖಕ ಭೃತಕ ಶಾಸನಹಾರಿ ನೀಚ ಭೃತ್ಯ ದರಿದ್ರ ಹೀನಾಂಗ ಅಧಿಕಾಂಗತ್ವಾದಿ ದುಃಖಬಹುಲಜ್ವರತಾಪಶೀತಶ್ಲೇಷ್ಮಗುಲ್ಮಪಾದಾಕ್ಷಿಶಿರೋಗರ್ಭಪಾರ್ಶ್ವವೇದನಾದಿ ದುಃಖಮನುಭವಂತಿ ॥ ೮ ॥**

**ಮನುಷ್ಯತ್ವೇಽಪಿ ಯದಾ ಸ್ತ್ರೀಪುರುಷಯೋರ್ವೀರ್ಯವಾಯುಸ್ತತ್ಸಮಯೇ ರೇತೋ ಯದಾ ಜರಾಯುಂ ಪ್ರವಿಶತಿ ತದೈವ ಕರ್ಮವಶಾಜ್ಜಂತುಃ ಶುಕ್ರೇಣ ಸಹ ಜರಾಯುಂ ಪ್ರವಿಶ್ಯ ಶುಕ್ರಶೋಣಿತಕಲಲೇ ಪ್ರವರ್ತತೇ ॥**

---

ಎತ್ತುವುದು, ಹಗ್ಗದಿಂದ ಕಟ್ಟಿಸಿಕೊಳ್ಳುವುದು, ಹೊಡೆಯಿಸಿಕೊಳ್ಳುವುದು, ನೇಗಿಲು ಮುಂತಾದುವನ್ನು ಹೊರುವುದು ಮೊದಲಾದ ಸಕಲದುಃಖಗಳನ್ನೂ ಅನುಭವಿಸಿ ಕೊಂಡಿರುತ್ತವೆ.

೭. ಈಪ್ರಕಾರ ಬಹು ಜನ್ಮಗಳನ್ನು ಹೊಂದಿದವರಾಗಿ ಕ್ರಮವಾಗಿ ಮನುಷ್ಯಜನ್ಮವನ್ನು ಪಡೆಯುತ್ತಾರೆ. ಕೆಲವರು ವಿಶೇಷ ಪುಣ್ಯಗಳನ್ನು ಸಂಪಾದಿಸಿ ತನ್ಮೂಲಕ ವ್ಯುತ್ಕ್ರಮದಿಂದ ಎಂದರೆ ಕೆಲವು ಹೀನ ಜನ್ಮಗಳಲ್ಲಿ ಹುಟ್ಟದಂತೆಯೇ ಮನುಷ್ಯಜನ್ಮವನ್ನು ಪಡೆಯುವರು.

೮. ಮನುಷ್ಯಜನ್ಮದಲ್ಲಿಯೂ ತೊಗಲಿನ ಕೆಲಸಮಾಡುವವನು, ಚಂಡಾಲ, ಬೇಡ, ಹಜಾಮ, ಅಗಸ, ಕುಂಬಾರ, ಕಮ್ಮಾರ, ಸ್ವರ್ಣಕಾರ, ನೆಯ್ಗೆಯವನು, ದರ್ಜಿ, ಜಟಿಲ, ಸಿದ್ಧ, ಓಡುವವನು, ಗುಮಾಸ್ತ, ಶಿಷ್ಯರಿಂದ ಕ್ಲಪ್ತವಾಗಿ ದ್ರವ್ಯವನ್ನು ತೆಗೆದುಕೊಂಡು ಪಾಠಹೇಳುವವನು, ಶಾಸನವನ್ನಪಹರಿಸುವವನು, ನೀಚ, ಸೇವಕ, ಬಡವ, ಅಂಗಹೀನ, ಹೆಚ್ಚು ಅಂಗಗಳುಳ್ಳವನು ಮುಂತಾಗಿ ಹುಟ್ಟಿ ಬಹು ದುಃಖಪ್ರದವಾದ ಜ್ವರ, ತಾಪ, ಶೀತ, ಶ್ಲೇಷ್ಮ ಗುಲ್ಮವ್ಯಾಧಿ, ಕಾಲುಕಣ್ಣುತಲೆಗಳನೋವು ಮುಂತಾದ ದುಃಖಗಳನ್ನು ಅನುಭವಿಸುತ್ತಿರುತ್ತಾರೆ.

೯. ಮನುಷ್ಯ ಜನ್ಮದಲ್ಲಿಯೂ ಸಹ ಸ್ತ್ರೀಪುರುಷರ ಸಂಭೋಗವಾದಾಗ ಪುರುಷವೀರ್ಯವು ಗರ್ಭಕೋಶ (ಜರಾಯು) ವನ್ನು ಪ್ರವೇಶಿಸಿದ ಕೂಡಲೇ

ತದ್ವೀರ್ಯಂ ಜೀವಪ್ರವೇಶಾತ್ಪಂಚಾಹಾತ್ಕಲಲಂ ಭವತಿ । ಅರ್ಧಮಾಸೇ ಪಲಲಭಾವಮುಪೇತ್ಯ ಮಾಸೇ ಪ್ರಾದೇಶಮಾತ್ರತ್ವಮಾಪದ್ಯತೇ ॥ ೧೦ ॥

ತತಃ ಪ್ರಭೃತಿ ವಾಯುವಶಾಚ್ಚೈತನ್ಯಾಭಾವೇಽಪಿ ಮಾತುರುದರೇ ದುಃಸ್ಸಹತಾಪಕ್ಲೇಶತಯೈಕತ್ರ ಸ್ಥಾತುಮಶಕ್ಯತ್ವಾತ್ ಭ್ರಮತಿ ॥ ೧೧ ॥

ಮಾಸದ್ವಯೇ ಪೂರ್ಣೇ ಪುರುಷಾಕಾರಮಾತ್ರತಾಮುಪಗಮ್ಯ ಮಾಸತ್ರಿತಯೇ ಪೂರ್ಣೇ ಕರಚರಣಾದ್ಯವಯವಭಾವಮುಪಗಮ್ಯ ಚತುರ್ಷು ಮಾಸೇಷು ಗತೇಷು ಸರ್ವಾವಯವಾನಾಂ ಸಂಧಿಭೇದಪರಿಜ್ಞಾನಂ ಪಂಚಸ್ವತೀತೇಷು ನಖಾನಾಮಭಿವ್ಯಂಜನಂ ಷಟ್ಸ್ವತೀತೇಷು ನಖಸಂಧಿಪರಿಸ್ಫುಟಿತಾಮುಪಗಮ್ಯ ನಾಭಿಸೂತ್ರೇಣ ಪುಷ್ಯಮಾಣಮಮೇಧ್ಯಮೂತ್ರಸಿಕ್ತಾಂಗಂ ಜರಾಯುಣಾ ಬಂಧಿತಂ ರಕ್ತಾಽಸ್ಥಿಕ್ರಿಮಿವಸಾಮಜ್ಜಾಸ್ನಾಯುಕೇಶಾದಿದೂಷಿತೇ ಕುತ್ಸಿತೇ ಶರೀರೇ ನಿವಾಸಿನಂ ಸ್ವಯಮಪ್ಯೇವಂ ಪರಿದೂಷಿತದೇಹಂ ಮಾತುಶ್ಚ ಕಟ್ವಾಮ್ಲಲವಣಾತ್ಯುಷ್ಣಭುಕ್ತದಹ್ಯಮಾನಮಾತ್ಮಾನಂ ದೃಷ್ಟ್ವಾ ದೇಹೀ ಪೂರ್ವಜನ್ಮಸ್ಮರಣಾನುಭವಾತ್ಪೂರ್ವಾನುಭೂತ ನರಕದುಃಖಾನಿ ಚ ಸ್ಮೃತ್ವಾಂತರ್ದುಃಖೇನ ಚ ಪರಿದಹ್ಯಮಾನೋ ಮಾತುರ್ದೇಹಾತಿಮೂತ್ರಾದಿರೂಕ್ಷೇಣ ದಹ್ಯಮಾನ ಏವಂ ಮನಸಿ ಪ್ರಲಪತಿ ॥೧೨॥

---

ಪ್ರಾಣಿಯು ತನ್ನ ಪ್ರಾಚೀನ ಕರ್ಮದಿಂದ ವೀರ್ಯದೊಡನೆ ಜರಾಯುವನ್ನು ಪ್ರವೇಶಿಸಿ ಶುಕ್ರಶೋಣಿತಗಳ ಕಲಲ (ಶುಕ್ರಶೋಣಿತಪರಿಣತಪಿಂಡ) ದಲ್ಲಿ ಸೇರುವನು.

೧೦. ಆ ವೀರ್ಯವು ಜೀವನು ಪ್ರವೇಶಿಸಿದ ಐದು ದಿವಸಗಳಲ್ಲಿ ಕಲಲವಾಗಿ ಅರ್ಧತಿಂಗಳಲ್ಲಿ ಪಲಲ ಭಾವವನ್ನು ಹೊಂದಿ, ಒಂದು ತಿಂಗಳಲ್ಲಿ ಪ್ರಾದೇಶಪರಿಮಿತಿ (ಚೋಟು) ಯುಳ್ಳದಾಗುತ್ತದೆ.

೧೧. ಆಗಿನಿಂದ ಚೈತನ್ಯವಿಲ್ಲದಿದ್ದಾಗ್ಯೂ ತಾಯಿಯ ಉದರದಲ್ಲಿ ಸಹಿಸಲಶಕ್ಯವಾದ ತಾಪಕ್ಲೇಶಗಳುಂಟಾಗುವುದರಿಂದ ಒಂದೇ ಸ್ಥಳದಲ್ಲಿ ನಿಲ್ಲಲಶಕ್ಯವಾಗಿ ಆ ಗರ್ಭವು ಗಾಳಿಯಿಂದ ತಿರುಗುತ್ತಾ ಇರುತ್ತದೆ.

೧೨. ಎರಡನೆಯ ತಿಂಗಳು ತುಂಬಿದಮೇಲೆ ಅದು ಪುರುಷಾಕಾರವನ್ನು ಹೊಂದಿ ಮೂರು ತಿಂಗಳಾದಮೇಲೆ ಕೈ, ಕಾಲು ಮುಂತಾದ ಅವಯವ ಚಿಹ್ನೆ

**ಅಹೋ ಅತ್ಯಂತಪಾಪೋऽಹಂ ಭೃತ್ಯಾಽಪತ್ಯಮಿತ್ರಯೋಷಿದ್ಗೃಹಕ್ಷೇತ್ರ-ಧನಧಾನ್ಯಾದಿಷ್ವತ್ಯಂತರಾಗೇಣ ಕಲತ್ರಪೋಷಣಾರ್ಥಂ ಪರಧನಕ್ಷೇತ್ರಾದಿಕಂ ಪಶ್ಯತೋಹರಣಾದ್ಯುಪಾಯೈರಪಹೃತ್ಯ ಕಾಮಾಂಧತಯಾ ಪರಸ್ತ್ರೀಹರ-ಣಾದಿಕಮನುಭೂಯ ಮಹಾಪಾಪಾನ್ಯಾಚರಂ । ತೈಃ ಪಾಪೈರಹಮನೇಕ ಏವಂವಿಧನರಕಾನನುಭೂಯ ಪುನಃ ಸ್ಥಾವರಾದಿಷು ಮಹಾದುಃಖಮ-ನುಭೂಯ ಸಂಪ್ರತಿ ಜರಾಯುಣಾ ಪರಿವೇಷ್ಟಿತೋಽಂತರ್ದುಃಖೇನ ಬಹಿ-ಸ್ತಾಪೇನ ಚ ದಹ್ಯಾಮಿ ॥ ೧೩ ॥**

---

ಯನ್ನು ಪಡೆದು ನಾಲ್ಕು ತಿಂಗಳು ಕಳೆಯಲು ಸರ್ವಾಯವಗಳ ಸಂಧಿಭೇದ ಪರಿಜ್ಞಾನವು, ಐದು ತಿಂಗಳು ಕಳದನಂತರ ಉಗುರುಗಳ ಅಭಿವ್ಯಕ್ತಿಯು, ಆರು ತಿಂಗಳಾದಮೇಲೆ ಉಗುರುಸಂಧಿಯ ಸ್ಫುಟತ್ವ ಇವುಗಳನ್ನು ಹೊಂದು ವುದು. ನಾಭಿಸೂತ್ರದಿಂದ (ಹೊಕ್ಕಳಬಳ್ಳಿ) ಎಳೆಯಲ್ಪಡುತ್ತಿರುವ, ಮಲಮೂತ್ರ ಗಳಿಂದ ನೆನೆಸಿದ ಅವಯವಗಳುಳ್ಳ, ಜರಾಯುವಿನಿಂದ ಬಂಧನವಮಾಡಲ್ಪಟ್ಟ, ರಕ್ತ, ಮೂಳೆ, ಕ್ರಿಮಿ, ವಸಾ, ಕೊಬ್ಬು, ನರ ಮತ್ತು ಕೂದಲು ಮುಂತಾದುವು ಗಳಿಂದ ಕಲುಷಿತವಾದ ಕುತ್ಸಿತ ಶರೀರದಲ್ಲಿ ವಾಸವಮಾಡುತ್ತಿರುವ, ತಾಯಿಯು ತಿಂದ ಖಾರ, ಹುಳಿ, ಉಪ್ಪು ಇವುಗಳುಳ್ಳ ಹೆಚ್ಚು ಬಿಸಿಯಾಗಿರುವ ಆಹಾರದಿಂದ ದಹಿಸಲ್ಪಡುತ್ತಿರುವ ತಾನು, ಇಂತಹ ಕಲುಷಿತ ಶರೀರಹೊಂದಿರುವುದನ್ನು ತಿಳಿದು ಜೀವನು ಪೂರ್ವಜನ್ಮಸ್ಮರಣವಿರುವುದರಿಂದ ಹಿಂದೆ ಅನುಭವಿಸಿದ ನರಕದುಃಖಗಳನ್ನು ಸ್ಮರಿಸಿಕೊಂಡು ಅದರಿಂದ ತಪಿಸುತ್ತಾ ತಾಯಿಯು ಕ್ರೂರ ವಾದ ಅತಿಮೂತ್ರಾದಿಗಳಿಂದ ನರಳುತ್ತಾ ಮನಸ್ಸಿನಲ್ಲಿ ಈರೀತಿಯಾಗಿ ದುಃಖ ಪಡುತ್ತಿರುತ್ತಾನೆ.

೧೩. ಅಯ್ಯೋ! ನಾನು ಅತ್ಯಂತ ಪಾಪಿಯು. ಆಳು, ಮಕ್ಕಳು, ಸ್ನೇಹಿತ, ಸ್ತ್ರೀ, ಮನೆ, ಜಮಿನು, ಹಣ, ಧಾನ್ಯ ಮುಂತಾದುವುಗಳಲ್ಲಿ ಅತ್ಯಂತ ಅಭಿಮಾನದಿಂದ ಹೆಂಡತಿಯನ್ನು ಪೋಷಿಸಲು ಪರಕೀಯವಾದ ಹಣ, ಜಮೀನು ಮುಂತಾದುವನ್ನು ದರೋಡೆ ಮುಂತಾದ ಉಪಾಯಗಳಿಂದ ಅಪ ಹರಿಸಿ, ಕಾಮಾಂಧನಾಗಿ ಪರಸ್ತ್ರೀಯರನ್ನಪಹರಿಸಿ ಮಹಾ ಪಾತಕಗಳನ್ನಾ ಚರಿಸುತ್ತಿರುವ ಪಾಪಿಗಳಗಣದಲ್ಲಿ ಒಬ್ಬನಾದ ನಾನು ಈರೀತಿಯಾದ ನರಕ

**ಮಯಾ ಪ್ರೋಕ್ಷಿತಾ ದಾರಾಶ್ಚ ಸ್ವಕರ್ಮವಶಾದನ್ಯತೋ ಗತಾಃ ॥ ೧೪ ॥**

**ಅಹೋ ದುಃಖಮಹೋದುಃಖಮಹೋದುಃಖಂ ಹಿ ದೇಹಿನಾಂ ॥ ೧೫ ॥**

**ದೇಹಸ್ತು ಪಾಪಾತ್ಸಂಜಾತಸ್ತಸ್ಮಾತ್ಪಾಪಂ ನ ಕಾರಯೇತ್ ।**
**ಭೃತ್ಯಮಿತ್ರಕಳತ್ರಾರ್ಥಮನ್ಯದ್ರವ್ಯಂ ಹೃತಂ ಮಯಾ ॥ ೧೬ ॥**

**ತೇನ ಪಾಪೇನ ದಹ್ಯಾಮಿ ಜರಾಯುಪರಿವೇಷ್ಟಿತಃ ।**
**ದೃಷ್ಟ್ವಾಽನ್ಯಸ್ಯ ಶ್ರಿಯಂ ಪೂರ್ವಂ ಸಂತಪ್ತೋಽಹಮಸೂಯಯಾ ॥ ೧೭ ॥**

**ಗರ್ಭಾಗ್ನಿನಾನುದಹ್ಯೇಯಮಿದಾನೀಮಪಿ ಪಾಪಕೃತ್ ।**
**ಕಾಯೇನ ಮನಸಾ ವಾಚಾ ಪರಪೀಡಾಮಕಾರಿಷಂ ॥ ೧೮ ॥**

---

ಗಳನ್ನನುಭವಿಸಿ, ತಿರುಗಿ ಸ್ಥಾವರಾದಿ ಜನ್ಮಗಳಲ್ಲಿ ಮಹಾ ದುಃಖವನ್ನು ಅನುಭವಿಸಿ, ಈಗ ಜರಾಯುವಿನಿಂದ ಬಂಧಿತನಾಗಿ ಅಂತರ್ದುಃಖ, ಬಾಹ್ಯತಾಪ ಇವುಗಳಿಂದ ತಪಿಸುತ್ತಿದ್ದೇನೆ.

೧೪. ನನ್ನಿಂದ ರಕ್ಷಿತಳಾದ ಹೆಂಡತಿಯು ಅವಳ ಕರ್ಮಾನುಗುಣವಾಗಿ ಬೇರೆ ಸ್ಥಳಕ್ಕೆ ಹೋದಳು.

೧೫. ಅಯ್ಯೋ ! ! ! ಪ್ರಾಣಿಗಳಿಗೆ ದುಃಖವು; ದುಃಖವು; ದುಃಖವು.

೧೬. ದೇಹವು ಪಾಪದಿಂದ ಬಂದಿರುವುದು. ಆದುದರಿಂದ ಪಾಪಕೃತ್ಯವನ್ನು ಮಾಡಬಾರದು. ಆಳು, ಸ್ನೇಹಿತ ಮತ್ತು ಹೆಂಡತಿ ಇವರುಗಳಿಗಾಗಿ ಪರದ್ರವ್ಯವನ್ನು ನಾನು ಕದ್ದೆನು.

೧೭. ಆ ಪಾಪದಿಂದ ಈಗ ಜರಾಯುಬಂಧಿತನಾಗಿ ದಹಿಸಲ್ಪಡುತ್ತಿದ್ದೇನೆ. ನಾನು ಪೂರ್ವಜನ್ಮದಲ್ಲಿ ಪರರ ಸಂಪತ್ತನ್ನು ನೋಡಿ ಹೊಟ್ಟೇಕಿಚ್ಚಿನಿಂದ ದುಃಖಿಸಿದ್ದೆನು.

೧೮. ಆ ಪಾಪಮಾಡಿದ ನಾನು ಈಗ ಗರ್ಭಾಗ್ನಿಯಿಂದ ದಹಿಸಲ್ಪಡುತ್ತಿರುವೆನು. ಶಾರೀರಕ, ಮಾನಸಿಕ, ವಾಚನಿಕವಾಗಿಯೂ ಸಹ ನಾನು ಇತರರಿಗೆ ಬಾಧೆಯನ್ನು ಉಂಟುಮಾಡಿದ್ದೆನು.

**ತೇನ ಪಾಪೇನ ದಹ್ಯಾಮಿ ತ್ವಹಮೇಕೋಽತಿದುಃಖಿತಃ ।**
**ಏವಂ ಬಹುವಿಧಂ ಜಂತುರ್ವಿಲಪ್ಯ ಸ್ವಯಮೇವ ವಾ ॥ ೧೯ ॥**

**ಆತ್ಮಾನಮಾಶ್ವಾಸ್ಯ ಉತ್ಪತ್ತೇರನಂತರಂ ಸತ್ಸಂಗೇನ ವಿಶುದ್ಧಮನಾ ಭೂತ್ವಾ ಸತ್ಕರ್ಮಾಣಿ ನಿರ್ವರ್ತ್ಯ ಅಖಿಲಜಗದಂತರಾತ್ಮನಃ ಸತ್ಯಜ್ಞಾನಾನಂದಮಯಸ್ಯ ಶಕ್ತಿಪ್ರಭಾವಾನುಷ್ಠಿತನಿಷ್ಟಪವರ್ಗಸ್ಯ ಲಕ್ಷ್ಮೀಪತೇರ್ನಾರಾಯಣಸ್ಯ ಸಕಲಸುರಾಸುರಯಕ್ಷಗಂಧರ್ವರಾಕ್ಷಸಪನ್ನಗಮುನಿಕಿನ್ನರಸಮೂಹಾರ್ಚಿತಚರಣಕಮಲಯುಗಂ ಭಕ್ತಿತಃ ಸಮಭ್ಯರ್ಚ್ಯ ದುಸ್ಸಹಸಂಸಾರಛೇದಕಾರಣಭೂತಂ ಭೇದರಹಸ್ಯೋಪನಿಷದ್ಭಿಃ ಪರಿಸ್ಫುಟಂ ಸಕಲಲೋಕಪರಾಯಣಂ ಹೃದಿ ನಿಧಾಯ ದುಃಖತರಮಿಮಂ ಸಂಸ್ಕಾರಾಗಾರಮತಿಕ್ರಮಿಷ್ಯಾಮೀತಿ ಮನಸಿ ಭಾವಯತಿ ॥ ೨೦ ॥**

---

೧೯-೨೦. ಆ ಪಾಪದಿಂದ ನಾನೊಬ್ಬನೇ ಈಗ ದುಃಖಿಸುತ್ತಿರುವೆನು ಎಂಬೀರೀತಿಯಾಗಿ ಗರ್ಭಸ್ಥಪ್ರಾಣಿಯು ಬಹುಪ್ರಕಾರ ದುಃಖಪಟ್ಟು ತನ್ನಷ್ಟಕ್ಕೆತಾನೇ ಸಮಾಧಾನ ಮಾಡಿಕೊಂಡು, ನಾನು ಹುಟ್ಟಿದಮೇಲೆ ಸಜ್ಜನ ಸಹವಾಸದಿಂದ ಪರಿಶುದ್ಧಚಿತ್ತನಾಗಿ ಸತ್ಕರ್ಮಗಳನ್ನನುಷ್ಠಾನಮಾಡಿ ಸಕಲ ಜಗದಂತರ್ಯಾಮಿಯು, ಸಚ್ಚಿದಾನಂದಮಯನು, ಅಪರಿಮಿತಶಕ್ತಿಪ್ರಭಾವದಿಂದ ಸುಕೃತಲೋಕವನ್ನು ಸೃಷ್ಟಿಸಿರುವವನು, ಲಕ್ಷ್ಮೀಪತಿಯು, ನಿಖಿಲ ದೇವತೆಗಳು, ಅಸುರರು, ಯಕ್ಷರು, ಗಂಧರ್ವರು, ರಾಕ್ಷಸರುಪನ್ನಗ, ಮುನಿಗಳು ಮತ್ತು ಕಿನ್ನರರು ಇವರುಗಳ ಸಮೂಹದಿಂದ ಪೂಜಿಸಲ್ಪಟ್ಟವನೂ ಆದ ನಾರಾಯಣನ ಕಮಲದಂತಿರುವ ಎರಡು ಪಾದಗಳನ್ನು ಭಕ್ತಿಯಿಂದ ಪೂಜಿಸಿ, ಸಹಿಸಲಶಕ್ಯವಾದ ಈ ಸಂಸಾರಬಂಧದ ನಿವೃತ್ತಿಗೆ ಸಾಧಕನು, ಅತ್ಯಂತ ಭೇದ ಮುಂತಾದ ರಹಸ್ಯಾರ್ಥಗಳನ್ನೊಳಗೊಂಡಿರುವ ಉಪನಿಷತ್ತುಗಳಿಂದ ಪ್ರಕಾಶಿತಸ್ವರೂಪನು, ನಿಖಿಲಲೋಕಪರಾಯಣನೂ ಆದ ಭಗವಂತನನ್ನು ಮನಸ್ಸಿನಲ್ಲಿ ಧ್ಯಾನಿಸಿ, ಅತಿಶಯಿತದುಃಖಪ್ರದವಾದ ಈ ಸಂಸಾರಬಂಧವನ್ನು ಕಳೆದುಕೊಳ್ಳುವೆನೆಂದು ಮನಸ್ಸಿನಲ್ಲಿ ಭಾವಿಸುವನು.

ಯತಸ್ತನ್ಮಾತುಃ ಪ್ರಸೂತಿಸಮಯೇ ಸತಿ ಗರ್ಭಸ್ಥೋ ದೇಹೀ ನಾರದಮುನೇ ವಾಯುನಾ ಪರಿಪೀಡಿತೋ ಮಾತುಶ್ಚಾಪಿ ದುಃಖಂ ಕುರ್ವನ್ ಕರ್ಮಪಾಶೇನ ಯೋನಿಮಾರ್ಗಾನ್ನಿಷ್ಕ್ರಾಮನ್ಸಕಲಯಾತನಾಭೋಗಮೇಕಕಾಲಭವಮನುಭವತಿ ॥ ೨೧ ॥

ತೇನಾತಿಕ್ಲೇಶೇನ ಯೋನಿಯಂತ್ರಪೀಡಿತಃ ಗರ್ಭಾನ್ನಿಷ್ಕ್ರಾಂತೋ ನಿಸ್ಸಂಜ್ಞತಾಂ ಯಾತಿ ॥ ೨೨ ॥

ತಂ ತು ಬಾಹ್ಯವಾಯುಃ ಸಮುಜ್ಜೀವಯತಿ । ಬಾಹ್ಯವಾಯುಸ್ಪರ್ಶಸಮನಂತರಮೇವ ನಷ್ಟಸ್ಮೃತಿಃ ಪೂರ್ವಾನುಭೂತಾಖಿಲದುಃಖಾನಿ ವರ್ತಮಾನಾನ್ಯಪಿ ಜ್ಞಾನಾಭಾವಾದವಿಜ್ಞಾಯಾತ್ಯಂತದುಃಖಮನುಭವತಿ ॥೨೩॥

---

೨೧. ನಾರದಮುನಿಯೇ! ಹೀಗೆ ಗರ್ಭವಾಸವು ಕಳೆದು ಪ್ರಸವಕಾಲ ಬಂದಾಗ ವಾಯುವಿನಿಂದ ಪೀಡಿತನಾಗಿ ಗರ್ಭಸ್ಥಶಿಶುವು ತಾಯಿಗೂ ದುಃಖವನ್ನುಂಟುಮಾಡುತ್ತಾ ಕರ್ಮಪಾಶದಿಂದ ಬಲಾತ್ಕಾರವಾಗಿ ದೂಡಲ್ಪಟ್ಟ ಯೋನಿಮಾರ್ಗದಿಂದ ಹೊರಕ್ಕೆ ಬಂದು ಒಂದೇ ಕಾಲದಲ್ಲಿ ಸಂಭವಿಸುವ ಸಕಲ ಯಾತನಾಭೋಗಗಳನ್ನೂ ಅನುಭವಿಸುತ್ತಾನೆ.

೨೨. ಆಗ ಬಹುದುಃಖದಿಂದ ಯೋನಿ ಎಂಬ ಯಂತ್ರದಿಂದ ಪೀಡಿತನಾಗಿ ಗರ್ಭದಿಂದ ಹೊರಗೆ ಬಂದಮೇಲೆ ಚೇತನಾಶೂನ್ಯನಾಗುತ್ತಾನೆ.

೨೩. ಹೊರಗೆ ಬಂದು ಚೇತನಾಶೂನ್ಯವಾಗಿ ಬಿದ್ದಿರುವ ಶಿಶುವನ್ನು ಬಾಹ್ಯವಾಯುವು ಉಜ್ಜೀವನಗೊಳಿಸುತ್ತದೆ- ಬಾಹ್ಯವಾಯುಸಂಪರ್ಕವಾದ ಕೂಡಲೇ ಪೂರ್ವಜನ್ಮಸ್ಮರಣೆಯು ಹೋಗುತ್ತದೆ. ಆದರಿಂದ ಹಿಂದಿನ ಜನ್ಮದಲ್ಲಿ ಅನುಭವಿಸಿದ ಮತ್ತು ಈಗ ಪ್ರಾಪ್ತವಾಗಿರುವ ದುಃಖಗಳನ್ನರಿಯದೆ ಅತ್ಯಂತ ದುಃಖಭಾಗಿಯಾಗುವನು.

ಏವಂ ಬಾಲತ್ವಮಾಪನ್ನೋ ಜಂತುಸ್ತತ್ರಾಪಿ ಸ್ವಮಲಮೂತ್ರಲಿಪ್ತ-
ದೇಹಃ ಆಧ್ಯಾತ್ಮಿಕಾದಿಪೀಡ್ಯಮಾನೋಽಪಿ ವಕ್ತುಮಶಕ್ತಃ ಕ್ಷುತ್ತೃಷಾಪೀ-
ಡಿತೋ ರುದಿತೇ ಸತಿ ಸ್ತನಾದಿಕಂ ದೇಯಮಿತಿ ಮನ್ವಾನಾಃ ಪ್ರವರ್ತಂತೇ
॥ ೨೪ ॥

ಏವಮನೇಕಂ ದೇಹಭೋಗಮನ್ಯಾಧೀನತಯಾನುಭೂಯಮಾನೋ
ದಂಶಾದಿಷ್ವಪಿ ನಿವಾರಯಿತುಮಶಕ್ತೋ ಬಾಲಭಾವಮಾಸಾದ್ಯ ಮಾತಾ-
ಪಿತ್ರೋರುಪಾಧ್ಯಾಯಸ್ಯ ತಾಡನಂ ಸದಾ ಪರ್ಯಟನಶೀಲತ್ವಂ ಪಾಂಸು-
ಭಸ್ಮಪಂಕಾದಿಷು ಕ್ರೀಡನಂ ಸದಾ ಕಲಹನಿಯತತ್ವಮಶುಚಿತ್ವಂ ಬಹು-
ವ್ಯಾಪಾರಾಭಾಸಕಾರ್ಯನಿಯತತ್ವಂ ತದಸಂಭವೇ ಆಧ್ಯಾತ್ಮಿಕದುಃಖ-
ಮೇವಂವಿಧಮನುಭವತಿ ॥ ೨೫-೨೬ ॥

---

೨೪. ಈ ಪ್ರಕಾರ ಶೈಶವಾವಸ್ಥೆಯನ್ನು ಹೊಂದಿದ ಪ್ರಾಣಿಯು ಅಲ್ಲಿಯೂ ತನ್ನ ಮಲಮೂತ್ರಗಳನ್ನು ಶರೀರಕ್ಕೆ ಹಚ್ಚಿಕೊಂಡು ಆಧ್ಯಾತ್ಮಿಕ ಆಧಿದೈವಿಕ ಆಧಿಭೌತಿಕವೆಂಬ ತಾಪತ್ರಯದಿಂದ ಪೀಡಿತನಾದಾಗ್ಯೂ ಹೇಳಲು ಅಸಮರ್ಥನಾಗಿ ಹಸಿವು ಬಾಯಾರಿಕೆಗಳಿಂದ ಬಳಲುತ್ತಾ, ಅತ್ತರೆ ಸ್ತನ್ಯಪಾನಾದಿಗಳನ್ನು ಮಾಡಿಸುವರೆಂದು ತಿಳಿದು ಅಳುತ್ತದೆ.

೨೫-೨೬. ಹೀಗೆ ಅನೇಕ ಶರೀರಗಳನ್ನು ಪರಾಧೀನತೆಯಿಂದ ಅನುಭವಿಸುವವನಾಗಿ, ಕ್ರಿಮಿಕೀಟಾದಿಗಳು ಕಚ್ಚಿದಾಗ್ಯೂ ತಡೆಯಲು ಅಶಕ್ತನಾಗಿ ಬಾಲ್ಯವನ್ನು ಹೊಂದಿ, ಮಾತಾಪಿತೃಗಳ ಮತ್ತು ಉಪಾಧ್ಯಾಯರ ಹೊಡೆತ, ಯಾವಾಗಲೂ ತಿರುಗುತ್ತಿರುವುದು, ಧೂಳು ಬೂದಿ ಕೆಸರುಗಳಲ್ಲಿ ಆಟವಾಡುವುದು, ಸದಾ ಜಗಳವಾಡುವುದು, ಕಶ್ಮಲವಾಗಿರುವುದು, ಅನೇಕ ದುಷ್ಕಾರ್ಯಗಳಲ್ಲಿ ತೊಡಗುವುದು, ಅವುಗಳು ಸಿದ್ಧಿಸದಿದ್ದಲ್ಲಿ ದುಃಖವನ್ನು ಹೊಂದುವುದು ಇವೇ ಮುಂತಾದ ಕ್ಲೇಶಗಳನ್ನು ಅನುಭವಿಸುತ್ತಾನೆ.

ತತಸ್ತು ತರುಣಭಾವೇನ ಧನಾರ್ಜನಮಾರ್ಜಿತಸ್ಯ ರಕ್ಷಣಂ ತಸ್ಯ ನಾಶವ್ಯಯಾದಿಷು ಚಾತ್ಯಂತದುಃಖಿತಾ ಮಾಯಯಾ ಮೋಹಿತಾಃ ಕಾಮ-ಕ್ರೋಧಾದಿದುಷ್ಟಮನಸಃ ಸದಾಽಸೂಯಪರಾಯಣಾಃ ಪರಸ್ವಪರಸ್ತ್ರೀಹರ-ಣೋಪಾಯಪರಾಯಣಾಃ ಪುತ್ರಮಿತ್ರಕಲತ್ರಾದಿಭರಣೋಪಾಯಚಿಂತಾ-ಪರಾಯಣಾ ವೃಥಾಽಹಂಕಾರದೂಷಿತಾಃ ಪುತ್ರಾದಿಷು ವ್ಯಾಧ್ಯಾದಿಪೀಡಿ-ತೇಷು ಸತ್ಸು ಸರ್ವವ್ಯಾಪ್ತಿಂ ಪರಿತ್ಯಜ್ಯ ರೋಗಾದಿಭಿಃ ಕ್ಲೇಶಿತಾನಾಂ ಸಮೀಪೇ ಸ್ವಯಮಾಧ್ಯಾತ್ಮಿಕದುಃಖೇನ ಪರಿಪ್ಲುತಾ ವಕ್ಷ್ಯಮಾಣಪ್ರಕಾ-ರೇಣ ಚಿಂತಾಮುಶ್ನುವತೇ ॥ ೨೭ ॥

ಗೃಹಕ್ಷೇತ್ರಾದಿಕಂ ಕರ್ಮ ಕಿಂಚಿನ್ನಾಪಿ ವಿಚಾರಿತಂ ।
ಸಮೃದ್ಧಸ್ಯ ಕುಟುಂಬಸ್ಯ ಕಥಂ ಭವತಿ ವರ್ತನಂ ॥ ೨೮ ॥

---

೨೭. ತರುವಾಯ ಯೌವನಾವಸ್ಥೆಯನ್ನು ಹೊಂದಿ ಹಣ ಸಂಪಾದಿಸುವುದು, ಸಂಪಾದಿಸಿದ ಹಣವನ್ನು ಕಾಪಾಡುವುದು, ಅದು ಹೋದರೆ ಅಥವಾ ಖರ್ಚುಮಾಡಿದರೆ ಅತ್ಯಂತವಾಗಿ ದುಃಖಿಸುತ್ತಾ ಅಜ್ಞಾನದಿಂದ ಮೋಹಿತರಾಗಿ ಕಾಮಕ್ರೋಧಾದಿಗಳಿಂದ ಕಲುಷಿತವಾದ ಮನಸ್ಸುಳ್ಳವರಾಗಿ ಸದಾ ಹೊಟ್ಟೇಕಿಚ್ಚುಪಡುತ್ತಾ ಪರಸ್ವತ್ತು ಮತ್ತು ಪರಸ್ತ್ರೀ ಇವರುಗಳನ್ನಪಹರಿಸುವುದರಲ್ಲಾಸಕ್ತರಾಗಿ, ಮಕ್ಕಳು ಸ್ನೇಹಿತ ಹೆಂಡತಿ ಇವರುಗಳ ಜೀವನೋಪಾಯಚಿಂತೆಯಲ್ಲಿ ಮಗ್ನರಾಗಿ, ವ್ಯರ್ಥವಾಗಿ ಅಹಂಕಾರಪಡುತ್ತಾ, ಮಕ್ಕಳು ಮುಂತಾದವರಿಗೆ ರೋಗಬಂದರೆ ಕರ್ತವ್ಯವನ್ನೆಲ್ಲಾ ಬಿಟ್ಟು ರೋಗಾದಿಗಳಿಂದ ದುಃಖಪಡುತ್ತಿರುವವರ ಸಮೀಪದಲ್ಲಿ ಕುಳಿತು ತಾವೂ ಮಾನಸಿಕದುಃಖದಿಂದ ಒದ್ದಾಡುತ್ತಾ ಮುಂದೆಹೇಳುವ ಪ್ರಕಾರ ಚಿಂತಿಸುತ್ತಾರೆ.

೨೮. ಮನೆ, ಜಮೀನು ಮುಂತಾದುದರ ವಿಷಯವನ್ನು ಸ್ವಲ್ಪವೂ ವಿಚಾರಿಸಲಿಲ್ಲ. ತುಂಬಿದ ಸಂಸಾರ. ಹೇಗೆ ಜೀವನ ನಡೆಯಬೇಕು ?

ಮಮ ಮೂಲಧನಂ ನಾಸ್ತಿ ವೃಷ್ಟಿಶ್ಚಾಪಿ ನ ವರ್ಷತಿ ।
ಅಶ್ವಃ ಪಲಾಯಿತಃ ಕುತ್ರ ಗಾವಃ ಕಿಂ ನಾಗತಾ ಮಮ ॥ ೨೯ ॥

ಬಾಲಾಪತ್ಯಾ ಚ ಮೇ ಭಾರ್ಯಾ ವ್ಯಾಧಿತೋಽಹಂ ಚ ನಿರ್ಧನಃ ।
ಅವಿಚಾರಾತ್ಕೃಷಿರ್ನಷ್ಟಾ ಪುತ್ರಾ ನಿತ್ಯಂ ರುದಂತಿ ಚ ॥ ೩೦ ॥

ಭಗ್ನಂ ಭಿನ್ನಂ ತು ಮೇ ಸದ್ಮ ಬಾಂಧವಾ ಅಪಿ ದೂರಗಾಃ ।
ನ ಲಭ್ಯತೇ ವರ್ತನಂ ಚ ರಾಜಬಾಧಾಽತಿದುಸ್ಸಹಾ ॥ ೩೧ ॥

ರಿಪವೋ ಮಾಂ ಪ್ರಧಾವಂತೇ ಕಥಂ ಜೇಷ್ಯಾಮ್ಯಹಂ ರಿಪೂನ್ ।
ವ್ಯವಸಾಯಾಕ್ಷಮಶ್ಚಾಹಂ ಪ್ರಾಪ್ತಾಃ ಪ್ರಾಘೂರ್ಣಕಾ ಅಮೀ ॥ ೩೨ ॥

ಏವಮತ್ಯಂತಚಿಂತಾಕುಲಃ ಸ್ವದುಃಖಾನಿ ನಿವಾರಯಿತುಮಕ್ಷಮೋ ಧಿಗ್ವಿಧಿಂ ಭಾಗ್ಯಹೀನಂ ಮಾಂ ಕಿಮರ್ಥಂ ವಿದಧೇ ಇತಿ ದೈವಮಾಕ್ಷಿಪಂತಿ ॥

---

೨೯. ನನಗೋ ಆಸ್ತಿಯಿಲ್ಲ (ಹಣವಿಲ್ಲ). ಕಾಲಕಾಲಕ್ಕೆ ಮಳೆ ಬರುವುದಿಲ್ಲ. ಕುದುರೆ ಎಲ್ಲಿಯೋ ಓಡಿಹೋಯಿತು. ನಮ್ಮ ಹಸುಗಳು ಇನ್ನೂ ಬಂದಿಲ್ಲ.

೩೦. ನನ್ನ ಹೆಂಡತಿಗೆ ಚಿಕ್ಕ ಮಗುವಿದೆ. ನಾನೋ ರೋಗಿಯೂ ಹಣವಿಲ್ಲದವನೂ ಆದೆನು. ಅಶಕ್ತನಾಗಿ ವಿಚಾರಮಾಡದೇ ಇರುವುದರಿಂದ ವ್ಯವಸಾಯವು ನಷ್ಟವಾಯಿತು. ಮಕ್ಕಳೋ ಸರ್ವದಾ ಅಳುತ್ತಿರುವರು.

೩೧. ನನ್ನ ಮನೆಯೋ ಛಿನ್ನಭಿನ್ನವಾಗಿದೆ. ನಂಟರೂ ಸಹ ದೂರದಲ್ಲಿ ಇರುವರು. ಜೀವನೋಪಾಯವೋ ದೊರಕುವುದಿಲ್ಲ. ರಾಜಬಾಧೆಯೋ ಸಹಿಸಲಶಕ್ಯವಾಗಿದೆ.

೩೨. ಶತ್ರುಗಳು ಹಿಂಬಾಲಿಸಿ ಓಡಿಬರುತ್ತಿರುವರು. ಅವರನ್ನು ನಾನು ಹೇಗೆ ಜಯಿಸಲಿ? ಕೆಲಸಮಾಡಲಸಮರ್ಥನಾಗಿದ್ದೇನೆ. ಈ ಘಾತುಕರು ಪ್ರಾಪ್ತರಾಗಿದ್ದಾರೆ.

೩೩. ಈ ರೀತಿಯಾಗಿ ಬಹಳ ಚಿಂತಾಕ್ರಾಂತನಾಗಿ ತನಗೆ ಸಂಭವಿಸಿರುವ ದುಃಖಗಳನ್ನು ಪರಿಹರಿಸಿಕೊಳ್ಳಲು ಶಕ್ತಿಸಾಲದೇ ವಿಧಿಯನ್ನು ಧಿಕ್ಕರಿ

ತಥಾ ವೃದ್ಧತ್ವಮಾಪನ್ನೋ ಹೀಯಮಾನೋ ಜರಾಪಲಿತಾದಿವ್ಯಾಪ್ತ-ದೇಹೋ ವ್ಯಾಧ್ಯಧೈರ್ಯಾಂಧ್ಯಾದಿಕಮಾಪನ್ನೋ ಽತಿಕಂಪಮಾನಾವಯವ-ಶ್ವಾಸಕಾಸಾದಿಪೀಡಿತೋ ಲೋಲಾವಿಲಲೋಚನಃ ಶ್ಲೇಷ್ಮವ್ಯಾಪ್ತಕಂಠಃ ಪುತ್ರದಾರಾದಿಭಿಃ ಭರ್ತ್ಸ್ಯಮಾನಃ ಕದಾ ಮರಣಮುಪಯಾಮೀತಿ ಚಿಂತಾ-ಕುಲೋ ಮಯಿ ಮೃತೇ ಸತಿ ಮದರ್ಜಿತಂ ಗೃಹಕ್ಷೇತ್ರಾದಿಕಂ ವಸ್ತು ಪುತ್ರಾದಯಃ ಕಥಂ ರಕ್ಷಂತಿ ಕಸ್ಯ ವಾ ಭವಿಷ್ಯಂತಿ ॥ ೩೪ ॥

ಮದ್ಧನೇ ಪರೈರಪಹೃತೇ ಪುತ್ರಾದೀನಾಂ ಕಥಂ ವರ್ತನಂ ಭವಿಷ್ಯ-ತೀತಿ ಮಮತಾದುಃಖಪರಿಪ್ಲುತೋ ಗಾಢಂ ನಿಶ್ವಸ್ಯ ಸ್ವೇನ ವಯಸಾ ಕೃತಾನಿ ಕರ್ಮಾಣಿ ಪುನಃ ಪುನಃ ಸ್ಮರನ್ ಕ್ಷಣೇ ಕ್ಷಣೇ ವಿಸ್ಮರತಿ ಚ ॥ ೩೫ ॥

---

ಸುತ್ತಾ, ಅದೃಷ್ಟಹೀನನಾದ ನನ್ನನ್ನು ಏಕೆ ಸೃಷ್ಟಿಸಿದೆ? ಎಂಬುದಾಗಿ ದೈವವನ್ನು ಆಕ್ಷೇಪಿಸುತ್ತಾರೆ.

೩೪. ಹಾಗೆಯೇ ಮುದಿತನವನ್ನು ಹೊಂದಿ, ದೇಹವು ಸುಕ್ಕುಸಕ್ಕಾಗಿ, ರೋಗ ಅಧೈರ್ಯ ಕುರುಡುತನ ಮುಂತಾದುವುಗಳಿಂದ ಕಂಗೆಟ್ಟು, ಬಹಳವಾಗಿ ನಡಗುವ ಅವಯವಗಳುಳ್ಳವನಾಗಿ, ಶ್ವಾಸಕಾಸಾದಿರೋಗ ಬಂದು, ಕಣ್ಣುಗಳು ಚಂಚಲವಾಗಿ, ಗಂಟಲಿನಲ್ಲಿ ಶ್ಲೇಷ್ಮಕಟ್ಟಿಕೊಂಡು, ಮಕ್ಕಳು ಹೆಂಡತಿ ಮುಂತಾದವರುಗಳಿಂದ ಗದರಿಸಿಕೊಳ್ಳುವವನಾಗಿ ಯಾವಾಗ ಸತ್ತೇನು ಎಂದು ಆಲೋಚನೆಮಾಡುತ್ತಾ, ನಾನು ಸತ್ತರೆ ನಾನು ಸಂಪಾದಿಸಿದ ಮನೆ, ಜಮೀನು ಮುಂತಾದ ಆಸ್ತಿಯನ್ನು ಮಕ್ಕಳು ಹೇಗೆ ರಕ್ಷಿಸುವರು? ಅದು ಯಾರಿಗೆ ಆಗುತ್ತದೆಯೋ?

೩೫. ನನ್ನ ಆಸ್ತಿಯನ್ನು ಇತರರು ಅಪಹರಿಸಿದರೆ ಮಕ್ಕಳಿಗೆ ಜೀವನವು ನಡೆಯುವ ಬಗೆ ಹೇಗೆ? ಮುಂತಾಗಿ ಮಮತೆಯ ದುಃಖದಿಂದ ಬಳಲಿ ದೊಡ್ಡದಾಗಿ ನಿಟ್ಟುಸಿರು ಬಿಟ್ಟು ತನ್ನ ಆಯುಸ್ಸಿನಲ್ಲಿ ಮಾಡಿದ ಕರ್ಮಗಳನ್ನು ಬಾರಿಬಾರಿಗೂ ಸ್ಮರಿಸುವವನಾಗಿ ಕ್ಷಣಕ್ಷಣಕ್ಕೂ ಮರೆಯುತ್ತಾನೆ.

ತತಸ್ತ್ವಾಸನ್ನಮರಣೋ ವ್ಯಾಧಿಪೀಡಿತೋಽಂತಸ್ತಾಪಾರ್ತಃ ಕ್ಷಣಂ ಶಯ್ಯಾಯಾಂ ಕ್ಷಣಂ ಮಂಚೇ ಚ ತತಸ್ತತಃ ಪರ್ಯಟನ್ ಕ್ಷುತ್ತೃಟ್ಪರಿಪೀಡಿತಃ ಕಿಂಚಿನ್ಮಾತ್ರಮುದಕಂ ದೇಹೀತ್ಯತಿಕಾರ್ಪಣ್ಯತಯಾ ಯಾಚಮಾನಸ್ತತ್ರಾಪಿ ಜ್ವರಾವಿಷ್ಟಾನಾಮುದಕಂ ನ ಶ್ರೇಯಸ್ಕರಮಿತಿ ವಿಬ್ರುವತಾಂ ಮನಸಾ ಅತಿ-ದ್ವೇಷಂ ಕುರ್ವನ್ ಮಂದಚೈತನ್ಯೋ ಭವತಿ ॥ ३६ ॥

ತತಶ್ಚ ಹಸ್ತಪಾದಾಕರ್ಷಣೇ ನ ತು ಕ್ಷಮೋ ರುರದ್ಭಿಃ ಬಂಧುಜನೈ-ರ್ವೇಷ್ಟಿತೋ ವಕ್ತುಮಕ್ಷಮಃ ಸ್ವಾರ್ಜಿತಧನಾದಿಕಂ ಕಸ್ಯ ಭವಿಷ್ಯತೀತಿ ಚಿಂತಾಪರೋ ಬಾಷ್ಪವಿಲೋಚನಃ ಕಂಠೇ ಘುರಘುರಾಯಮಾಣೇ ಸತಿ ಶರೀರಾನ್ನಿಷ್ಕ್ರಾಂತಪ್ರಾಣೋ ಯಮದೂತೈರ್ಭರ್ತ್ಸ್ಯಮಾನಃ ಪಾಶ-ಯಂತ್ರಿತೋ ನರಕಾದೀನ್ ಪೂರ್ವವದಶ್ನುತೇ ॥ ३७ ॥

---

३६. ಅನಂತರ ವ್ಯಾಧಿಗ್ರಸ್ತನಾದವನಿಗೆ ಮರಣವು ಸಮೀಪಿಸಲು ಒಳಗಿನ ತಾಪದಿಂದ ಬಳಲುತ್ತಾ, ಒಂದು ಕ್ಷಣಕಾಲ ಹಾಸಿಗೆಯಲ್ಲಿ ಒಂದು ಕ್ಷಣವಲ್ಲಿ ಮಂಚದಲ್ಲಿ ಹೀಗೆ ಹೊರಳುತ್ತಾ, ಹಸಿವು ಬಾಯಾರಿಕೆಗಳಿಂದ ಕೂಡಿ, ಅತ್ಯಂತ ದೈನ್ಯದಿಂದ ಸ್ವಲ್ಪ ನೀರನ್ನುಕೊಡಿ ಎಂದು ಯಾಚಿಸಿದರೂ ಸಹ ಜ್ವರಬಂದಿರುವವರಿಗೆ ನೀರುಕೊಡುವುದು ಒಳ್ಳೆಯದಲ್ಲವೆಂದು ಹೇಳಿ ನೀರು ಕೊಡದಿರುವವರನ್ನು ಮನಸ್ಸಿನಲ್ಲೇ ದ್ವೇಷಿಸುತ್ತಾ ನಿಶ್ಚೇತನನಾಗುವನು.

३७. ತರುವಾಯ ಕೈಕಾಲಾಡಿಸಲಸಮರ್ಥನಾಗಿ, ಅಳುತ್ತಿರುವ ಬಂಧುಜನಗಳಿಂದ ಸುತ್ತುಗಟ್ಟಲ್ಪಟ್ಟವನಾಗಿ, ಮಾತನಾಡಲೂ ಸಾಮರ್ಥ್ಯವಿಲ್ಲದೇ, ತಾನು ಸಂಪಾದಿಸಿದ ಧನಾದಿಗಳನ್ನು ಯಾರು ಅಪಹರಿಸುತ್ತಾರೆಯೋ ಎಂದು ಚಿಂತಾಪರನಾಗಿ, ಕಣ್ಣುಗಳಲ್ಲಿ ನೀರು ತುಂಬಿಕೊಂಡು ದುಃಖಿಸುವನು. ಬಳಿಕ ಗಂಟಲಿನಲ್ಲಿ ಗೊಡಗೊಡ ಶಬ್ದವಾಗಿ ಪ್ರಾಣವು ಶರೀರವನ್ನು ಬಿಟ್ಟು ಹೊರಹೊರಟಮೇಲೆ ಯಮದೂತರಿಂದ ಗದರಿಸಿಕೊಳ್ಳಲ್ಪಡುತ್ತಾ ಯಮಪಾಶದಿಂದ ಬಂಧಿತನಾಗಿ ಹಿಂದಿನಂತೆ ನರಕಾದಿಗಳನ್ನು ಅನುಭವಿಸುತ್ತಾನೆ.

**ಆಮುಲಪ್ರಕ್ಷಯಾದ್ಯದ್ವದಗ್ನೌ ಧಾಮ್ಯಂತಿ ಧಾತವಃ ।**
**ತಥೈವ ಜೀವಿನಃ ಸರ್ವ ಆಕರ್ಮಪ್ರಕ್ಷಯಾದ್ಭೃಶಂ ॥ ೩೮ ॥**

**ತಸ್ಮಾತ್ಸಂಸಾರದಾವಾಗ್ನಿತಾಪಾರ್ತೋ ದ್ವಿಜಸತ್ತಮ ।**
**ಅಭ್ಯಸೇತ್ಪರಮಂ ಜ್ಞಾನಂ ಜ್ಞಾನಾನ್ಮೋಕ್ಷಮವಾಪ್ನುಯಾತ್ ॥ ೩೯ ॥**

**ಜ್ಞಾನಶೂನ್ಯಾ ನರಾ ಯೇತು ಪಶವಃ ಪರಿಕೀರ್ತಿತಾಃ ।**
**ತಸ್ಮಾತ್ಸಂಸಾರಮೋಕ್ಷಾಯ ಪರಂ ಜ್ಞಾನಂ ಸಮಭ್ಯಸೇತ್ ॥ ೪೦ ॥**

**ಮಾನುಷ್ಯಂ ಚೈವ ಸಂಪ್ರಾಪ್ಯ ಸರ್ವಕರ್ಮಪ್ರಸಾಧಕಂ ।**
**ಹರಿಂ ನ ಸೇವತೇ ಯಸ್ತು ಕೋಽನ್ಯಸ್ತಸ್ಮಾದಚೇತನಃ ॥ ೪೧ ॥**

---

೩೮. ಧಾತುಗಳು ಕಶ್ಮಲಹೋಗುವವರೆಗೂ ಬೆಂಕಿಯಲ್ಲಿ ತಪಿಸುವಂತೆ ಸರ್ವಪ್ರಾಣಿಗಳೂ ತಮ್ಮತಮ್ಮ ಕರ್ಮಗಳು ಸವೆಯುವವರೆಗೂ ದುಃಖಾದಿ ಕರ್ಮಫಲಗಳನ್ನು ಅನುಭವಿಸಬೇಕು.

೩೯. ಆದಕಾರಣ ಸಂಸಾರವೆಂಬ ಕಾಡುಗಿಚ್ಚಿನಿಂದ ನೊಂದು ಬಳಲುತ್ತಿರುವವನು ಅಭ್ಯಾಸದಿಂದ ಉತ್ತಮವಾದ ಜ್ಞಾನವನ್ನು ಸಂಪಾದಿಸಬೇಕು. ಹಾಗೆ ಜ್ಞಾನವನ್ನು ಸಂಪಾದಿಸಿದರೆ ಸುಲಭವಾಗಿ ಮೋಕ್ಷವನ್ನು ಹೊಂದುವನು.

೪೦. ಜ್ಞಾನವಿಲ್ಲದ ಮನುಷ್ಯರು ಪಶುಗಳೆಂದು ಜ್ಞಾನಿಗಳು ಹೇಳಿದ್ದಾರೆ. ಆದುದರಿಂದ ಈ ಸಂಸಾರಬಂಧನಿವೃತ್ತಿಗಾಗಿ ಉತ್ತಮಜ್ಞಾನವನ್ನು ಅಡಿಗಡಿಗೂ ಹೊಂದಬೇಕು.

೪೧. ಸಕಲ ಕರ್ಮಗಳನ್ನಾಚರಿಸಿ ಸಾಧನಮಾಡಿಕೊಳ್ಳಲನುಕೂಲವಾದ ಮನುಷ್ಯಜನ್ಮವನ್ನು ಹೊಂದಿಯೂ ಹರಿಸೇವೆಯನ್ನು ಮಾಡದಿರುವವನು ಕೇವಲ ಪಶುವು; ಅವನಿಗಿಂತ ಬೇರೆ ಜಡವಸ್ತುವಿಲ್ಲ.

ಅಹೋ ಚಿತ್ರಮಹೋ ಚಿತ್ರಮಹೋ ಚಿತ್ರಂ ಮುನೀಶ್ವರ ।
ಅಸ್ಥಿತೇ ಕಾಮದೇ ವಿಷ್ಣೌ ನರಾ ಯಾಂತಿ ಹಿ ಯಾತನಾಂ ॥ ೪೨ ॥

ನಾರಾಯಣೇ ಜಗನ್ನಾಥೇ ಸರ್ವಕಾಮಫಲಪ್ರದೇ ।
ಸ್ಥಿತೇಽಪಿ ಜ್ಞಾನರಹಿತಾಃ ಪಚ್ಯಂತೇ ನರಕೇಷ್ವಹೋ ॥ ೪೩ ॥

ಸ್ರವನ್ಮೂತ್ರಪುರೀಷೇ ತು ಶರೀರೇಸ್ಮಿನ್ನಶಾಶ್ವತೇ ।
ಶಾಶ್ವತಂ ಭಾವಯಂತ್ಯಜ್ಞಾ ಮಹಾಮೋಹಸಮಾವೃತಾಃ ॥ ೪೪ ॥

ಕುತ್ಸಿತಂ ಮಾಂಸರಕ್ತಾದ್ಯೈಃ ದೇಹಂ ಸಂಪ್ರಾಪ್ಯ ಯೋ ನರಃ ।
ಸಂಸಾರಚ್ಛೇದಕಂ ವಿಷ್ಣುಂ ನ ಭಜೇತ್ಸೋಽತಿಪಾತಕೀ ॥ ೪೫ ॥

ಅಹೋ ಕಷ್ಟಮಹೋ ಕಷ್ಟಮಹೋ ಕಷ್ಟಂ ಹಿ ಮೂರ್ಖತಾ ।
ಹರಿಧ್ಯಾನಪರೋ ವಿಪ್ರ ಚಂಡಾಲೋಽಪಿ ಮಹಾಸುಖೀ ॥ ೪೬ ॥

---

೪೨. ಮುನಿವರ್ಯನೇ! ಇಷ್ಟಾರ್ಥಗಳನ್ನು ಕೊಡಲು ವಿಷ್ಣುವು ಸನ್ನಿಹಿತನಾಗಿದ್ದಾಗ್ಯೂ ಮನುಷ್ಯರು ದುಃಖಕ್ಕೆ ಈಡಾಗುವುದು ಅತ್ಯಂತ ಆಶ್ಚರ್ಯ! ಆಶ್ಚರ್ಯ! ಅತ್ಯಾಶ್ಚರ್ಯ!

೪೩. ಜಗದೊಡೆಯನಾದ ನಾರಾಯಣನು ಸಕಲ ಕಾಮಿತಫಲಗಳನ್ನು ಕೊಡಲು ಸಿದ್ಧನಿದ್ದಾಗ್ಯೂ ಅವನನ್ನು ಆರಾಧಿಸದೆ ಜ್ಞಾನಶೂನ್ಯರಾಗಿ ನರಕಗಳಲ್ಲಿ ಬಿದ್ದು ನರಳುತ್ತಿರುವುದು ಆಶ್ಚರ್ಯವು!

೪೪. ಮಲಮೂತ್ರಗಳು ಸ್ರವಿಸುತ್ತಿರುವ ಅಶಾಶ್ವತವಾದ ಈ ಶರೀರವನ್ನು ಶಾಶ್ವತವೆಂದು ಮಹಾಮೋಹದಿಂದ ಅಜ್ಞಾನಿಗಳು ಭಾವಿಸುವರು.

೪೫. ಮಾಂಸ, ರಕ್ತ ಮುಂತಾದುವುಗಳಿಂದ ಕಲುಷಿತವಾದ ದೇಹವನ್ನು ಹೊಂದಿದಾಗ ಸಂಸಾರಬಂಧನಾಶಕನಾದ ವಿಷ್ಣುವನ್ನು ಭಜಿಸದಿರುವ ಮನುಷ್ಯನು ಅತ್ಯಂತ ಪಾತಕಿಯು.

೪೬. ಮೂರ್ಖತ್ವವು ಕಷ್ಟ! ಅಯ್ಯೋ! ಕಷ್ಟ! ಕಷ್ಟ! ಬ್ರಾಹ್ಮಣನಾದ ನಾರದನೇ! ಚಂಡಾಲನಾದಾಗ್ಯೂ ಹರಿಧ್ಯಾನಪರನಾದವನು ಮಹಾಸುಖಭಾಗಿಯಾಗುವನು.

**ಸ್ವದೇಹಾನ್ನಿಃಸೃತಂ ದೃಷ್ಟ್ವಾ ಮಲಮೂತ್ರಾದಿಕಿಲ್ಬಿಷಂ ।**
**ಉದ್ವೇಗಂ ಮಾನವಾ ಮೂರ್ಖಾಃ ಕಿಂ ನ ಯಾಂತಿ ಹಿ ಪಾಪಿನಃ ॥ ೪೭ ॥**

**ದುರ್ಲಭಂ ಮಾನುಷಂ ಜನ್ಮ ಪ್ರಾರ್ಥ್ಯತೇ ತ್ರಿದಶೈರಪಿ ।**
**ತಲ್ಲಬ್ಧ್ವಾ ಪರಲೋಕಾರ್ಥಂ ಯತ್ನಂ ಕುರ್ಯಾದ್ವಿಚಕ್ಷಣಃ ॥ ೪೮ ॥**

**ಅಧ್ಯಾತ್ಮಜ್ಞಾನಸಂಪನ್ನಾ ಹರಿಪೂಜಾಪರಾಯಣಾಃ ।**
**ಲಭಂತೇ ಪರಮಂ ಸ್ಥಾನಂ ಪುನರಾವೃತ್ತಿದುರ್ಲಭಂ ॥ ೪೯ ॥**

**ಯತೋ ಜಾತಮಿದಂ ವಿಶ್ವಂ ಯತಶ್ಚೈತನ್ಯಮಶ್ನುತೇ ।**
**ಯಸ್ಮಿಂಶ್ಚ ವಿಲಯಂ ಯಾತಿ ಸ ಸಂಸಾರಸ್ಯ ಮೋಚಕಃ ॥ ೫೦ ॥**

---

೪೭. ಮಹಾಪಾಪಿಗಳಾದ ಮೂರ್ಖಜನರು ತಮ್ಮ ದೇಹದಿಂದ ಮಲ ಮೂತ್ರಾದಿ ಕಶ್ಮಲಗಳು ಹೊರ ಹೊರಟುದನ್ನು ನೋಡಿ ಉದ್ವೇಗಹೊಂದುವುದಿಲ್ಲವೇ ಏನು ?

೪೮. ಮನುಷ್ಯಜನ್ಮವು ಬರುವುದು ಬಹಳ ಕಷ್ಟ. ದೇವತೆಗಳೂ ಸಹ ಅದನ್ನು ಪ್ರಾರ್ಥಿಸುವರು. ವಿವೇಕಿಯು ಅಂತಹ ಮನುಷ್ಯಜನ್ಮವು ಬಂದಾಗ ಪರಲೋಕದ ಶ್ರೇಯಸ್ಸಿಗಾಗಿ ಪ್ರಯತ್ನ ಮಾಡಬೇಕು.

೪೯. ಆಧ್ಯಾತ್ಮಿಕ ಜ್ಞಾನವನ್ನು ಸಂಪಾದಿಸಿದ ಹರಿಪೂಜಾನಿರತರು ಪುನಃ ಹಿಂತಿರುಗದಂತಹ ಉತ್ತಮಸ್ಥಾನ ಎಂದರೆ ಮೋಕ್ಷವನ್ನು ಹೊಂದುತ್ತಾರೆ.

೫೦. ಈ ಪ್ರಪಂಚವು ಯಾರಿಂದ ಸೃಷ್ಟವಾಯಿತೋ, ಯಾರಿಂದ ಚೈತನ್ಯಪಡೆಯಿತೋ, ಕೊನೆಗೆ ಯಾರಲ್ಲಿ ಲಯವನ್ನು ಹೊಂದುತ್ತದೆಯೋ ಅವನೇ ಸಂಸಾರಬಂಧವನ್ನು ಬಿಡಿಸಿ ಮುಕ್ತಿಯನ್ನು ಕೊಡುವವನು.

**ನಿರ್ಗುಣೋಽಪಿ ಪರೋಽನಂತೋ ಗುಣವಾನಿವ ಭಾತಿ ಯಃ ।**
**ತಂ ಸಮಭ್ಯರ್ಚ್ಯ ದೇವೇಶಂ ಸಂಸಾರಾತ್ಪರಿಮುಚ್ಯತೇ ॥ ೫೧ ॥**

**ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ ಪ್ರಥಮಪಾದೇ ಭವಾಟವೀನಿರೂಪಣಂ ನಾಮ ದ್ವಾತ್ರಿಂಶೋಽಧ್ಯಾಯಃ**

---

೫೧. ಪ್ರಾಕೃತ ಗುಣರಹಿತನಾದರೂ ಗುಣವುಳ್ಳವನಾಗಿ ತೋರುವ, ಉತ್ಕೃಷ್ಟನು ಮತ್ತು ಅಪರಿಚ್ಛಿನ್ನನೂ ಆಗಿರುವ ದೇವೋತ್ತಮನನ್ನು ಆರಾಧಿಸುವವನು ಸಂಸಾರದಿಂದ ಮುಕ್ತನಾಗುವನು.

ಇಂತು ಶ್ರೀಬೃಹನ್ನಾರದೀಯಪುರಾಣ ಪೂರ್ವಭಾಗ ಪ್ರಥಮಪಾದದೊಳು ಭವಾಟವೀ ನಿರೂಪಣವೆಂಬ ಮುವತ್ತೆರಡನೆಯ ಅಧ್ಯಾಯವು ಮುಗಿದುದು.

## ಕಥಾಸಾರಾಂಶ

ಕರ್ಮಪಾಶಕ್ಕೆ ಸಿಲುಕಿದ ಜಂತುಗಳು ಸ್ವರ್ಗಾದಿಲೋಕಗಳಲ್ಲಿ ಪುಣ್ಯಾದಿ ಫಲಗಳನ್ನನುಭವಿಸಿ ಪುನಃ ಭೂಲೋಕದಲ್ಲಿ ಸ್ಥಾವರ, ಕ್ರಿಮಿ, ಅಂಡಜ ಜನ್ಮಗಳನ್ನು ಅನುಭವಿಸುವ ರೀತಿ ಅನಂತರ ಮನುಷ್ಯ ಜನ್ಮ ಬರುವ ಬಗೆ, ಒಂಭತ್ತು ತಿಂಗಳು ಗರ್ಭದಲ್ಲಿ ಇರುವ ಪ್ರಕಾರ, ನಂತರ ಜನನವಾಗಿ ಬಾಲ್ಯಾದ್ಯವಸ್ಥೆಗಳಲ್ಲಿ ಅನುಭವಿಸುವ ವಿಧಾನ, ಕೊನೆಗೆ ಮರಣಕಾಲದಲ್ಲಿನ ಅನುಭವ ಮುಂತಾದ ಸಂಸಾರವನ್ನು ಅನುಭವಾನುಸಾರ ಸ್ವಾರಸ್ಯವಾಗಿ ಚಿತ್ರಿಸಿದೆ. ತರುವಾಯ ಈ ಸಂಸಾರನಿವೃತ್ತ್ಯುಪಾಯವನ್ನುಪದೇಶಿಸಿ ಈ ಅಧ್ಯಾಯವು ಕೊನೆಗೊಂಡಿದೆ. ಸಂಸಾರದ ಸ್ವರೂಪವನ್ನು ಈ ಅಧ್ಯಾಯದಿಂದ ಬಹಳ ಚೆನ್ನಾಗಿ ತಿಳಿಯಬಹುದಾಗಿದೆ.

# ತ್ರಯಸ್ತ್ರಿಂಶೋಽಧ್ಯಾಯಃ

ನಾರದ ಉವಾಚ

ಭಗವನ್ಸರ್ವಮಾಖ್ಯಾತಂ ಯತ್ಪೃಷ್ಟಂ ವಿದುಷಾ ತ್ವಯಾ ।
ಸಂಸಾರಪಾಶಬದ್ಧಾನಾಂ ದುಃಖಾನಿ ಸುಬಹೂನಿ ಚ ॥ ೧ ॥

ಅಸ್ಯ ಸಂಸಾರಪಾಶಸ್ಯ ಛೇದಕಃ ಕತಮಃ ಸ್ಮೃತಃ ।
ಯೇನೋಪಾಯೇನ ಮೋಕ್ಷಃ ಸ್ಯಾತ್ತನ್ಮೇ ಬ್ರೂಹಿ ತಪೋಧನ ॥ ೨ ॥

ಪ್ರಾಣಿಭಿಃ ಕರ್ಮಜಾಲಾನಿ ಕ್ರಿಯಂತೇ ಪ್ರತ್ಯಹಂ ಭೃಶಂ ।
ಭುಜ್ಯಂತೇ ಚ ಮುನಿಶ್ರೇಷ್ಠ ತೇಷಾಂ ನಾಶಃ ಕಥಂ ಭವೇತ್ ॥ ೩ ॥

ಕರ್ಮಣಾ ದೇಹಮಾಪ್ನೋತಿ ದೇಹೀ ಕಾಮೇನ ಬಧ್ಯತೇ ।
ಕಾಮಾಲ್ಲೋಭಾಭಿಭೂತಃ ಸ್ಯಾಲ್ಲೋಭಾತ್ಕ್ರೋಧಪರಾಯಣಃ ॥ ೪ ॥

---

## ಮೂವತ್ತಮೂರನೆಯ ಅಧ್ಯಾಯವು

೧. ನಾರದನು ಹೇಳಿದನು—ಪೂಜ್ಯನಾದ ಸನಕನೇ! ಜ್ಞಾನಿಯಾದ ನಿನ್ನಿಂದ ನಾನು ಕೇಳಿದುದೆಲ್ಲಾ ಹೇಳಲ್ಪಟ್ಟಿತು. ಸಂಸಾರವೆಂಬ ಹಗ್ಗದಿಂದ ಕಟ್ಟಲ್ಪಟ್ಟಿರುವವರಿಗೆ ಬಹು ಹೆಚ್ಚಾಗಿ ದುಃಖಗಳು ಸಂಭವಿಸುತ್ತವೆ.

೨. ಇಂತಹ ದುಃಖಹೇತುವಾದ ಸಂಸಾರಪಾಶವನ್ನು ಛೇದಿಸುವವನು ಯಾರು? ತಪೋಧನನೇ! ಮೋಕ್ಷಕ್ಕೆ ಉಪಾಯವಾವುದು? ಅವನ್ನು ನನಗೆ ಹೇಳು.

೩. ಮುನಿಶ್ರೇಷ್ಠನೇ! ಪ್ರತಿದಿನವೂ ಹೆಚ್ಚು ಹೆಚ್ಚಾಗಿ ಕರ್ಮಸಮೂಹಗಳನ್ನು ಪ್ರಾಣಿಗಳು ಮಾಡುತ್ತಿರುವರು ಮತ್ತು ಪೂರ್ವಕರ್ಮಫಲವನ್ನನುಭವಿಸುತ್ತಿರುವರು. ಹೀಗಿರುವಾಗ ಅವುಗಳಿಗೆ ನಾಶವಾಗುವ ಬಗೆ ಹೇಗೆ?

೪-೫. ಜೀವನು ಕರ್ಮದಿಂದ ದೇಹವನ್ನು ಪಡೆಯುವನು. ದೇಹಪ್ರಾಪ್ತಿಯಾದ ಮೇಲೆ ಆ ದೇಹಿಯು ಬಹುಕಾಮುಗಳಿಂದ ಬಂಧಿತನಾಗುವನು. ಕಾಮದಿಂದ

ಕ್ರೋಧಾಚ್ಚ ಧರ್ಮನಾಶಃ ಸ್ಯಾದ್ಧರ್ಮನಾಶಾನ್ಮತಿಭ್ರಮಃ ।
ಪ್ರನಷ್ಟಬುದ್ಧಿರ್ಮನುಜಃ ಪುನಃ ಪಾಪಂ ಕರೋತಿ ಚ ॥ ೫ ॥

ತಸ್ಮಾದ್ದೇಹಃ ಪಾಪಮೂಲಃ ಪಾಪಕರ್ಮರತಸ್ತಥಾ ।
ದೇಹಜನ್ಮವತಾಂ ಸಿದ್ಧಿರ್ಮೋಕ್ಷೋಪಾಯಂ ವದಸ್ವ ತತ್ ॥ ೬ ॥

ಸನಕ ಉವಾಚ

ಸಾಧು ಸಾಧು ಮಹಾಪ್ರಾಜ್ಞ ಮತಿಸ್ತೇ ವಿಮಲೋರ್ಜಿತಾ ।
ಯಸ್ಮಾತ್ಸಂಸಾರದುಃಖಾನ್ನೋ ಮೋಕ್ಷೋಪಾಯಮಭೀಪ್ಸ್ಯಸಿ ॥ ೭ ॥

ಯಸ್ಯಾಜ್ಞಯಾ ಜಗತ್ಸರ್ವಂ ಬ್ರಹ್ಮಾ ಸೃಜತಿ ಸುವ್ರತ ।
ಹರಿಶ್ಚ ಪಾಲಕೋ ರುದ್ರೋ ನಾಶಕಃ ಸ ಹಿ ಮೋಕ್ಷದಃ ॥ ೮ ॥

---

ಲೋಭವು, ಲೋಭದಿಂದ ಕ್ರೋಧವು, ಕ್ರೋಧದಿಂದ ಧರ್ಮನಾಶವೂ, ಅದರಿಂದ ಬುದ್ಧಿಭ್ರಮಣೆಯೂ ಉಂಟಾಗಿ ಬುದ್ಧಿಯನ್ನು ಕಳೆದುಕೊಂಡು ಮನುಜನು ಪುನಃ ಪಾಪವನ್ನು ಮಾಡುತ್ತಾನೆ.

೬. ಆದುದರಿಂದ ದೇಹವು ಪಾಪಮೂಲಕವು ಮತ್ತು ಪಾಪಕರ್ಮದಲ್ಲಿ ಆಸಕ್ತವು. ಇಂತಹ ದೇಹವನ್ನು ಹೊಂದುವವರಿಗೆ ಮೋಕ್ಷಸಿದ್ಧ್ಯುಪಾಯವನ್ನು ಹೇಳು.

೭. ಸನಕನು ಹೇಳಿದನು—ಮಹಾಜ್ಞಾನಿಯಾದ ನಾರದನೇ! ಒಳ್ಳೆಯದು, ಒಳ್ಳೆಯದು. ನಿನ್ನ ಬುದ್ಧಿಯು ನಿರ್ಮಲವು ಮತ್ತು ಊರ್ಜಿತವೂ ಆಗಿರುವುದರಿಂದಲೇ ನೀನು ನಮ್ಮಗಳಿಗೆ ಸಂಸಾರದುಃಖದಿಂದ ಬಿಡುಗಡೆಯಾಗಿ ಮುಕ್ತಿಯಾಗುವ ಉಪಾಯವನ್ನು ತಿಳಿಯಲಿಚ್ಛಿಸುವಿ.

೮. ಸಮೀಚೀನವ್ರತವನ್ನು ಮಾಡಿರುವವನೇ! ಚತುರ್ಮುಖನು ಯಾವ ಪರಬ್ರಹ್ಮನ ಆಜ್ಞೆಯಿಂದ ಸಕಲ ಜಗತ್ತನ್ನೂ ಸೃಷ್ಟಿಸುವನೋ, ಈ ಜಗತ್ತನ್ನು ಯಾವ ಹರಿಯು ಪಾಲಿಸುವನೋ, ರುದ್ರನೂ ಸಹ ಯಾರ ಆಜ್ಞೆಯಮೇರೆಗೆ ಜಗತ್ತನ್ನು ಸಂಹರಿಸುವನೋ ಅಂತಹ ಪರಬ್ರಹ್ಮನೇ ಮೋಕ್ಷದಾತನು.

**ಮಹದಾದಿ ವಿಶೇಷಾಂತಾ ಜಾತಾ ಯಸ್ಯ ಪ್ರಭಾವತಃ ।**
**ತಂ ವಿದ್ಯಾನ್ಮೋಕ್ಷದಂ ವಿಷ್ಣುಂ ನಾರಾಯಣಮನಾಮಯಂ ॥ ೯ ॥**

**ಯಸ್ಯಾಭಿನ್ನಮಿದಂ ಸರ್ವಂ ಯಚ್ಚೇಂಗ್ಯಂ ಯಚ್ಚ ನೇಂಗತಿ ।**
**ತಮೀಡ್ಯಮಜರಂ ದೇವಂ ಧ್ಯಾತ್ವಾ ದುಃಖಾತ್ಪ್ರಮುಚ್ಯತೇ ॥ ೧೦ ॥**

**ಅವಿಕಾರಮಜಂ ಶುದ್ಧಂ ಸ್ವಪ್ರಕಾಶಂ ನಿರಂಜನಂ ।**
**ಜ್ಞಾನರೂಪಂ ಸದಾನಂದಂ ಪ್ರಾಹುರ್ಮೋಕ್ಷಸಾಧನಂ ॥ ೧೧ ॥**

**ಯಸ್ಯಾವತಾರರೂಪಾಣಿ ಬ್ರಹ್ಮಾದ್ಯಾ ದೇವತಾ ಗಣಾಃ ।**
**ಸಮರ್ಚಯಂತಿ ತಂ ವಿದ್ಯಾಚ್ಛಾಶ್ವತಸ್ಥಾನದಂ ಹರಿಂ ॥ ೧೨ ॥**

---

೯. ಮಹತ್ತತ್ವ ಮೊದಲಾಗಿ ಭೂತವಿಶೇಷಗಳವರೆಗೂ ಸಕಲವೂ ಯಾರ ಪ್ರಭಾವದಿಂದ ಹುಟ್ಟಿದವೋ ಅಂತಹ ಮುಕ್ತಿಪ್ರದನಾದ ವಿಷ್ಣುವನ್ನೇ ನಿರ್ದೋಷನಾದ ನಾರಾಯಣನೆಂದು ತಿಳಿಯಬೇಕು.

೧೦. ಚರಾಚರಾತ್ಮಕವಾದ ಸಕಲ ಪ್ರಪಂಚವೂ ಯಾರ ಅಧೀನವಾಗಿರುವುದರಿಂದ ಅಭಿನ್ನವೆಂದು ವ್ಯವಹೃತವಾಗಿದೆಯೋ ಅಂತಹ ಸ್ತುತ್ಯನು, ವಾರ್ಧಿಕ್ಯರಹಿತನೂ ಆಗಿರುವ ದೇವತೆಯನ್ನು ಧ್ಯಾನಿಸಿದರೆ ಮನುಷ್ಯನು ಈ ದುಃಖಬಂಧದಿಂದ ಮುಕ್ತನಾಗುವನು.

೧೧. ವಿಕಾರರಹಿತನು, ಉತ್ಪತ್ತಿಶೂನ್ಯನು, ಜಡಸಂಬಂಧವಿಲ್ಲದವನು, ಸ್ವಪ್ರಕಾಶನು, ನಿರ್ದೋಷನು, ಜ್ಞಾನರೂಪಿಯು ಮತ್ತು ದುಃಖಾಮಿಶ್ರಿತವಾದ ಆನಂದಸ್ವರೂಪನೂ ಆಗಿರುವ ಭಗವಂತನನ್ನು ಮೋಕ್ಷಸಾಧನನೆಂದು ಹೇಳುತ್ತಾರೆ.

೧೨. ಬ್ರಹ್ಮಾದಿ ದೇವಗಣಗಳು ಪೂಜಿಸುವಂತಹ ಅವತಾರರೂಪಗಳನ್ನು ತಾಳಿರುವ ಹರಿಯನ್ನು ಶಾಶ್ವತಸ್ಥಾನ ಎಂದರೆ ಮೋಕ್ಷಪ್ರದನೆಂದು ತಿಳಿಯಬೇಕು.

ಜಿತಪ್ರಾಣಾ ಜಿತಾಹಾರಾಃ ಸದಾಧ್ಯಾನಪರಾಯಣಾಃ ।
ಹೃದಿ ಪಶ್ಯಂತಿ ಯಂ ಸತ್ಯಂ ತಂ ಜಾನೀಹಿ ಸುಖಾವಹಂ ॥ ೧೩ ॥

ನಿರ್ಗುಣೋಽಪಿ ಗುಣಾಧಾರೋ ಲೋಕಾನುಗ್ರಹರೂಪಧೃಕ್ ।
ಆಕಾಶಮಧ್ಯಗಃ ಪೂರ್ಣಸ್ತಂ ಪ್ರಾಹುರ್ಮೋಕ್ಷದಂ ನೃಣಾಂ ॥ ೧೪ ॥

ಅಧ್ಯಕ್ಷಃ ಸರ್ವಕಾರ್ಯಾಣಾಂ ದೇಹಿನೋ ಹೃದಯೇ ಸ್ಥಿತಃ ।
ಅನೂಪಮೋಽಖಿಲಾಧಾರಸ್ತಂ ದೇವಂ ಶರಣಂ ವ್ರಜೇತ್ ॥ ೧೫ ॥

ಸರ್ವಂ ಸಂಗೃಹ್ಯ ಕಲ್ಪಾಂತೇ ಶೇತೇ ಯಸ್ತು ಜಲೇ ಸ್ವಯಂ ।
ತಂ ಪ್ರಾಹುರ್ಮೋಕ್ಷದಂ ವಿಷ್ಣುಂ ಮುನಯಸ್ತತ್ವದರ್ಶಿನಃ ॥ ೧೬ ॥

---

೧೩. ಜಿತೇಂದ್ರಿಯರು ಮತ್ತು ನಿಯತಾಹಾರವುಳ್ಳವರೂ ಆಗಿ ಯಾವಾಗಲೂ ಧ್ಯಾನನಿರತರಾದವರು ಹೃದಯದಲ್ಲಿ ಯಾವ ಸತ್ಯನಾಮಕನಾದ ಪರಮಾತ್ಮನನ್ನು ನೋಡುವರೋ ಅವನನ್ನೇ ಸುಖಪ್ರದನೆಂದು ತಿಳಿ.

೧೪. ಗುಣಶೂನ್ಯನಾಗಿದ್ದರೂ ಗುಣಗಳಿಗಾಶ್ರಯನು ಎಂದರೆ ಪ್ರಾಕೃತ ಗುಣಸಂಬಂಧವಿಲ್ಲದವನು, ಅಪ್ರಾಕೃತಾನಂತ ಗುಣಪೂರ್ಣನು ಎಂದರ್ಥ, ಜಗದುದ್ಧಾರಾರ್ಥವಾಗಿ ಸಜ್ಜನರಿಗನುಗ್ರಹಮಾಡಲು ಅನೇಕ ಅವತಾರರೂಪಗಳನ್ನು ಧರಿಸುವವನು, ಹೃದಯಾಕಾಶಮಧ್ಯದಲ್ಲಿ ಅಂತರ್ಯಾಮಿಯಾಗಿರುವವನು, ಪರಿಪೂರ್ಣನೂ ಆಗಿರುವ ಆ ನಾರಾಯಣನನ್ನು ಮನುಷ್ಯರಿಗೆ ಮೋಕ್ಷಪ್ರದನೆಂದು ಹೇಳುತ್ತಾರೆ.

೧೫. ಪ್ರಾಣಿಗಳ ಹೃದಯದಲ್ಲಿದ್ದು ಅವರಿಂದ ಕೃತವಾದ ಸಕಲ ಕಾರ್ಯಗಳನ್ನೂ ಸಾಕ್ಷಾತ್ತಾಗಿ ನೋಡುವವನು, ಅಸದೃಶನು, ಸಕಲ ಪ್ರಪಂಚಕ್ಕೂ ಆಧಾರನೂ ಆಗಿರುವ ಆ ದೇವನನ್ನು ಶರಣುಹೊಂದಬೇಕು.

೧೬. ತತ್ವಜ್ಞಾನಿಗಳಾದ ಮುನಿಗಳು ಕಲ್ಪಾವಸಾನದಲ್ಲಿ ಸಕಲವನ್ನೂ ತನ್ನ ಉದರದಲ್ಲಿ ಸಂಗ್ರಹಿಸಿ ನೀರಿನಲ್ಲಿ ತಾನು ಶಯನಮಾಡುವ ವಿಷ್ಣುದೇವನನ್ನೇ ಮೋಕ್ಷದಾತೃವೆಂದು ಹೇಳುವರು.

ವೇದಾರ್ಥವಿದ್ಭಿಃ ಕರ್ಮಜ್ಞೈರಿಜ್ಯತೇ ವಿವಿಧೈರ್ಮಖೈಃ ।
ಸ ಏವ ಕರ್ಮಫಲದೋ ಮೋಕ್ಷದೋಽಕಾಮಕರ್ಮಣಾಂ ॥ ೧೭ ॥

ಹವ್ಯಕವ್ಯಾದಿದಾನೇಷು ದೇವತಾಪಿತೃರೂಪಧೃಕ್ ।
ಭುಂಕ್ತೇ ಯ ಈಶ್ವರೋಽವ್ಯಕ್ತಸ್ತಂ ಪ್ರಾಹುರ್ಮೋಕ್ಷದಂ ಪ್ರಭುಂ ॥ ೧೮ ॥

ಧ್ಯಾತಃ ಪ್ರಣಮಿತೋ ವಾಽಪಿ ಪೂಜಿತೋ ವಾಽಪಿ ಭಕ್ತಿತಃ ।
ಪದಾತಿ ಶಾಶ್ವತಂ ಸ್ಥಾನಂ ತಂ ದಯಾಲುಂ ಸಮರ್ಚಯೇತ್ ॥ ೧೯ ॥

ಅಧಾರಃ ಸರ್ವಭೂತಾನಾಮೇಕೋ ಯಃ ಪುರುಷಃ ಪರಃ ।
ಜರಾಮರಣನಿರ್ಮುಕ್ತೋ ಮೋಕ್ಷದಃ ಸೋಽವ್ಯಯೋ ಹರಿಃ ॥ ೨೦ ॥

---

೧೭. ವೇದಾರ್ಥವೇತ್ತೃಗಳು ಮತ್ತು ಕರ್ಮತತ್ವಜ್ಞಾನಿಗಳೂ ಆಗಿರುವವರಿಂದ ನಾನಾವಿಧ ಯಜ್ಞಗಳ ಮೂಲಕವಾಗಿ ಪೂಜಿಸಲ್ಪಡುವ ವಿಷ್ಣುವೇ ಆ ಕರ್ಮಗಳಿಗೆ ಫಲವನ್ನು ಮತ್ತು ಅವನೇ ನಿಷ್ಕಾಮಕರ್ಮಿಗಳಿಗೆ ಮೋಕ್ಷವನ್ನೂ ಸಹ ಕೊಡುತ್ತಾನೆ.

೧೮. ಯಾವ ಈಶ್ವರನು ದೇವತೆ ಮತ್ತು ಪಿತೃಗಳಲ್ಲಿ ಅಂತರ್ಯಾಮಿ ರೂಪದಿಂದ ಅವ್ಯಕ್ತನಾಗಿದ್ದು ಹವ್ಯಕವ್ಯ ಮುಂತಾದ ದಾನಗಳನ್ನು ಸ್ವೀಕರಿಸುವನೋ ಅಂತಹ ಪ್ರಭುವಾದ ವಿಷ್ಣುವನ್ನೇ ಮೋಕ್ಷದಾತೃವೆಂದು ಹೇಳುತ್ತಾರೆ.

೧೯. ಧ್ಯಾನ, ಸಾಷ್ಟಾಂಗ ನಮಸ್ಕಾರ, ಪೂಜೆ ಇವುಗಳನ್ನು ಭಕ್ತಿಯಿಂದ ಮಾಡುವವರಿಗೆ ಶಾಶ್ವತಸ್ಥಾನವನ್ನು ಕೊಡುವ ದಯಾಳುವಾದ ಭಗವಂತನನ್ನು ಪೂಜಿಸಬೇಕು.

೨೦. ಯಾವ ಉತ್ತಮಪುರುಷನೊಬ್ಬನು, ಸಕಲ ಪ್ರಾಣಿಗಳಿಗೂ ಆಶ್ರಯನಾಗಿರುವನೋ ಅಂತಹ, ಮುಪ್ಪು ಸಾವುಗಳಿಲ್ಲದ, ಯಾವ ವಿಧವಾದ ನಾಶವೂ ಇಲ್ಲದ ಹರಿಯೇ ಮೋಕ್ಷದಾತೃವು.

**ಸಂಪೂಜ್ಯ ಯಸ್ಯ ಪಾದಾಬ್ಜಂ ದೇಹಿನೋಽಪಿ ಮುನೀಶ್ವರ ।**
**ಅಮೃತತ್ವಂ ಭಜಂತ್ಯಾಶು ತಂ ವಿದುಃ ಪುರುಷೋತ್ತಮಂ ॥ ೨೧ ॥**

**ಆನಂದಮಜರಂ ಬ್ರಹ್ಮ ಪರಂಜ್ಯೋತಿಃ ಸನಾತನಂ ।**
**ಪರಾತ್ಪರತರಂ ಯಚ್ಚ ತದ್ವಿಷ್ಣೋಃ ಪರಮಂ ಪದಂ ॥ ೨೨ ॥**

**ಅದ್ವಯಂ ನಿರ್ಗುಣಂ ನಿತ್ಯಮದ್ವಿತೀಯಮನೌಪಮಂ ।**
**ಪರಿಪೂರ್ಣಂ ಜ್ಞಾನಮಯಂ ವಿದುರ್ಮೋಕ್ಷಪ್ರಸಾಧಕಂ ॥ ೨೩ ॥**

**ಏವಂ ಭೂತಂ ಪರಂ ವಸ್ತು ಯೋಗಮಾರ್ಗವಿಧಾನತಃ ।**
**ಯ ಉಪಾಸ್ತೇ ಸದಾಯೋಗೀ ಸ ಯಾತಿ ಪರಮಂ ಪದಂ ॥ ೨೪ ॥**

---

೨೧. ಮುನಿಶ್ರೇಷ್ಠನೇ! ಮನುಷ್ಯರು ಯಾರ ಪಾದಕಮಲವನ್ನು ಭಕ್ತಿಯಿಂದ ಪೂಜಿಸಿ ಶೀಘ್ರವಾಗಿ ಮುಕ್ತಿಯನ್ನು ಹೊಂದುವರೋ ಅವನನ್ನು ಜ್ಞಾನಿಗಳು ಪುರುಷೋತ್ತಮನೆಂದು ತಿಳಿಯುವರು.

೨೨. ಆನಂದಮಯವು, ವಾರ್ಧಿಕ್ಯರಹಿತವು, ಪರಿಪೂರ್ಣವು, ಪ್ರಕಾಶಸ್ವರೂಪವು, ಅನಾದಿಯು, ಉತ್ತಮೋತ್ತಮವೂ ಆಗಿರುವುದೇ ವಿಷ್ಣುವಿನ ಉತ್ಕೃಷ್ಟಸ್ವರೂಪವು.

೨೩. ಸಮಾನವರ್ಜಿತನು, ಪ್ರಾಕೃತಗುಣರಹಿತನು, ನಾಶರಹಿತನು ಅಧಿಕವರ್ಜಿತನು, ಉಪಮಾನವಿಲ್ಲದವನು, ಪರಿಪೂರ್ಣನು ಮತ್ತು ಜ್ಞಾನಪ್ರಚುರನೂ ಆಗಿರುವ ಹರಿಯನ್ನೇ ಮೋಕ್ಷಸಾಧಕನೆಂದು ಜ್ಞಾನಿಗಳು ತಿಳಿಯುವರು.

೨೪. ಈರೀತಿಯಾದ ಉತ್ತಮವಸ್ತುವನ್ನು ಯೋಗಮಾರ್ಗವಿಧಾನದಿಂದ ಯಾವಾಗಲೂ ಉಪಾಸನೆಮಾಡುವವನು ಯೋಗಿಯೆನಿಸಿ ಉತ್ತಮಸ್ಥಾನ ಎಂದರೆ ವೈಕುಂಠಾದಿ ಲೋಕವನ್ನು ಪಡೆಯುತ್ತಾನೆ.

**ಸರ್ವಸಂಗಪರಿತ್ಯಾಗೀ ಶಮಾದಿಗುಣಸಂಯುತಃ ।**
**ಕಾಮಾದ್ಯೈರ್ವರ್ಜಿತೋ ಯೋಗೀ ಲಭತೇ ಪರಮಂ ಪದಂ ॥ ೨೫ ॥**

**ನಾರದ ಉವಾಚ**

**ಕರ್ಮಣಾ ಕೇನ ಯೋಗಸ್ಯ ಸಿದ್ಧಿರ್ಭವತಿ ಯೋಗಿನಾಂ ।**
**ತದುಪಾಯಂ ಯಥಾ ತತ್ವಂ ಬ್ರೂಹಿ ಮೇ ವದತಾಂ ವರ ॥ ೨೬ ॥**

**ಸನಕ ಉವಾಚ**

**ಜ್ಞಾನಲಭ್ಯಂ ಪರಂ ಮೋಕ್ಷಂ ಪ್ರಾಹುಸ್ತತ್ವಾರ್ಥಚಿಂತಕಾಃ ।**
**ಯಜ್ಞಾನಂ ಭಕ್ತಿಮೂಲಂ ಚ ಭಕ್ತಿಃ ಕರ್ಮವತಾಂ ತಥಾ ॥ ೨೭ ॥**

**ದಾನಾನಿ ಯಜ್ಞಾ ವಿವಿಧಾಸ್ತೀರ್ಥಯಾತ್ರಾದಯಃ ಕೃತಾಃ ।**
**ಯೇನ ಜನ್ಮಸಹಸ್ರೇಷು ತಸ್ಯ ಭಕ್ತಿರ್ಭವೇದ್ಧರೌ ॥ ೨೮ ॥**

---

೨೫. ಸಕಲ ಸಂಗಗಳನ್ನೂ ಬಿಟ್ಟಿರುವ, ಶಮ ದಮ ಮುಂತಾದ ಗುಣಗಳಿಂದ ಕೂಡಿರುವ, ಕಾಮಕ್ರೋಧಾದಿಗಳನ್ನು ತ್ಯಜಿಸಿರುವ ಯೋಗಿಯು ಪರಮಪದವನ್ನು ಹೊಂದುವನು.

೨೬. ನಾರದನು ಹೇಳಿದನು—ವಕ್ತೃಶ್ರೇಷ್ಠನೇ! ಯೋಗಿಗಳಿಗೆ ಯಾವ ಕರ್ಮದಿಂದ ಯೋಗಸಿದ್ಧಿಯುಂಟಾಗುತ್ತದೆ? ಆ ಉಪಾಯವನ್ನು ಯಥಾರ್ಥವಾಗಿ ಹೇಳು.

೨೭. ಸನಕನು ಹೇಳಿದನು—ತತ್ವಾರ್ಥವಿವೇಚನಶೀಲರು ಉತ್ತಮ ಮೋಕ್ಷವು ಭಕ್ತಿಯಿಂದುಂಟಾದ ಜ್ಞಾನದಿಂದ ಲಭಿಸುತ್ತದೆಂದು ಹೇಳುವರು. ಕರ್ಮವನ್ನಾಚರಿಸುವವರಿಗೆ ಭಕ್ತಿಯುಂಟಾಗುತ್ತದೆ.

೨೮. ದಾನಗಳು, ನಾನಾವಿಧ ಯಜ್ಞಗಳು, ತೀರ್ಥಯಾತ್ರೆಗಳು ಇವುಗಳನ್ನು ಸಾವಿರಾರು ಜನ್ಮಗಳಲ್ಲಿ ಮಾಡಿದವನಿಗೆ ಹರಿಯಲ್ಲಿ ಭಕ್ತಿಯುಂಟಾಗುವುದು.

ಅಕ್ಷಯಃ ಪರಮೋ ಧರ್ಮೋ ಭಕ್ತಿಲೇಶೇನ ಜಾಯತೇ ।
ಶ್ರದ್ಧಯಾ ಪರಯಾ ಚೈವ ಸರ್ವಂ ಪಾಪಂ ಪ್ರಣಶ್ಯತಿ ॥ ೨೯ ॥

ಸರ್ವಪಾಪೇಷು ನಷ್ಟೇಷು ಬುದ್ಧಿರ್ಭವತಿ ನಿರ್ಮಲಾ ।
ಸೈವ ಬುದ್ಧಿಃ ಸಮಾಖ್ಯಾತಾ ಜ್ಞಾನಶಬ್ದೇನ ಸೂರಿಭಿಃ ॥ ೩೦ ॥

ಜ್ಞಾನಂ ಚ ಮೋಕ್ಷದಂ ಪ್ರಾಹುಸ್ತಜ್ಜ್ಞಾನಂ ಯೋಗಿನಾಂ ಭವೇತ್ ।
ಯೋಗಸ್ತು ದ್ವಿವಿಧಃ ಪ್ರೋಕ್ತಃ ಕರ್ಮಜ್ಞಾನಪ್ರಭೇದತಃ ॥ ೩೧ ॥

ಕ್ರಿಯಾಯೋಗಂ ವಿನಾ ನೄಣಾಂ ಜ್ಞಾನಯೋಗೋ ನ ಸಿದ್ಧ್ಯತಿ ।
ಕ್ರಿಯಾಯೋಗರತಸ್ತಸ್ಮಾಚ್ಛ್ರದ್ಧಯಾ ಹರಿಮರ್ಚಯೇತ್ ॥ ೩೨ ॥

ದ್ವಿಜಭೂಮ್ಯಗ್ನಿಸೂರ್ಯಾಂಬುಧಾತುಹೃಚ್ಚಿತ್ರಸಂಜ್ಞಿತಾಃ ।
ಪ್ರತಿಮಾಃ ಕೇಶವಸ್ಯೈತಾಃ ಪೂಜ್ಯಾ ಏತಾಸು ಭಕ್ತಿತಃ ॥ ೩೩ ॥

---

೨೯. ಸ್ವಲ್ಪ ಭಕ್ತಿಯಿಂದಲೂ ಸಹ ಹ್ರಾಸವಾಗದಷ್ಟು ಉತ್ಕೃಷ್ಟ ಪುಣ್ಯಬರುತ್ತದೆ. ಪೂರ್ಣಶ್ರದ್ಧೆಯಿಂದ ಸತ್ಕರ್ಮವನ್ನಾಚರಿಸಿದರೆ ಸಕಲ ಪಾಪಗಳೂ ನಾಶವಾಗುತ್ತವೆ.

೩೦. ಸಕಲ ಪಾಪಗಳೂ ನಷ್ಟವಾದರೆ ಶುದ್ಧವಾದ ಬುದ್ಧಿಯುಂಟಾಗುತ್ತದೆ. ಜ್ಞಾನಿಗಳು ಆ ಬುದ್ಧಿಯನ್ನೇ ಜ್ಞಾನಶಬ್ದದಿಂದ ವ್ಯವಹರಿಸಿರುವರು.

೩೧. ಜ್ಞಾನವೇ ಮೋಕ್ಷಪ್ರದವೆಂದು ಹೇಳುತ್ತಾರೆ. ಅಂತಹ ಜ್ಞಾನವು ಯೋಗಿಗಳಿಗೆ ಲಭಿಸುತ್ತದೆ. ಯೋಗವು ಕರ್ಮ, ಜ್ಞಾನ ಎಂಬುದಾಗಿ ಎರಡು ವಿಧವೆಂದು ಉಕ್ತವಾಗಿದೆ.

೩೨. ಮನುಷ್ಯರಿಗೆ ಕರ್ಮಯೋಗ ಹೊರತು ಜ್ಞಾನಯೋಗವು ಸಿದ್ಧಿಸುವುದಿಲ್ಲ. ಆದಕಾರಣ ಕರ್ಮಯೋಗರತನಾದವನು ಶ್ರದ್ಧೆಯಿಂದ ಹರಿಯನ್ನು ಪೂಜಿಸಬೇಕು.

೩೩. ದ್ವಿಜ, ಭೂಮಿ, ಅಗ್ನಿ, ಸೂರ್ಯ, ಜಲ ಧಾತುಗಳು, ಮನಸ್ಸು ಮತ್ತು ಚಿತ್ರಪಠ ಎಂಬುದಾಗಿ ಕೇಶವನ ಪ್ರತಿಮೆಗಳು (ಸನ್ನಿಧಾನವಿರುವ ಸ್ಥಳಗಳು) ಪ್ರಸಿದ್ಧವಾಗಿವೆ. ಭಕ್ತಿಯಿಂದ ಇವುಗಳಲ್ಲಿ ಹರಿಯನ್ನು ಪೂಜಿಸಬೇಕು.

**ಕರ್ಮಣಾ ಮನಸಾ ವಾಚಾ ಪರಪೀಡಾಪರಾಙ್ಮುಖಃ ।**
**ತಸ್ಮಾತ್ಸರ್ವಗತಂ ವಿಷ್ಣುಂ ಪೂಜಯೇದ್ಭಕ್ತಿಸಂಯುತಃ ॥ ೩೪ ॥**

**ಅಹಿಂಸಾ ಸತ್ಯಮಕ್ರೋಧೋ ಬ್ರಹ್ಮಚರ್ಯಾಪರಿಗ್ರಹೌ ।**
**ಅನೀರ್ಷ್ಯಾ ಚ ದಯಾ ಚೈವ ಯೋಗಯೋರುಭಯೋಃ ಸಮಾಃ ॥ ೩೫ ॥**

**ಚರಾಚರಾತ್ಮಕಂ ವಿಶ್ವಂ ವಿಷ್ಣುರೇವ ಸನಾತನಃ ।**
**ಇತಿ ನಿಶ್ಚಿತ್ಯ ಮನಸಾ ಯೋಗದ್ವಿತಯಮಭ್ಯಸೇತ್ ॥ ೩೬ ॥**

**ಆತ್ಮವತ್ಸರ್ವಭೂತಾನಿ ಯೇ ಮನ್ಯಂತೇ ಮನೀಷಿಣಃ ।**
**ತೇ ಜಾನಂತಿ ಪರಂ ಭಾವಂ ದೇವದೇವಸ್ಯ ಚಕ್ರಿಣಃ ॥ ೩೭ ॥**

---

೩೪. ಆದಕಾರಣ ತಾನು ಮಾಡುವ ಕ್ರಿಯೆ, ಮನಸ್ಸು, ವಾಕ್ಕು ಇವುಗಳಿಂದ ಇತರರಿಗೆ ಬಾಧೆಯನ್ನುಂಟುಮಾಡದೆ ವ್ಯಾಪ್ತನಾದ ವಿಷ್ಣುವನ್ನು ಭಕ್ತಿಯಿಂದ ಪೂಜಿಸಬೇಕು.

೩೫. ಅಹಿಂಸೆ, ಸತ್ಯವಚನ, ಕ್ರೋಧವಿಲ್ಲದಿರುವಿಕೆ, ಬ್ರಹ್ಮಚರ್ಯೆ, ದಾನಗಳನ್ನು ಸ್ವೀಕರಿಸದಿರುವುದು, ಅಸೂಯೆಯಿಲ್ಲದಿರುವುದು ಮತ್ತು ದಯೆ ಇವುಗಳು ಜ್ಞಾನಿಯೋಗಿ, ಕರ್ಮಯೋಗಿಗಳಿಬ್ಬರಿಗೂ ಸಮಾನವಾದುವುಗಳು ಎಂದರೆ ಉಭಯರೂ ಇವುಗಳನ್ನು ಅನುಷ್ಠಾನಮಾಡಬೇಕೆಂದು ಭಾವ.

೩೬. ಚರಾಚರಾತ್ಮಕ ಪ್ರಪಂಚವು ಅನಾದಿಯಾದ ವಿಷ್ಣುವೇ ಎಂದರೆ ವಿಷ್ಣ್ವಧೀನವು ಎಂಬುದಾಗಿ ನಿಶ್ಚಯಿಸಿ, ಮನಃಪೂರ್ವಕವಾಗಿ ದ್ವಿವಿಧಯೋಗವನ್ನು (ಕರ್ಮಯೋಗ, ಜ್ಞಾನಯೋಗ) ಅಭ್ಯಾಸಮಾಡಬೇಕು.

೩೭. ಸಕಲ ಪ್ರಾಣಿಗಳೂ ಪರಮಾತ್ಮಸ್ವಾಮಿಕವೆಂದು (ಪರಮಾತ್ಮಾಧೀನ) ತಿಳಿಯುವವರೇ ಜ್ಞಾನಿಗಳು, ಅವರೇ ಚಕ್ರಾಯುಧಧಾರಿಯಾದ ದೇವೋತ್ತಮನ ಉತ್ಕೃಷ್ಟ ಸಾಮರ್ಥ್ಯವನ್ನು ತಿಳಿಯಲರ್ಹರು.

ಯದಿ ಕ್ರೋಧಾದಿದುಷ್ಟಾತ್ಮಾ ಪೂಜಾಧ್ಯಾನಪರೋ ಭವೇತ್ ।
ನ ತಸ್ಯ ತುಷ್ಯತೇ ವಿಷ್ಣುರ್ಯತೋ ಧರ್ಮಪರಃ ಸ್ಮೃತಃ ॥ ೩೮ ॥

ಯದಿ ಕಾಮಾದಿದುಷ್ಟಾತ್ಮಾ ದೇವಪೂಜಾಪರೋ ಭವೇತ್ ।
ದಂಭಾಚಾರಃ ಸ ವಿಜ್ಞೇಯಃ ಸರ್ವಪಾತಕಿಭಿಃ ಸಮಃ ॥ ೩೯ ॥

ತಪಃ ಪೂಜಾಧ್ಯಾನಪರೋ ಯಸ್ತ್ವಸೂಯಾರತೋ ಭವೇತ್ ।
ತತ್ತಪಃ ಸಾ ಚ ಪೂಜಾ ಚ ತದ್ಧ್ಯಾನಂ ಚ ನಿರರ್ಥಕಂ ॥ ೪೦ ॥

ತಸ್ಮಾತ್ಸರ್ವಾತ್ಮಕಂ ವಿಷ್ಣುಂ ಶಮಾದಿಗುಣತತ್ಪರಃ ।
ಮುಕ್ತ್ಯರ್ಥಮರ್ಚಯೇತ್ಸಮ್ಯಕ್ಕ್ರಿಯಾಯೋಗಪರೋ ನರಃ ॥ ೪೧ ॥

ಕರ್ಮಣಾ ಮನಸಾ ವಾಚಾ ಸರ್ವಲೋಕಹಿತೇ ರತಃ ।
ಸಮರ್ಚಯತಿ ದೇವೇಶಂ ಕ್ರಿಯಾಯೋಗೀ ಸ ಉಚ್ಯತೇ ॥ ೪೨ ॥

---

೩೮. ಕ್ರೋಧ, ಲೋಭ, ಮುಂತಾದುವುಗಳಿಂದ ದುಷ್ಟನಾದ ಪುರುಷನು ದೇವರ ಪೂಜೆಯಲ್ಲಿ ನಿರತನಾಗಿದ್ದಾಗ್ಯೂ ಅವನು ಅಧರ್ಮನಿರತನಾದ್ದರಿಂದ ಅಂತಹವನ ವಿಷಯದಲ್ಲಿ ವಿಷ್ಣುವು ಸಂತುಷ್ಟನಾಗುವುದಿಲ್ಲ.

೩೯. ಕಾಮಾದಿದೋಷಗಳುಳ್ಳವನು ದೇವರಪೂಜೆ ಮಾಡುವುದರಲ್ಲಿ ಆಸಕ್ತನಾಗಿದ್ದಾಗ್ಯೂ ಅವನು ಡಂಭಾಚಾರನು ಮತ್ತು ಸಕಲ ಪಾತಕಿಗಳಿಗೂ ಸಮಾನನೆಂದು ತಿಳಿಯಬೇಕು.

೪೦. ತಪಸ್ಸು, ಪೂಜೆ, ಧ್ಯಾನ ಇವುಗಳನ್ನು ಮಾಡುವವನು ಅಸೂಯೆಯಲ್ಲಿ ನಿರತನಾದರೆ (ಹೊಟ್ಟೇಕಿಚ್ಚುಪಟ್ಟರೆ) ಅಂತಹವನ ತಪಸ್ಸು, ಪೂಜೆ, ಧ್ಯಾನ ಇವುಗಳೆಲ್ಲವೂ ನಿಷ್ಫಲವು.

೪೧. ಆದಕಾರಣ ಕರ್ಮಯೋಗನಿಷ್ಠನಾದ ಮನುಜನು ಶಮದಮಾದಿ ಗುಣಸಂಪನ್ನನಾಗಿ ಸರ್ವಾಂತರ್ಯಾಮಿಯಾದ ವಿಷ್ಣುವನ್ನು ಮುಕ್ತಿಗೋಸ್ಕರ ಚೆನ್ನಾಗಿ ಆರಾಧಿಸಬೇಕು.

೪೨. ಸಕಲ ಪ್ರಾಣಿಗಳಿಗೂ ಹಿತವನ್ನು ಬಯಸುತ್ತಾ ಕ್ರಿಯೆ, ಮನಸ್ಸು, ವಾಕ್ಕು ಇವುಗಳಿಂದ ದೇವಸ್ವಾಮಿಯಾದ ನಾರಾಯಣನನ್ನು ಭಕ್ತಿಪೂರ್ವಕವಾಗಿ ಪೂಜಿಸುವವನು ಕರ್ಮಯೋಗಿಯೆನಿಸುವನು.

**ನಾರಾಯಣಂ ಜಗದ್ಯೋನಿಂ ಸರ್ವಾಂತರ್ಯಾಮಿಣಂ ಹರಿಂ ।**
**ಸ್ತೋತ್ರಾದ್ಯೈಃ ಸ್ತೌತಿ ಯೋ ವಿಷ್ಣುಂ ಕರ್ಮಯೋಗೀ ಸ ಉಚ್ಯತೇ ॥೪೩॥**

**ಉಪವಾಸಾದಿಭಿಶ್ಚೈವ ಪುರಾಣಶ್ರವಣಾದಿಭಿಃ ।**
**ಪುಷ್ಪಾದ್ಯೈಶ್ಚಾರ್ಚನಂ ವಿಷ್ಣೋಃ ಕ್ರಿಯಾಯೋಗ ಉದಾಹೃತಃ ॥ ೪೪ ॥**

**ಏವಂ ಭಕ್ತಿಮತಾಂ ವಿಷ್ಣೌ ಕ್ರಿಯಾಯೋಗರತಾತ್ಮನಾಂ ।**
**ಸರ್ವಪಾಪಾನಿ ನಶ್ಯಂತಿ ಪೂರ್ವಜನ್ಮಾರ್ಜಿತಾನಿ ವೈ ॥ ೪೫ ॥**

**ಪಾಪಕ್ಷಯಾಚ್ಛುದ್ಧಮತಿರ್ವಾಂಛತಿ ಜ್ಞಾನಮುತ್ತಮಂ ।**
**ಜ್ಞಾನಂ ಹಿ ಮೋಕ್ಷದಂ ಪ್ರಾಹುಸ್ತದುಪಾಯಂ ವದಾಮಿ ತೇ ॥ ೪೬ ॥**

**ಚರಾಚರಾತ್ಮಕೇ ಲೋಕೇ ನಿತ್ಯಂ ಚಾನಿತ್ಯಮೇವ ಚ ।**
**ಸಮ್ಯಗ್ವಿಚಾರಯೇದ್ಧೀಮಾನ್ ಸದ್ಭಿಃ ಶಾಸ್ತ್ರಾರ್ಥಕೋವಿದೈಃ ॥ ೪೭ ॥**

---

೪೩. ಗುಣಪರಿಪೂರ್ಣನು, ಜಗತ್ಕಾರಣನು, ಸರ್ವಾಂತರ್ಯಾಮಿಯು, ಮೋಚಕನೂ ಆದ ವಿಷ್ಣುವನ್ನು ಸ್ತೋತ್ರಾದಿಗಳಿಂದ ಸ್ತುತಿಸುವವನು ಕರ್ಮಯೋಗಿಯೆನಿಸುವನು.

೪೪. ಉಪವಾಸ ಮುಂತಾದ ವ್ರತಗಳು, ಪುರಾಣಶ್ರವಣಾದಿಗಳು ಮತ್ತು ಹೂವು ಮೊದಲಾದವು ಇವುಗಳಿಂದ ಮಾಡುವ ವಿಷ್ಣುಪೂಜೆಯು ಕ್ರಿಯಾಯೋಗವೆನಿಸುವುದು.

೪೫. ಈರೀತಿ ವಿಷ್ಣುವಿನಲ್ಲಿ ಭಕ್ತಿಯುಳ್ಳ, ಕರ್ಮಯೋಗನಿರತರಾದ ಮನುಷ್ಯರ ಹಿಂದಿನ ಜನ್ಮಗಳಲ್ಲಿ ಸಂಪಾದಿಸಿದ ಸಕಲಪಾಪಗಳೂ ಭಗವಂತನ ಅನುಗ್ರಹದಿಂದ ನಾಶವಾಗುತ್ತವೆ.

೪೬. ಪಾಪನಾಶದಿಂದ ಶುದ್ಧಾಂತಃಕರಣನಾಗಿ ಉತ್ತಮಜ್ಞಾನವನ್ನು ಸಂಪಾದಿಸಬೇಕು. ಜ್ಞಾನವು ಮೋಕ್ಷಪ್ರದವೆಂದು ಹೇಳಿರುವರು. ಅಂತಹ ಜ್ಞಾನಕ್ಕೆ ಸಾಧನವನ್ನು ನಿನಗೆ ಹೇಳುತ್ತೇನೆ ಕೇಳು.

೪೭. ಬುದ್ಧಿವಂತನಾದವನು ಶಾಸ್ತ್ರಾರ್ಥಪಂಡಿತರಾದ ಸಜ್ಜನರಿಂದ ಚರಾಚರಾತ್ಮಕವಾದ ಈ ಪ್ರಪಂಚದಲ್ಲಿ ನಿತ್ಯ ಮತ್ತು ಅನಿತ್ಯ ಪದಾರ್ಥಗಳ ವಿವೇಚನೆಯನ್ನು ಚೆನ್ನಾಗಿ ವಿಚಾರಪೂರ್ವಕವಾಗಿ ತಿಳಿಯಬೇಕು.

ಅನಿತ್ಯಾಸ್ತು ಪದಾರ್ಥಾ ವೈ ನಿತ್ಯಮೇಕೋ ಹರಿಃ ಸ್ಮೃತಃ ।
ಅನಿತ್ಯಾನಿ ಪರಿತ್ಯಜ್ಯ ನಿತ್ಯಮೇವ ಸಮಾಶ್ರಯೇತ್ ॥ ೪೮ ॥

ಇಹಾಮುತ್ರ ಚ ಭೋಗೇಷು ವಿರಕ್ತಶ್ಚ ತಥಾ ಭವೇತ್ ।
ಅವಿರಕ್ತೋ ಭವೇದ್ಯಸ್ತು ಸ ಸಂಸಾರೇ ಪ್ರವರ್ತತೇ ॥ ೪೯ ॥

ಅನಿತ್ಯೇಷು ಪದಾರ್ಥೇಷು ಯಸ್ತು ರಾಗೀ ಭವೇನ್ನರಃ ।
ತಸ್ಯ ಸಂಸಾರವಿಚ್ಛಿತ್ತಿಃ ಕದಾಚಿನ್ನೈವ ಜಾಯತೇ ॥ ೫೦ ॥

ಶಮಾದಿಗುಣಸಂಪನ್ನೋ ಮುಮುಕ್ಷುರ್ಜ್ಞಾನಮಭ್ಯಸೇತ್ ।
ಶಮಾದಿಗುಣಹೀನಸ್ಯ ಜ್ಞಾನಂ ನೈವ ಚ ಸಿದ್ಧ್ಯತಿ ॥ ೫೧ ॥

ರಾಗದ್ವೇಷವಿಹೀನೋ ಯಃ ಶಮಾದಿಗುಣಸಂಯುತಃ ।
ಹರಿಧ್ಯಾನಪರೋ ನಿತ್ಯಂ ಮುಮುಕ್ಷುರಭಿಧೀಯತೇ ॥ ೫೨ ॥

---

೪೮. ಪದಾರ್ಥಗಳು ಅನಿತ್ಯವು. ಸರ್ವವಿಧದಿಂದಲೂ ನಿತ್ಯನಾಗಿರುವವನು ಪರಮಾತ್ಮನೊಬ್ಬನೇ ಸರಿ. ಅನಿತ್ಯಗಳನ್ನು ತ್ಯಜಿಸಿ ನಿತ್ಯವನ್ನೇ ಆಶ್ರಯಿಸಬೇಕು.

೪೯. ಐಹಿಕ ಮತ್ತು ಆಮುಷ್ಮಿಕ ಭೋಗಗಳಲ್ಲಿ ಆಶೆಯನ್ನು ಬಿಡಬೇಕು. ಹಾಗೆ ವಿರಕ್ತನಾಗದೆ ಭೋಗಾಶೆಯನ್ನು ಇಟ್ಟುಕೊಂಡಿರುವವನು ಸಂಸಾರದಲ್ಲಿಯೇ ವರ್ತಿಸುತ್ತಿರುವನು.

೫೦. ನಶ್ವರವಾದ ಈ ಪದಾರ್ಥಭೋಗಗಳಲ್ಲಿ ಆಶೆಯುಳ್ಳ ನರನಿಗೆ ಈ ಸಂಸಾರವಿಚ್ಛೇದವು ಯಾವಾಗಲೂ ಆಗುವುದಿಲ್ಲ.

೫೧. ಮೋಕ್ಷವನ್ನು ಬಯಸುವ ಪುರುಷನು ಶಮ ದಮಾದಿಗುಣಯುಕ್ತನಾಗಿ ಶಾಸ್ತ್ರಾಭ್ಯಾಸಮಾಡಿ ಜ್ಞಾನವನ್ನು ಸಂಪಾದಿಸಬೇಕು. ಶಮಾದಿಗುಣವಿಲ್ಲದವನಿಗೆ ಜ್ಞಾನಸಿದ್ಧಿಯಾಗುವುದೇ ಇಲ್ಲ.

೫೨. ರಾಗದ್ವೇಷರಹಿತನು, ಶಮಾದಿಗುಣಯುಕ್ತನು, ಸರ್ವದಾ ಹರಿಧ್ಯಾನನಿರತನೂ ಆಗಿರುವವನು ಮುಮುಕ್ಷುವೆನಿಸುವನು.

ಚತುರ್ಭಿಃ ಸಾಧನೈರೇಭಿರ್ವಿಶುದ್ಧಮತಿರುಚ್ಯತೇ ।
ಸರ್ವಗಂ ಭಾವಯೇದ್ವಿಷ್ಣುಂ ಸರ್ವಭೂತದಯಾಪರಃ ॥ ೫೩ ॥

ಕ್ಷರಾಕ್ಷರಾತ್ಮಕಂ ವಿಶ್ವಂ ವ್ಯಾಪ್ಯನಾರಾಯಣಃ ಸ್ಥಿತಃ ।
ಇತಿ ಜಾನಾತಿ ಯೋ ವಿಪ್ರ ತದ್ಜ್ಞಾನಂ ಯೋಗಜಂ ವಿದುಃ ॥ ೫೪ ॥

ಯೋಗೋಪಾಯಮತೋ ವಕ್ಷ್ಯೇ ಸಂಸಾರವಿನಿವರ್ತಕಂ ।
ಯೋಗೋ ಜ್ಞಾನಂ ವಿಶುದ್ಧಂ ಸ್ಯಾತ್ತದ್ಜ್ಞಾನಂ ಮೋಕ್ಷದಂ ವಿದುಃ ॥ ೫೫ ॥

ಆತ್ಮಾನಂ ದ್ವಿವಿಧಂ ಪ್ರಾಹುಃ ಪರಾಪರವಿಭೇದತಃ ।
ದ್ವೇ ಬ್ರಹ್ಮಣೀ ವೇದಿತವ್ಯೇ ಇತಿ ಚಾಥರ್ವಣೀ ಶ್ರುತಿಃ ॥ ೫೬ ॥

ಪರಸ್ತು ನಿರ್ಗುಣಃ ಪ್ರೋಕ್ತೋ ಹ್ಯಹಂಕಾರಯುತೋಽಪರಃ ।
ತಯೋರಭೇದವಿಜ್ಞಾನಂ ಯೋಗ ಇತ್ಯಭಿಧೀಯತೇ ॥ ೫೭ ॥

---

೫೩. ಈ ನಾಲ್ಕು ಸಾಧನಗಳಿಂದ ಶುದ್ಧಾಂತಃಕರಣನೂ, ಸರ್ವಪ್ರಾಣಿಗಳಲ್ಲಿಯೂ ದಯೆಯುಳ್ಳವನೂ ಆಗಿ ಸರ್ವಾಂತರ್ಯಾಮಿಯಾದ ವಿಷ್ಣುವನ್ನು ಭಜಿಸಬೇಕು.

೫೪. ಬ್ರಾಹ್ಮಣಶ್ರೇಷ್ಠನೇ! ಕ್ಷರ ಮತ್ತು ಅಕ್ಷರರೂಪವಾದ ಈ ಪ್ರಪಂಚವನ್ನು ಶ್ರೀಮನ್ನಾರಾಯಣನು ವ್ಯಾಪಿಸಿರುವನು ಎಂದು ಯಾರು ತಿಳಿದುಕೊಂಡಿರುವರೋ ಅವರೇ ಯೋಗದಿಂದುಂಟಾದ ಜ್ಞಾನವುಳ್ಳವರೆಂದು ತಿಳಿಯಬೇಕು.

೫೫. ಆದುದರಿಂದ ಸಂಸಾರಬಂಧವನ್ನು ದೂರಮಾಡುವ ಆ ಯೋಗಸಾಧನೆಯ ಮಾರ್ಗವನ್ನು ಹೇಳುವೆನು :— ಯೋಗವು ಶುದ್ಧವಾದ ಜ್ಞಾನಕ್ಕೆ ಕಾರಣವು. ಆ ಯೋಗಜನ್ಯಜ್ಞಾನವೇ ಮೋಕ್ಷವನ್ನೊದಗಿಸಿಕೊಡುವುದು.

೫೬. ಪರ, ಅಪರ ಎಂಬುದಾಗಿ ಆತ್ಮನನ್ನು ಎರಡು ವಿಧವೆಂದು ಹೇಳುತ್ತಾರೆ. ಈ ಅರ್ಥವನ್ನೇ "ದ್ವೇ ಬ್ರಹ್ಮಣೀ ವೇದಿತವ್ಯೇ" ಎಂಬ ಮುಂಡಕೋಪನಿಷತ್ತಿನ ವಾಕ್ಯವೂ ಹೇಳುತ್ತದೆ.

೫೭. ಪರಾತ್ಮನು ನಿರ್ಗುಣನು. ಅಹಂಕಾರಯುಕ್ತನಾದ ಜೀವನು ಅಪರಾತ್ಮನು. ಆದರೂ ಅವರಿಬ್ಬರೂ ಆತ್ಮರೆಂಬ ಜ್ಞಾನವು ಯೋಗವೆಂದು ಉಕ್ತವಾಗಿದೆ.

ಪಂಚಭೌತಾತ್ಮಕೇ ದೇಹೇ ಯಃ ಸಾಕ್ಷೀ ಹೃದಯೇ ಸ್ಥಿತಃ ।
ಅಪರಃ ಪ್ರೋಚ್ಯತೇ ಸದ್ಭಿಃ ಪರಮಾತ್ಮಾ ಪರಃ ಸ್ಮೃತಃ ॥ ೫೮ ॥

ಶರೀರಂ ಕ್ಷೇತ್ರಮಿತ್ಯಾಹುಸ್ತಸ್ಥಃ ಕ್ಷೇತ್ರಜ್ಞ ಉಚ್ಯತೇ ।
ಅವ್ಯಕ್ತಃ ಪರಮಃ ಶುದ್ಧಃ ಪರಿಪೂರ್ಣ ಉದಾಹೃತಃ ॥ ೫೯ ॥

ಯದಾತ್ಮಭೇದವಿಜ್ಞಾನಂ ಜೀವಾತ್ಮಪರಮಾತ್ಮನೋಃ ।
ಭವೇತ್ತದಾ ಮುನಿಶ್ರೇಷ್ಠ ಪಾಶಚ್ಛೇದೋಽಪರಾತ್ಮನಃ ॥ ೬೦ ॥

ಏಕಃ ಶುದ್ಧೋಽಕ್ಷರೋ ನಿತ್ಯಃ ಪರಮಾತ್ಮಾ ಜಗನ್ಮಯಃ ।
ನೃಣಾಂ ವಿಜ್ಞಾನಭೇದೇನ ಭೇದವಾನಿವಲಕ್ಷ್ಯತೇ ॥ ೬೧ ॥

ಏಕಮೇವಾದ್ವಿತೀಯಂ ಯತ್ಪರಂ ಬ್ರಹ್ಮ ಸನಾತನಂ ।
ಗೀಯಮಾನಂ ಚ ವೇದಾಂತೈಸ್ತಸ್ಮಾನ್ನಾಸ್ತಿ ಪರಂ ದ್ವಿಜ ॥ ೬೨ ॥

---

೫೮. ಪಾಂಚಭೌತಿಕವಾದ ಈ ದೇಹದ ಹೃದಯದೇಶದಲ್ಲಿ ಸಾಕ್ಷಿಯಾಗಿರುವ ಆತ್ಮನು ಅಪರನೆಂದೂ, ಅಂತರ್ಗತನಾಗಿರುವ ಪರಮಾತ್ಮನು ಪರನೆಂದೂ ಸ್ಮೃತವಾಗಿದೆ.

೫೯. ಶರೀರವನ್ನು ಕ್ಷೇತ್ರವೆಂದು ಹೇಳುವರು. ಅಲ್ಲಿರುವವನು ಕ್ಷೇತ್ರಜ್ಞನೆಂದೂ ಉಕ್ತವಾಗಿದೆ. ಪರನು ಅವ್ಯಕ್ತ, ಉತ್ತಮ, ವಿಶುದ್ಧ, ಪರಿಪೂರ್ಣ ಎಂದು ಹೇಳಲ್ಪಟ್ಟಿದೆ.

೬೦. ಮುನಿಶ್ರೇಷ್ಠನೇ ! ಜೀವ ಪರರಿಬ್ಬರೂ ಆತ್ಮರಾಗಿದ್ದರೂ ಅವರಿಬ್ಬರ ಈ ವೈಲಕ್ಷಣ್ಯವನ್ನು ತಿಳಿದಾಗ ಅಪರಾತ್ಮನಿಗೆ ಪಾಶನಿವೃತ್ತಿಯಾಗುತ್ತದೆ.

೬೧. ಏಕ, ಶುದ್ಧ, ಅಕ್ಷರ, ನಿತ್ಯ ಮತ್ತು ಜಗದಂತರ್ಗತನೂ ಆದ ಪರಮಾತ್ಮನು ಮನುಷ್ಯರ ವಿಜ್ಞಾನಭೇದದಿಂದ ಭೇದವುಳ್ಳವನಂತೆ ತೋರುವನು.

೬೨. ದ್ವಿಜನೇ ! ಏಕಮೆವಾದ್ವಿತೀಯಂ ಎಂಬ ಉಪನಿಷತ್ತುಗಳಿಂದ ಯಾವ ಅನಾದಿ ಪರಬ್ರಹ್ಮನು ಉಕ್ತನಾಗಿರುವನೋ ಅವನಗಿಂತ ಪರನಿಲ್ಲ.

**ನ ತಸ್ಯ ಕರ್ಮ ಕಾರ್ಯಂ ವಾ ರೂಪಂ ವರ್ಣಮಥಾಪಿ ವಾ ।**
**ಕರ್ತೃತ್ವಂ ವಾಪಿ ಭೋಕ್ತೃತ್ವಂ ನಿರ್ಗುಣಸ್ಯ ಪರಾತ್ಮನಃ ॥ ೬೩ ॥**

**ನಿದಾನಂ ಸರ್ವಹೇತೂನಾಂ ತೇಜೋ ಯತ್ತೇಜಸಾಂ ಪರಂ ।**
**ಕಿಮಪ್ಯನ್ಯದ್ಯತೋ ನಾಸ್ತಿ ತಜ್ಜ್ಞೇಯಂ ಮುಕ್ತಿಹೇತವೇ ॥ ೬೪ ॥**

**ಶಬ್ದಬ್ರಹ್ಮಮಯಂ ಯದ್ಯನ್ಮಹಾವಾಕ್ಯಾದಿಕಂ ದ್ವಿಜ ।**
**ತದ್ವಿಚಾರೋದ್ಭವಂ ಜ್ಞಾನಂ ಪರಂ ಮೋಕ್ಷಸ್ಯ ಸಾಧನಂ ॥ ೬೫ ॥**

**ಸಮ್ಯಗ್ಜ್ಞಾನವಿಹೀನಾನಾಂ ದೃಶ್ಯತೇ ವಿವಿಧಂ ಜಗತ್ ।**
**ಪರಮಜ್ಞಾನಿನಾಮೇತತ್ಪರಬ್ರಹ್ಮಾತ್ಮಕಂ ದ್ವಿಜ ॥ ೬೬ ॥**

**ಏಕ ಏವ ಪರಾನಂದೋ ನಿರ್ಗುಣಃ ಪರತಃ ಪರಃ ।**
**ಭಾತಿ ವಿಜ್ಞಾನಭೇದೇನ ಬಹುರೂಪಧರೋಽವ್ಯಯಃ ॥ ೬೭ ॥**

---

೬೩. ಆ ನಿರ್ಗುಣನಾದ ಪರಾತ್ಮನಿಗೆ ಪ್ರಾಕೃತವಾದ ಕ್ರಿಯೆ, ಕರ್ತವ್ಯ, ಆಕಾರ, ಬಣ್ಣ ಮತ್ತು ಕರ್ತೃತ್ವಭೋಕ್ತೃತ್ವಲೇಪ ಇವುಗಳಿಲ್ಲ.

೬೪. ಸಕಲಕಾರಣಗಳಿಗೂ ಆದಿಕಾರಣ ಎಂದರೆ ಕಾರಣಗಳಿಗೆಲ್ಲಾ ನಿಯಾಮಕ ಮತ್ತು ತೇಜಸ್ಸುಗಳಲ್ಲೆಲ್ಲಾ ಉತ್ಕೃಷ್ಟ ತೇಜಸ್ಸು ಯಾವುದೋ ಯಾವುದಕ್ಕಿಂತ ಉತ್ಕೃಷ್ಟವಾದುದು ಬೇರೆಯಿಲ್ಲವೋ, ಅದನ್ನು ಮುಕ್ತಿಗೋಸ್ಕರ ತಿಳಿಯಬೇಕು.

೬೫. ದ್ವಿಜನೇ ! ಯಾವ ಉಪನಿಷದಾದಿ ಮಹಾವಾಕ್ಯಗಳು ಶಬ್ದಗಮ್ಯನಾದ ಬ್ರಹ್ಮನನ್ನು ಬೋಧಿಸುತ್ತವೆಯೋ ಅವುಗಳ ವಿಚಾರದಿಂದ ಉತ್ಪನ್ನವಾದ ಜ್ಞಾನವು ಮೋಕ್ಷಸಾಧನವಾಗಿದೆ.

೬೬. ಸಮಾಚೀನ ಜ್ಞಾನವಿಲ್ಲದವರಿಗೆ ನಾನಾವಿಧವಾಗಿ ಜಗತ್ತು ಕಾಣುತ್ತದೆ. ಪರಮಜ್ಞಾನಿಗಳಿಗೆ ಅದು ಪರಬ್ರಹ್ಮಸ್ವಾಮಿಕವೆಂದು ತೋರುತ್ತದೆ.

೬೭. ಉತ್ತಮಾನಂದ ಸ್ವರೂಪನು, ನಿರ್ಗುಣನು, ಉತ್ತಮೋತ್ತಮನು ನಾಶರಹಿತನೂ ಆಗಿರುವ ಒಬ್ಬನೇ ವಿಜ್ಞಾನಭೇದದಿಂದ ಬಹುರೂಪಗಳನ್ನು ಧರಿಸಿ ಪ್ರಕಾಶಿಸುವನು.

**ಮಾಯಿನೋ ಮಾಯಯಾ ಭೇದಂ ಪಶ್ಯಂತಿ ಪರಮಾತ್ಮನಿ ।**
**ತಸ್ಮಾನ್ಮಾಯಾಂ ತ್ಯಜೇದ್ಯೋಗಾನ್ಮುಮುಕ್ಷುರ್ದ್ವಿಜಸತ್ತಮ ॥ ೬೮ ॥**

**ನಾsಸದ್ರೂಪಾ ನ ಸದ್ರೂಪಾ ಮಾಯಾ ನೈವೋಭಯಾತ್ಮಿಕಾ ।**
**ಅನಿರ್ವಾಚ್ಯಾ ತತೋ ಜ್ಞೇಯಾ ಭೇದಬುದ್ಧಿಪ್ರದಾಯಿನೀ ॥ ೬೯ ॥**

**ಮಾಯೈವಾsಜ್ಞಾನಶಬ್ದೇನ ಬುಧ್ಯತೇ ಮುನಿಸತ್ತಮ ।**
**ತಸ್ಮಾದಜ್ಞಾನವಿಚ್ಛೇದೋ ಭವೇದ್ವೈ ಜಿತಮಾಯಿನಾಂ ॥ ೭೦ ॥**

**ಸನಾತನಂ ಪರಬ್ರಹ್ಮ ಜ್ಞಾನಶಬ್ದೇನ ಕಥ್ಯತೇ ।**
**ಜ್ಞಾನಿನಾಂ ಪರಮಾತ್ಮಾ ವೈ ಹೃದಿ ಭಾತಿ ನಿರಂತರಂ ॥ ೭೧ ॥**

**ಅಜ್ಞಾನಂ ನಾಶಯೇದ್ಯೋಗೀ ಯೋಗೇನ ಮುನಿಸತ್ತಮ ।**
**ಅಷ್ಟಾಂಗೈಃ ಸಿಧ್ಯತೇ ಯೋಗಸ್ತಾನಿ ವಕ್ಷ್ಯಾಮಿ ತತ್ವತಃ ॥ ೭೨ ॥**

---

೬೮. ಮಾಯಿಗಳು ಮಾಯೆಯಿಂದ ಜಗದಂತರ್ಗತ ಪರಮಾತ್ಮನಲ್ಲಿ ಭೇದವನ್ನು ತಿಳಿಯುತ್ತಾರೆ. ಆದಕಾರಣ ದ್ವಿಜಶ್ರೇಷ್ಠನೇ! ಮುಮುಕ್ಷುವು ದ್ವಿವಿಧಯೋಗಗಳಿಂದ ಮಾಯೆಯನ್ನು ಬಿಡಬೇಕು.

೬೯. ಮಾಯೆಯು ಸತ್ತಲ್ಲ, ಅಸತ್ತಲ್ಲ, ಉಭಯಾತ್ಮಕವಲ್ಲ, ಆದುದರಿಂದ ಅದು ಇಂತಹುದೆಂದು ನಿರೂಪಿಸಲು ಸಾಧ್ಯವಲ್ಲ. ಅದು ಪರಮಾತ್ಮನಲ್ಲಿ ಭೇದಬುದ್ಧಿಪ್ರದವೆಂದೂ ತಿಳಿಯಬೇಕು.

೭೦. ಮುನಿಶ್ರೇಷ್ಠನೇ! ಮಾಯೆಯೇ ಅಜ್ಞಾನದಾಯಕವಾದುದರಿಂದ ಅಜ್ಞಾನಶಬ್ದ ಬೋಧ್ಯವಾಗಿದೆ. ಆದಕಾರಣ ಮಾಯೆಯನ್ನು ಜಯಿಸಿದವರಿಗೆ ಅಜ್ಞಾನಪರಿಹಾರವಾಗುತ್ತದೆ.

೭೧. ಅನಾದಿ ಪರಬ್ರಹ್ಮನು ಜ್ಞಾನಶಬ್ದದಿಂದ ಉಕ್ತನಾಗುವನು. ಪರಮಾತ್ಮನು ಜ್ಞಾನಿಗಳ ಮನಸ್ಸಿನಲ್ಲಿ ಯಾವಾಗಲೂ ಪ್ರಕಾಶಿಸುತ್ತಾನೆ.

೭೨. ಮುನಿಶ್ರೇಷ್ಠನೇ! ಯೋಗಿಯು ತನ್ನ ಯೋಗಾಭ್ಯಾಸದಿಂದ ಅಜ್ಞಾನವನ್ನು ನಾಶಪಡಿಸಿಕೊಳ್ಳುವನು. ಯೋಗವು ಎಂಟು ಅಂಗಗಳಿಂದ ಸಿದ್ಧಿಸುತ್ತದೆ. ಆದುದರಿಂದ ಅವುಗಳನ್ನು ಯಥಾರ್ಥವಾಗಿ ಹೇಳುತ್ತೇನೆ ಕೇಳು.

ಯಮಾಶ್ಚ ನಿಯಮಾಶ್ಚೈವ ಆಸನಾನಿ ಚ ಸತ್ತಮ ।
ಪ್ರಾಣಾಯಾಮಃ ಪ್ರತ್ಯಾಹಾರೋ ಧಾರಣಾ ಧ್ಯಾನಮೇವ ಚ　　॥ ೭೩ ॥

ಸಮಾಧಿಶ್ಚ ಮುನಿಶ್ರೇಷ್ಠ ಯೋಗಾಂಗಾನಿ ಯಥಾಕ್ರಮಂ ।
ಏಷಾಂ ಸಂಕ್ಷೇಪತೋ ವಕ್ಷ್ಯೇ ಲಕ್ಷಣಾನಿ ಮುನೀಶ್ವರ　　॥ ೭೪ ॥

ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಾಪರಿಗ್ರಹೌ ।
ಅಕ್ರೋಧಶ್ಚಾನಸೂಯಾ ಚ ಪ್ರೋಕ್ತಾಃ ಸಂಕ್ಷೇಪತೋ ಯಮಾಃ ॥ ೭೫ ॥

ಸರ್ವೇಷಾಮೇವ ಭೂತಾನಾಮಕ್ಲೇಶಜನನಂ ಹಿ ಯತ್ ।
ಅಹಿಂಸಾ ಕಥಿತಾ ಸದ್ಭಿರ್ಯೋಗಸಿದ್ಧಿಪ್ರದಾಯಿನೀ　　॥ ೭೬ ॥

ಯಥಾರ್ಥಕಥನಂ ಯಚ್ಚ ಧರ್ಮಾಧರ್ಮವಿವೇಕತಃ ।
ಸತ್ಯಂ ಪ್ರಾಹುರ್ಮುನಿಶ್ರೇಷ್ಠ ಅಸ್ತೇಯಂ ಶೃಣು ಸಾಂಪ್ರತಂ　　॥ ೭೭ ॥

---

೭೩-೭೪. ಸಾಧೂತ್ತಮನೇ! ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣೆ, ಧ್ಯಾನ ಮತ್ತು ಸಮಾಧಿ ಇವುಗಳು ಯೋಗಾಂಗಗಳು. ಮುನೀಶ್ವರನೇ! ಕ್ರಮವಾಗಿ ಇವುಗಳಿಗೆ ಲಕ್ಷಣಗಳನ್ನು ಸಂಕ್ಷೇಪವಾಗಿ ಹೇಳುತ್ತೇನೆ.

೭೫. ಅಹಿಂಸೆ, ಸತ್ಯವಚನ, ಅಸ್ತೇಯ (ಕಳ್ಳತನ ಮಾಡದಿರುವಿಕೆ) ಬಹ್ಮಚರ್ಯೆ, ಅಪರಿಗ್ರಹ (ದಾನತೆಗೆದುಕೊಳ್ಳದಿರುವುದು) ಅಕ್ರೋಧ (ಕೋಪ ಮಾಡದಿರುವುದು) ಮತ್ತು ಅನಸೂಯೆ (ಹೊಟ್ಟೇಕಿಚ್ಚುಪಡದಿರುವುದು) ಇವು ಸಂಕ್ಷೇಪವಾಗಿ ಯಮಗಳೆಂದು ಹೇಳಲ್ಪಟ್ಟಿವೆ.

೭೬. ಸಮಸ್ತ ಪ್ರಾಣಿಗಳಿಗೂ ದುಃಖವುಂಟುಮಾಡದಿರುವಿಕೆಯೇ ಯೋಗಸಿದ್ಧಿಪ್ರದವಾದ ಅಹಿಂಸೆಯೆಂದು ಉಕ್ತವಾಗಿದೆ.

೭೭. ಧರ್ಮ, ಅಧರ್ಮ ಇವುಗಳ ವಿವೇಚನ ಪೂರ್ವಕವಾಗಿ ನಿಜವಾದುದನ್ನೇ ಹೇಳುವುದನ್ನು ಸತ್ಯವೆಂದು ಹೇಳುತ್ತಾರೆ. ಮುನಿವರ್ಯನೇ! ಅಸ್ತೇಯವನ್ನು ಈಗ ವಿವರಿಸುತ್ತೇನೆ ಕೇಳು.

ಚೌರ್ಯೇಣ ವಾ ಬಲೇನಾಪಿ ಪರಸ್ವಹರಣಂ ಹಿ ಯತ್ ।
ಸ್ತೇಯಮಿತ್ಯುಚ್ಯತೇ ಸದ್ಭಿರಸ್ತೇಯಂ ತದ್ವಿಪರ್ಯಯಂ ॥ ೭೮ ॥

ಸರ್ವತ್ರ ಮೈಥುನತ್ಯಾಗೋ ಬ್ರಹ್ಮಚರ್ಯಂ ಪ್ರಕೀರ್ತಿತಂ ।
ಬ್ರಹ್ಮಚರ್ಯಪರಿತ್ಯಾಗಾದ್ಜ್ಞಾನವಾನಪಿ ಪಾತಕೀ ॥ ೭೯ ॥

ಸರ್ವಸಂಗಪರಿತ್ಯಾಗೀ ಮೈಥುನೇ ಯಸ್ತು ವರ್ತತೇ ।
ಸ ಚಂಡಾಲಸಮೋ ಜ್ಞೇಯಃ ಸರ್ವವರ್ಣಬಹಿಷ್ಕೃತಃ ॥ ೮೦ ॥

ಯಸ್ತು ಯೋಗರತೋ ವಿಪ್ರ ವಿಷಯೇಷು ಸ್ಪೃಹಾನ್ವಿತಃ ।
ತತ್ಸಂಭಾಷಣಮಾತ್ರೇಣ ಬ್ರಹ್ಮಹತ್ಯಾಭವೇನ್ನೃಣಾಂ ॥ ೮೧ ॥

ಸರ್ವಸಂಗಪರಿತ್ಯಾಗೀ ಪುನಃ ಸಂಗೀ ಭವೇದ್ಯದಿ ।
ತತ್ಸಂಗಸಂಗಿನಾಂ ಸಂಗಾನ್ಮಹಾಪಾತಕದೋಷಭಾಕ್ ॥ ೮೨ ॥

---

೭೮. ಕಳ್ಳತನದಿಂದ ಅಥವಾ ಬಲಾತ್ಕಾರದಿಂದಲಾದರೂ ಪರಸ್ವತ್ತನ್ನ ಪಹರಿಸುವುದೇ ಸಜ್ಜನರಿಂದ ಸ್ತೇಯವೆಂದುಕ್ತವಾಗಿದೆ. ಅದಕ್ಕೆ ವಿಪರೀತವಾದುದನ್ನೇ ಅಸ್ತೇಯವೆನ್ನುವರು.

೭೯. ಸಕಲಕಡೆಗಳಲ್ಲಿಯೂ ಮೈಥುನವನ್ನು ಬಿಡೋಣವೇ ಬ್ರಹ್ಮಚರ್ಯೆಯೆಂದು ಹೇಳಿದೆ. ಅದನ್ನು ಬಿಟ್ಟರೆ ಅವನು ಜ್ಞಾನಿಯಾಗಿದ್ದರೂ ಪಾಪಿಯೇ ಸರಿ.

೮೦. ಸಕಲ ಸಂಗಗಳನ್ನೂ ಪರಿತ್ಯಾಗಮಾಡಿರುವವನು ಮೈಥುನ ಎಂದರೆ ಸ್ತ್ರೀ ಸಂಭೋಗದಲ್ಲಿ ಪ್ರವರ್ತಿಸಿದರೆ ಅವನು ಚಂಡಾಲಸಮಾನನಾಗಿ ಸಕಲ ಜಾತಿಗಳಿಂದಲೂ ಬಹಿಷ್ಕೃತನಾಗುವನು.

೮೧. ಬ್ರಾಹ್ಮಣನಾದ ನಾರದನೇ! ಯೋಗಾಭ್ಯಾಸನಿರತನಾಗಿ ವಿಷಯ ಭೋಗಾಶೆಯಿಂದ ಕೂಡಿರುವವನ ಸಂಗಡ ಮಾತನ್ನೂ ಸಹ ಆಡಬಾರದು. ಅವನೊಡನೆ ಸಂಭಾಷಣೆಮಾಡುವ ಮಾತ್ರದಿಂದ ಮನುಷ್ಯರಿಗೆ ಬ್ರಹ್ಮಹತ್ಯೆಯು ಬರುತ್ತದೆ.

೮೨. ಸರ್ವಸಂಗ ಪರಿತ್ಯಾಗಮಾಡಿ ಸಂನ್ಯಾಸಿಯಾದವನು ತಿರುಗಿ ಸಂಗಮಾಡಿಗರೆ ಅಂತಹವನ ಸಹವಾಸಮಾಡಿದವನ ಜೊತೆಯಲ್ಲಿರುವವನ ಸಂಗಮಾಡಿದರೂ ಸಹ ಮಹಾಪಾತಕದೋಷಕ್ಕೆ ಭಾಗಿಯಾಗುವನು ಎಂದರೆ

**ಅನಾದಾನಂ ಹಿ ದ್ರವ್ಯಾಣಾಮಾಪದ್ಯಪಿ ಮುನೀಶ್ವರ ।**
**ಅಪರಿಗ್ರಹ ಇತ್ಯುಕ್ತೋ ಯೋಗಸಂಸಿದ್ಧಿಕಾರಕಃ　　॥ ೮೩ ॥**

**ಆತ್ಮನಸ್ತು ಸಮುತ್ಕರ್ಷಾದತಿನಿಷ್ಠುರಭಾಷಣಂ ।**
**ಕ್ರೋಧಮಾಹುರ್ಧರ್ಮವಿದೋ ಹ್ಯಕ್ರೋಧಸ್ತದ್ವಿಪರ್ಯಯಃ　　॥ ೮೪ ॥**

**ಧನಾದ್ಯೈರಧಿಕಂ ದೃಷ್ಟ್ವಾ ಭೃಶಂ ಮನಸಿ ತಾಪನಂ ।**
**ಅಸೂಯಾ ಕೀರ್ತಿತಾ ಸದ್ಭಿಸ್ತತ್ತ್ಯಾಗೋ ಹ್ಯನಸೂಯತಾ　　॥ ೮೫ ॥**

**ಏವಂ ಸಂಕ್ಷೇಪತಃ ಪ್ರೋಕ್ತಾ ಯಮಾ ವಿಬುಧಸತ್ತಮ ।**
**ನಿಯಮಾನಪಿ ವಕ್ಷ್ಯಾಮಿ ತುಭ್ಯಂ ತಾನ್ ಶೃಣು ನಾರದ　　॥ ೮೬ ॥**

---

ಸರ್ವಸಂಗಪರಿತ್ಯಾಗಮಾಡಿ ಪುನಃ ವಿಷಯಭೋಗಾದಿಗಳಲ್ಲಿ ಪ್ರಸಕ್ತನಾಗುವವನ ಸಂಬಂಧವನ್ನು ಸಾಕ್ಷಾತ್ತಾಗಿ ಅಥವಾ ಪರಂಪರೆಯಾಗಿಯೂ ಮಾಡಬಾರದು. ಹಾಗೆ ಮಾಡಿದವನು ಮಹಾಪಾಪಿಯಾಗುವನೆಂದು ಭಾವ.

೮೩. ಮುನೀಶ್ವರನೇ! ಆಪತ್ಕಾಲದಲ್ಲಿಯೂ ಸಹ ದ್ರವ್ಯವನ್ನು ಪರರಿಂದ ಸ್ವೀಕರಿಸದಿರುವಿಕೆಯು ಯೋಗಸಂಸಿದ್ಧಿಕಾರಣವಾದ ಅಪರಿಗ್ರಹ ಎಂದು ಹೇಳಲ್ಪಟ್ಟಿದೆ.

೮೪. ತನ್ನ ದೊಡ್ಡಸ್ತಿಕೆಯಿಂದ ಮತ್ತನಾಗಿ ಇತರ ವಿಷಯದಲ್ಲಿ ಅತ್ಯಂತ ನಿಷ್ಠುರವಾಗಿ ಮಾತನಾಡುವುದು ಕ್ರೋಧವೆಂದು ಧರ್ಮಜ್ಞಾನಿಗಳು ಹೇಳುವರು, ಅದಕ್ಕೆ ವಿಪರೀತವಾದುದು ಅಕ್ರೋಧವೆನಿಸುವುದು.

೮೫. ಐಶ್ವರ್ಯ ಮುಂತಾದುವುಗಳಿಂದ ತನಗಿಂತ ಹೆಚ್ಚಾದವನನ್ನು ನೋಡಿ ಮನಸ್ಸಿನಲ್ಲಿ ಬಹಳವಾಗಿ ಕುದಿಯುವುದು ಅಸೂಯೆಯೆಂದು ಸಜ್ಜನರಿಂದ ಉಕ್ತವಾಗಿದೆ. ಅಂತಹ ಅಸೂಯೆಯನ್ನು ಬಿಡುವುದು ಅನಸೂಯೆಯು.

೮೬. ಜ್ಞಾನ್ಯುತ್ತಮನೇ! ಈ ರೀತಿ ಸಂಗ್ರಹವಾಗಿ ಯಮಗಳು ಉಕ್ತವಾಗಿವೆ. ನಿಯಮಗಳನ್ನೂ ಸಹ ನಿನಗೆ ಹೇಳುತ್ತೇನೆ; ನಾರದನೇ ! ಅದನ್ನು ಕೇಳು.

**ತಪಃಸ್ವಾಧ್ಯಾಯಸಂತೋಷಾಃ ಶೌಚಂ ಚ ಹರಿಪೂಜನಂ ।**
**ಸಂಧ್ಯೋಪಾಸನಮುಖ್ಯಾಶ್ಚ ನಿಯಮಾಃ ಪರಿಕೀರ್ತಿತಾಃ ॥ ೮೭ ॥**

**ಚಾಂದ್ರಾಯಣಾದಿಭಿರ್ಯತ್ರ ಶರೀರಸ್ಯ ವಿಶೋಷಣಂ ।**
**ತಪೋ ನಿಗದಿತಂ ಸದ್ಭಿರ್ಯೋಗಸಾಧನಮುತ್ತಮಂ ॥ ೮೮ ॥**

**ಪ್ರಣವಸ್ಯೋಪನಿಷದಾಂ ದ್ವಾದಶಾರ್ಣಸ್ಯ ಚ ದ್ವಿಜ ।**
**ಅಷ್ಟಾಕ್ಷರಸ್ಯ ಮಂತ್ರಸ್ಯ ಮಹಾವಾಕ್ಯಸ್ಯ ಯಸ್ಯ ಚ ॥ ೮೯ ॥**

**ಜಪಃ ಸ್ವಾಧ್ಯಾಯ ಉದಿತೋ ಯೋಗಸಾಧನಮುತ್ತಮಂ ।**
**ಸ್ವಾಧ್ಯಾಯಂ ಯಸ್ತ್ಯಜೇನ್ಮೂಢಸ್ತಸ್ಯ ಯೋಗೋ ನ ಸಿಧ್ಯತಿ ॥ ೯೦ ॥**

**ಯೋಗಂ ವಿನಾಪಿ ಸ್ವಾಧ್ಯಾಯಾತ್ಪಾಪನಾಶೋ ಭವೇನ್ನೃಣಾಂ ।**
**ಸ್ವಾಧ್ಯಾಯೈಸ್ತೋಷ್ಯಮಾಣಾಶ್ಚ ಪ್ರಸೀದಂತಿ ಹಿ ದೇವತಾಃ ॥ ೯೧ ॥**

**ಜಪಸ್ತು ತ್ರಿವಿಧಃ ಪ್ರೋಕ್ತೋ ವಾಚಿಕೋಪಾಂಶುಮಾನಸಃ ।**
**ತ್ರಿವಿಧೇಪಿ ಚ ವಿಪ್ರೇಂದ್ರ ಪೂರ್ವಾತ್ಪೂರ್ವಾತ್ಪರೋ ವರಃ ॥ ೯೨ ॥**

---

೮೭. ತಪಸ್ಸು, ವೇದಶಾಸ್ತ್ರಾಧ್ಯಯನ, ತೃಪ್ತಿ, ಶೌಚ, ಹರಿಪೂಜೆ ಮತ್ತು ಸಂಧ್ಯಾವಂದನಾದ್ಯಾಚರಣೆ ಮುಂತಾದುವುಗಳು ನಿಯಮಗಳೆಂದು ಹೇಳಲ್ಪಟ್ಟಿವೆ.

೮೮. ಚಾಂದ್ರಾಯಣ ಮುಂತಾದ ವ್ರತಗಳಿಂದ ದೇಹವನ್ನು ದಂಡಿಸುವುದು ತಪಸ್ಸು ಎಂಬುದಾಗಿ ಉಕ್ತವಾಗಿದೆ. ಅದು ಉತ್ತಮವಾದ ಯೋಗ ಸಾಧನವು.

೮೯-೯೦. ಪ್ರಣವಮಂತ್ರ (ಓಂಕಾರ) ಉಪನಿಷತ್ತು, ದ್ವಾದಶಾಕ್ಷರ ಮತ್ತು ಅಷ್ಟಾಕ್ಷರ ಮಂತ್ರಗಳು ಮತ್ತು ಮಹಾವಾಕ್ಯ ಇವುಗಳನ್ನು ಜಪಿಸುವುದೇ ಸ್ವಾಧ್ಯಾಯವೆಂದು ಉಕ್ತವಾಗಿದೆ. ಅದು ಉತ್ತಮಯೋಗಸಾಧನವು. ಸ್ವಾಧ್ಯಾಯವನ್ನು ಬಿಟ್ಟಿರುವ ಮನುಷ್ಯನಿಗೆ ಯೋಗಸಿದ್ಧಿಯಾಗುವುದಿಲ್ಲ.

೯೧. ಯೋಗವಿಲ್ಲದೆಯೇ ಮನುಷ್ಯರಿಗೆ ಸ್ವಾಧ್ಯಾಯದಿಂದ ಪಾಪನಾಶವಾಗುವುದು, ಸ್ವಾಧ್ಯಾಯಗಳಿಂದ ಸಂತೋಷಪಡಿಸಲ್ಪಟ್ಟ ದೇವತೆಗಳು ಪ್ರಸನ್ನರಾಗುತ್ತಾರೆ.

೯೨. ಜಪವು ವಾಚನಿಕ, ಉಪಾಂಶು ಮತ್ತು ಮಾನಸಿಕ ಎಂದು

**ಮಂತ್ರಸ್ಯೋಚ್ಚಾರಣಂ ಸಮ್ಯಕ್ಸ್ಫುಟಾಕ್ಷರಪದಂ ಯಥಾ ।**
**ಜಪಸ್ತು ವಾಚಿಕಃ ಪ್ರೋಕ್ತಃ ಸರ್ವಯಜ್ಞಫಲಪ್ರದಃ ॥ ೯೩ ॥**

**ಮಂತ್ರಸ್ಯೋಚ್ಚಾರಣೇ ಕಿಂಚಿತ್ಪದಾತ್ಪದವಿವೇಚನಂ ।**
**ಸ ತೂಪಾಂಶುರ್ಜಪಃ ಪ್ರೋಕ್ತಃ ಪೂರ್ವಸ್ಮಾದ್ದ್ವಿಗುಣೋಧಿಕಃ ॥ ೯೪ ॥**

**ವಿಧಾಯ ಹ್ಯಕ್ಷರಶ್ರೇಣ್ಯಾಂ ತತ್ತದರ್ಥವಿಚಾರಣಂ ।**
**ಸ ಜಪೋ ಮಾನಸಃ ಪ್ರೋಕ್ತೋ ಯೋಗಸಿದ್ಧಿಪ್ರದಾಯಕಃ ॥ ೯೫ ॥**

**ಜಪೇನ ದೇವತಾ ನಿತ್ಯಂ ಸ್ತುವತಃ ಸಂಪ್ರಸೀದತಿ ।**
**ತಸ್ಮಾತ್ಸ್ವಾಧ್ಯಾಯಸಂಪನ್ನೋ ಲಭೇತ್ಸರ್ವಾನ್ಮನೋರಥಾನ್ ॥ ೯೬ ॥**

**ಯದೃಚ್ಛಾಲಾಭಸಂತುಷ್ಟಿಃ ಸಂತೋಷ ಇತಿ ಗೀಯತೇ ।**
**ಸಂತೋಷಹೀನಃ ಪುರುಷೋ ನ ಲಭೇಚ್ಛರ್ಮ ಕುತ್ರಚಿತ್ ॥ ೯೭ ॥**

---

ಮೂರುವಿಧವು. ಈ ಮೂರರಲ್ಲಿಯೂ ಪೂರ್ವಪೂರ್ವಕ್ಕಿಂತ ಉತ್ತರೋತ್ತರವು ಶ್ರೇಷ್ಠ ಎಂದರೆ ವಾಚನಿಕವು ಕನಿಷ್ಠ, ಉಪಾಂಶುವು ಮಧ್ಯಮ, ಮಾನಸವು ಉತ್ತಮವೆಂದು ತಾತ್ಪರ್ಯ.

೯೩. ಅಕ್ಷರಪದಗಳು ಅತ್ಯಂತ ಸ್ಫುಟವಾಗಿ ತಿಳಿಯುವಂತೆ ಮಂತ್ರವನ್ನುಚ್ಚರಿಸುವುದೇ ವಾಚನಿಕ ಜಪವೆನಿಸುವುದು. ಅದು ಸಕಲ ಯಜ್ಞಗಳ ಫಲವನ್ನು ಕೊಡುತ್ತದೆ.

೯೪. ಪದದಿಂದ ಪದವನ್ನು ವಿವೇಕಮಾಡಿ ಮೆಲ್ಲಗೆ ಮಂತ್ರೋಚ್ಚಾರಣೆ ಮಾಡವುದು ಉಪಾಂಶು ಜಪವು, ಅದು ವಾಚನಿಕಜಪಕ್ಕಿಂತ ಎರಡರಷ್ಟು ಹೆಚ್ಚು ಎಂದು ಉಕ್ತವಾಗಿದೆ.

೯೫. ಮಂತ್ರಾದಿಗಳಲ್ಲಿರುವ ಅಕ್ಷರವರ್ಗದಲ್ಲಿ ಆಯಾಯಾ ಅಕ್ಷರಗಳ ಅರ್ಥವಿಚಾರಪೂರ್ವಕವಾಗಿ ಮಂತ್ರಾನುಸಂಧಾನ ಮಾಡುವುದು ಮಾನಸಿಕ ಜಪವೆನಿಸುವುದು. ಅದು ಯೋಗಸಿದ್ಧಿಯನ್ನುಂಟುಮಾಡುತ್ತದೆ.

೯೬. ಜಪದಿಂದ ಯಾವಾಗಲೂ ಸ್ತೋತ್ರಮಾಡುವವನಿಗೆ ದೇವತೆಯು ಪ್ರಸನ್ನವಾಗುವುದು, ಆದಕಾರಣ ಸ್ವಾಧ್ಯಾಯವನ್ನು ಮಾಡುವವನು ಸಕಲೇಷ್ಟಾರ್ಥಗಳನ್ನೂ ಪಡೆಯುವನು.

೯೭. ವಿಶೇಷವಾಗಿ ತನ್ನ ಪ್ರಯತ್ನವಿಲ್ಲದೇ ಕೇವಲ ಭಗವಂತನ ಅನುಗ್ರಹದಿಂದ ಲಬ್ಧವಾದುದರಲ್ಲಿ ತೃಪ್ತಿಪಡುವುದು ಸಂತೋಷವೆಂದು ಹೇಳಲ್ಪಟ್ಟಿದೆ. ಸಂತೋಷವಿಲ್ಲದ ಪುರುಷನು ಎಲ್ಲಿಯೂ ಸುಖಪಡುವುದಿಲ್ಲ.

ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ ।
ಇತೋಽಧಿಕಂ ಕದಾ ಲಪ್ಸ್ಯೇ ಇತಿ ಕಾಮಸ್ತು ವರ್ಧತೇ ॥ ೯೮ ॥

ತಸ್ಮಾತ್ಕಾಮಂ ಪರಿತ್ಯಜ್ಯ ದೇಹಸಂಶೋಷಕಾರಣಂ ।
ಯದೃಚ್ಛಾಲಾಭಸಂತುಷ್ಟೋ ಭವೇದ್ಧರ್ಮಪರಾಯಣಃ ॥ ೯೯ ॥

ಬಾಹ್ಯಾಭ್ಯಂತರಭೇದೇನ ಶೌಚಂ ತು ದ್ವಿವಿಧಂ ಸ್ಮೃತಂ ।
ಮೃಜ್ಜಲಾಭ್ಯಾಂ ಬಹಿಃ ಶುದ್ಧಿರ್ಭಾವಶುದ್ಧಿಸ್ತಥಾಂತರಂ ॥ ೧೦೦ ॥

ಅಂತಃಶುದ್ಧಿವಿಹೀನೈಸ್ತು ಯೇಽಧ್ವರಾ ವಿವಿಧಾಃ ಕೃತಾಃ ।
ನ ಫಲಂತಿ ಮುನಿಶ್ರೇಷ್ಠ ಭಸ್ಮನಿ ನ್ಯಸ್ತಹವ್ಯವತ್ ॥ ೧೦೧ ॥

---

೯೮. ಯಾವಾಗಲೂ ಕಾಮಗಳನ್ನು ಅನುಭವಿಸುವುದರಿಂದ ಕಾಮ ಶಾಂತಿಯಾಗುವುದಿಲ್ಲ. ಇದಕ್ಕಿಂತ ಹೆಚ್ಚಿನದನ್ನು ಯಾವಾಗ ಹೊಂದಿಯೇನು? ಮುಂತಾಗಿ ಕಾಮವು ಅಭಿವೃದ್ಧಿಯಾಗುತ್ತದೆ.

೯೯. ಆದುದರಿಂದ ದೇಹವು ಶೋಷಿಸುವುದಕ್ಕೆ ಕಾರಣವಾದ ಕಾಮ ವನ್ನು ತ್ಯಜಿಸಿ ಭಗವದನುಗ್ರಹದಿಂದ ಲಬ್ಧವಾದುದರಲ್ಲಿ ಸಂತೋಷಪಡುವವ ನಾಗಿ ಧರ್ಮನಿರತನಾಗಬೇಕು.

೧೦೦. ಶೌಚವು ಹೊರಗಿನದು (ಬಾಹ್ಯ) ಒಳಗಿನದು (ಆಂತರ) ಎಂಬು ದಾಗಿ ಎರಡುವಿಧವೆಂದು ಸ್ಮೃತ್ಯುಕ್ತವಾಗಿದೆ. ಮಣ್ಣು ನೀರು ಇವುಗಳಿಂದ ಕೈ ಕಾಲು ಮುಂತಾದ ಬಾಹ್ಯವಾದ ಅವಯುವಗಳನ್ನು ಶುದ್ಧಿಮಾಡುವುದಕ್ಕೆ ಬಹಿಃ ಶುದ್ಧಿಯೆಂತಲೂ, ಹಾಗೆಯೇ ಅಂತರಶುದ್ಧಿಯು ಭಾವಶುದ್ಧಿಯೆಂತಲೂ ಸ್ಮೃತ ವಾಗಿದೆ, ಮನಃಶುದ್ಧಿಯೇ ಭಾವಶುದ್ಧಿಯು. (ಸಮೀಚೀನಾಭಿಪ್ರಾಯ ಹೊಂದಿರು ವುದು) ಅದು ಮುಖ್ಯವಾದುದೆಂದು ತಾತ್ಪರ್ಯ.

೧೦೧. ಅಂತರಶುದ್ಧಿಯಿಲ್ಲದವರಿಂದ ಅನುಷ್ಠಿತವಾದ ನಾನಾವಿಧ ಯಜ್ಞಾದಿಧರ್ಮಗಳು ಬೂದಿಯಲ್ಲಿ ಮಾಡಿದ ಹೋಮದಂತೆ ಫಲಕಾರಿ ಯಾಗುವುದಿಲ್ಲ.

ಭಾವಶುದ್ಧಿವಿಹೀನಾನಾಂ ಸಮಸ್ತಂ ಕರ್ಮ ನಿಷ್ಫಲಂ ।
ತಸ್ಮಾದ್ರಾಗಾದಿಕಂ ಸರ್ವಂ ಪರಿತ್ಯಜ್ಯ ಸುಖೀ ಭವೇತ್ ॥ ೧೦೨ ॥

ಮೃದಾ ಭಾರಸಹಸ್ರೈಸ್ತು ಕುಂಭಕೋಟಿಜಲೈಸ್ತಥಾ ।
ಕೃತಶೌಚೋಽಪಿ ದುಷ್ಟಾತ್ಮಾ ಚಂಡಾಲಸದೃಶಃ ಸ್ಮೃತಃ ॥ ೧೦೩ ॥

ಅಂತಃಶುದ್ಧಿವಿಹೀನಸ್ತು ದೇವಪೂಜಾಪರೋ ಯದಿ ।
ತಮೇವ ದೈವತಂ ಹಂತಿ ನರಕಂ ಚ ಪ್ರಪದ್ಯತೇ ॥ ೧೦೪ ॥

ಅಂತಃಶುದ್ಧಿವಿಹೀನಶ್ಚ ಬಹಿಃಶುದ್ಧಿಂ ಕರೋತಿ ಯಃ ।
ಅಲಂಕೃತಃ ಸುರಾಭಾಂಡ ಇವ ಶಾಂತಿಂ ನ ಗಚ್ಛತಿ ॥ ೧೦೫ ॥

ಮನಃಶುದ್ಧಿವಿಹೀನಾ ಯೇ ತೀರ್ಥಯಾತ್ರಾಂ ಪ್ರಕುರ್ವತೇ ।
ನ ತಾನ್ಪುನಂತಿ ತೀರ್ಥಾನಿ ಸುರಾಭಾಂಡಮಿವಾಪಗಾ ॥ ೧೦೬ ॥

---

೧೦೨. ಭಾವಶುದ್ಧಿಯಿಲ್ಲದವರಿಂದ ಕೃತವಾದ ಸಕಲ ಕರ್ಮಗಳೂ ನಿಷ್ಫಲವು, ಆದಕಾರಣ ರಾಗದ್ವೇಷಾದಿಗಳೆಲ್ಲವನ್ನೂ ಬಿಟ್ಟು ಸುಖಿಯಾಗಬೇಕು.

೧೦೩. ಸಾವಿರ ಭಾರದಷ್ಟು ಮಣ್ಣು, ಕೋಟ್ಯಂತರ ಕೊಡ ನೀರು ಇವುಗಳಿಂದ ಶೌಚವನ್ನು ಮಾಡಿಕೊಂಡಾಗ್ಯೂ, ರಾಗ ಮುಂತಾದ ದೋಷ ಯುಕ್ತವಾದ ಮನಸ್ಸುಳ್ಳವನು ಚಂಡಾಲನಿಗೆ ಸಮಾನನೆಂದೂ ಸ್ಮೃತ್ಯುಕ್ತವಾಗಿದೆ.

೧೦೪. ಅಂತಃ ಶುದ್ಧಿಯಿಲ್ಲದೆ ದೇವರ ಪೂಜೆಯಲ್ಲಿ ನಿರತನಾದರೆ ದೇವರು ಅವನನ್ನೇ ಕೊಲ್ಲುವನು ಎಂದರೆ ಅವನು ನರಕವನ್ನು ಹೊಂದುತ್ತಾನೆಂದು ತಿಳಿಯಬೇಕು.

೧೦೫. ಅಂತಃಶುದ್ಧಿರಹಿತನಾಗಿ ಬಹಿಶ್ಶುದ್ಧಿಯನ್ನು ಮಾಡಿಕೊಳ್ಳುವವನು ಅಲಂಕಾರಮಾಡಿದ ಹೆಂಡದ ಹಂಡೆಯಂತೆ ಶಾಂತಿಯನ್ನು ಹೊಂದಲಾರನು.

೧೦೬. ನದಿಗಳು, ಮದ್ಯದ ಪಾತ್ರೆಯನ್ನು ಹೇಗೆ ಶುದ್ಧಿಮಾಡುವುದಿಲ್ಲವೋ ಅದರಂತೆ ಮನಶ್ಶುದ್ಧಿಯಿಲ್ಲದೇ ತೀರ್ಥಯಾತ್ರೆಯನ್ನು ಮಾಡುವವರನ್ನು ತೀರ್ಥಗಳು ಶುದ್ಧಿಪಡಿಸುವುದಿಲ್ಲ.

ವಾಚಾ ಧರ್ಮಾನ್ಪ್ರವದತಿ ಮನಸಾ ಪಾಪಮಿಚ್ಛತಿ ।
ಜಾನೀಯಾತ್ತಂ ಮುನಿಶ್ರೇಷ್ಠ ಮಹಾಪಾತಕಿನಾಂ ವರಂ ॥ ೧೦೭ ॥

ವಿಶುದ್ಧಮಾನಸಾ ಯೇ ತು ಧರ್ಮಮಾತ್ರಮನುತ್ತಮಂ ।
ಕುರ್ವಂತಿ ತತ್ಫಲಂ ವಿದ್ಯಾದಕ್ಷಯಂ ಸುಖದಾಯಕಂ ॥ ೧೦೮ ॥

ಕರ್ಮಣಾ ಮನಸಾ ವಾಚಾ ಸ್ತುತಿಶ್ರವಣಪೂಜನೈಃ ।
ಹರಿಭಕ್ತಿರ್ದೃಢಾ ಯಸ್ಯ ಹರಿಪೂಜೇತಿ ಗೀಯತೇ ॥ ೧೦೯ ॥

ಯಮಾಶ್ಚ ನಿಯಮಾಶ್ಚೈವ ಸಂಕ್ಷೇಪೇಣ ಪ್ರಬೋಧಿತಾಃ ।
ಏಭಿರ್ವಿಶುದ್ಧಮನಸಾಂ ಮೋಕ್ಷಂ ಹಸ್ತಗತಂ ವಿದುಃ ॥ ೧೧೦ ॥

ಯಮೈಶ್ಚ ನಿಯಮೈಶ್ಚೈವ ಸ್ಥಿರಬುದ್ಧಿರ್ಜಿತೇಂದ್ರಿಯಃ ।
ಅಭ್ಯಸೇದಾಸನಂ ಸಮ್ಯಗ್ಯೋಗಸಾಧನಮುತ್ತಮಂ ॥ ೧೧೧ ॥

---

೧೦೭. ಮಾತಿನಲ್ಲಿ ಧರ್ಮವನ್ನು ಹೇಳುತ್ತಾ ಒಳಗೆ ಮನಸ್ಸಿನಲ್ಲಿ ಪಾಪಕೃತ್ಯವನ್ನು ಮಾಡಲು ಬಯಸುವವನು ಮಹಾಪಾಪಿಗಳಲ್ಲಿ ಅಗ್ರಗಣ್ಯನೆಂದು ತಿಳಿಯಬೇಕು.

೧೦೮. ಸರ್ವೋತ್ತಮವಾದ ಧರ್ಮವನ್ನು ಮಾತ್ರ ಎಂದರೆ ಫಲಾಶೆಯಿಲ್ಲದೆ ಕೇವಲ ಭಗವಂತನು ಸಂತುಷ್ಟನಾಗಲೆಂಬನುಸಂಧಾನದಿಂದ ಧರ್ಮವನ್ನು ಮಾಡುವವರಿಗೆ ಅದರ ಫಲವು ಶಾಶ್ವತಸುಖವನ್ನುಂಟು ಮಾಡುತ್ತದೆಂದು ತಿಳಿಯಬೇಕು.

೧೦೯. ಕೆಲಸ, ಮನಸ್ಸು, ಮತ್ತು ವಾಕ್ಕು ಇವುಗಳಿಂದ ಮಾಡುವ ಸ್ತೋತ್ರ, ಸಚ್ಛಾಸ್ತ್ರಶ್ರವಣ ಮತ್ತು ಪೂಜೆ ಇವುಗಳಿಂದ ದೃಢೀಕೃತವಾದ ಹರಿಭಕ್ತಿಯೇ ಹರಿಪೂಜೆಯೆಂದುಕ್ತವಾಗಿದೆ.

೧೧೦. ಯಮ ಮತ್ತು ನಿಯಮಗಳು. ಉಕ್ತರೀತಿಯಿಂದ ಸಂಗ್ರಹವಾಗಿ ತಿಳಿಸಲ್ಪಟ್ಟಿವೆ, ಇವುಗಳ ಆಚರಣೆಯಿಂದ ಪರಿಶುದ್ಧಮನಸ್ಕರಾದವರಿಗೆ ಮೋಕ್ಷವು ಕೈಯಲ್ಲಿಯೇ ಇದೆಯೆಂದು ಜ್ಞಾನಿಗಳು ತಿಳಿದಿರುವರು.

೧೧೧. ಯಮ ಮತ್ತು ನಿಯಮಗಳಿಂದ ಚಿತ್ತಸ್ಥೈರ್ಯವನ್ನು ಹೊಂದಿ ಜಿತೇಂದ್ರಿಯನಾದವನು ಉತ್ತಮ ಯೋಗಸಾಧಕವಾದ ಆಸನವನ್ನು ಚೆನ್ನಾಗಿ ಅಭ್ಯಾಸಮಾಡಬೇಕು.

ಪದ್ಮಕಂ ಸ್ವಸ್ತಿಕಂ ಪೀಠಂ ಸೈಂಹಂ ಕೌಕ್ಕುಟಕೌಂಜರೇ ।
ಕೌರ್ಮಂ ವಜ್ರಾಸನಂ ಚೈವ ವಾರಾಹಂ ಮೃಗಚೈಲಿಕಂ ॥ ೧೧೨ ॥

ಕ್ರೌಂಚಂ ಚ ನಾಲಿಕಂ ಚೈವ ಸರ್ವತೋಭದ್ರಮೇವ ಚ ।
ವಾರ್ಷಭಂ ನಾಗಮಾತ್ಸ್ಯೇ ಚ ವೈಯಾಘ್ರಂ ಚಾರ್ಧಚಂದ್ರಕಂ ॥ ೧೧೩ ॥

ದಂಡವಾತಾಸನಂ ಶೈಲಂ ಸ್ವಭ್ರಂ ಮೌದ್ಗರಮೇವ ಚ ।
ಮಾಕರಂ ತ್ರೈಪಥಂ ಕಾಷ್ಠಂ ಸ್ಥಾಣುಂ ವೈಕರ್ಣಿಕಂ ತಥಾ ॥ ೧೧೪ ॥

ಭೌಮಂ ವೀರಾಸನಂ ಚೈವ ಯೋಗಸಾಧನಕಾರಣಂ ।
ತ್ರಿಂಶತ್ಸಂಖ್ಯಾನ್ಯಾಸನಾನಿ ಮುನೀಂದ್ರೈಃ ಕಥಿತಾನಿ ವೈ ॥ ೧೧೫ ॥

ಏಷಾಮೇಕತಮಂ ಬಧ್ವಾ ಗುರುಭಕ್ತಿಪರಾಯಣಃ ।
ಉಪಾಸಕೋ ಜಯೇತ್ಪ್ರಾಣಾನ್ದ್ವಂದ್ವಾತೀತೋ ವಿಮತ್ಸರಃ ॥ ೧೧೬ ॥

---

೧೧೨-೧೧೫. ಪದ್ಮ, ಸ್ವಸ್ತಿಕ, ಪೀಠ, ಸಿಂಹಾಸನ, ಕುಕ್ಕುಟ, ಕುಂಜರಾಸನ, ಕೂರ್ಮ, ವಜ್ರಾಸನ, ವಾರಾಹಾಸನ, ಮೃಗ, ಚೈಲಿಕ, ಕ್ರೌಂಚ, ನಾಲಿಕ ಸರ್ವತೋಭದ್ರ, ಋಷಭ, ನಾಗ, ಮತ್ಸ್ಯ, ವೈಯಾಘ್ರ, ಅರ್ಧಚಂದ್ರ, ದಂಡವಾತಾಸನ, ಶೈಲ, ಸ್ವಭ್ರ, ಮೌದ್ಗರ, ಮಕರ, ತ್ರೈಪಥಾಸನ, ಕಾಷ್ಠ, ಸ್ಥಾಣು, ವೈಕರ್ಣಿಕ, ಭೌಮ, ವೀರಾಸನ ಎಂಬುದಾಗಿ ಯೋಗಾಭ್ಯಾಸಾಂಗವಾದ ಆಸನವು ಮೂವತ್ತು ವಿಧವೆಂಬುದಾಗಿ ಮುನಿಶ್ರೇಷ್ಠರಿಂದ ಉಕ್ತವಾಗಿದೆ.

೧೧೬. ಗುರುಭಕ್ತಿಪರತನು, ಸುಖದುಃಖ, ಲಾಭಾಲಾಭ, ಜಯಾಜಯ ಮುಂತಾದ ದ್ವಂದ್ವಗಳನ್ನು ಅತಿಕ್ರಮಿಸಿದವನು ಎಂದರೆ ದುಃಖಾದಿಗಳಂತೆ ಸುಖಾದಿಗಳೂ ಹೇಯವೆಂಬ ಭಾವನೆಯಿಂದ ಅವು ಪ್ರಾಪ್ತವಾದಾಗ ಹಿಗ್ಗದೆಯೂ ದುಃಖಾದಿಗಳು ಬಂದಾಗ ತಗ್ಗದೆಯೂ ಇರುವವನು ಮತ್ತು ಮಾತ್ಸರ್ಯರಹಿತನೂ ಆಗಿರುವ ಉಪಾಸಕನು ಉಕ್ತವಾದ ಮೂವತ್ತು ಆಸನಗಳಲ್ಲಿ ಯಾವುದಾದರೊಂದನ್ನು ಅನುಷ್ಠಾನಮಾಡಿ ಪ್ರಾಣವಾಯುವನ್ನು ಜಯಿಸಬೇಕು.

**ಪ್ರಾಙ್ಮುಖೋಽದಙ್ಮುಖೋ ವಾಽಪಿ ತಥಾ ಪ್ರತ್ಯಙ್ಮುಖೋಽಪಿ ವಾ ।**
**ಅಭ್ಯಾಸೇನ ಜಯೇತ್ಪ್ರಾಣಾನ್ನಿಃಶಬ್ದೇ ಜನವರ್ಜಿತೇ ॥ ೧೧೭ ॥**

**ಪ್ರಾಣೋ ವಾಯುಃ ಶರೀರಸ್ಥ ಆಯಾಮಸ್ತಸ್ಯ ನಿಗ್ರಹಃ ।**
**ಪ್ರಾಣಾಯಾಮ ಇತಿ ಪ್ರೋಕ್ತೋ ದ್ವಿವಿಧಃ ಸ ಪ್ರಕೀರ್ತಿತಃ ॥ ೧೧೮ ॥**

**ಅಗರ್ಭಶ್ಚ ಸಗರ್ಭಶ್ಚ ದ್ವಿತೀಯಸ್ತು ತಯೋರ್ವರಃ ।**
**ಜಪಧ್ಯಾನಂ ವಿನಾಽಗರ್ಭಃ ಸಗರ್ಭಸ್ತತ್ಸಮನ್ವಿತಃ ॥ ೧೧೯ ॥**

**ರೇಚಕಃ ಪೂರಕಶ್ಚೈವ ಕುಂಭಕಃ ಶೂನ್ಯಕಸ್ತಥಾ ।**
**ಏವಂ ಚತುರ್ವಿಧಃ ಪ್ರೋಕ್ತಃ ಪ್ರಾಣಾಯಾಮೋ ಮನೀಷಿಭಿಃ ॥ ೧೨೦ ॥**

**ಜಂತೂನಾಂ ದಕ್ಷಿಣಾ ನಾಡೀ ಪಿಂಗಲಾ ಪರಿಕೀರ್ತಿತಾ ।**
**ಸೂರ್ಯದೈವತಕಾ ಚೈವ ಪಿತೃಯೋನಿರಿತಿ ಶ್ರುತಾ ॥ ೧೨೧ ॥**

---

೧೧೭. ಗಲಾಟೆಯಿಲ್ಲದ ನಿರ್ಜನಪ್ರದೇಶದಲ್ಲಿ ಪೂರ್ವ, ಉತ್ತರ ಅಥವಾ ಪಶ್ಚಿಮದಿಕ್ಕುಗಳಿಗೆ ಎದುರಾಗಿ ಕುಳಿತು ಯೋಗಾಭ್ಯಾಸಮಾಡಿ ಪ್ರಾಣವಾಯುವನ್ನು ಜಯಿಸಬೇಕು.

೧೧೮-೧೧೯. ಶರೀರದಲ್ಲಿರುವ ವಾಯುವೇ ಪ್ರಾಣವು. ಅದರ ನಿಗ್ರಹಕ್ಕೆ ಆಯಾಮವೆಂದು ಹೆಸರು. ಆ ಪ್ರಾಣಾಯಾಮವು ಅಗರ್ಭ ಮತ್ತು ಸಗರ್ಭವೆಂಬುದಾಗಿ ಎರಡು ವಿಧ. ಅವುಗಳಲ್ಲಿ ಎರಡನೆಯದಾದ ಸಗರ್ಭವು ಉತ್ತಮ. ಜಪಧ್ಯಾನಗಳಿಲ್ಲದೆ ಕೇವಲ ಶ್ವಾಸನಿರೋಧಮಾಡುವುದು ಅಗರ್ಭಪ್ರಾಣಾಯಾಮವು. ಜಪಧ್ಯಾನಗಳಿಂದ ಸಹಿತವಾದುದು ಸಗರ್ಭವೆನಿಸುವುದು.

೧೨೦. ಜ್ಞಾನಿಗಳು ರೇಚಕ, ಪೂರಕ, ಕುಂಭಕ ಮತ್ತು ಶೂನ್ಯಕ ಎಂಬುದಾಗಿ ಪ್ರಾಣಾಯಾಮವನ್ನು ನಾಲ್ಕುಭಾಗವೆಂದು ಹೇಳುವರು.

೧೨೧. ಪ್ರಾಣಿಗಳ ಬಲಭಾಗದಲ್ಲಿರುವ ನಾಡಿಯು ಪಿಂಗಳಾ ಎಂದು ಉಕ್ತವಾಗಿದೆ. ಅದಕ್ಕೆ ಸೂರ್ಯನೇ ಅಭಿಮಾನಿದೇವತೆಯು. ಅದು ಪಿತೃಯೋನಿ ಎಂಬುದಾಗಿ ಪ್ರಸಿದ್ಧವಾಗಿದೆ.

**ದೇವಯೋನಿರಿತಿ ಖ್ಯಾತಾ ಇಡಾನಾಡೀ ತ್ವದಕ್ಷಿಣಾ ।**
**ತತ್ರಾಧಿದೈವತಂ ಚಂದ್ರಂ ಜಾನೀಹಿ ಮುನಿಸತ್ತಮ ॥ ೧೨೨ ॥**

**ಏತಯೋರುಭಯೋರ್ಮಧ್ಯೇ ಸುಷುಮ್ನಾ ನಾಡಿಕಾ ಸ್ಮೃತಾ ।**
**ಅತಿಸೂಕ್ಷ್ಮಾ ಗುಹ್ಯತಮಾ ಜ್ಞೇಯಾ ಸಾ ಬ್ರಹ್ಮದೇವತಾ ॥ ೧೨೩ ॥**

**ವಾಮೇನ ರೇಚಯೇದ್ವಾಯುಂ ರೇಚನಾದ್ರೇಚಕಃ ಸ್ಮೃತಃ ।**
**ಪೂರಯೇದ್ದಕ್ಷಿಣೇನೈವ ಪೂರಣಾತ್ಪೂರಕಃ ಸ್ಮೃತಃ ॥ ೧೨೪ ॥**

**ಸ್ವದೇಹಪೂರಿತಂ ವಾಯುಂ ನಿಗೃಹ್ಯ ನ ವಿಮುಂಚತಿ ।**
**ಸಂಪೂರ್ಣಕುಂಭವತ್ತಿಷ್ಠೇತ್ಕುಂಭಕಃ ಸ ಹಿ ವಿಶ್ರುತಃ ॥ ೧೨೫ ॥**

---

೧೨೨. ಶರೀರದ ಎಡಭಾಗದಲ್ಲಿರುವ ಇಡಾ ಎಂಬ ನಾಡಿಯು ದೇವಯೋನಿಯೆಂದು ಪ್ರಸಿದ್ಧವಾಗಿದೆ. ಮುನಿವರ್ಯನೇ! ಆ ಇಡಾನಾಡಿಗೆ ಚಂದ್ರನನ್ನು ಅಭಿಮಾನಿದೇವತೆಯೆಂದು ತಿಳಿ.

೧೨೩. ಈ ಎರಡು ನಾಡಿಗಳ ಮಧ್ಯದಲ್ಲಿರುವ ನಾಡಿಯು ಸುಷುಮ್ನಾ ಎಂಬುದಾಗಿ ಉಕ್ತವಾಗಿದೆ. ಅದು ಅತ್ಯಂತ ಸೂಕ್ಷ್ಮ ಮತ್ತು ರಹಸ್ಯವಾದುದೆಂದು ತಿಳಿಯಬೇಕು. ಅದಕ್ಕೆ ಬ್ರಹ್ಮನೇ ಅಭಿಮಾನಿದೇವತೆಯು.

೧೨೪. ಎಡಗಡೆಯ ಮೂಗಿನಿಂದ ವಾಯುವನ್ನು ಹೊರಕ್ಕೆ ಬಿಡಬೇಕು. ಹೀಗೆ ವಾಯುವನ್ನು ಹೊರಕ್ಕೆ ಬಿಡುವುದರಿಂದಲೇ ಅದಕ್ಕೆ ರೇಚಕವೆಂದು ಹೆಸರಾಯಿತು. ಬಲಗಡೆಯ ಮೂಗಿನಿಂದ ವಾಯುವನ್ನು ತೆಗೆದುಕೊಂಡು ತುಂಬಿಕೊಳ್ಳಬೇಕು. ಹೀಗೆ ತುಂಬಿಕೊಳ್ಳುವುದರಿಂದಲೇ ಅದಕ್ಕೆ ಪೂರಕವೆಂದು ಹೆಸರಾಯಿತು.

೧೨೫. ತನ್ನ ದೇಹದಲ್ಲಿ ತುಂಬಿಸಲ್ಪಟ್ಟ ವಾಯುವನ್ನು ನಿಗ್ರಹಿಸಿಕೊಂಡು ಹೊರಗೆ ಬಿಡದೇ ತುಂಬಿದ ಕೊಡದಂತೆ ಅಲ್ಲಾಡದೆ ಸ್ತಿಮಿತವಾಗಿ ನಿಲ್ಲಿಸಬೇಕು. ಹೀಗೆ ನಿಲ್ಲಿಸುವುದು ಕುಂಭಕವೆಂದು ಪ್ರಸಿದ್ಧವಾಗಿದೆ.

ನ ಗೃಹ್ಣಾತಿ ನ ತ್ಯಜತಿ ವಾಯುಮಂತರ್ಬಹಿಃ ಸ್ಥಿತಂ ।
ವಿದ್ಧಿ ತಚ್ಛೂನ್ಯಕಂ ನಾಮ ಪ್ರಾಣಾಯಾಮಂ ಯಥಾಸ್ಥಿತಂ ॥ ೧೨೬ ॥

ಶನೈಃ ಶನೈರ್ವಿಜೇತವ್ಯಃ ಪ್ರಾಣೋ ಮತ್ತಗಜೇಂದ್ರವತ್ ।
ಅನ್ಯಥಾ ಖಲು ಜಾಯಂತೇ ಮಹಾರೋಗಾ ಭಯಂಕರಾಃ ॥ ೧೨೭ ॥

ಕ್ರಮೇಣ ಯೋಜಯೇದ್ವಾಯುಂ ಯೋಗೀ ವಿಗತಕಲ್ಮಷಃ ।
ಸ ಸರ್ವಪಾಪನಿರ್ಮುಕ್ತೋ ಬ್ರಹ್ಮಣಃ ಪದಮಾಪ್ನುಯಾತ್ ॥ ೧೨೮ ॥

ವಿಷಯೇಷು ಪ್ರಸಕ್ತಾನಿ ಚೇಂದ್ರಿಯಾಣಿ ಮುನೀಶ್ವರ ।
ಸಮಾಹೃತ್ಯ ನಿಗೃಹ್ಣಾತಿ ಪ್ರತ್ಯಾಹಾರಸ್ತು ಸ ಸ್ಮೃತಃ ॥ ೧೨೯ ॥

ಜಿತೇಂದ್ರಿಯಾ ಮಹಾತ್ಮಾನೋ ಧ್ಯಾನಶೂನ್ಯಾ ಅಪಿ ದ್ವಿಜ ।
ಪ್ರಯಾಂತಿ ಪರಮಂ ಬ್ರಹ್ಮ ಪುನರಾವೃತ್ತಿದುರ್ಲಭಂ ॥ ೧೩೦ ॥

---

೧೨೬. ಹೊರಗಿನ ವಾಯುವನ್ನು ಸ್ವೀಕರಿಸದೇ ಒಳಗಿನ ವಾಯುವನ್ನು ಹೊರಗೆ ಬಿಡದೆಯೂ ಇದ್ದರೀತಿಯಲ್ಲಿಯೇ ಇರುವುದನ್ನು ಶೂನ್ಯಕವೆಂಬ ಪ್ರಾಣಾಯಾಮವೆಂದು ತಿಳಿ.

೧೨೭. ಮದಿಸಿದ ಆನೆಯಂತೆ ಪ್ರಾಣವಾಯುವನ್ನು ಮೆಲ್ಲಮೆಲ್ಲಗೆ ಜಯಿಸಬೇಕು. ಹಾಗೆ ಮಾಡದೆ ಒಟ್ಟಿಗೆ ಜಯಿಸಲು ಯತ್ನಿಸಿದರೆ ಭಯಂಕರವಾದ ಮಹಾವ್ಯಾಧಿಗಳು ಹುಟ್ಟುತ್ತವೆ.

೧೨೮. ಕಾಲುಷ್ಯವನ್ನು ಹೋಗಲಾಡಿಸಿಕೊಂಡು ಕ್ರಮವಾಗಿ ವಾಯುವನ್ನು ಜಯಿಸುವ ಯೋಗಿಯು ಸಕಲ ಪಾಪಗಳಿಂದ ಮುಕ್ತನಾಗಿ ಬ್ರಹ್ಮನ ಸ್ಥಾನ ಎಂದರೆ ವೈಕುಂಠಾದಿಲೋಕವನ್ನು ಹೊಂದುವನು.

೧೨೯. ಮುನಿಶ್ರೇಷ್ಠನೇ! ವಿಷಯಗಳಲ್ಲಿ ಸಂಚರಿಸುತ್ತಿರುವ ಇಂದ್ರಿಯಗಳನ್ನು ಸೆಳೆದು ನಿಗ್ರಹಿಸುವುದಕ್ಕೆ ಪ್ರತ್ಯಾಹಾರವೆಂದು ಹೆಸರು.

೧೩೦. ದ್ವಿಜನೇ! ಇಂದ್ರಿಯವನ್ನು ಜಯಿಸಿರುವ ಮಹಾತ್ಮರು ಧ್ಯಾನ ಮಾಡದಿದ್ದಾಗ್ಯೂ ಪುನಃ ಹಿಂತಿರುಗದ ಪರಬ್ರಹ್ಮಲೋಕಕ್ಕೆ ಹೋಗುತ್ತಾರೆ.

ಅನಿರ್ಜಿತ್ಯೇಂದ್ರಿಯಗ್ರಾಮಂ ಯಸ್ತು ಧ್ಯಾನಪರೋ ಭವೇತ್ ।
ಮೂಢಾತ್ಮಾನಂ ಚ ತಂ ವಿದ್ಯಾದ್ಧ್ಯಾನಂ ಚಾಸ್ಯ ನ ಸಿಧ್ಯತಿ ॥ ೧೩೧ ॥

ಯದ್ಯತ್ಪಶ್ಯತಿ ತತ್ಸರ್ವಂ ಪಶ್ಯೇದಾತ್ಮವದಾತ್ಮನಾ ।
ಪ್ರತ್ಯಾಹೃತಾನೀಂದ್ರಿಯಾಣಿ ಧಾರಯೇತ್ಸಾ ತು ಧಾರಣಾ ॥ ೧೩೨ ॥

ಯೋಗಾಜ್ಜಿತೇಂದ್ರಿಯಗ್ರಾಮಸ್ತಾನಿ ಹೃತ್ವಾ ದೃಢಂ ಹೃದಿ ।
ಆತ್ಮಾನಂ ಪರಮಂ ಧ್ಯಾಯೇತ್ಸರ್ವಧಾತಾರಮಚ್ಯುತಂ ॥ ೧೩೩ ॥

ಸರ್ವವಿಶ್ವಾತ್ಮಕಂ ವಿಷ್ಣುಂ ಸರ್ವಲೋಕೈಕಕಾರಣಂ ।
ವಿಕಸತ್ಪದ್ಮಪತ್ರಾಕ್ಷಂ ಚಾರುಕುಂಡಲಭೂಷಿತಂ ॥ ೧೩೪ ॥

ದೀರ್ಘಬಾಹುರುದಾರಾಂಗಂ ಸರ್ವಾಲಂಕಾರಭೂಷಿತಂ ।
ಪೀತಾಂಬರಧರಂ ದೇವಂ ಹೇಮಯಜ್ಞೋಪವೀತಿನಂ ॥ ೧೩೫ ॥

---

೧೩೧. ಇಂದ್ರಿಯ ಸಮುದಾಯವನ್ನು ನಿಗ್ರಹಿಸದೆ ವಿಷಯಾಸಕ್ತನಾಗಿ ಧ್ಯಾನಪರನಾದವನನ್ನು ಮೂಢನೆಂದು ತಿಳಿಯಬೇಕು. ಅಂತಹವನಿಗೆ ಧ್ಯಾನಸಿದ್ಧಿಯಾಗುವುದಿಲ್ಲ.

೧೩೨. ದೃಷ್ಟವಾದ ಸಕಲಪದಾರ್ಥಗಳು ಪರಮಾತ್ಮಸ್ವಾಮಿಕವಾಗಿ ಅವನ ಅಧೀನವಾದುವುಗಳೆಂದು ತಿಳಿಯಬೇಕು. ವಿಷಯಗಳಲ್ಲಿ ಪ್ರಸಕ್ತವಾದ ಇಂದ್ರಿಯಗಳನ್ನು ಪ್ರತ್ಯಾಹರಣಮಾಡಿ ಧರಿಸುವುದು ಧಾರಣೆಯೆನಿಸುವುದು.

೧೩೩. ಯೋಗಾಭ್ಯಾಸದಿಂದ ಇಂದ್ರಿಯಸಂಘವನ್ನು ನಿಗ್ರಹಿಸಿ ಎಂದರೆ ವಿಷಯಗಳ ಕಡೆ ಹೋಗದಂತೆ ಸ್ಥಿರವಾಗಿ ನಿಲ್ಲಿಸಿ ಅಂತರ್ಯಾಮಿಯು, ಉತ್ತಮನು, ಸಕಲ ಜಗತ್ಸ್ರಷ್ಟೃವೂ ಆದ ಅಚ್ಯುತನನ್ನು ಚಿತ್ತೈಕಾಗ್ರ್ಯದಿಂದ ಧ್ಯಾನಿಸಬೇಕು.

೧೩೪-೧೩೭. ಸಕಲ ಜಗದಂತರ್ಯಾಮಿಯು, ಸಕಲ ಲೋಕಕ್ಕೂ ಮುಖ್ಯ ಕಾರಣನು, ವಿಕಸಿತವಾದ ಕಮಲಗಳಂತೆ ನೇತ್ರಗಳುಳ್ಳವನು, ಮನೋಹರ ಕುಂಡಲಗಳಿಂದಲಂಕೃತನು, ಉದ್ದವಾದ ಬಾಹುಗಳುಳ್ಳವನು, ಅಭಿವೃದ್ಧವಾದ ಅವಯವಗಳುಳ್ಳವನು, ಸಕಲಾಭರಣಭೂಷಿತನು, ಪೀತಾಂಬರಧಾರಿಯು,

ಬಿಭ್ರತಂ ತುಲಸೀಮಾಲಾಂ ಕೌಸ್ತುಭೇನ ವಿರಾಜಿತಂ ।
ಶ್ರೀವತ್ಸವಕ್ಷಸಂ ದೇವಂ ಸುರಾಸುರನಮಸ್ಕೃತಂ ॥ ೧೩೬ ॥

ಅಂತರೇ ಹೃತ್ಸರೋಜೇ ತು ದ್ವಾದಶಾಂಗುಲವಿಸ್ತೃತೇ ।
ಧ್ಯಾಯೇದಾತ್ಮಾನಮವ್ಯಕ್ತಂ ಪರಾತ್ಪರತರಂ ವಿಭುಂ ॥ ೧೩೭ ॥

ಧ್ಯಾನಂ ಸದ್ಭಿರ್ನಿಗದಿತಂ ಪ್ರತ್ಯಯಸ್ಯೈಕತಾನತಾ ।
ಧ್ಯಾನಂ ಕೃತ್ವಾ ಮುಹೂರ್ತಂ ವಾ ಪರಂ ಮೋಕ್ಷಂ ಲಭೇನ್ನರಃ ॥ ೧೩೮ ॥

ಧ್ಯಾನಾತ್ಪಾಪಾನಿ ನಶ್ಯಂತಿ ಧ್ಯಾನಾನ್ಮೋಕ್ಷಂ ಚ ವಿಂದತಿ ।
ಧ್ಯಾನಾತ್ಪ್ರಸೀದತಿ ಹರಿರ್ಧ್ಯಾನಾತ್ಸರ್ವಾರ್ಥಸಾಧನಂ ॥ ೧೩೯ ॥

ಯದ್ಯದ್ರೂಪಂ ಮಹಾವಿಷ್ಣೋಸ್ತತ್ತದ್ಧ್ಯಾಯೇತ್ಸಮಾಹಿತಃ ।
ತೇನ ಧ್ಯಾನೇನ ತುಷ್ಟಾತ್ಮಾ ಹರಿರ್ಮೋಕ್ಷಂ ದದಾತಿ ವೈ ॥ ೧೪೦ ॥

ಸುವರ್ಣದ ಯಜ್ಞೋಪವೀತವನ್ನು ಧರಿಸಿರುವವನು, ತುಲಸೀಮಾಲಿಕೆಯನ್ನು ಹಾಕಿಕೊಂಡಿರುವವನು, ಕೌಸ್ತುಭದಿಂದ ಪ್ರಕಾಶಿತನು, ವಕ್ಷಸ್ಥಳದಲ್ಲಿ ಶ್ರೀವತ್ಸವನ್ನು ಧರಿಸಿರುವವನು, ದೇವದಾನವರಿಂದ ನಮಸ್ಕೃತನು, ಅವ್ಯಕ್ತನು, ಉತ್ತಮೋತ್ತಮನು, ಸರ್ವಶಕ್ತನೂ ಆಗಿರುವ ವಿಷ್ಣುದೇವನನ್ನು ಹನ್ನೆರಡು ಅಂಗುಲ ವಿಸ್ತಾರವುಳ್ಳ ಪದ್ಮದಂತಿರುವ ಹೃದಯಾಕಾಶದಲ್ಲಿ ಧ್ಯಾನಿಸಬೇಕು.

೧೩೮. ಇತರ ವಸ್ತುಗಳನ್ನು ದೂರಮಾಡಿ ಕೇವಲ ಧ್ಯೇಯ ವಸ್ತುವನ್ನೇ ವಿಷಯೀಕರಿಸುತ್ತಿರುವ ಜ್ಞಾನಪರಂಪರೆಯು ಧ್ಯಾನವೆಂದು ಸಾಧುಗಳಿಂದ ಉಕ್ತವಾಗಿದೆ. ಮನುಷ್ಯನು ಒಂದು ಮುಹೂರ್ತ ಕಾಲವಾದರೂ ಧ್ಯಾನಮಾಡಿ ಉತ್ಕೃಷ್ಟವಾದ ಮೋಕ್ಷವನ್ನು ಪಡೆಯಬೇಕು.

೧೩೯. ಧ್ಯಾನದಿಂದ ಪಾಪಪರಿಹಾರ, ಮೋಕ್ಷಪ್ರಾಪ್ತಿ ಮತ್ತು ಹರಿಪ್ರಸಾದ ಇವುಗಳು ಸಂಭವಿಸುತ್ತವೆ. ಅಷ್ಟೇ ಅಲ್ಲ; ಧ್ಯಾನದಿಂದ ಸಕಲೇಷ್ಟಸಿದ್ಧಿಯೂ ಆಗುವುದು.

೧೪೦. ಮಹಾವಿಷ್ಣುವಿನ ಯಾವ ರೂಪಗಳನ್ನೇ ಆಗಲಿ ಸಮಾಧಾನ

**ಅಚಂಚಲಂ ಮನಃ ಕುರ್ಯಾದ್ಧ್ಯೇಯೇ ವಸ್ತುನಿ ಸತ್ತಮ ।**
**ಧ್ಯಾನಧ್ಯೇಯ ಧ್ಯಾತೃಭಾವೋ ಯಥಾ ನಶ್ಯತಿ ನಿರ್ಭರಂ　　॥ ೧೪೧ ॥**

**ತತೋಽಮೃತತ್ವಂ ಭವತಿ ಜ್ಞಾನಾಮೃತನಿಷೇವಣಾತ್ ।**
**ಭವೇನ್ನಿರಂತರಂ ಧ್ಯಾನಾದಭೇದ ಪ್ರತಿಪಾದನಂ　　॥ ೧೪೨ ॥**

**ಸುಷುಪ್ತಿವತ್ಪರಾನಂದಯುಕ್ತಶ್ಚೋಪರತೇಂದ್ರಿಯಃ ।**
**ನಿರ್ವಾತದೀಪವತ್ಸಂಸ್ಥಃ ಸಮಾಧಿರಭಿಧೀಯತೇ　　॥ ೧೪೩ ॥**

**ಯೋಗೀ ಸಮಾಧ್ಯವಸ್ಥಾಯಾಂ ನ ಶೃಣೋತಿ ನ ಪಶ್ಯತಿ ।**
**ನ ಜಿಘ್ರತಿ ನ ಸ್ಪೃಶತಿ ನ ಕಿಂಚಿದ್ವಕ್ತಿ ಸತ್ತಮ　　॥ ೧೪೪ ॥**

---

ಚಿತ್ತದಿಂದ ಧ್ಯಾನಿಸಿದರೆ ಅದರಿಂದ ಶ್ರೀಹರಿಯು ಸಂತುಷ್ಟನಾಗಿ ಮೋಕ್ಷವನ್ನು ಕೊಡುತ್ತಾನೆ.

೧೪೧. ಸಾಧೂತ್ತಮನೇ! ಧ್ಯಾನವ್ಯಾಪಾರ, ಧ್ಯೇಯ, ಧ್ಯಾತೃತ್ವ ಇವುಗಳಲ್ಲಿ ಭರವಿಲ್ಲದೇ ಹೋಗುವಂತೆ ಚಾಂಚಲ್ಯವನ್ನು ಬಿಟ್ಟು ಧ್ಯೇಯವಸ್ತುವಿನಲ್ಲಿ ಮಾತ್ರ ಮನಸ್ಸನ್ನು ಸ್ಥಿರವಾಗಿ ನಿಲ್ಲಿಸಬೇಕು.

೧೪೨. ಅದರಿಂದ ಜ್ಞಾನವೆಂಬ ಅಮೃತವು ಲಬ್ಧವಾಗಿ ಅದರ ಸೇವನೆಯಿಂದ ಮೋಕ್ಷವುಂಟಾಗುವುದು. ನಿರಂತರವಾಗಿ ಧ್ಯಾನಮಾಡುವುದರಿಂದ ಚಿದಾನಂದಾದ್ಯಾತ್ಮಕತ್ವವು ವ್ಯಕ್ತವಾಗುತ್ತದೆ.

೧೪೩. ಸುಷುಪ್ತಿಯೋಪಾದಿಯಲ್ಲಿ ಯಾವ ಬಾಹ್ಯೇಂದ್ರಿಯವ್ಯಾಪಾರವೂ ಇಲ್ಲದೆ ಉತ್ಕೃಷ್ಟಾನಂದಯುಕ್ತನಾದವನು ಗಾಳಿಯಿಲ್ಲದಿರುವೆಡೆಯಲ್ಲಿ ದೀಪವು ಚಲಿಸದೆ ಸ್ಥಿರವಾಗಿರುವಂತೆ ಭಗವಂತನಲ್ಲಿ ಚಿತ್ತೈಕಾಗ್ರ್ಯವನ್ನು ಹೊಂದಿರುವುದಕ್ಕೆ ಸಮಾಧಿಯೆಂದು ಹೆಸರು.

೧೪೪. ಯೋಗಿಯು ಅಸಂಪ್ರಜ್ಞಾತಸಮಾಧಿಯ ಅವಸ್ಥೆಯಲ್ಲಿ ಬಾಹ್ಯಶಬ್ದಶ್ರವಣಮಾಡುವುದಿಲ್ಲ. ಕಣ್ತೆರೆದು ಬ್ಯಾಹ್ಯವಸ್ತುಗಳನ್ನು ನೋಡುವುದಿಲ್ಲ. ಗಂಧವನ್ನು ಗ್ರಹಿಸುವುದಿಲ್ಲ. ಯಾವ ಬಾಹ್ಯವಸ್ತುವನ್ನೂ ಸ್ಪರ್ಶಮಾಡುವುದಿಲ್ಲ. ಯಾರೊಡನೆಯೂ ಮಾತನಾಡುವುದಿಲ್ಲ.

ಆತ್ಮಾ ತು ನಿರ್ಮಲಃ ಶುದ್ಧಃ ಸಚ್ಚಿದಾನಂದವಿಗ್ರಹಃ ।
ಸರ್ವೋಪಾಧಿವಿನಿರ್ಮುಕ್ತೋ ಯೋಗಿನಾಂ ಭಾತ್ಯಚಂಚಲಃ ॥ ೧೪೫ ॥

ನಿರ್ಗುಣೋಽಪಿ ಪರೋ ದೇವೋ ಹ್ಯಜ್ಞಾನಾದ್ಗುಣವಾನಿವ ।
ವಿಭಾತ್ಯಜ್ಞಾನನಾಶೇ ತು ಯಥಾಪೂರ್ವಂ ವ್ಯವಸ್ಥಿತಂ ॥ ೧೪೬ ॥

ಪರಂ ಜ್ಯೋತಿರಮೇಯಾತ್ಮಾ ಮಾಯಾವಾನಿವ ಮಾಯಿನಾಂ ।
ತನ್ನಾಶೇ ನಿರ್ಮಲಂ ಬ್ರಹ್ಮ ಪ್ರಕಾಶಯತಿ ಪಂಡಿತ ॥ ೧೪೭ ॥

ಏಕಮೇವಾದ್ವಿತೀಯಂ ಚ ಪರಂಜ್ಯೋತಿರ್ನಿರಂಜನಂ ।
ಸರ್ವೇಷಾಮೇವ ಭೂತಾನಾಮಂತರ್ಯಾಮಿತಯಾ ಸ್ಥಿತಂ ॥ ೧೪೮ ॥

---

೧೪೫. ದೋಷರಹಿತನು, ಶುದ್ಧನು, ಸಚ್ಚಿದಾನಂದಾತ್ಮಕದೇಹವುಳ್ಳವನು, ಸಕಲೋಪಾಧಿವಿದೂರನು, ಚಾಂಚಲ್ಯರಹಿತನೂ ಆಗಿರುವ ಪರಮಾತ್ಮನು ಯೋಗಿಗಳಿಗೆ ಗೋಚರನಾಗುವನು.

೧೪೬. ಪ್ರಾಕೃತಗುಣರಹಿತನಾದಾಗ್ಯೂ ಪರದೇವನು ಅಜ್ಞಾನದಿಂದ ಗುಣವುಳ್ಳವನಂತೆ ತೋರುವನು. ಅಜ್ಞಾನವು ನಷ್ಟವಾದರೆ ಅನಾದಿಸಿದ್ಧವಾದ ನೈಜರೂಪವು ತೋರುತ್ತದೆ.

೧೪೭. ಜ್ಞಾನಿಯೇ! ಉತ್ಕೃಷ್ಟಪ್ರಕಾಶಸ್ವರೂಪನಾದ ಅಪರಿಚ್ಛಿನ್ನಾತ್ಮನು ಮಾಯಾಬದ್ಧರಿಗೆ (ಅಜ್ಞಾನಿಗಳಿಗೆ) ಮಾಯಿಯಂತೆ ತೋರುವನು. ಮಾಯೆಯು ನಷ್ಟವಾದರೆ ನಿರ್ದೋಷಬ್ರಹ್ಮನು ಪ್ರಕಾಶಿಸುವನು.

೧೪೮–೧೫೦. ಸ್ವೀಯಗುಣಕರ್ಮಾದಿಭೇದಹೀನನು, ಸಮಾನ ಅಥವಾ ಅಧಿಕವಾದ ದ್ವಿತೀಯ ವಸ್ತುರಹಿತನು, ಉತ್ಕೃಷ್ಟಜ್ಯೋತಿಸ್ವರೂಪನು, ನಿರ್ದೋಷನು, ಸಕಲಪ್ರಾಣಿಗಳಲ್ಲಿಯೂ ಅಂತರ್ಯಾಮಿಯಾಗಿರುವವನು ಅಣುಪದಾರ್ಥಗಳಲ್ಲಿ ಅದಕ್ಕಿಂತಲೂ ಅಣುವಾಗಿಯೂ ಮಹತ್ಪದಾರ್ಥಗಳಲ್ಲಿ ಅದಕ್ಕಿಂತಲೂಮಹತ್ತಾಗಿಯೂ ಇರುವವನು, ಅನಾದ್ಯಾತ್ಮನು, ಸಮಸ್ತ ಪ್ರಪಂಚಕ್ಕೆ ಕಾರಣನು, ಉತ್ತಮೋತ್ತಮನು, ಪರಮಪವಿತ್ರನೂ ಆದ ಯಾವ ಪರಮಾತ್ಮನನ್ನು ಜ್ಞಾನಿ

ಅಣೋರಣೀಯಾನ್ಮಹತೋ ಮಹೀಯಾನ್
ಸನಾತನಾತ್ಮಾಖಿಲವಿಶ್ವಹೇತುಃ ।
ಪಶ್ಯಂತಿ ಯದ್ಧ್ಯಾನವಿದಾಂ ವರಿಷ್ಠಾಃ
ಪರಾತ್ಪರಸ್ಮಾತ್ಪರಮಂ ಪವಿತ್ರಂ ॥ ೧೪೯ ॥

ಅಕಾರಾದಿಕ್ಷಕಾರಾಂತ ವರ್ಣಭೇದವ್ಯವಸ್ಥಿತಃ ।
ಪುರಾಣಪುರುಷೋಽನಾದಿಃ ಶಬ್ದಬ್ರಹ್ಮೇತಿ ಗೀಯತೇ ॥ ೧೫೦ ॥

ವಿಶುದ್ಧಮಕ್ಷರಂ ನಿತ್ಯಂ ಪೂರ್ಣಮಾಕಾಶಮಧ್ಯಗಂ ।
ಆನಂದಂ ನಿರ್ಮಲಂ ಶಾಂತಂ ಪರಂ ಬ್ರಹ್ಮೇತಿ ಗೀಯತೇ ॥ ೧೫೧ ॥

ಯೋಗಿನೋ ಹೃದಿ ಪಶ್ಯಂತಿ ಪರಾತ್ಮಾನಂ ಸನಾತನಂ ।
ಅವಿಕಾರಮಜಂ ಶುದ್ಧಂ ಪರಂಬ್ರಹ್ಮೇತಿ ಗೀಯತೇ ॥ ೧೫೨ ॥

ಧ್ಯಾನಮನ್ಯತ್ಪ್ರವಕ್ಷ್ಯಾಮಿ ಶೃಣುಷ್ವ ಮುನಿಸತ್ತಮ ।
ಸಂಸಾರತಾಪತಪ್ತಾನಾಂ ಸುಧಾವೃಷ್ಟಿಸಮಂ ನೃಣಾಂ ॥ ೧೫೩ ॥

---

ಶ್ರೇಷ್ಠರು ಸಾಕ್ಷಾತ್ಕರಿಸುವರೋ ಅಂತಹ, ಅಕಾರಾದಿಕ್ಷಕಾರಾಂತ ಐವತ್ತೆರಡು ವರ್ಣಗಳಿಂದಲೂ ಅಜಾದಿರೂಪಗಳಿಂದ ವಾಚ್ಯನಾಗಿ ವ್ಯವಸ್ಥಿತನಾಗಿರುವ, ಅನಾದಿಯಾದ ಪುರಾಣಪುರುಷನು ಶಬ್ದಬ್ರಹ್ಮನೆಂದು ಹೇಳಿಸಿಕೊಳ್ಳಲ್ಪಡುತ್ತಾನೆ.

೧೫೧. ವಿಶುದ್ಧನು, ನಾಶರಹಿತನು, ನಿತ್ಯನು, ಗುಣಪೂರ್ಣನು, ಹೃದಯಾಕಾಶಮಧ್ಯಸ್ಥನು, ಆನಂದಸ್ವರೂಪನು, ನಿರ್ದೋಷನು, ಶಾಂತನೂ ಆಗಿರುವ ಭಗವಂತನನ್ನು ಪರಬ್ರಹ್ಮನೆಂದು ಹೇಳುತ್ತಾರೆ.

೧೫೨. ಯೋಗೀಶ್ವರರು ತಮ್ಮ ಹೃದಯದಲ್ಲಿ ನೋಡುವ ಅನಾದಿಯು, ಉತ್ಕೃಷ್ಟಾತ್ಮನು, ನಿರ್ವಿಕಾರನು, ಉತ್ಪತ್ತಿರಹಿತನೂ ಆಗಿರುವ ನಿರ್ದೋಷಾತ್ಮನು ಪರಬ್ರಹ್ಮನೆಂದು ಉಕ್ತವಾಗಿದೆ.

೧೫೩. ಸಂಸಾರವೆಂಬ ತಾಪದಿಂದ ಬಳಲಿರುವ ಮನುಷ್ಯರಿಗೆ ಅಮೃತ ವೃಷ್ಟಿಸದೃಶವಾದ ಇನ್ನೊಂದು ಧ್ಯಾನವನ್ನು ಹೇಳುವೆನು. ಮುನಿವರ್ಯನೇ! ಕೇಳು.

ನಾರಾಯಣಂ ಪರಾನಂದಂ ಸ್ಮರೇತ್ಪ್ರಣವಸಂಸ್ಥಿತಂ ।
ನಾದರೂಪಮನೌಪಮ್ಯಮರ್ಧಮಾತ್ರೋಪರಿ ಸ್ಥಿತಂ ॥ ೧೫೪ ॥

ಅಕಾರಂ ಬ್ರಹ್ಮಣೋರೂಪಮುಕಾರಂ ವಿಷ್ಣುರೂಪವತ್ ।
ಮಕಾರಂ ರುದ್ರರೂಪಂ ಸ್ಯಾದರ್ಧಮಾತ್ರಂ ಪರಾತ್ಮಕಂ ॥ ೧೫೫ ॥

ಮಾತ್ರಾಸ್ತಿಸ್ರಸ್ಸಮಾಖ್ಯಾತಾ ಬ್ರಹ್ಮವಿಷ್ಣುಶಿವಾಧಿಪಾಃ ।
ತೇಷಾಂ ಸಮುಚ್ಚಯಂ ವಿಪ್ರ ಪರಬ್ರಹ್ಮಪ್ರಬೋಧಕಂ ॥ ೧೫೬ ॥

ವಾಚ್ಯಂ ತು ಪರಮಂ ಬ್ರಹ್ಮ ವಾಚಕಃ ಪ್ರಣವಃ ಸ್ಮೃತಃ ।
ವಾಚ್ಯವಾಚಕಸಂಬಂಧೋಹ್ಯುಪಚಾರಾತ್ತಯೋರ್ದ್ವಿಜ ॥ ೧೫೭ ॥

ಜಪಂತಃ ಪ್ರಣವಂ ನಿತ್ಯಂ ಮುಚ್ಯಂತೇ ಸರ್ವಪಾತಕೈಃ ।
ತದಭ್ಯಾಸೇನ ಸಂಯುಕ್ತಾಃ ಪರಂ ಮೋಕ್ಷಂ ಲಭಂತಿ ಚ ॥ ೧೫೮ ॥

---

೧೫೪. ಪ್ರಣವಪ್ರತಿಪಾದ್ಯನಾಗಿ ಪ್ರಣವದಲ್ಲಿರುವ, ಪ್ರಣವಾಂಶವಾದ ನಾದದಿಂದಲೂ ವಾಚ್ಯನು, ಅಸದೃಶನು, ಅರ್ಧಮಾತ್ರೆಗೂ ಮೇಲ್ಪಟ್ಟಿರುವವನೂ ಆಗಿರುವ ಉತ್ಕೃಷ್ಟಾನಂದ ಸ್ವರೂಪನಾದ ನಾರಾಯಣನನ್ನು ಧ್ಯಾನಿಸಬೇಕು.

೧೫೫. ಅಕಾರವು ಬ್ರಹ್ಮದೇವತಾಕವು, ಉಕಾರವು ವಿಷ್ಣುದೇವತಾಕವು ಮಕಾರವು ರುದ್ರದೇವತಾಕವು, ಅರ್ಧಮಾತ್ರವು ಪರದೇವತಾಕವೂ ಆಗಿದೆ.

೧೫೬. ಮಾತ್ರೆಗಳು ಬ್ರಹ್ಮ, ವಿಷ್ಣು, ಶಿವಸ್ವಾಮಿಕಗಳಾಗಿ ಮೂರು ಎಂದು ಉಕ್ತವಾಗಿವೆ. ಬ್ರಾಹ್ಮಣನೇ! ಅಂತಹ ಮೂರು ಮಾತ್ರೆಗಳೂ ಒಟ್ಟಾಗಿ ಪರಬ್ರಹ್ಮಬೋಧಕವು.

೧೫೭. ದ್ವಿಜನೇ! ಪರಬ್ರಹ್ಮನು ವಾಚ್ಯನು, ಪ್ರಣವಮಂತ್ರವು ವಾಚಕವು. ಅವುಗಳಿಗೆ ಉಪಚಾರದಿಂದ ವಾಚ್ಯವಾಚಕಭಾವ ಸಂಬಂಧವು ಸಂಭವಿಸುತ್ತದೆ.

೧೫೮. ಯಾವಾಗಲೂ ಪ್ರಣವಮಂತ್ರವನ್ನು ಜಪಿಸುವವರು ಸಕಲ ಪಾಪಗಳಿಂದಲೂ ಮುಕ್ತರಾಗುವರು. ಹಾಗೆಯೇ ಚಿರಕಾಲ ಪ್ರಣವಮಂತ್ರವನ್ನು ಜಪಿಸುವವರು ಉತ್ತಮ ಮೋಕ್ಷವನ್ನು ಹೊಂದುತ್ತಾರೆ.

**ಜಪಂಶ್ಚ ಪ್ರಣವಂ ಮಂತ್ರಂ ಬ್ರಹ್ಮವಿಷ್ಣುಶಿವಾತ್ಮಕಂ ।**
**ಕೋಟಿಸೂರ್ಯಸಮಂ ತೇಜೋ ಧ್ಯಾಯೇದಾತ್ಮನಿ ನಿರ್ಮಲಂ ॥ ೧೫೯ ॥**

**ಸಾಲಗ್ರಾಮಶಿಲಾರೂಪಂ ಪ್ರತಿಮಾರೂಪಮೇವ ವಾ ।**
**ಯದ್ಯತ್ಪಾಪಹರಂ ವಸ್ತು ತತ್ತದ್ಧ್ಯಾ ಚಿಂತಯೇದ್ಧೃದಿ ॥ ೧೬೦ ॥**

**ಯದೇತದ್ವೈಷ್ಣವಂ ಜ್ಞಾನಂ ಕಥಿತಂ ತೇ ಮುನೀಶ್ವರ ।**
**ಏತದ್ವಿದಿತ್ವಾ ಯೋಗೀಂದ್ರೋ ಲಭತೇ ಮೋಕ್ಷಮುತ್ತಮಂ ॥ ೧೬೧ ॥**

**ಯಸ್ತ್ವೇತಚ್ಛೃಣುಯಾದ್ವಾಽಪಿ ಪಠೇದ್ವಾಽಪಿ ಸಮಾಹಿತಃ ।**
**ಸ ಸರ್ವಪಾಪನಿರ್ಮುಕ್ತೋ ಹರಿಸಾಲೋಕ್ಯಮಾಪ್ನುಯಾತ್ ॥ ೧೬೨ ॥**

**ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ ಪ್ರಥಮಪಾದೇ**
**ಯೋಗನಿರೂಪಣಂ ನಾಮ ತ್ರಯಸ್ತ್ರಿಂಶೋಽಧ್ಯಾಯಃ**

---

೧೫೯. ಬ್ರಹ್ಮ, ವಿಷ್ಣು, ಶಿವದೇವತಾಕವಾದ ಪ್ರಣವ ಮಂತ್ರವನ್ನು ಜಪಿಸುತ್ತಾ ಪರಿಶುದ್ಧನಾದ ಕೋಟಿಸೂರ್ಯಸದೃಶತೇಜಸ್ಸುಳ್ಳ ಪರಬ್ರಹ್ಮನನ್ನು ಮನಸ್ಸಿನಲ್ಲಿ ಧ್ಯಾನಿಸಬೇಕು.

೧೬೦. ಸಾಲಗ್ರಾಮ ಶಿಲಾರೂಪ ಅಥವಾ ವಿಗ್ರಹರೂಪವಾದ ಪಾಪಪರಿಹಾರಕ ವಸ್ತುವನ್ನೆಲ್ಲಾ ಮನಸ್ಸಿನಲ್ಲಿ ಚಿಂತಿಸಬೇಕು.

೧೬೧. ಮುನೀಶ್ವರನೇ! ಉಕ್ತವಾದ ವಿಷ್ಣುಮಾಹಾತ್ಮ್ಯಜ್ಞಾನವನ್ನು ನಿನಗೆ ಉಪದೇಶಿಸಿದ್ದೇನೆ. ಇದನ್ನು ತಿಳಿದರೆ ಯೋಗಿಶ್ರೇಷ್ಠನು ಉತ್ತಮ ಮೋಕ್ಷವನ್ನು ಹೊಂದುವನು.

೧೬೨. ಈ ಯೋಗಾಧ್ಯಾಯವನ್ನು ಸಮಾಧಾನಚಿತ್ತದಿಂದ ಶ್ರವಣ ಪಠನ ಮಾಡುವವನು ಸಕಲ ಪಾಪಗಳನ್ನೂ ಪರಿಹರಿಸಿಕೊಂಡು ಹರಿಸಾಲೋಕ್ಯಮುಕ್ತಿಯನ್ನು ಹೊಂದುವನು.

ಇಂತು ಶ್ರೀಬೃಹನ್ನಾರದೀಯಪುರಾಣದೊಳು ಪೂರ್ವಭಾಗ ಪ್ರಥಮಪಾದದಲ್ಲಿ ಯೋಗನಿರೂಪಣವೆಂಬ ಮೂವತ್ತಮೂರನೆಯ ಅಧ್ಯಾಯವು ಮುಗಿದುದು.

## ಕಥಾಸಾರಾಂಶ.

ಸಂಸಾರಬಂಧದಲ್ಲಿ ಸಿಲುಕಿ ಪ್ರತಿಕ್ಷಣದಲ್ಲಿಯೂ ಕರ್ಮಗಳನ್ನು ಮಾಡಿ ಪುಣ್ಯಪಾಪಗಳನ್ನು ಗಳಿಸುತ್ತಿರುವ ಮಾನವರು ಮುಕ್ತರಾಗುವ ಬಗೆ ಹೇಗೆ? ಮುಂತಾದ ನಾರದರ ಪ್ರಶ್ನೆಗೆ ವಿಸ್ತಾರವಾಗಿ ಉತ್ತರವು ಈ ಅಧ್ಯಾಯದಲ್ಲಿ ಉಕ್ತವಾಗಿದೆ. ನಾರಾಯಣನೇ ಮೋಕ್ಷಪ್ರದನು. ಅವನ ಅಪರೋಕ್ಷಜ್ಞಾನವೇ ಸಾಧನವು. ಅದನ್ನು ಸಂಪಾದಿಸಲು ಶಮದಮಾದಿಗಳನ್ನು ಅನುಷ್ಠಾನಕ್ಕೆ ತಂದು ಭಕ್ತಿಯಿಂದ ಧ್ಯಾನವನ್ನು ಮಾಡಬೇಕೆಂದು ಹೇಳಿ, ಕರ್ಮಯೋಗ, ಜ್ಞಾನಯೋಗ ಮತ್ತು ಭಕ್ತಿಯೋಗ ಇವುಗಳು ವಿವರಿಸಲ್ಪಟ್ಟಿವೆ. ಪ್ರಣವ ಸ್ವರೂಪ, ಅದರ ಅರ್ಥ ಮಹಿಮಾತಿಶಯ ಮುಂತಾದ ಸಾಧನಗಳೆಲ್ಲವನ್ನೂ ವಿಸ್ತಾರವಾಗಿ ನಿರೂಪಿಸಿ ಈ ಅಧ್ಯಾಯದ ಶ್ರವಣಪಠನಗಳಿಗೆ ಫಲವನ್ನು ಹೇಳಿದೆ

---

# ಚತುಸ್ತ್ರಿಂಶೋಽಧ್ಯಾಯಃ

## ನಾರದ ಉವಾಚ

ಸಮಾಖ್ಯಾತಾನಿ ಸರ್ವಾಣಿ ಯೋಗಾಂಗಾನಿ ಮಹಾಮುನೇ ।
ಇದಾನೀಮಪಿ ಸರ್ವಜ್ಞ ಯತ್ಪೃಚ್ಛಾಮಿ ತದುಚ್ಯತಾಂ ॥ ೧ ॥

ಯೋಗೋ ಭಕ್ತಿಮತಾಮೇವ ಸಿದ್ಧ್ಯತೀತಿ ತ್ವಯೋದಿತಂ ।
ಯಸ್ಯ ತುಷ್ಯತಿ ಸರ್ವೇಶಸ್ತಸ್ಯ ಭಕ್ತಿಶ್ಚ ಶಾಶ್ವತೀ ॥ ೨ ॥

ಯಥಾ ತುಷ್ಯತಿ ಸರ್ವೇಶೋ ದೇವದೇವೋ ಜನಾರ್ದನಃ ।
ತನ್ಮಮಾಖ್ಯಾಹಿ ಸರ್ವಜ್ಞ ಮುನೇ ಕಾರುಣ್ಯವಾರಿಧೇ ॥ ೩ ॥

---

## ಮೂವತ್ತನಾಲ್ಕನೆಯ ಅಧ್ಯಾಯ.

೧. ನಾರದನು ಹೇಳಿದನು.—ಸರ್ವಜ್ಞನಾದ ಸನಕಮಹಾಮುನಿಯೇ! ಸಕಲ ಯೋಗಾಂಗಗಳನ್ನೂ ಉಪದೇಶಿಸಿರುವೆ. ಅಂತೆಯೇ ನಾನು ಈಗಲೂ ಕೇಳುವುದನ್ನು ಉಪದೇಶಿಸು.

೨. ಭಕ್ತಿಯುಳ್ಳವರಿಗೆ ಮಾತ್ರವೇ ಯೋಗವು ಸಿದ್ಧಿಸುತ್ತದೆಯೆಂದು ನಿಮ್ಮಿಂದ ಹೇಳಲ್ಪಟ್ಟಿತು. ಭಗವಂತನು ಯಾರ ವಿಷಯದಲ್ಲಿ ಪ್ರೀತನಾಗುವನೋ ಅಂತಹವನಿಗೆ ದೃಢವಾದ ಭಕ್ತಿಯು ಸಿದ್ಧಿಸುವುದು.

೩. ಆದಕಾರಣ ಸರ್ವಜ್ಞನು ದಯಾಸಮುದ್ರನೂ ಆದ ಸನಕ ಮುನಿಯೇ! ಸರ್ವೇಶ್ವರನು, ದೇವೋತ್ತಮನೂ ಆಗಿರುವ ಜನಾರ್ದನನು ಸಂತುಷ್ಟನಾಗುವ ವಿಧಾನವನ್ನು ನನಗೆ ಹೇಳು.

## ಸನಕ ಉವಾಚ

ನಾರಾಯಣಂ ಪರಂ ದೇವಂ ಸಚ್ಚಿದಾನಂದವಿಗ್ರಹಂ ।
ಭಜ ಸರ್ವಾತ್ಮನಾ ವಿಪ್ರ ಯದಿ ಮುಕ್ತಿಮಭೀಪ್ಸ್ಯಸಿ ॥ ೪ ॥

ರಿಪವಸ್ತಂ ನ ಹಿಂಸಂತಿ ನ ಬಾಧಂತೇ ಗ್ರಹಾಶ್ಚ ತಂ ।
ರಾಕ್ಷಸಾಶ್ಚ ನ ಖಾದಂತಿ ನರಂ ವಿಷ್ಣುಪರಾಯಣಂ ॥ ೫ ॥

ಭಕ್ತಿರ್ದೃಢಾ ಭವೇದ್ಯಸ್ಯ ದೇವದೇವೇ ಜನಾರ್ದನೇ ।
ಶ್ರೇಯಾಂಸಿ ತಸ್ಯ ಸಿಧ್ಯಂತಿ ಭಕ್ತಿಮಂತೋಽಧಿಕಾಸ್ತತಃ ॥ ೬ ॥

ಪಾದೌ ತೌ ಸಫಲೌ ಪುಂಸಾಂ ಯೌ ವಿಷ್ಣುಗೃಹಗಾಮಿನೌ ।
ತೌ ಕರೌ ಸಫಲೌ ಜ್ಞೇಯೌ ವಿಷ್ಣುಪೂಜಾಪರೌ ತು ಯೌ ॥ ೭ ॥

---

೪. ಸನಕನು ಹೇಳಿದನು.—ಬ್ರಾಹ್ಮಣನಾದ ನಾರದನೇ ? ನೀನು ಮುಕ್ತಿಯನ್ನು ಬಯಸುವುದಾದರೆ ಜ್ಞಾನಾನಂದಾತ್ಮಕ ಶರೀರವುಳ್ಳವನು, ಉತ್ತಮದೇವನೂ ಆಗಿರುವ ನಾರಾಯಣನನ್ನು ಸರ್ವಪ್ರಕಾರದಿಂದಲೂ ಭಜಿಸಬೇಕು.

೫. ವಿಷ್ಣುಭಕ್ತನಾದ ಮನುಷ್ಯನನ್ನು ಶತ್ರುಗಳು ಹಿಂಸಿಸುವುದುದಿಲ್ಲ. ಗ್ರಹಗಳೂ ಅವನನ್ನು ಪೀಡಿಸುವುದಿಲ್ಲ. ರಾಕ್ಷಸರೂ ಸಹ ಅವನನ್ನು ತಿನ್ನುವುದಿಲ್ಲ.

೬. ದೇವೋತ್ತಮನಾದ ಜನಾರ್ದನನಲ್ಲಿ ದೃಢವಾದ ಭಕ್ತಿಯನ್ನಿಟ್ಟಿರುವವನಿಗೆ ಶ್ರೇಯಸ್ಸುಗಳೆಲ್ಲವೂ ಸಿದ್ಧಿಸುತ್ತವೆ. ಆದುದರಿಂದ ಭಕ್ತಿಯುಳ್ಳವರು ಉತ್ತಮರು.

೭. ವಿಷ್ಣುದೇವಾಲಯಕ್ಕೆ ಹೋಗುವವರ ಪಾದಗಳು ಸಫಲಗಳು ಮತ್ತು ವಿಷ್ಣುಪೂಜೆಯಲ್ಲಿ ನಿರತವಾದ ಹಸ್ತಗಳೇ ಸಾರ್ಥಕಗಳು ಎಂಬುದಾಗಿ ತಿಳಿಯಬೇಕು.

ತೇ ನೇತ್ರೇ ಸಫಲೇ ಪುಂಸಾಂ ಪಶ್ಯತೋ ಯೇ ಜನಾರ್ದನಂ ।
ಸಾ ಜಿಹ್ವಾ ಪ್ರೋಚ್ಯತೇ ಸದ್ಭಿರ್ಹರಿನಾಮಪರಾ ತು ಯಾ ॥ ೮ ॥

ಸತ್ಯಂ ಸತ್ಯಂ ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ।
ವೇದಶಾಸ್ತ್ರಾತ್ಪರಂ ನಾಸ್ತಿ ನ ದೇವಃ ಕೇಶವಾತ್ಪರಃ ॥ ೯ ॥

ಸತ್ಯಂ ವಚ್ಮಿ ಹಿತಂ ವಚ್ಮಿ ಸಾರಂ ವಚ್ಮಿ ಪುನಃಪುನಃ ।
ಅಸಾರೇಽಸ್ಮಿಂಸ್ತು ಸಂಸಾರೇ ಸತ್ಯಂ ಹರಿಸಮರ್ಚನಂ ॥ ೧೦ ॥

ಸಂಸಾರಪಾಶಂ ಸುದೃಢಂ ಮಹಾಮೋಹಪ್ರದಾಯಕಂ ।
ಹರಿಭಕ್ತಿಕುಠಾರೇಣ ಛಿತ್ವಾಽತ್ಯಂತಸುಖೀ ಭವ ॥ ೧೧ ॥

---

೮. ಜನಾರ್ದನನನ್ನು ದರ್ಶನಮಾಡುವವರ ಕಣ್ಣುಗಳೇ ಸಫಲಗಳೆಂತಲೂ, ಹರಿನಾಮಸಂಕೀರ್ತನೆಮಾಡುತ್ತಿರುವ ಜಿಹ್ವೆಯೇ ಸಾರ್ಥಕವೆಂತಲೂ ಸಾಧುಗಳು ಹೇಳಿರುತ್ತಾರೆ.

೯. ವೇದಾದಿಗಳಿಗಿಂತ ಉತ್ತಮವಾದ ಶಾಸ್ತ್ರವಿಲ್ಲ. ಕೇಶವನಾಮನಾದ ವಿಷ್ಣುವಿಗಿಂತ ಉತ್ತಮದೇವತೆಯಿಲ್ಲ, ಇದೇ ತತ್ವಸಾರವು, ಸತ್ಯವು, ಸತ್ಯವು ಎಂದು ಬಾಹುಗಳನ್ನು ಎತ್ತಿ ಶಪಥಮಾಡಿ ಹೇಳಲ್ಪಟ್ಟಿದೆ.

೧೦. ಸತ್ಯವನ್ನು ಹೇಳುವೆನು, ಹಿತವನ್ನು ಹೇಳುವೆನು, ಸಾರವನ್ನು ಹೇಳುವೆನು ಎಂದು ಪ್ರತಿಜ್ಞೆಮಾಡಿ ಬಾರಿಬಾರಿಗೂ ಹೇಳಿರುವುದರಿಂದ ಅಸಾರವಾದ ಈ ಸಂಸಾರದಲ್ಲಿ ಭಕ್ತಿಪೂರ್ವಕವಾಗಿ ಮಾಡುವ ವಿಷ್ಣ್ವಾರಾಧನೆಯೇ ಸಾಧುವಾದುದು.

೧೧. ಮಹಾಮೋಹವನ್ನುಂಟುಮಾಡುತ್ತಿರುವ ಚೆನ್ನಾಗಿ ಬೇರೂರಿದ ಸಂಸಾರವೆಂಬ ಪಾಶವನ್ನು ಹರಿಭಕ್ತಿಯೆಂಬ ಕೊಡಲಿಯಿಂದ ಕತ್ತರಿಸಿ ಅತ್ಯಂತ ಸುಖವನ್ನು ಅನುಭವಿಸು.

ತನ್ಮನಃ ಸಂಯುತಂ ವಿಷ್ಣೌ ಸಾ ವಾಣೀ ಯತ್ಪರಾಯಣಾ ।
ತೇ ಶ್ರೋತ್ರೇ ತತ್ಕಥಾಸಾರಪೂರಿತೇ ಲೋಕವಂದಿತೇ ॥ ೧೨ ॥

ಆನಂದಮಕ್ಷರಂ ಶೂನ್ಯಮವಸ್ಥಾತ್ರಿತಯೈರಪಿ ।
ಆಕಾಶಮಧ್ಯಗಂ ದೇವಂ ಭಜ ನಾರದ ಸಂತತಂ ॥ ೧೩ ॥

ಸ್ಥಾನಂ ನಶಕ್ಯತೇ ಯಸ್ಯ ಸ್ವರೂಪಂ ವಾ ಕದಾಚನ ।
ನಿರ್ದೇಷ್ಟುಂ ಮುನಿಶಾರ್ದೂಲ ದ್ರಷ್ಟುಂ ವಾಪ್ಯಕೃತಾತ್ಮಭಿಃ ॥ ೧೪ ॥

ಸಮಸ್ತೈಃ ಕರಣೈರ್ಯುಕ್ತೋ ವರ್ತತೇಽಸೌ ಯದಾ ತದಾ ।
ಜಾಗ್ರದಿತ್ಯುಚ್ಯತೇ ಸದ್ಭಿರಂತರ್ಯಾಮೀ ಸನಾತನಃ ॥ ೧೫ ॥

---

೧೨. ವಿಷ್ಣುವಿನಲ್ಲಿ ಆಸಕ್ತವಾದುದು ಎಂದರೆ ವಿಷ್ಣುವನ್ನು ಧ್ಯಾನಿಸುವುದೇ ಮನಸ್ಸು, ವಿಷ್ಣುಮಹಿಮೆಯನ್ನು ಬೋಧಿಸುವ ನುಡಿಯೇ ವಾಕ್ಯವು, ಹರಿಕಥಾಸಾರವನ್ನು ಶ್ರವಣಮಾಡಿದ ಕಿವಿಗಳೇ ಶ್ರೋತ್ರವು, ಅವೇ ಲೋಕಮಾನ್ಯವಾಗುವುವು.

೧೩. ಆದುದರಿಂದ ನಾರದನೇ! ಆನಂದ ಸ್ವರೂಪನು, ನಾಶರಹಿತನು, ಜಾಗ್ರತ್, ಸ್ವಪ್ನ ಮತ್ತು ಸುಷುಪ್ತಿ ಎಂಬ ಮೂರು ಅವಸ್ಥೆಗಳಿಲ್ಲದವನು, ಹೃದಯಾಕಾಶಮಧ್ಯದಲ್ಲಿರುವವನೂ ಆದ ಹರಿಯನ್ನು ಯಾವಾಗಲೂ ಭಜಿಸು.

೧೪. ಮುನಿಶ್ರೇಷ್ಠನೇ! ಭಕ್ತಿಪೂರ್ವಕವಾಗಿ ಸಾಧನಗಳನ್ನನುಷ್ಠಾನಮಾಡದಿರುವವರಿಗೆ ಭಗವಂತನ ಸ್ಥಾನವನ್ನಾಗಲಿ, ಸ್ವರೂಪವನ್ನಾಗಲಿ ತಿಳಿಸಲು ಸಾಧ್ಯವಾಗುವುದಿಲ್ಲ. ಅಂತಹವರಿಗೆ ಅವನ ದರ್ಶನವೂ ಅಸಾಧ್ಯ.

೧೫. ಪುರಾಣಪುರುಷನು ಅಂತರ್ಯಾಮಿಯಾಗಿದ್ದು ಆಯಾಯಾ ಇಂದ್ರಿಯಗಳ ವ್ಯಾಪಾರವನ್ನು ಮಾಡಿಸುತ್ತಿರುವ ಅವಸ್ಥೆಯು ಜಾಗ್ರತ್ ಎಂಬುದಾಗಿ ಸಾಧುಗಳಿಂದ ಉಕ್ತವಾಗಿದೆ.

ಯದಾsಽಂತಃಕರಣೈರ್ಯುಕ್ತಃ ಸ್ವೇಚ್ಛಯಾ ವಿಹರತ್ಯಸೌ ।
ಸ್ವಪನ್ನಿತ್ಯುಚ್ಯತೇ ಹ್ಯಾತ್ಮಾ ಸ್ವಯಂ ಸ್ವಾಪವಿವರ್ಜಿತಃ ॥ ೧೬ ॥

ನ ಬಾಹ್ಯಕರಣೈರ್ಯುಕ್ತೋ ನ ಚಾಂತಃಕರಣೈಸ್ತಥಾ ।
ಸ್ವಸ್ವರೂಪೋ ಯದಾತ್ಮಾsಸೌ ಪುಣ್ಯಾಪುಣ್ಯವಿವರ್ಜಿತಃ ॥ ೧೭ ॥

ಸರ್ವೋಪಾಧಿವಿನಿರ್ಮುಕ್ತೋ ಹ್ಯಾನಂದೋ ನಿರ್ಗುಣೋ ವಿಭುಃ ।
ಪರಬ್ರಹ್ಮಮಯೋ ದೇವಃ ಸುಷುಪ್ತ ಇತಿ ಗೀಯತೇ ॥ ೧೮ ॥

ಭಾವನಾಮಯಮೇತದ್ವೈ ಜಗತ್ಸ್ಥಾವರಜಂಗಮಂ ।
ವಿದ್ಯುದ್ವಿಲೋಲಂ ವಿಪ್ರೇಂದ್ರ ಭಜ ತಸ್ಮಾಜ್ಜನಾರ್ದನಂ ॥ ೧೯ ॥

ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಾಪರಿಗ್ರಹೌ ।
ವರ್ತತೇ ಯಸ್ಯ ತಸ್ಯೈವ ತುಷ್ಯತೇ ಜಗತಾಂ ಪತಿಃ ॥ ೨೦ ॥

---

೧೬. ಈ ಪರಮಾತ್ಮನು ಸ್ವತಃ ನಿದ್ರೆಯಿಲ್ಲದವನಾಗಿ ಜೀವನ ಬಾಹ್ಯೇಂದ್ರಿಯ ವ್ಯಾಪಾರಗಳನ್ನು ನಿಲ್ಲಿಸಿ, ಮನಸ್ಸಿನ ವ್ಯಾಪಾರವನ್ನು ನಡೆಯಿಸುತ್ತಾ ಸ್ವೇಚ್ಛೆಯಾಗಿ ವಿಹರಿಸುವ ಅವಸ್ಥೆಗೆ ಸ್ವಪ್ನಾವಸ್ಥೆಯೆಂದು ಹೆಸರು.

೧೭-೧೮. ಬಾಹ್ಯ ಮತ್ತು ಅಂತರಿಂದ್ರಿಯಗಳ ವ್ಯಾಪಾರಗಳನ್ನು ನಿಲ್ಲಸಿ, ಪುಣ್ಯಾಪುಣ್ಯಕರ್ಮವಿವರ್ಜಿತನಾಗಿ, ನೈಜಸ್ವರೂಪವನ್ನು ಹೊಂದಿ ಸಕಲೋಪಾಧಿರಹಿತನು, ಆನಂದಸ್ವರೂಪನು, ಪ್ರಾಕೃತಗುಣಶೂನ್ಯನು, ಸಮರ್ಥನು ಪರಬ್ರಹ್ಮನಿಂದಾಲಿಂಗಿತನೂ ಆದ ಆತ್ಮನು ಸುಷುಪ್ತ ಎಂದರೆ ಗಾಢನಿದ್ರೆಯಲ್ಲಿರುವವನು ಎನಿಸುವನು.

೧೯. ಈ ಚರಾಚರಾತ್ಮಕವಾದ ಜಗತ್ತು ಭಾವನಾಮಯ, ಮಿಂಚಿನಂತೆ ಚಂಚಲ ಎಂದರೆ ಅಶಾಶ್ವತ. ಆದುದರಿಂದ ವಿಪ್ರವರ್ಯನೇ! ಜನಾರ್ದನನನ್ನು ಭಜಿಸು.

೨೦. ಜಗದೊಡೆಯನಾದ ನಾರಾಯಣನು ಅಹಿಂಸೆ, ಸತ್ಯವಚನ, ಅಸ್ತೇಯ, ಬ್ರಹ್ಮಚರ್ಯೆ, ಪ್ರತಿಗ್ರಹಮಾಡದಿರುವುದು ಇವುಗಳನ್ನನುಷ್ಠಾನ ಮಾಡುವವರಿಗೆ ಪ್ರಸನ್ನನಾಗುವನು.

**ಸರ್ವಭೂತದಯಾಯುಕ್ತೋ ವಿಪ್ರಪೂಜಾಪರಾಯಣಃ ।**
**ತಸ್ಯ ತುಷ್ಟೋ ಜಗನ್ನಾಥೋ ಮಧುಕೈಟಭಮರ್ದನಃ ॥ ೨೧ ॥**

**ಸತ್ಕಥಾಯಾಂ ಚ ರಮತೇ ಸತ್ಕಥಾಂ ಚ ಕರೋತಿ ಯಃ ।**
**ಸತ್ಸಂಗೋ ನಿರಹಂಕಾರಸ್ತಸ್ಯ ಪ್ರೀತೋ ರಮಾಪತಿಃ ॥ ೨೨ ॥**

**ನಾಮಸಂಕೀರ್ತನಂ ವಿಷ್ಣೋಃ ಕ್ಷುತ್ತೃಟ್ಪ್ರಸ್ಖಲಿತಾದಿಷು ।**
**ಕರೋತಿ ಸತತಂ ಯಸ್ತು ತಸ್ಯ ಪ್ರೀತೋ ಹ್ಯಧೋಕ್ಷಜಃ ॥ ೨೩ ॥**

**ಯಾ ತು ನಾರೀ ಪತಿಪ್ರಾಣಾ ಪತಿಪೂಜಾಪರಾಯಣಾ ।**
**ತಸ್ಯಾಸ್ತುಷ್ಟೋ ಜಗನ್ನಾಥೋ ದದಾತಿ ಸ್ವಪದಂ ಮುನೇ ॥ ೨೪ ॥**

**ಅಸೂಯಾರಹಿತಾ ಯೇ ತು ಹ್ಯಹಂಕಾರವಿವರ್ಜಿತಾಃ ।**
**ದೇವಪೂಜಾಪರಾಶ್ಚೈವ ತೇಷಾಂ ತುಷ್ಯತಿ ಕೇಶವಃ ॥ ೨೫ ॥**

---

೨೧. ಎಲ್ಲಾ ಪ್ರಾಣಿಗಳಲ್ಲಿಯೂ ದಯೆಯನ್ನು ಮಾಡುವವನು' ಬ್ರಾಹ್ಮಣ ಪೂಜೆಯಲ್ಲಿ ನಿರತನೂ ಆಗಿರುವವನಿಗೆ ಮಧು ಮತ್ತು ಕೈಟಭರನ್ನು ಸಂಹರಿಸಿದ ಜಗನ್ನಾಥನು ಪ್ರಸನ್ನನಾಗುವನು.

೨೨. ಸತ್ಕಥಾಶ್ರವಣದಲ್ಲಿ ಆಸಕ್ತನು, ಸತ್ಕಥೆಯನ್ನು ಹೇಳುವವನು, ಸಜ್ಜನಸಹವಾಸದಲ್ಲಿರುವವನು ಮತ್ತು ಅಹಂಕಾರವಿಲ್ಲದವನೂ ಆಗಿರುವವನಿಗೆ ರಮಾಪತಿಯಾದ ನಾರಾಯಣನು ಪ್ರಸನ್ನನಾಗುವನು.

೨೩. ಹಸಿವು, ಬಾಯಾರಿಕೆ, ತಪ್ಪುಮಾಡುವುದು ಮುಂತಾದ ಸಂದರ್ಭಗಳಲ್ಲಿ ವಿಷ್ಣುನಾಮಸಂಕೀರ್ತನೆ ಮಾಡುವವನಿಗೆ ಅಧೋಕ್ಷಜನು ಪ್ರಸನ್ನನಾಗುವನು.

೨೪. ಗಂಡನಲ್ಲಿಯೇ ಪ್ರಾಣವನ್ನಿಟ್ಟು, ಅವನ ಸತ್ಕಾರದಲ್ಲಿಯೇ ನಿರತಳಾದ ಹೆಂಗಸಿಗೆ ಜಗನ್ನಾಥನು ಸಂತುಷ್ಟನಾಗಿ ತನ್ನ ಸ್ಥಾನವನ್ನು ಕೊಡುವನು.

೨೫. ಹೊಟ್ಟೆಕಿಚ್ಚು, ಗರ್ವ ಇವುಗಳಿಲ್ಲದವರು ಮತ್ತು ದೇವರ ಪೂಜೆಯಲ್ಲಿ ಆಸಕ್ತರೂ ಆಗಿರುವವರಿಗೆ ಕೇಶವನು ಪ್ರಸನ್ನನಾಗುವನು.

ತಸ್ಮಾಚ್ಛೃಣುಷ್ವ ದೇವರ್ಷೇ ಭಜಸ್ವ ಸತತಂ ಹರಿಂ ।
ಮಾ ಕುರುಷ್ವ ಹ್ಯಹಂಕಾರಂ ವಿದ್ಯುಲ್ಲೋಲಶ್ರಿಯಾ ವೃಥಾ ॥ ೨೬ ॥

ಶರೀರಂ ಮೃತ್ಯುಸಂಯುಕ್ತಂ ಜೀವಿತಂ ಚಾತಿಚಂಚಲಂ ।
ರಾಜಾದಿಭಿರ್ಧನಂ ಬಾಧ್ಯಂ ಸಂಪದಃ ಕ್ಷಣಭಂಗುರಾಃ ॥ ೨೭ ॥

ಕಿಂ ನ ಪಶ್ಯಸಿ ದೇವರ್ಷೇ ಹ್ಯಾಯುಷೋಽರ್ಧಂ ತು ನಿದ್ರಯಾ ।
ಹೃತಂ ಚ ಭೋಜನಾದ್ಯೈಶ್ಚ ಕಿಯದಾಯುಃ ಸಮಾಹೃತಂ ॥ ೨೮ ॥

ಕಿಯದಾಯುರ್ಬಾಲಭಾವಾದ್ವೃದ್ಧಭಾವಾತ್ಕಿಯದ್ವೃಥಾ ।
ಕಿಯದ್ವಿಷಯಭೋಗೈಶ್ಚ ಕದಾ ಧರ್ಮಾನ್ಕರಿಷ್ಯತಿ ॥ ೨೯ ॥

ಬಾಲಭಾವೇ ಚ ವಾರ್ಧಿಕ್ಯೇ ನ ಘಟೇತಾಚ್ಯುತಾರ್ಚನಂ ।
ವಯಸ್ಯೇವ ತತೋ ಧರ್ಮಾನ್ಕುರು ತ್ವಮನಹಂಕೃತಃ ॥ ೩೦ ॥

---

೨೬. ಆದಕಾರಣ ನಾರದನೇ! ಹರಿಮಹಿಮೆಯನ್ನು ಶ್ರವಣಮಾಡು. ಯಾವಾಗಲೂ ಹರಿಭಜನೆಮಾಡು, ಮಿಂಚಿನಂತೆ ಚಂಚಲವಾದ ಸಂಪತ್ತಿನಿಂದ ವ್ಯರ್ಥವಾಗಿ ಗರ್ವಪಡಬೇಡ.

೨೭. ಈ ಶರೀರವು ಮೃತ್ಯುವಿನಿಂದ ಕೂಡಿದೆ. ಬದುಕು ಅತ್ಯಂತ ಚಂಚಲ ಎಂದರೆ ಅಶಾಶ್ವತ. ಹಣವು ಇತರರಿಂದ ಅಪಹರಿಸಲು ಯೋಗ್ಯವಾದುದು. ಹೀಗೆ ಸಂಪತ್ತುಗಳು ಕೇವಲ ಕ್ಷಣಿಕ ಎಂದರೆ ಶಾಶ್ವತವಲ್ಲ.

೨೮. ದೇವರ್ಷಿಯಾದ ನಾರದನೇ! ಆಯುಸ್ಸಿನ ಅರ್ಧಭಾಗವು ನಿದ್ರೆಯಲ್ಲಿ ಕಳೆಯುತ್ತದೆ. ಊಟ ಉಪಚಾರಗಳಿಂದ ಎಷ್ಟು ಆಯುಸ್ಸು ಕಳೆಯುತ್ತದೆ ಎಂಬುದನ್ನು ನೀನು ನೋಡುವುದಿಲ್ಲವೇ ಏನು?

೨೯. ಬಾಲ್ಯ, ಮುದಿತನ ಮತ್ತು ವಿಷಯ ಭೋಗ ಇವುಗಳಿಂದ ಎಷ್ಟು ಆಯುಸ್ಸು ಕಳೆಯುತ್ತದೆ ಎಂಬುದನ್ನು ಬಲ್ಲೆಯಾ? ಧರ್ಮವನ್ನಾಚರಿಸುವುದು ಯಾವಾಗ?

೩೦. ಬಾಲ್ಯ, ಮುಪ್ಪು, ಇವುಗಳಲ್ಲಿ ಹರಿಪೂಜೆಯನ್ನು ಮಾಡಲಾಗುವುದಿಲ್ಲ. ಆದುದರಿಂದ ಮಧ್ಯವಯಸ್ಸಿನಲ್ಲಿಯೇ ನೀನು ಗರ್ವವನ್ನು ಬಿಟ್ಟು ಹರಿಯನ್ನು ಭಜಿಸಿ ಧರ್ಮಶೀಲನಾಗು.

ಮಾ ವಿನಾಶಂ ವ್ರಜ ಮುನೇ ಮಗ್ನಃ ಸಂಸಾರಗಹ್ವರೇ ।
ವಪುರ್ವಿನಾಶನಿಲಯಮಾಪದಾಂ ಪರಮಂ ಪದಂ ॥ ೩೧ ॥

ಶರೀರಂ ಭೋಗನಿಲಯಂ ಮಲಾದ್ಯೈಃ ಪರಿದೂಷಿತಂ ।
ಕಿಮರ್ಥಂ ಶಾಶ್ವತಧಿಯಾ ಕುರ್ಯಾತ್ಪಾಪಂ ನರೋ ವೃಥಾ ॥ ೩೨ ॥

ಅಸಾರಭೂತೇ ಸಂಸಾರೇ ನಾನಾದುಃಖಸಮನ್ವಿತೇ ।
ವಿಶ್ವಾಸೋ ನಾತ್ರ ಕರ್ತವ್ಯೋ ನಿಶ್ಚಿತಂ ನಾಶಮೇಷ್ಯತಿ ॥ ೩೩ ॥

ತಸ್ಮಾಚ್ಛೃಣುಷ್ವ ವಿಪ್ರೇಂದ್ರ ಸತ್ಯಮೇತದ್ಬ್ರವೀಮ್ಯಹಂ ।
ದೇಹಯೋಗನಿವೃತ್ತ್ಯರ್ಥಂ ಸದ್ಯ ಏವ ಜನಾರ್ದನಂ ॥ ೩೪ ॥

ಮಾನಂ ತ್ಯಕ್ತ್ವಾ ತಥಾ ಲೋಭಂ ಕಾಮಕ್ರೋಧವಿವರ್ಜಿತಃ ।
ಭಜಸ್ವ ಸತತಂ ವಿಷ್ಣುಂ ಮಾನುಷ್ಯಮತಿದುರ್ಲಭಂ ॥ ೩೫ ॥

---

೩೧. ಮುನಿಯೇ! ಈ ಶರೀರವು ಖಂಡಿತವಾಗಿಯೂ ನಾಶವಾಗುವುದು. ಆಪತ್ತುಗಳಿಗೆ ಮುಖ್ಯಾಶ್ರಯವು. ಆದುದರಿಂದ ಗಹನವಾದ ಸಂಸಾರದಲ್ಲಿ ಮುಳುಗಿ ಜನ್ಮವನ್ನು ವ್ಯರ್ಥಮಾಡಿಕೊಳ್ಳಬೇಡ.

೩೨. ಶರೀರವು ಭೋಗಕ್ಕೆ ಆಧಾರವು, ಮಲಮೂತ್ರಾದಿಗಳಿಂದ ಕಲುಷಿತವಾಗಿದೆ, ಶಾಶ್ವತವಲ್ಲ. ಅದು ಶಾಶ್ವತವೆಂದು ಭ್ರಮಿಸಿ ಮನುಷ್ಯನು ಸುಮ್ಮನೆ ಪಾಪಮಾಡುವುದೇತಕ್ಕೆ ?

೩೩. ನಾನಾವಿಧ ದುಃಖಗಳಿಗೆಡೆಯಾದ, ಅಸಾರವಾದ ಈ ಸಂಸಾರದಲ್ಲಿ ಅಭಿಮಾನವಿಡಬಾರದು. ಖಂಡಿತವಾಗಿಯೂ ಇದು ನಾಶವಾಗುತ್ತದೆ.

೩೪–೩೫. ಆದಕಾರಣ ಬ್ರಾಹ್ಮಣವರ್ಯನೇ! ಕೇಳು; ನಿಜವಾದುದನ್ನು ಹೇಳುತ್ತೇನೆ. ಕೂಡಲೇ ಕಾಮಕ್ರೋಧಗಳನ್ನು ಬಿಟ್ಟು ಅಭಿಮಾನ, ಲೋಭ ಇವುಗಳನ್ನು ತ್ಯಜಿಸಿ ಇನ್ನು ಮುಂದೆ ಜನ್ಮಬರದಿರುವುದಕ್ಕಾಗಿ ಜನಾರ್ದನ ನಾಮಕನಾದ ವಿಷ್ಣುವನ್ನು ಸರ್ವದಾ ಭಜಿಸು. ಮನುಷ್ಯಜನ್ಮವು ಅತ್ಯಂತ ದುರ್ಲಭವು.

ಕೋಟಿಜನ್ಮಸಹಸ್ರೇಷು ಸ್ಥಾವರಾದಿಷು ಸತ್ತಮ ।
ಸಂಭ್ರಾಂತಸ್ಯ ತು ಮಾನುಷ್ಯಂ ಕಥಂಚಿತ್ಪರಿಲಭ್ಯತೇ ॥ ೩೬ ॥

ತತ್ರಾಪಿ ದೇವತಾಬುದ್ಧಿರ್ದಾನಬುದ್ಧಿಶ್ಚ ಸತ್ತಮ ।
ಭೋಗಬುದ್ಧಿಸ್ತಥಾ ನೃಣಾಂ ಜನ್ಮಾಂತರತಪಃಫಲಂ ॥ ೩೭ ॥

ಮಾನುಷ್ಯಂ ದುರ್ಲಭಂ ಪ್ರಾಪ್ಯ ಯೋ ಹರಿಂ ನಾರ್ಚಯೇತ್ಸಕೃತ್ ।
ಮೂರ್ಖಃ ಕೋಽಸ್ತಿ ಪರಸ್ತಸ್ಮಾಜ್ಜಡಬುದ್ಧಿರಚೇತನಃ ॥ ೩೮ ॥

ದುರ್ಲಭಂ ಪ್ರಾಪ್ಯ ಮಾನುಷ್ಯಂ ನಾರ್ಚಯಂತಿ ಚ ಯೇ ಹರಿಂ ।
ತೇಷಾಮತೀವ ಮೂರ್ಖಾಣಾಂ ವಿವೇಕಃ ಕುತ್ರ ತಿಷ್ಠತಿ ॥ ೩೯ ॥

ಆರಾಧಿತೋ ಜಗನ್ನಾಥೋ ದದಾತ್ಯಭಿಮತಂ ಫಲಂ ।
ಕಸ್ತಂ ನ ಪೂಜಯೇದ್ವಿಪ್ರ ಸಂಸಾರಾಗ್ನಿಪ್ರದೀಪಿತಃ ॥ ೪೦ ॥

---

೩೬. ಸಾಧೂತ್ತಮನೇ! ಸಾವಿರಾರು ಕೋಟಿ ಸಲ ಸ್ಥಾವರ (ವೃಕ್ಷಾದಿ) ಜನ್ಮಗಳು ಪ್ರಾಪ್ತವಾದಮೇಲೆ ಮನುಷ್ಯಜನ್ಮವು ಬಂದರೂ ಬರಬಹುದು.

೩೭. ಅದರಲ್ಲಿಯೂ ದೇವತಾರಾಧನೆ, ದಾನ ಭೋಗ ಇವುಗಳಲ್ಲಿ ಬುದ್ಧಿ ಹುಟ್ಟುವುದು ಜನ್ಮಾಂತರದಲ್ಲಿ ಮಾಡಿದ ತಪಸ್ಸಿನ ಫಲವು.

೩೮. ದುರ್ಲಭವಾದ ಮನುಷ್ಯಜನ್ಮವು ಬಂದಾಗ್ಯೂ ಒಂದಾವರ್ತಿಯಾದರೂ ಹರಿಯನ್ನು ಪೂಜಿಸದಿರುವವನಗಿಂತ ಬೇರೆ ಮೂರ್ಖನು, ಮಂದಬುದ್ಧಿಯು, ಜಡನೂ ಇಲ್ಲ.

೩೯. ದುರ್ಲಭವಾದ ಮನುಷ್ಯಜನ್ಮವನ್ನು ಹೊಂದಿಯೂ ಹರಿಪೂಜೆ ಮಾಡದಿರುವ ಅತ್ಯಂತ ಮೂರ್ಖರಿಗೆ ವಿವೇಕವೆಲ್ಲಿದೆ?

೪೦. ಜಗನ್ನಾಥನನ್ನು ಪೂಜಿಸಿದರೆ ಅವನು ಅಭಿಮತ ಫಲವನ್ನು ಕೊಡುವನು. ಬ್ರಾಹ್ಮಣನೇ! ಸಂಸಾರವೆಂಬ ಅಗ್ನಿಜ್ವಾಲೆಯಲ್ಲಿ ಸುಡಲ್ಪಟ್ಟ ಯಾವ ಮನುಷ್ಯನೂ ಅಂತಹ ವಿಷ್ಣುವನ್ನು ಪೂಜಿಸದೇ ಇರಲಾರನು.

**ಚಂಡಾಲೋಽಪಿ ಮುನಿಶ್ರೇಷ್ಠ ವಿಷ್ಣುಭಕ್ತೋ ದ್ವಿಜಾದಿಕಃ ।**
**ವಿಷ್ಣುಭಕ್ತಿವಿಹೀನಶ್ಚ ದ್ವಿಜೋಽಪಿ ಶ್ವಪಚಾಧಮಃ ॥ ೪೧ ॥**

**ತಸ್ಮಾತ್ಕಾಮಾದಿಕಂ ತ್ಯಕ್ತ್ವಾ ಭಜೇತ ಹರಿಮವ್ಯಯಂ ।**
**ಯಸ್ಮಿಂಸ್ತುಷ್ಟೇಽಖಿಲಂ ತುಷ್ಯೇದ್ಯತಃ ಸರ್ವಗತೋ ಹರಿಃ ॥ ೪೨ ॥**

**ಯಥಾ ಹಸ್ತಿಪದೇ ಸರ್ವಂ ಪದಮಾತ್ರಂ ಪ್ರಲೀಯತೇ ।**
**ತಥಾ ಚರಾಚರಂ ವಿಶ್ವಂ ವಿಷ್ಣಾವೇವ ಪ್ರಲೀಯತೇ ॥ ೪೩ ॥**

**ಆಕಾಶೇನ ಯಥಾ ವ್ಯಾಪ್ತಂ ಜಗತ್ಸ್ಥಾವರಜಂಗಮಂ ।**
**ತಥೈವ ಹರಿಣಾ ವ್ಯಾಪ್ತಂ ವಿಶ್ವಮೇತಚ್ಚರಾಚರಂ ॥ ೪೪ ॥**

**ಜನ್ಮನೇ ಮರಣಂ ನೄಣಾಂ ಜನ್ಮ ವೈ ಮೃತ್ಯುಸಾಧನಂ ।**
**ಉಭೇ ತೇ ನಿಕಟೇ ವಿದ್ಧಿ ತನ್ನಾಶೋ ಹರಿಸೇವಯಾ ॥ ೪೫ ॥**

---

೪೧. ಮುನಿವರ್ಯನೇ! ವಿಷ್ಣುಭಕ್ತನಾದ ಚಂಡಾಲನೂ ಸಹ ದ್ವಿಜರಿಗಿಂತಲೂ ಅಧಿಕನು. ದ್ವಿಜನಾದರೂ ವಿಷ್ಣುಭಕ್ತಿಯಿಲ್ಲದಿದ್ದರೆ ಅವನು ಶ್ವಪಚನಗಿಂತಲೂ ಕೀಳು.

೪೨. ಹರಿಯು ಸರ್ವಗತನಾದುದರಿಂದ ಅವನು ಸಂತುಷ್ಟನಾದರೆ ಸಕಲರೂ ಸಂತುಷ್ಟರಾದಂತೆಯೇ ಸರಿ. ಆದುದರಿಂದ ಕಾಮಾದಿಗಳನ್ನು ಬಿಟ್ಟು ನಾಶರಹಿತನಾದ ಹರಿಯನ್ನು ಭಜಿಸಬೇಕು.

೪೩. ಎಲ್ಲಾ ಮೃಗಗಳ ಪಾದವೂ ಆನೆಯ ಪಾದದಲ್ಲಿ ಅಡಗುವಂತೆ ಚರಾಚರಾತ್ಮಕ ಪ್ರಪಂಚವೆಲ್ಲವೂ ಲೀನವಾಗಿ ವಿಷ್ಣುವಿನಲ್ಲಿಯೇ ಅಡಗುತ್ತದೆ.

೪೪. ಚರಾಚರಾತ್ಮಕವಾದ ಈ ಪ್ರಪಂಚವು ಆಕಾಶದಿಂದ ವ್ಯಾಪಿಸಲ್ಪಟ್ಟಿರುವಂತೆ ಹರಿಯಿಂದಲೂ ವ್ಯಾಪಿಸಲ್ಪಟ್ಟಿದೆ.

೪೫. ಹುಟ್ಟುವುದಕ್ಕಾಗಿಯೇ ಮನುಷ್ಯರು ಸಾಯುವುದು. ಹುಟ್ಟುವುದೂ ಸಹಾ ಸಾಯುವುದಕ್ಕೇ ಸಾಧನವು. ಜನನ ಮರಣಗಳೆರಡೂ ನಿಕಟ ಸಂಬಂಧವುಳ್ಳವು. ಅವುಗಳ ನಾಶವು ಹರಿಸೇವೆಯಿಂದ ಲಭಿಸುತ್ತದೆಂದು ತಿಳಿ.

ಧ್ಯಾತಃ ಸ್ಮೃತಃ ಪೂಜಿತೋ ವಾ ಪ್ರಣತೋ ವಾ ಜನಾರ್ದನಃ ।
ಸಂಸಾರಪಾಶವಿಚ್ಛೇದೀ ಕಸ್ತನ್ನ ಪ್ರತಿಪೂಜಯೇತ್ ॥ ೪೬ ॥

ಯನ್ನಾಮೋಚ್ಚಾರಣಾದೇವ ಮಹಾಪಾತಕನಾಶನಂ ।
ಯಂ ಸಮಭ್ಯರ್ಚ್ಯ ವಿಪ್ರರ್ಷೇ ಮೋಕ್ಷಭಾಗೀ ಭವೇನ್ನರಃ ॥ ೪೭ ॥

ಅಹೋ ಚಿತ್ರಮಹೋ ಚಿತ್ರಮಹೋ ಚಿತ್ರಮಿದಂ ದ್ವಿಜ ।
ಹರಿನಾಮ್ನಿ ಸ್ಥಿತೇ ಲೋಕೇ ಸಂಸಾರೇ ಪರಿವರ್ತತೇ ॥ ೪೮ ॥

ಭೂಯೋ ಭೂಯೋಽಪಿ ವಕ್ಷ್ಯಾಮಿ ಸತ್ಯಮೇತತ್ತಪೋಧನ ।
ನೀಯಮಾನೋ ಯಮಭಟೈರಶಕ್ತೋ ಧರ್ಮಸಾಧನೇ ॥ ೪೯ ॥

ಯಾವನ್ನೇಂದ್ರಿಯವೈಕಲ್ಯಂ ಯಾವದ್ವ್ಯಾಧಿರ್ನ ಬಾಧತೇ ।
ತಾವದೇವಾರ್ಚಯೇದ್ವಿಷ್ಣುಂ ಯದಿ ಮುಕ್ತಿಮಭೀಪ್ಸತಿ ॥ ೫೦ ॥

---

೪೬. ಧ್ಯಾನ, ಸ್ಮರಣೆ, ಪೂಜೆ, ನಮಸ್ಕಾರ ಇವುಗಳಿಂದಾರಾಧಿಸಲ್ಪಟ್ಟ ಜನಾರ್ದನನು ಸಂಸಾರವೆಂಬ ಪಾಶವನ್ನು ಕತ್ತರಿಸುವನು. ಹೀಗಿರುವಾಗ ಯಾರುತಾನೇ ಅವನನ್ನು ಪೂಜಿಸಲಾರರು ?

೪೭–೪೮. ಬ್ರಹ್ಮರ್ಷಿಯೇ ! ಯಾರ ನಾಮೋಚ್ಚಾರಣದಿಂದ ಮಹಾಪಾತಕಗಳು ನಶಿಸಿಹೋಗುತ್ತವೆಯೋ, ಮನುಷ್ಯನು ಯಾರನ್ನು ಪೂಜಿಸಿ ಮೋಕ್ಷವನ್ನು ಹೊಂದುವನೋ ಅಂತಹ ಹರಿಯ ನಾಮವಿರುವಾಗ ಅದರ ಸ್ಮರಣಾದಿಗಳನ್ನು ಮಾಡದೇ ಈ ಸಂಸಾರದಲ್ಲಿ ಸಿಲುಕಿ ನರಳುತ್ತಿರುವುದು ಆಶ್ಚರ್ಯ ! ಆಶ್ಚರ್ಯ ! ಅತ್ಯಾಶ್ಚರ್ಯ !

೪೯. ತಪೋಧನನೇ ! ಧರ್ಮವನ್ನು ಸಾಧಿಸದೇ ಅಶಕ್ತನಾಗಿರುವವನು ಯಮದೂತರಿಂದ ಒಯ್ಯಲ್ಪಡುವನು. ಪುನಃಪುನಃ ಹೇಳುವೆನು. ಇದು ಸತ್ಯ.

೫೦. ಮುಕ್ತಿಯನ್ನಿಚ್ಛಿಸುವವನು ಇಂದ್ರಿಯಶಕ್ತಿಯು ಹೋಗುವವರೆಗೂ ಮತ್ತು ರೋಗಬಾಧೆಯುಂಟಾಗುವವರೆಗೂ ವಿಷ್ಣುವನ್ನು ಪೂಜಿಸಬೇಕು.

ಮಾತುರ್ಗರ್ಭಾದ್ವಿನಿಷ್ಕ್ರಾಂತೋ ಯದಾ ಜಂತುಸ್ತದೈವ ಹಿ ।
ಮೃತ್ಯುಃ ಸನ್ನಿಹಿತೋ ಭೂಯಾತ್ತಸ್ಮಾದ್ಧರ್ಮಪರೋ ಭವೇತ್ ॥ ೫೧ ॥

ಅಹೋ ಕಷ್ಟಮಹೋ ಕಷ್ಟಮಹೋ ಕಷ್ಟಮಿದಂ ವಪುಃ ।
ವಿನಶ್ವರಂ ಸಮಾಜ್ಞಾಯ ಧರ್ಮಂ ನೈವಾಚರತ್ಯಯಂ ॥ ೫೨ ॥

ಸತ್ಯಂ ಸತ್ಯಂ ಪುನಸ್ಸತ್ಯಮುದ್ಧೃತ್ಯ ಭುಜಮುಚ್ಯತೇ ।
ದಂಭಾಚಾರಂ ಪರಿತ್ಯಜ್ಯ ವಾಸುದೇವಂ ಸಮರ್ಚಯೇತ್ ॥ ೫೩ ॥

ಭೂಯೋ ಭೂಯೋ ಹಿತಂ ವಚ್ಮಿ ಭುಜಮುದ್ಧೃತ್ಯ ನಾರದ ।
ವಿಷ್ಣುಃ ಸರ್ವಾತ್ಮನಾ ಪೂಜ್ಯಸ್ತ್ಯಾಜ್ಯಾಽಸೂಯಾ ತಥಾಽನೃತಂ ॥ ೫೪ ॥

ಕ್ರೋಧಮೂಲೋ ಮನಸ್ತಾಪಃ ಕ್ರೋಧಃ ಸಂಸಾರಬಂಧನಂ ।
ಧರ್ಮಕ್ಷಯಕರಃ ಕ್ರೋಧಸ್ತಸ್ಮಾತ್ತಂ ಪರಿವರ್ಜಯೇತ್ ॥ ೫೫ ॥

---

೫೧. ಪ್ರಾಣಿಯು ತಾಯಿಯ ಗರ್ಭದಿಂದ ಹೊರಬಿದ್ದಾಗಿನಿಂದಲೂ ಮೃತ್ಯುವು ಸಮೀಪದಲ್ಲಿಯೇ ಇರುತ್ತದೆ. ಆದುದರಿಂದ ಮನುಷ್ಯನು ಧರ್ಮಾನುಷ್ಠಾನಪರನಾಗಬೇಕು.

೫೨. ಈ ಶರೀರವು ನಶ್ವರವಾದುದೆಂದು ತಿಳಿದೂ ಮನುಷ್ಯನು ಧರ್ಮವನ್ನಾಚರಿಸುವುದಿಲ್ಲ. ಅಯ್ಯೋ ಪಾಪ! ಕಷ್ಟ ! ಕಷ್ಟ !

೫೩.. ನಿಜ! ನಿಜ ! ಕೈಯೆತ್ತಿ ಶಪಥಮಾಡಿ ಹೇಳುವೆನು. ನಿಜ, ಡಂಭಾಚಾರವನ್ನು ಬಿಟ್ಟು ಶ್ರೀ ಕೃಷ್ಣನನ್ನು ಪೂಜಿಸಬೇಕು.

೫೪. ನಾರದನೇ ! ಕೈ ಎತ್ತಿ ಪುನಃ ಪುನಃ ಹಿತವನ್ನು ಹೇಳುತ್ತೇನೆ. ಸರ್ವಪ್ರಕಾರದಿಂದಲೂ ವಿಷ್ಣುವು ಪೂಜ್ಯನು. ಅಸೂಯೆ ಮತ್ತು ಸುಳ್ಳು ಹೇಳುವುದನ್ನು ಬಿಡಬೇಕು.

೫೫. ಕ್ರೋಧದಿಂದ ಮನಸ್ಸಿಗೆ ತಾಪವುಂಟಾಗುವುದು. ಕ್ರೋಧವೇ ಸಂಸಾರಬಂಧನವನ್ನು ಕೊಡುತ್ತದೆ. ಕ್ರೋಧವು ಧರ್ಮನಾಶಮಾಡುತ್ತದೆ. ಆದುದರಿಂದ ಕೋಧವನ್ನು ಬಿಡಬೇಕು.

**ಕಾಮಮೂಲಮಿದಂ ಜನ್ಮ ಕಾಮಃ ಪಾಪಸ್ಯ ಕಾರಣಂ ।**
**ಯಶಃಕ್ಷಯಕರಃ ಕಾಮಸ್ತಸ್ಮಾತ್ತಂ ಪರಿವರ್ಜಯೇತ್ ॥ ೫೬ ॥**

**ಸಮಸ್ತದುಃಖಜಾಲಾನಾಂ ಮಾತ್ಸರ್ಯಂ ಕಾರಣಂ ಸ್ಮೃತಂ ।**
**ನರಕಾಣಾಂ ಸಾಧನಂ ಚ ತಸ್ಮಾತ್ತದಪಿ ಸಂತ್ಯಜೇತ್ ॥ ೫೭ ॥**

**ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ ।**
**ತಸ್ಮಾತ್ತದಭಿಸಂಯೋಜ್ಯ ಪರಾತ್ಮನಿ ಸುಖೀ ಭವೇತ್ ॥ ೫೮ ॥**

**ಅಹೋ ಧೈರ್ಯಮಹೋ ಧೈರ್ಯಮಹೋ ಧೈರ್ಯಮಹೋ ನೃಣಾಂ ।**
**ವಿಷ್ಣೌ ಸ್ಥಿತೇ ಜಗನ್ನಾಥೇ ನ ಭಜಂತೇ ಮದೋದ್ಧತಾಃ ॥ ೫೯ ॥**

**ಅನಾರಾಧ್ಯ ಜಗನ್ನಾಥಂ ಸರ್ವಧಾತಾರಮಚ್ಯುತಂ ।**
**ಸಂಸಾರಸಾಗರೇ ಮಗ್ನಾಃ ಕಥಂ ಪಾರಂ ಪ್ರಯಾಂತಿ ಹಿ ॥ ೬೦ ॥**

---

೫೬. ಜನ್ಮವು ಕಾಮಮೂಲಕವಾಗಿ ಬರುವುದು. ಕಾಮವೋ ಪಾಪ ಸಾಧನ ಮತ್ತು ಯಶಸ್ಸನ್ನು ಹಾಳುಮಾಡುವುದು. ಆದುದರಿಂದ ಅಂತಹ ದುಷ್ಟ ಕಾಮವನ್ನು ಬಿಡಬೇಕು.

೫೭. ಮಾತ್ಸರ್ಯವು ಸಕಲ ದುಃಖಸಮೂಹ ಮತ್ತು ನರಕ ಇವುಗಳಿಗೆ ಕಾರಣ. ಆದುದರಿಂದ ಅದನ್ನೂ ಬಿಡಬೇಕು.

೫೮. ಮನಸ್ಸೇ ಮನುಷ್ಯರ ಬಂಧಮೋಕ್ಷಗಳಿಗೆ ಕಾರಣ. ಆದುದರಿಂದ ಮನಸ್ಸನ್ನು ವಿಷಯಗಳಲ್ಲಿ ಬಿಡದೇ ಪರಮಾತ್ಮನಲ್ಲಿ ಸಂಯೋಜನೆ ಮಾಡಿ ಸುಖವನ್ನು ಪಡೆಯಬೇಕು.

೫೯. ಜಗದೊಡೆಯನಾದ ವಿಷ್ಣುವು ಇಷ್ಟಾರ್ಥವನ್ನು ಕೊಡಲು ಸನ್ನಿಹಿತನಾಗಿದ್ದಾಗ್ಯೂ ಮದೋನ್ಮತ್ತರಾಗಿ ಹರಿಯನ್ನು ಭಜಿಸುವುದಿಲ್ಲ. ಮನುಷ್ಯರ ಧೈರ್ಯವು ಅದ್ಭುತ! ಅದ್ಭುತ! ಆಶ್ಚರ್ಯ!

೬೦. ಸಂಸಾರವೆಂಬ ಮಹಾಸಮುದ್ರದಲ್ಲಿ ಮುಳುಗಿರುವ ಮನುಜರು ಜಗದೊಡೆಯನೂ, ಸರ್ವಸೃಷ್ಟಿಕರ್ತನೂ ಆಗಿರುವ ಅಚ್ಯುತನನ್ನು ಪೂಜಿಸದೇ ಹೇಗೆ ಪಾರಾಗುವರು ?

ಅಚ್ಯುತಾನಂತಗೋವಿಂದನಾಮೋಚ್ಚಾರಣಭೇಷಜಾತ್ ।
ನಶ್ಯಂತಿ ಸಕಲಾ ರೋಗಾಃ ಸತ್ಯಂ ಸತ್ಯಂ ವದಾಮ್ಯಹಂ ॥ ೬೧ ॥

ನಾರಾಯಣ ಜಗನ್ನಾಥ ವಾಸುದೇವ ಜನಾರ್ದನ ।
ಇತೀರಯಂತಿ ಯೇ ನಿತ್ಯಂ ತೇ ವೈ ಸರ್ವತ್ರ ವಂದಿತಾಃ ॥ ೬೨ ॥

ಅದ್ಯಾಪಿ ಚ ಮುನಿಶ್ರೇಷ್ಠ ಬ್ರಹ್ಮಾದ್ಯಾ ಅಪಿ ದೇವತಾಃ ।
ಯತ್ಪ್ರಭಾವಂ ನ ಜಾನಂತಿ ತಂ ಯಾಹಿ ಶರಣಂ ಮುನೇ ॥ ೬೩ ॥

ಅಹೋ ಮೌರ್ಖ್ಯಮಹೋ ಮೌರ್ಖ್ಯಮಹೋ ಮೌರ್ಖ್ಯಂ ದುರಾತ್ಮನಾಂ ।
ಹೃತ್ಪದ್ಮಸಂಸ್ಥಿತಂ ವಿಷ್ಣುಂ ನ ವಿಜಾನಂತಿ ನಾರದ ॥ ೬೪ ॥

ಶೃಣುಷ್ವ ಮುನಿಶಾರ್ದೂಲ ಭೂಯೋ ಭೂಯೋ ವದಾಮ್ಯಹಂ ।
ಹರಿಃ ಶ್ರದ್ಧಾವತಾಂ ತುಷ್ಯೇನ್ನ ಧನೈರ್ನ ಚ ಬಾಂಧವೈಃ ॥ ೬೫ ॥

---

೬೧. ಅಚ್ಯುತ, ಅನಂತ, ಗೋವಿಂದ ಮುಂತಾದ ಹರಿನಾಮಸಂಕೀರ್ತನವೆಂಬ ಔಷಧದಿಂದ ಸಕಲ ರೋಗಗಳೂ ನಾಶವಾಗುತ್ತವೆಂಬುದು ನಿಜ, ನಿಜ ಎಂದು ಶಪಥಮಾಡಿ ಹೇಳುವೆನು.

೬೨. ನಾರಾಯಣ, ಜಗನ್ನಾಥ, ವಾಸುದೇವ ಎಂಬುದಾಗಿ ಯಾವಾಗಲೂ ಕೀರ್ತನ ಮಾಡುವವರು ಎಲ್ಲಾ ಕಡೆಯಲ್ಲಿಯೂ ಪೂಜ್ಯರಾಗುವರು.

೬೩. ಮುನಿವರ್ಯನೇ! ಬ್ರಹ್ಮಾದಿ ದೇವತೆಗಳು ಈಗಲೂ ಸಹ ಯಾರ ಸಾಮರ್ಥ್ಯಾತಿಶಯವನ್ನು ತಿಳಿಯಲಾರರೋ ಅಂತಹ ಹರಿಯನ್ನು ಶರಣು ಹೊಂದು.

೬೪. ನಾರದನೇ! ದುರಾತ್ಮರು ಹೃದಯಕಮಲದಲ್ಲಿರುವ ವಿಷ್ಣುವನ್ನು ತಿಳಿಯುವುದಿಲ್ಲ. ಅವರ ಮೌಢ್ಯವನ್ನು ಎಷ್ಟೆಂದು ಹೇಳೋಣ? ಅಯ್ಯೋ! ಪಾಪ! ಮೂರ್ಖತನ, ಮೂರ್ಖತನ.

೬೫. ಮುನಿವರ್ಯನೇ! ಕೇಳು, ಪುನಃಪುನಃ ಹೇಳುವೆನು. ಹರಿಯು ಭಕ್ತಿಮಾಡುವವರಿಗೆ ಪ್ರಸನ್ನನಾಗುವನು ಹಣ, ಬಂಧುತ್ವ ಮುಂತಾದುವುಗಳಿಂದ ಪ್ರಸನ್ನನಾಗುವುದಿಲ್ಲ.

ಬಂಧುಮತ್ತ್ವಂ ಧನಾಢ್ಯತ್ವಂ ಪುತ್ರವತ್ತ್ವಂ ಚ ಸತ್ತಮ ।
ವಿಷ್ಣುಭಕ್ತಿಮತಾಂ ನೄಣಾಂ ಭವೇಜ್ಜನ್ಮನಿ ಜನ್ಮನಿ ॥ ೬೬ ॥

ಪಾಪಮೂಲಮಯಂ ದೇಹಃ ಪಾಪಕರ್ಮರತಸ್ತಥಾ ।
ಏತದ್ವಿದಿತ್ವಾ ಸತತಂ ಪೂಜನೀಯೋ ಜನಾರ್ದನಃ ॥ ೬೭ ॥

ಪುತ್ರಮಿತ್ರಕಲತ್ರಾದ್ಯಾ ಬಹವಸ್ಸ್ಯುಶ್ಚ ಸಂಪದಃ ।
ಹರಿಪೂಜಾರತಾನಾಂ ತು ಭವತ್ಯೇವ ನ ಸಂಶಯಃ ॥ ೬೮ ॥

ಇಹಾಮುತ್ರ ಸುಖಂ ಪ್ರೇಪ್ಸುಃ ಪೂಜಯೇತ್ಸತತಂ ಹರಿಂ ।
ಇಹಾಮುತ್ರಾಸುಖಂ ಪ್ರೇಪ್ಸುಃ ಪರನಿಂದಾಪರೋ ಭವೇತ್ ॥ ೬೯ ॥

ಧಿಗ್ಜನ್ಮ ಭಕ್ತಿಹೀನಾನಾಂ ದೇವದೇವೇ ಜನಾರ್ದನೇ ।
ಸತ್ಪಾತ್ರದಾನಶೂನ್ಯಂ ಯತ್ತದ್ಧನಂ ಧಿಕ್ಪುನಃಪುನಃ ॥ ೭೦ ॥

---

೬೬. ಸಾಧೂತ್ತಮನೇ! ವಿಷ್ಣುಭಕ್ತಿಯುಳ್ಳ ಜನರಿಗೆ ಜನ್ಮಜನ್ಮಗಳಲ್ಲಿಯೂ ಬಂಧುಗಳು, ಐಶ್ವರ್ಯ, ಪುತ್ರಸಂಪತ್ತು ಇವುಗಳೆಲ್ಲವೂ ಲಭಿಸುತ್ತವೆ.

೬೭. ಈ ಶರೀರವು ಪಾಪಮೂಲಕವು, ಪಾಪಕರ್ಮನಿರತವು. ಈ ತತ್ತ್ವವನ್ನು ತಿಳಿದು ಯಾವಾಗಲೂ ಜನಾರ್ದನನನ್ನು ಪೂಜಿಸಬೇಕು

೬೮. ಹರಿಪೂಜೆಯಲ್ಲಿ ನಿರತರಾದವರಿಗೆ ಮಕ್ಕಳು, ಸ್ನೇಹಿತರು, ಹೆಂಡತಿ, ಮುಂತಾದ ಬಹು ಸಂಪತ್ತುಗಳು ಖಂಡಿತವಾಗಿ ಲಭಿಸುತ್ತವೆ. ಸಂದೇಹವಿಲ್ಲ.

೬೯. ಈಲೋಕ ಪರಲೋಕಗಳಲ್ಲಿ ಸುಖವನ್ನು ಬಯಸುವವನು ಸರ್ವದಾ ಹರಿಪೂಜೆ ಮಾಡಬೇಕು. ಈಲೋಕ ಪರಲೋಕಗಳಲ್ಲಿ ದುಃಖವನ್ನಪೇಕ್ಷಿಸುವವನು ಪರದೂಷಣ ಕಾರ್ಯದಲ್ಲಿ ನಿರತನಾಗಬೇಕು.

೭೦. ದೇವೋತ್ತಮನಾದ ಜನಾರ್ದನನಲ್ಲಿ ಭಕ್ತಿಮಾಡದಿರುವವರ ಜನ್ಮವೇ ವ್ಯರ್ಥ. ಹಾಗೆಯೇ ಸತ್ಪಾತ್ರದಲ್ಲಿ ದಾನ ಕೊಡದೆ ಲೋಭದಿಂದ ಕೂಡಿಟ್ಟ ಹಣವು ನಿಷ್ಫಲ ಎಂದು ಒತ್ತಿ ಒತ್ತಿ ಹೇಳುತ್ತೇನೆ.

ನ ನಮೋದ್ವಿಷ್ಣವೇ ಯಸ್ಯ ಶರೀರಂ ಕರ್ಮಭೇದಿನೇ ।
ಪಾಪಾನಾಮಾಕರಂ ತದ್ವೈ ವಿಜ್ಞೇಯಂ ಮುನಿಸತ್ತಮ ॥ ೭೧ ॥

ಸತ್ಪಾತ್ರದಾನರಹಿತಂ ಯದ್ದ್ರವ್ಯಂ ಯೇನ ರಕ್ಷಿತಂ ।
ಚೌರ್ಯೇಣ ರಕ್ಷಿತಮಿವ ವಿದ್ಧಿ ಲೋಕೇಷು ನಿಶ್ಚಿತಂ ॥ ೭೨ ॥

ತಡಿಲ್ಲೋಲಶ್ರಿಯಾ ಮತ್ತಾಃ ಕ್ಷಣಭಂಗುರಶಾಲಿನಃ ।
ನಾರಾಧಯಂತಿ ವಿಶ್ವೇಶಂ ಪಶುಪಾಶವಿಮೋಚಕಂ ॥ ೭೩ ॥

ಸೃಷ್ಟಿಸ್ತು ದ್ವಿವಿಧಾ ಪ್ರೋಕ್ತಾ ದೈವಾಸುರವಿಭೇದತಃ ।
ಹರಿಭಕ್ತಿಯುತಾ ದೈವೀ ತದ್ಧೀನಾ ಹ್ಯಾಸುರೀ ಮತಾ ॥ ೭೪ ॥

ತಸ್ಮಾಚ್ಛೃಣುಷ್ವ ವಿಪ್ರೇಂದ್ರ ಹರಿಭಕ್ತಿಪರಾಯಣಾಃ ।
ಶ್ರೇಷ್ಠಾಃ ಸರ್ವತ್ರ ವಿಖ್ಯಾತಾ ಯತೋ ಭಕ್ತಿಃ ಸುದುರ್ಲಭಾ ॥ ೭೫ ॥

---

೭೧. ಮುನಿವರ್ಯನೇ ! ಪಾಪಪರಿಹಾರಕನಾದ ವಿಷ್ಣುವಿಗೆ ನಮಸ್ಕಾರ ಮಾಡದವನ ಶರೀರವು ಪಾಪಗಳಿಗೆ ಗಣಿಯೆಂದು ತಿಳಿಯಬೇಕು.

೭೨. ಸತ್ಪಾತ್ರದಲ್ಲಿ ದಾನಮಾಡದೇ ದ್ರವ್ಯವನ್ನು ಶೇಖರಿಸಿಡುವುದು ಈ ಲೋಕದಲ್ಲಿ ಕದ್ದ ದ್ರವ್ಯವನ್ನು ಕಾದಿಟ್ಟಂತೆಯೇ ಸರಿ, ಖಂಡಿತ.

೭೩. ನಶ್ವರವಾದ ಐಹಿಕ ಸುಖಗಳಿಗೆ ಮನಗೊಟ್ಟು ಮಿಂಚಿನಂತೆ ಚಂಚಲವಾದ ಐಶ್ವರ್ಯದಿಂದ ಕೊಬ್ಬಿದವರು ಪ್ರಾಣಿಗಳಿಗೆ ಬಂಧ ಪರಿಹಾರಕನಾದ ಜಗದೀಶ್ವರನನ್ನು ಪೂಜಿಸುವುದಿಲ್ಲ.

೭೪. ದೈವ, ಆಸುರ ಎಂಬದಾಗಿ ಸೃಷ್ಟಿಯು ಎರಡುವಿಧವಾಗಿ ಉಕ್ತವಾಗಿದೆ. ಹರಿಭಕ್ತಿಸಹಿತವಾದುದು ದೈವಸೃಷ್ಟಿಯು. ಹರಿಭಕ್ತಿಯಿಲ್ಲದಿರುವುದು ಆಸುರಸೃಷ್ಟಿಯು ಎಂದು ಪ್ರಾಜ್ಞಮತ.

೭೫. ವಿಪ್ರವರನೇ! ಹರಿಭಕ್ತಿಯು ಅತಿದುರ್ಲಭವಾದುದರಿಂದ ಅಂತಹ ಭಕ್ತಿಯುತರು ಉತ್ತಮರು. ಅವರು ಎಲ್ಲಾ ಕಡೆಯಲ್ಲಿಯೂ ಪ್ರಖ್ಯಾತರಾಗುವರು ಎಂದು ತಿಳಿ.

**ಅಸೂಯಾರಹಿತಾ ಯೇ ಚ ವಿಪ್ರತ್ರಾಣಪರಾಯಣಾಃ ।**
**ಕಾಮಾದಿರಹಿತಾ ಯೇ ಚ ತೇಷಾಂ ತುಷ್ಯತಿ ಕೇಶವಃ ॥ ೭೬ ॥**

**ಸಂಮಾರ್ಜನಾದಿನಾ ಯೇ ತು ವಿಷ್ಣುಶುಶ್ರೂಷಣೇ ರತಾಃ ।**
**ಸತ್ಪಾತ್ರದಾನನಿರತಾಃ ಪ್ರಯಾಂತಿ ಪರಮಂ ಪದಂ ॥ ೭೭ ॥**

**ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ ಪ್ರಥಮಪಾದೇ ಹರಿಭಕ್ತಿಲಕ್ಷಣಂ ನಾಮ ಚತುಸ್ತ್ರಿಂಶೋऽಧ್ಯಾಯಃ**

---

೭೬. ಹೊಟ್ಟೆಕಿಚ್ಚು, ನಿಷಿದ್ಧಕಾಮನೆಗಳು ಇವುಗಳಿಲ್ಲದೇ ಬ್ರಾಹ್ಮಣರ ರಕ್ಷಣಕಾರ್ಯದಲ್ಲಿ ನಿರತರಾದವರಿಗೆ ಕೇಶವನು ಪ್ರಸನ್ನನಾಗುವನು.

೭೭. ದೇವಾಲಯವನ್ನು ಸಾರಿಸುವುದೇ ಮುಂತಾದ ವಿಷ್ಣುಸೇವೆಯಲ್ಲಿ ನಿರತರಾಗಿ ಸತ್ಪಾತ್ರದಲ್ಲಿ ದಾನಮಾಡುವವರು ಪರಮಪದ ಎಂದರೆ ವೈಕುಂಠಾದಿ ಸ್ಥಾನವನ್ನು ಹೊಂದುವರು.

ಇಂತು ಶ್ರೀಬೃಹನ್ನಾರದೀಯಪುರಾಣದೊಳು ಪೂರ್ವಭಾಗ ಪ್ರಥಮಪಾದದಲ್ಲಿ ಹರಿಭಕ್ತಿಲಕ್ಷಣ ಕಥನವೆಂಬ ಮೂವತ್ತನಾಲ್ಕನೆಯ ಅಧ್ಯಾಯವು ಮುಗಿದುದು.

**ಕಥಾಸಾರಾಂಶ**

ಭಕ್ತಿಯ ನಾನಾಪ್ರಕಾರಗಳು, ಅದರ ಫಲ, ಭಕ್ತಿಮಾಡದಿದ್ದರೆ ಆಗುವ ದುಷ್ಪರಿಣಾಮ ಮುಂತಾದುವನ್ನು ಹೇಳಿ ವಿಷ್ಣುಭಕ್ತಿಯ ಪರಾಕಾಷ್ಠೆಯನ್ನು ವರ್ಣಿಸಿದೆ.

# ಪಂಚತ್ರಿಂಶೋಽಧ್ಯಾಯಃ

**ಸನಕ ಉವಾಚ**

**ಪುನರ್ವಕ್ಷ್ಯಾಮಿ ಮಾಹಾತ್ಮ್ಯಂ ದೇವದೇವಸ್ಯ ಚಕ್ರಿಣಃ ।**
**ಪಠತಾಂ ಶೃಣ್ವತಾಂ ಸದ್ಯಃ ಪಾಪರಾಶಿಃ ಪ್ರಣಶ್ಯತಿ** ॥ ೧ ॥

**ಶಾಂತಾ ಜಿತಾರಿಷಡ್ವರ್ಗಾ ಯೋಗೇನಾಪ್ಯನಹಂಕೃತಾಃ ।**
**ಯಜಂತಿ ಜ್ಞಾನಯೋಗೇನ ಜ್ಞಾನರೂಪಿಣಮವ್ಯಯಂ** ॥ ೨ ॥

**ತೀರ್ಥಸ್ನಾನೈರ್ವಿಶುದ್ಧಾ ಯೇ ವ್ರತದಾನತಪೋಮುಖ್ಯೈಃ ।**
**ಯಜಂತಿ ಕರ್ಮಯೋಗೇನ ಸರ್ವಧಾತಾರಮಚ್ಯುತಂ** ॥ ೩ ॥

---

## ಮೂವತ್ತೈದನೆಯ ಅಧ್ಯಾಯ

೧. ಸನಕನು ಹೇಳಿದನು:—ಚಕ್ರಾಯುಧಧಾರಿಯಾದ ದೇವೋತ್ತಮನ ಮಹಿಮೆಯನ್ನು ಪುನಃ ಹೇಳುತ್ತೇನೆ. ಅದನ್ನು ಶ್ರವಣ ಪಠನಮಾಡುವವರ ಪಾಪರಾಶಿಯು ತಕ್ಷಣವೇ ನಾಶವಾಗುತ್ತದೆ.

೨. ಶಾಂತರು, ಯೋಗಾಭ್ಯಾಸದಿಂದ ಕಾಮಕ್ರೋಧಾದಿಅರಿಷಡ್ವರ್ಗಗಳನ್ನು ಜಯಿಸಿರುವವರು, ಅಹಂಕಾರವಿಲ್ಲದವರೂ ಆದ ಮನುಷ್ಯರು ನಾಶರಹಿತನು, ಜ್ಞಾನಸ್ವರೂಪಿಯೂ ಆಗಿರುವ ಭಗವಂತನನ್ನು ಜ್ಞಾನವೆಂಬ ಸಾಧನದಿಂದ ಆರಾಧಿಸುತ್ತಾರೆ.

೩. ತೀರ್ಥಸ್ನಾನ, ವ್ರತ, ದಾನ, ತಪಸ್ಸು, ಮತ್ತು ಯಜ್ಞಗಳಿಂದ ಪರಿಶುದ್ಧಾಂತಃಕರಣರಾದವರು, ಸರ್ವಸೃಷ್ಟಿಕರ್ತೃವಾದ ಅಚ್ಯುತನನ್ನು ಕರ್ಮವೆಂಬ ಸಾಧನದಿಂದ ಆರಾಧಿಸುವರು.

ಲುಬ್ಧೋ ವ್ಯಸನಿನೋಽಜ್ಞಾಶ್ಚ ನ ಯಜಂತಿ ಜಗತ್ಪತಿಂ ।
ಅಜರಾಮರವನ್ಮೂಢಾಸ್ತಿಷ್ಠಂತಿ ನರಕೀಟಕಾಃ ॥ ೪ ॥

ತಡಿಲ್ಲೇಖಾಶ್ರಿಯಾ ಮತ್ತಾ ವೃಥಾಽಹಂಕಾರದೂಷಿತಾಃ ।
ನ ಯಜಂತಿ ಜಗನ್ನಾಥಂ ಸರ್ವಶ್ರೇಯೋವಿಧಾಯಕಂ ॥ ೫ ॥

ಹರಿಧರ್ಮರತಾಃ ಶಾಂತಾ ಹರಿಪಾದಾಬ್ಜಸೇವಕಾಃ ।
ದೈವಾತ್ಕೇಽಪೀಹ ಜಾಯಂತೇ ಲೋಕಾನುಗ್ರಹತತ್ಪರಾಃ ॥ ೬ ॥

ಕರ್ಮಣಾ ಮನಸಾ ವಾಚಾ ಯೋ ಯಜೇದ್ಭಕ್ತಿತೋ ಹರಿಂ ।
ಸ ಯಾತಿ ಪರಮಂ ಸ್ಥಾನಂ ಸರ್ವಲೋಕೋತ್ತಮೋತ್ತಮಂ ॥ ೭ ॥

ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಂ ।
ಪಠತಾಂ ಶೃಣ್ವತಾಂ ಚೈವ ಸರ್ವಪಾಪಪ್ರಣಾಶನಂ ॥ ೮ ॥

---

೪. ಲೋಭಿಗಳು, ದುಃಖಪಡುತ್ತಿರುವವರು ಮತ್ತು ಅಜ್ಞಾನಿಗಳು ಜಗನ್ನಾಥನನ್ನು ಪೂಜಿಸುವುದಿಲ್ಲ. ಮೂಢರಾದ ಮನುಷ್ಯರೆಂಬ ಆ ಕೀಟಗಳು ವಾರ್ಧಕ್ಯ ಮತ್ತು ಮರಣ ಇವುಗಳಿಲ್ಲದವರಂತೆ ಭಾವಿಸುವರು.

೫. ಅವರು ಮಿಂಚಿನ ರೇಖೆಯಂತಿರುವ ಸಂಪತ್ತಿನಿಂದ ಉನ್ಮತ್ತರಾಗಿ ಸುಮ್ಮನೆ ಅಹಂಕಾರದಿಂದ ಕಲುಷಿತರಾಗಿ ಸಕಲ ಶ್ರೇಯಸ್ಸನ್ನೂ ಕೊಡುವಂತಹ ಜಗನ್ನಾಥನನ್ನು ಪೂಜಿಸುವುದಿಲ್ಲ

೬. ವಿಷ್ಣುಧರ್ಮನಿರತರು, ಶಾಂತಿಗುಣೋಪೇತರು, ಹರಿಪಾದಕಮಲವನ್ನು ಸೇವಿಸಿರುವವರೂ ಆದ ಮಹನೀಯರು ಈ ಲೋಕದಲ್ಲಿರುವವರಿಗೆ ಅನುಗ್ರಹಮಾಡುವುದಕ್ಕಾಗಿಯೇ ದೈವಾನುಗ್ರಹದಿಂದ ಇಲ್ಲಿ ಜನಿಸಿರುವರು.

೭. ಸತ್ಕರ್ಮ, ಮನಸ್ಸು, ವಾಕ್ಕು ಇವುಗಳಿಂದ ಭಕ್ತಿಪೂರ್ವಕವಾಗಿ ಹರಿಯನ್ನು ಆರಾಧಿಸುವವನು ಸಕಲ ಲೋಕಗಳಿಗಿಂತಲೂ ಉತ್ತಮೋತ್ತಮವಾದ ವೈಕುಂಠಾದಿ ಸ್ಥಾನಕ್ಕೆ ಹೋಗುವನು.

೮. ಈ ವಿಷಯದಲ್ಲಿಯೇ ಮುಂದೆಹೇಳುವ, ಪುರಾತನೇತಿಹಾಸವನ್ನು ಹೇಳುತ್ತಾರೆ. ಅದನ್ನು ಶ್ರವಣ, ಪಠನಮಾಡುವವರಿಗೆ ಸಕಲಪಾಪಪರಿಹಾರವಾಗುತ್ತದೆ.

**ತತ್ಪ್ರವಕ್ಷ್ಯಾಮಿ ಚರಿತಂ ಯಜ್ಞಮಾಲಿಸುಮಾಲಿನೋಃ ।**
**ಯಸ್ಯ ಶ್ರವಣಮಾತ್ರೇಣ ವಾಜಿಮೇಧಫಲಂ ಲಭೇತ್ ॥ ೯ ॥**

**ಕಶ್ಚಿದಾಸೀತ್ಪುರಾ ವಿಪ್ರ ಬ್ರಾಹ್ಮಣೋ ರೈವತೇಂತರೇ ।**
**ವೇದಮಾಲಿರಿತಿ ಖ್ಯಾತೋ ವೇದವೇದಾಂಗಪಾರಗಃ ॥ ೧೦ ॥**

**ಸರ್ವಭೂತದಯಾಯುಕ್ತೋ ಹರಿಪೂಜಾಪರಾಯಣಃ ।**
**ಪುತ್ರಮಿತ್ರಕಲತ್ರಾರ್ಥಂ ಧನಾರ್ಜನಪರೋಽಭವತ್ ॥ ೧೧ ॥**

**ಅಪಣ್ಯವಿಕ್ರಯಂ ಚಕ್ರೇ ತಥಾ ಚ ರಸವಿಕ್ರಯಂ ।**
**ಚಂಡಾಲಾದ್ಯೈರಪಿ ತಥಾ ಸಂಭಾಷೀ ತತ್ಪ್ರತಿಗ್ರಹೀ ॥ ೧೨ ॥**

**ತಪಸಾಂ ವಿಕ್ರಯಂ ಚಕ್ರೇ ವ್ರತಾನಾಂ ವಿಕ್ರಯಂ ತಥಾ ।**
**ಪುತ್ರಾರ್ಥಂ ತೀರ್ಥಗಮನಂ ಕಲತ್ರಾರ್ಥಮಕಾರಯತ್ ॥ ೧೩ ॥**

---

೯. ಶ್ರವಣಮಾಡುವ ಮಾತ್ರದಿಂದ ಅಶ್ವಮೇಧಯಜ್ಞದ ಫಲವನ್ನು ಕೊಡುವಂತಹ, ಯಜ್ಞಮಾಲಿ ಮತ್ತು ಸುಮಾಲಿ ಎಂಬುವರ ಚರಿತ್ರೆಯನ್ನು ಹೇಳುತ್ತೇನೆ.

೧೦. ವಿಪ್ರನೇ! ಪೂರ್ವಕಾಲದಲ್ಲಿ ರೈವತಪರ್ವತದ ಪ್ರದೇಶದಲ್ಲಿ ವೇದವೇದಾಂಗಗಳಲ್ಲಿ ಪಾರಂಗತನಾದ ವೇದಮಾಲಿ ಎಂದು ಪ್ರಸಿದ್ಧನಾದ ಒಬ್ಬಾನೊಬ್ಬ ಬ್ರಾಹ್ಮಣನಿದ್ದನು.

೧೧. ಅವನು ಸಕಲಪ್ರಾಣಿಗಳಲ್ಲಿಯೂ ದಯೆಯುಳ್ಳವನು. ಮತ್ತು ಹರಿಪೂಜೆಯಲ್ಲಿ ಆಸಕ್ತನೂ ಆಗಿ ಮಕ್ಕಳು, ಸ್ನೇಹಿತರು, ಹೆಂಡತಿ ಇವರುಗಳಿಗಾಗಿ ಹಣಸಂಪಾದನೆ ಮಾಡುವುದರಲ್ಲಿ ನಿರತನಾದನು.

೧೨-೧೩. ನಿಷಿದ್ಧಪದಾರ್ಥ, ಹಾಗೆಯೇ ಘೃತ ತೈಲಾದಿ ರಸಪದಾರ್ಥ ಇವುಗಳನ್ನು ಮಾರುವುದು, ಚಂಡಾಲರು ಮುಂತಾದವರೊಡನೆ ಸಂಭಾಷಣೆ ಮಾಡುವುದು, ಅಂತಹವರಿಂದ ಪ್ರತಿಗ್ರಹಮಾಡುವುದು, ತಪೋವಿಕ್ರಯ ಮತ್ತು ವ್ರತವಿಕ್ರಯವನ್ನು ಮಾಡುವುದು ಮುಂತಾಗಿ ನಿಷಿದ್ಧಾಚರಣೆಮಾಡುತ್ತಾ

ಕಾಲೇನ ಗಚ್ಛತಾ ವಿಪ್ರ ಜಾತೌ ತಸ್ಯ ಸುತಾವುಭೌ ।
ಯಜ್ಞಮಾಲೀ ಸುಮಾಲೀ ಚ ಯಮಲಾವತಿಶೋಭನೌ ॥ ೧೪ ॥

ತತಃ ಪಿತಾ ಕುಮಾರೌ ತಾವತಿಸ್ನೇಹಸಮನ್ವಿತಃ ।
ಪೋಷಯಾಮಾಸ ವಾತ್ಸಲ್ಯಾದ್ಬಹುಭಿಃ ಸಾಧನೈಸ್ತದಾ ॥ ೧೫ ॥

ವೇದಮಾಲಿರ್ಬಹೂಪಾಯೈರ್ಧನಂ ಸಂಪಾದ್ಯ ಯತ್ನತಃ ।
ಸ್ವಧನಂ ಗಣಯಾಮಾಸ ಕಿಯತ್ಸ್ಯಾದಿತಿ ವೇದಿತುಂ ॥ ೧೬ ॥

ನಿಷ್ಕಕೋಟಿಸಹಸ್ರಾಣಾಂ ಕೋಟಿಕೋಟಿಗುಣಾನ್ವಿತಂ ।
ವಿಗಣಯ್ಯ ಸ್ವಯಂ ಹೃಷ್ಟೋ ವಿಸ್ಮಿತಶ್ಚಾರ್ಥಚಿಂತಯಾ ॥ ೧೭ ॥

ಅಸತ್ಪ್ರತಿಗ್ರಹೈಶ್ಚೈವಮಪಣ್ಯಾನಾಂ ಚ ವಿಕ್ರಯೈಃ ।
ಮಯಾ ತಪೋ ವಿಕ್ರಯಾದ್ಯೈರೇತದ್ಧನಮುಪಾರ್ಜಿತಂ ॥ ೧೮ ॥

---

ಹೆಂಡತಿಯ ಬಲವಂತದಿಂದ ಮಕ್ಕಳಾಗುವುದಕ್ಕಾಗಿ ತೀರ್ಥಯಾತ್ರೆಯನ್ನು ಮಾಡಿದನು.

೧೪. ಸ್ವಲ್ಪಕಾಲ ಕಳೆದನಂತರ ಆ ವೇದಮಾಲಿಗೆ ಸುಂದರರಾದ ಯಜ್ಞಮಾಲಿ, ಸುಮಾಲಿ ಎಂಬ ಅವಳಜವಳಿಮಕ್ಕಳು ಹುಟ್ಟಿದರು.

೧೫. ತರುವಾಯ ತಂದೆಯು ಬಹುಪ್ರೀತಿಯಿಂದ ಯುಕ್ತನಾಗಿ ಆ ಮಕ್ಕಳನ್ನು ನಾನಾವಿಧಪರಿಕರಗಳಿಂದ ವಿಶ್ವಾಸಪೂರ್ವಕವಾಗಿ ಪೋಷಿಸಿದನು.

೧೬. ವೇದಮಾಲಿಯು ನಾನಾವಿಧವಾದ ಉಪಾಯಗಳಿಂದ ಪ್ರಯಾಸ ಪಟ್ಟು ಹಣ ಸಂಪಾದಿಸಿ ತನ್ನ ಹಣವು ಎಷ್ಟಾಯಿತೆಂದು ತಿಳಿಯಲು ಅದನ್ನು ಎಣಿಸುತ್ತಿದ್ದನು.

೧೭. ಕೋಟ್ಯಂತರ ಸಾವಿರಾರು ಕೋಟಿ ನಿಷ್ಕಗಳನ್ನು ಸ್ವತಃ ಎಣಿಸಿ ಸಂತೋಷಪಡುತ್ತಾ ಹಣ ಶೇಖರವಾದುದನ್ನು ನೋಡಿ ಆಶ್ಚರ್ಯಗೊಂಡನು.

೧೮. ದುಷ್ಟರಿಂದ ದಾನ ತೆಗೆದುಕೊಂಡು ನಿಷಿದ್ಧವಸ್ತು, ತಪಸ್ಸು ಇವುಗಳನ್ನು ವಿಕ್ರಯಿಸಿ ನಾನು ಈ ಹಣವನ್ನು ಸಂಪಾದಿಸಿದೆನು.

ನಾದ್ಯಾಪಿ ಶಾಂತಿಮಾಪನ್ನಾ ಮಮ ತೃಷ್ಣಾsತಿದುಃಸಹಾ ।
ಮೇರುತುಲ್ಯಸುವರ್ಣಾನಿ ಹ್ಯಸಂಖ್ಯಾತಾನಿ ವಾಂಛತಿ ॥ ೧೯ ॥

ಅಹೋ ಮನ್ಯೇ ಮಹಾಕಷ್ಟಂ ಸಮಸ್ತಕ್ಲೇಶಸಾಧನಂ ।
ಸರ್ವಾನ್ಕಾಮಾನವಾಪ್ನೋತಿ ಪುನರನ್ಯಚ್ಚ ಕಾಂಕ್ಷತಿ ॥ ೨೦ ॥

ಜೀರ್ಯಂತಿ ಜೀರ್ಯತಃ ಕೇಶಾಃ ದಂತಾ ಜೀರ್ಯಂತಿ ಜೀರ್ಯತಃ ।
ಚಕ್ಷುಃ ಶ್ರೋತ್ರೇ ಚ ಜೀರ್ಯೇತೇ ತೃಷ್ಣೈಕಾ ತರುಣಾಯತೇ ॥ ೨೧ ॥

ಮಮೇಂದ್ರಿಯಾಣಿ ಸರ್ವಾಣಿ ಮಂದಭಾವಂ ವ್ರಜಂತಿ ಚ ।
ಬಲಂ ಹತಂ ಚ ಜರಸಾ ತೃಷ್ಣಾ ತರುಣತಾಂ ಗತಾ ॥ ೨೨ ॥

---

೧೯. ಈಗಲೂ ನನ್ನ ಆಶೆಯು ಶಾಂತವಾಗಲಿಲ್ಲ. ಅದು ಸಹಿಸಲಶಕ್ಯವು. ಅದು ಅಸಂಖ್ಯಾತಗಳಾದ ಮೇರುಪರ್ವತಕ್ಕೆ ಸಮಾನವಾದ ಸುವರ್ಣಗಳನ್ನು ಅಪೇಕ್ಷಿಸುತ್ತದೆ.

೨೦. ಅಯ್ಯೋ! ಮಹಾಕಷ್ಟ! ಇದು ಸಕಲ ಕ್ಲೇಶಗಳಿಗೂ ಸಾಧನವೆಂದರಿತಿದ್ದೇನೆ. ಈ ಆಶೆಯು ಸಕಲೇಷ್ಟಗಳನ್ನೂ ಹೊಂದಿ ಪೂರ್ಣವಾಗಿದೆ. ಆದರೂ ಪುನಃ ಇನ್ನೊಂದನ್ನು ಅಪೇಕ್ಷಿಸುತ್ತದೆ. ಶಾಂತವಾಗುವುದೇ ಇಲ್ಲ. ಮಹಾಕಷ್ಟ!

೨೧. ವಯಸ್ಸಾದಹಾಗೆಲ್ಲಾ ಕೂದಲು ಜೀರ್ಣವಾಗಿ ನರೆಯುತ್ತದೆ. ಹಲ್ಲುಗಳು ಸಡಲುತ್ತವೆ. ಕಣ್ಣು ಕಾಣಿಸದಂತೆಯೂ, ಕಿವಿಯು ಕೇಳಿಸದಂತೆಯೂ ಆಗುತ್ತವೆ. ಆದರೆ ಆಶೆಯು ಮಾತ್ರ ಕೇವಲ ತಾರುಣ್ಯವನ್ನು ಹೊಂದಿಯೇ ಇರುತ್ತದೆ.

೨೨. ಮುದಿತನದಿಂದ ನನ್ನ ಇಂದ್ರಿಯಗಳೆಲ್ಲವೂ ಶಕ್ತಿಹೀನವಾದುವು. ವಾರ್ಧಿಕ್ಯದಿಂದ ಸಾಮರ್ಥ್ಯವು ಅಪಹರಿಸಲ್ಪಟ್ಟಿತು. ಆಶೆಯು ಮಾತ್ರ ತಾರುಣ್ಯವನ್ನು ಹೊಂದಿದೆ.

**ಕಷ್ಟಾಽಽಶಾ ವರ್ತತೇ ಯಸ್ಯ ಸ ವಿದ್ವಾನಪ್ಯಪಂಡಿತಃ ।**
**ಸುಶಾಂತೋಽಪಿ ಪ್ರಮನ್ಯುಸ್ಸ್ಯಾದ್ಧೀಮಾನಪ್ಯತಿಮೂಢಧೀಃ　　॥ ೨೩ ॥**

**ಆಶಾ ಭಂಗಕರೀ ಪುಂಸಾಮಜೇಯಾಽರಾತಿಸನ್ನಿಭಾ ।**
**ತಸ್ಮಾದಾಶಾಂ ತ್ಯಜೇತ್ಪ್ರಾಜ್ಞೋ ಯದೀಚ್ಛೇಚ್ಛಾಶ್ವತಂ ಸುಖಂ　　॥ ೨೪ ॥**

**ಬಲಂ ತೇಜೋ ಯಶಶ್ಚೈವ ವಿದ್ಯಾ ಮಾನಂ ಚ ವೃದ್ಧತಾಂ ।**
**ತಥೈವ ಸತ್ಕುಲೇ ಜನ್ಮ ಆಶಾ ಹಂತ್ಯತಿವೇಗತಃ　　॥ ೨೫ ॥**

**ನೃಣಾಮಾಶಾಭಿಭೂತಾನಾಮಾಶ್ಚರ್ಯಮಿದಮುಚ್ಯತೇ ।**
**ಕಿಂಚಿದ್ದಾತಾಽಪಿ ಚಾಂಡಾಲಸ್ತಸ್ಮಾದಧಿಕತಾಂ ಗತಃ　　॥ ೨೬ ॥**

**ಆಶಾಭಿಭೂತಾ ಯೇ ಮರ್ತ್ಯಾ ಮಹಾಮೋಹಾ ಮಹೋದ್ಧತಾಃ ।**
**ಅವಮಾನಾದಿಕಂ ದುಃಖಂ ನ ಜಾನಂತಿ ಕದಾಪ್ಯಹೋ　　॥ ೨೭ ॥**

---

೨೩. ಆಶೆಯಿರುವವನು ಜ್ಞಾನಿಯಾದರೂ ಅಪಂಡಿತನಾಗುವನು. ಅತ್ಯಂತ ಶಾಂತಮೂರ್ತಿಯಾದರೂ ಕೋಪಿಷ್ಠನಾಗುವನು. ಬುದ್ಧಿವಂತನಾದರೂ ಕೇವಲ ಮೂಢನಾಗಿ ವರ್ತಿಸುವನು. ಕಷ್ಟ ! ಆಶೆಯು ಎಲ್ಲಾ ಗುಣಗಳನ್ನೂ ಮರೆಮಾಡುತ್ತದೆ.

೨೪. ಆಶೆಯು ಮನುಷ್ಯರಿಗೆ ಜಯಿಸಲಶಕ್ಯವಾದ ಶತ್ರುವಿನಂತಿರುವುದು. ಅದು ಮನುಷ್ಯನನ್ನು ಹಾಳುಮಾಡುವುದು. ಆದುದರಿಂದ ಪ್ರಾಜ್ಞನು ಶಾಶ್ವತ ಸುಖ ಬೇಕಾದರೆ ಆಶೆಯನ್ನು ಬಿಡಬೇಕು.

೨೫. ಶಕ್ತಿ, ತೇಜಸ್ಸು, ಕೀರ್ತಿ, ವಿದ್ಯೆ, ಮರ್ಯಾದೆ, ಹಿರಿಯತನ ಮತ್ತು ಸತ್ಕುಲದಲ್ಲಿ ಜನ್ಮ ಇವುಗಳನ್ನು ಆಶೆಯು ಬಹುಬೇಗ ನಾಶಮಾಡುತ್ತದೆ.

೨೬. ಆಶಿಪರರಾದ ಜನರಿಗೆ ಇದು ಆಶ್ಚರ್ಯಕರವೆಂದು ಉಕ್ತವಾಗಿದೆ. ಅತ್ಯಲ್ಪವಾಗಿ ದಾನಮಾಡುವ ಚಂಡಾಲನೂ ಸಹ ಅವನಿಗಿಂತ ಆಧಿಕ್ಯ ಹೊಂದುವನು.

೨೭. ಆಶಾಪರರಾದ ಮನುಷ್ಯರು ಬಹು ಮೋಹಿತರು ಮತ್ತು ಬಹಳ ಉದ್ಧತರೂ ಅಗಿ ಅವಮಾನಾದಿ ದುಃಖಗಳನ್ನು ಯಾವಾಗಲೂ ತಿಳಿಯುವುದಿಲ್ಲ. ಆಶ್ಚರ್ಯ!

ಮಯಾಪ್ಯೇವಂ ಬಹುಕ್ಲೇಶೈರೇತದ್ಧನಮುಪಾರ್ಜಿತಂ ।
ಶರೀರಮಪಿ ಜೀರ್ಣಂ ಚ ಜರಸಾಽಪಹೃತಂ ಬಲಂ ॥ ೨೮ ॥

ಇತಃ ಪರಂ ಯತಿಷ್ಯಾಮಿ ಪರಲೋಕಾರ್ಥಮಾದರಾತ್ ।
ಏವಂ ನಿಶ್ಚಿತ್ಯ ವಿಪ್ರೇಂದ್ರ ಧರ್ಮಮಾರ್ಗರತೋ ಭವೇತ್ ॥ ೨೯ ॥

ತದೈವ ತದ್ಧನಂ ಸರ್ವಂ ಚತುರ್ಧಾ ವ್ಯಭಜತ್ತಥಾ ।
ಸ್ವಯಂ ತು ಭಾಗದ್ವಿತಯಂ ಸ್ವಾರ್ಜಿತಾರ್ಥಾದಪಾಹರತ್ ॥ ೩೦ ॥

ಶೇಷಂ ಚ ಭಾಗದ್ವಿತಯಂ ಪುತ್ರಯೋರುಭಯೋರ್ದದೌ ।
ಸ್ವೇನಾರ್ಜಿತಾನಾಂ ಪಾಪಾನಾಂ ನಾಶಂ ಕರ್ತುಮನಾಸ್ತದಾ ॥ ೩೧ ॥

ಪ್ರಪಾತಟಾಕಾರಾಮಾಂಶ್ಚ ತಥಾ ದೇವಗೃಹಾನ್ಬಹೂನ್ ।
ಅನ್ನಾದೀನಾಂ ಚ ದಾನಾನಿ ಗಂಗಾತೀರೇ ಚಕಾರ ಸಃ ॥ ೩೨ ॥

---

೨೮. ಈರೀತಿಯಾಗಿ ನಾನೂ ಬಹಳ ಕಷ್ಟಪಟ್ಟು ಈ ಹಣವನ್ನು ಸಂಪಾದಿಸಿದೆನು. ಶರೀರವೂ ಸಹ ಜೀರ್ಣವಾಯಿತು. ಮುಪ್ಪಿನಿಂದ ಶಕ್ತಿಯು ಅಪಹರಿಸಲ್ಪಟ್ಟಿತು.

೨೯. ಬ್ರಾಹ್ಮಣ ಶ್ರೇಷ್ಠನೇ! ಇನ್ನು ಮುಂದೆ ನಾನು ಪರಲೋಕದಲ್ಲಿ ಶ್ರೇಯಸ್ಸುಂಟಾಗಲು ಮನಃಪೂರ್ವಕವಾಗಿ ಪ್ರಯತ್ನಿಸುವೆನು ಎಂಬುದಾಗಿ ನಿಶ್ಚಯಿಸಿ ಧರ್ಮಮಾರ್ಗದಲ್ಲಿ ಆಸಕ್ತನಾದನು.

೩೦. ತಕ್ಷಣವೇ ಆ ಹಣವನ್ನೆಲ್ಲಾ ನಾಲ್ಕುಭಾಗಮಾಡಿ ತಾನೇ ಸಂಪಾದಿಸಿದ ಧನವಾದುದರಿಂದ ಅದರಲ್ಲಿ ಎರಡುಭಾಗವನ್ನು ತಾನಿಟ್ಟುಕೊಂಡನು.

೩೧–೩೨. ಉಳಿದ ಎರಡು ಭಾಗಗಳನ್ನು ಇಬ್ಬರು ಮಕ್ಕಳಿಗೆ ಕೊಟ್ಟನು. ತಾನು ಸಂಪಾದಿಸಿದ ಪಾಪಗಳನ್ನು ಪರಿಹರಿಸಿಕೊಳ್ಳಬೇಕೆಂದು ನಿಶ್ಚಯಿಸಿ, ಅರವಟ್ಟಿಗೆ, ಕೆರೆ, ತೋಟ ಇವುಗಳನ್ನು ಮತ್ತು ಅನೇಕ ದೇವಾಲಯಗಳನ್ನೂ, ಗಂಗಾತೀರದಲ್ಲಿ ಅನ್ನಾದಿಗಳ ದಾನಗಳನ್ನೂ ಸಹ ಮಾಡಿದನು.

ಏವಂ ಧನಮಶೇಷಂ ಚ ವಿಶ್ರಾಣ್ಯ ಹರಿಭಕ್ತಿಮಾನ್ ।
ನರನಾರಾಯಣಸ್ಥಾನಂ ಜಗಾಮ ತಪಸೇ ವನಂ ॥ ೩೩ ॥

ತತ್ರಾಪಶ್ಯನ್ಮಹಾರಮ್ಯಮಾಶ್ರಮಂ ಮುನಿಸೇವಿತಂ ।
ಫಲಿತೈಃ ಪುಷ್ಪಿತೈಶ್ಚೈವ ಶೋಭಿತಂ ವೃಕ್ಷಸಂಚಯೈಃ ॥ ೩೪ ॥

ಗೃಣದ್ಭಿಃ ಪರಮಂ ಬ್ರಹ್ಮ ಶಾಸ್ತ್ರಚಿಂತಾಪರೈಸ್ತಥಾ ।
ಪರಿಚರ್ಯಾಪರೈರ್ವೃದ್ಧೈರ್ಮುನಿಭಿಃ ಪರಿಶೋಭಿತಂ ॥ ೩೫ ॥

ಶಿಷ್ಯೈಃ ಪರಿವೃತಂ ತತ್ರ ಮುನಿಂ ಜಾನಂತಿಸಂಜ್ಞಕಂ ।
ಗೃಣಂತಂ ಪರಮಂ ಬ್ರಹ್ಮ ತೇಜೋರಾಶಿಂ ದದರ್ಶ ಹ ॥ ೩೬ ॥

ಶಮಾದಿಗುಣಸಂಯುಕ್ತಂ ರಾಗಾದಿರಹಿತಂ ಮುನಿಂ ।
ಶೀರ್ಣಪರ್ಣಾಶನಂ ದೃಷ್ಟ್ವಾ ವೇದಮಾಲಿರ್ನನಾಮ ತಂ ॥ ೩೭ ॥

---

೩೩. ಈಪ್ರಕಾರ ಹಣವನ್ನೆಲ್ಲಾ ಖರ್ಚುಮಾಡಿ, ಹರಿಯಲ್ಲಿ ದೃಢ ಭಕ್ತಿಯುಳ್ಳವನಾಗಿ ತಪಸ್ಸು ಮಾಡುವುದಕ್ಕೋಸ್ಕರ ನರನಾರಾಯಣ ದೇವರ ಸ್ಥಾನವಾದ ಬದರಿಕಾಶ್ರಮಕ್ಕೆ ಹೊರಟನು.

೩೪-೩೫. ಅಲ್ಲಿ ಬಹುಮನೋಹರವೂ, ಋಷಿಗಳಿಂದ ಸೇವಿಸಲ್ಪಡುತ್ತಿರುವುದು, ಹಣ್ಣು ಹೂವು ಇವುಗಳಿಂದ ಕೂಡಿದ ವೃಕ್ಷಸಮೂಹಗಳಿಂದಲಂಕೃತವು ಮತ್ತು ವೇದ ಶಾಸ್ತ್ರಾರ್ಥವಿಚಾರಪರರು ದೇವಕೈಂಕರ್ಯನಿರತರೂ ಆಗಿ ಪರಬ್ರಹ್ಮನನ್ನು ಸ್ತೋತ್ರಮಾಡುತ್ತಿರುವ ವೃದ್ಧ ಮುನಿಗಳಿಂದ ಶೋಭಾಯಮಾನವೂ ಆಗಿರುವ ಆಶ್ರಮವನ್ನು ನೋಡಿದನು.

೩೬. ಅವನು ಆ ಆಶ್ರಮದಲ್ಲಿ ಶಿಷ್ಯಸಂಘದಿಂದ ಸುತ್ತುಗಟ್ಟಲ್ಪಟ್ಟ, ಪರಬ್ರಹ್ಮನನ್ನು ಸ್ತೋತ್ರಮಾಡುತ್ತಿರುವ, ತೇಜಃಪುಂಜನಾಗಿರುವ ಜಾನಂತಿಯೆಂಬ ಮುನಿಯನ್ನು ನೋಡಿದನು.

೩೭. ವೇದಮಾಲಿಯು ಶಮದಮಾದಿಗುಣಸಂಪನ್ನನು, ರಾಗಾದಿದೋಷರಹಿತನು, ಕೆಳಗೆ ಉದರಿದ ಎಲೆಯನ್ನು ತಿನ್ನುತ್ತಿರುವವನೂ ಆದ ಆ ಮುನಿಯನ್ನು ನೋಡಿ ಅವನಿಗೆ ನಮಸ್ಕಾರಮಾಡಿದನು.

**ತಸ್ಯ ಜಾನಂತಿರಾಗಂತೋಃ ಕಲ್ಪಯಾಮಾಸ ಚಾರ್ಹಣಾಂ ।**
**ಕಂದಮೂಲಫಲಾದ್ಯೈಸ್ತು ನಾರಾಯಣಧಿಯಾ ಮುನಿಃ ॥ ೩೮ ॥**

**ಕೃತಾತಿಥ್ಯಕ್ರಿಯಸ್ತೇನ ವೇದಮಾಲೀ ಕೃತಾಂಜಲಿಃ ।**
**ವಿನಯಾವನತೋ ಭೂತ್ವಾ ಪ್ರೋವಾಚ ವದತಾಂ ವರಂ ॥ ೩೯ ॥**

**ಭಗವನ್ಕೃತಕೃತ್ಯೋಽಸ್ಮಿ ವಿಗತಂ ಕಲ್ಮಷಂ ಮಮ ।**
**ಮಾಮುದ್ಧರ ಮಹಾಭಾಗ ಜ್ಞಾನದಾನೇನ ಪಂಡಿತ ॥ ೪೦ ॥**

**ಏವ ಮುಕ್ತಸ್ತತಸ್ತೇನ ಜಾನಂತಿರ್ಮುನಿಸತ್ತಮಃ ।**
**ಪ್ರೋವಾಚ ಪ್ರಹಸನ್ವಾಣೀಂ ವೇದಮಾಲಿಂ ಗುಣಾನ್ವಿತಂ ॥ ೪೧ ॥**

---

೩೮. ಜಾನಂತಿಮುನಿಯು ಆಗಂತುಕನಾಗಿ ಪ್ರಾಪ್ತನಾದ ಆ ವೇದಮಾಲಿಯನ್ನು ನಾರಾಯಣನಿಷ್ಠನೆಂದರಿತು ಅವನಿಗೆ ಗೆಡ್ಡೆ, ಗೆಣಸು, ಹಣ್ಣು ಮುಂತಾದುವನ್ನು ಕೊಟ್ಟು ಸತ್ಕಾರಮಾಡಿದನು.

೩೯. ಜಾನಂತಿಯಿಂದ ಅತಿಥಿಸತ್ಕಾರಹೊಂದಿದ ವೇದಮಾಲಿಯು ಕೈಮುಗಿದು ವಿನಯದಿಂದ ಬಗ್ಗಿ ವಕ್ತೃಶ್ರೇಷ್ಠನಾದ ಮುನಿಯನ್ನು ಕುರಿತು ಮಾತನಾಡಿದನು.

೪೦. ಪಂಡಿತನಾದ ಪೂಜ್ಯಮುನಿಯೇ! ನಿಮ್ಮ ದರ್ಶನದಿಂದ ನಾನು ಕೃತಕೃತ್ಯನಾದೆನು. ನನ್ನ ಪಾಪವೆಲ್ಲವೂ ಹೋಯಿತು. ನನಗೆ ಜ್ಞಾನದಾನಮಾಡಿ ಉದ್ಧಾರಮಾಡಬೇಕು.

೪೧. ಈರೀತಿಯಾಗಿ ಅವನಿಂದ ಪ್ರಾರ್ಥಿತನಾದ ಜಾನಂತಿ ಮುನಿವರ್ಯನು ಗುಣಶಾಲಿಯಾದ ವೇದಮಾಲಿಯನ್ನು ಕುರಿತು ಮುಂದೆ ಹೇಳುವ ಪ್ರಕಾರ ಮಂದಹಾಸಪೂರ್ವಕವಾಗಿ ಹೇಳಿದನು.

**ಜಾನಂತಿರುವಾಚ**

ಶೃಣುಷ್ವ ವಿಪ್ರಶಾರ್ದೂಲ ಸಂಸಾರಭೇದಕಾರಣಂ ।
ಪ್ರವಕ್ಷ್ಯಾಮಿ ಸಮಾಸೇನ ದುರ್ಲಭಂ ತ್ವಕೃತಾತ್ಮನಾಂ ॥ ೪೨ ॥

ಭಜ ವಿಷ್ಣುಂ ಪರಂ ನಿತ್ಯಂ ಸ್ಮರ ನಾರಾಯಣಂ ಪ್ರಭುಂ ।
ಪರಾಪವಾದಂ ಪೈಶುನ್ಯಂ ಕದಾಚಿದಪಿ ಮಾ ಕೃಥಾಃ ॥ ೪೩ ॥

ಪರೋಪಕಾರನಿರತಃ ಸದಾ ಭವ ಮಹಾಮತೇ ।
ಹರಿಪೂಜಾಪರಶ್ಚೈವ ತ್ಯಜ ಮೂರ್ಖಸಮಾಗಮಂ ॥ ೪೪ ॥

ಕಾಮಂ ಕ್ರೋಧಂ ಚ ಲೋಭಂ ಚ ಮೋಹಂ ಚ ಮದಮತ್ಸರೌ ।
ಪರಿತ್ಯಜ್ಯಾತ್ಮವಲ್ಲೋಕಂ ಗತ್ವಾ ಶಾಂತಿಂ ಗಮಿಷ್ಯಸಿ ॥ ೪೫ ॥

ಅಸೂಯಾಂ ಪರನಿಂದಾಂ ಚ ಕದಾಚಿದಪಿ ಮಾ ಕುರು ।
ದಂಭಾಚಾರಮಹಂಕಾರಂ ನೈಷ್ಠುರ್ಯಂ ಚ ಪರಿತ್ಯಜ ॥ ೪೬ ॥

---

೪೨. ಬ್ರಾಹ್ಮಣಶ್ರೇಷ್ಠನೇ! ಕೇಳು. ಪುಣ್ಯವಂತರಲ್ಲದವರಿಗೆ ದುರ್ಲಭವಾದ, ಸಂಸಾರಬಂಧನವನ್ನು ಬಿಡಿಸುವ ಉಪಾಯವನ್ನು ಸಂಕ್ಷೇಪವಾಗಿ ಹೇಳುತ್ತೇನೆ.

೪೩. ಸರ್ವೋತ್ತಮನಾದ ವಿಷ್ಣುವನ್ನು ಭಜಿಸು, ಪ್ರಭುವಾದ ನಾರಾಯಣನನ್ನು ಸರ್ವದಾ ಸ್ಮರಿಸು, ಪರಾಪವಾದ ಮತ್ತು ಚಾಡಿ ಹೇಳುವುದು ಇವುಗಳನ್ನು ಯಾವಾಗಲೂ ಮಾಡಬೇಡ.

೪೪. ಮಹಾಬುದ್ಧಿವಂತನೇ! ಯಾವಾಗಲೂ ಪರೋಪಕಾರಮಾಡುವವನಾಗು. ಹರಿಪೂಜೆಯಲ್ಲಿ ನಿರತನಾಗು ಮತ್ತು ಮೂರ್ಖರ ಸಹವಾಸವನ್ನು ಬಿಡು.

೪೫. ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ತು ಮಾತ್ಸರ್ಯಗಳೆಂಬ ಅರಿಷಡ್ವರ್ಗಗಳನ್ನು ಬಿಟ್ಟರೆ ಪರಮಾತ್ಮನ ಲೋಕಕ್ಕೆ ಹೋಗಿ ಸುಖವನ್ನು ಹೊಂದುವೆ.

೪೬. ಹೊಟ್ಟೇಕಿಚ್ಚು, ಪರದೂಷಣೆ ಇವುಗಳನ್ನು ಯಾವಾಗಲೂ ಮಾಡಬೇಡ. ಡಂಭಾಚಾರ, ಗರ್ವ ಮತ್ತು ನಿಷ್ಠುರಭಾಷಣ ಇವುಗಳನ್ನು ಬಿಡು.

ದಯಾಂ ಕುರುಷ್ವ ಭೂತೇಷು ಶುಶ್ರೂಷಾಂ ಚ ತಥಾ ಸತಾಂ ।
ತ್ವಯಾ ಕೃತಾಂಶ್ಚ ಧರ್ಮಾನ್ವೈ ಮಾ ಪ್ರಕಾಶಯ ಪೃಚ್ಛತಾಂ ॥ ೪೭ ॥

ಅನಾಚಾರಪರಾನ್ದೃಷ್ಟ್ವಾ ನೋಪೇಕ್ಷಾಂ ಕುರು ಶಕ್ತಿತಃ ।
ಪೂಜಯಸ್ವಾತಿಥಿಂ ನಿತ್ಯಂ ಸ್ವಕುಟುಂಬಾವಿರೋಧತಃ ॥ ೪೮ ॥

ಪತ್ರೈಃ ಪುಷ್ಪೈಃ ಫಲೈರ್ವಾಪಿ ದೂರ್ವಾಭಿಃ ಪಲ್ಲವೈರಥ ।
ಪೂಜಯಸ್ವ ಜಗನ್ನಾಥಂ ನಾರಾಯಣಮಕಾಮತಃ ॥ ೪೯ ॥

ದೇವಾನೃಷೀನ್ಪಿತೄಂಶ್ಚಾಪಿ ತರ್ಪಯಸ್ವ ಯಥಾವಿಧಿ ।
ಅಗ್ನೇಶ್ಚ ವಿಧಿವದ್ವಿಪ್ರ ಪರಿಚರ್ಯಾಪರೋ ಭವ ॥ ೫೦ ॥

ದೇವತಾಯತನೇ ನಿತ್ಯಂ ಸಂಮಾರ್ಜನಪರೋ ಭವ ।
ತಥೋಪಲೇಪನಂ ಚೈವ ಕುರುಷ್ವ ಸುಸಮಾಹಿತಃ ॥ ೫೧ ॥

---

೪೭. ಪ್ರಾಣಿಗಳಲ್ಲಿ ದಯೆಯನ್ನು ಮಾಡು. ಸಜ್ಜನರ ಸೇವೆಯನ್ನು ಮಾಡು. ನೀನು ಮಾಡಿದ ಧರ್ಮವನ್ನು ಕೇಳುವವರೆದುರಿಗೆ ಪ್ರಕಟಿಸಬೇಡ.

೪೮. ಅನಾಚಾರಪರರಾದವರನ್ನು ನೋಡಿ ಅವರನ್ನು ನಿನ್ನ ಶಕ್ತ್ಯನುಸಾರ ತಿದ್ದು; ಉದಾಸೀನಮಾಡಬೇಡ. ನಿನ್ನ ಸಂಸಾರಕ್ಕೆ ಕುಂದಕವಾಗದಂತೆ ಅತಿಥಿಯನ್ನು ಯಾವಾಗಲೂ ಸತ್ಕರಿಸು.

೪೯. ಪತ್ರ, ಪುಷ್ಪ, ಫಲ ಇವುಗಳಿಂದ ಅಥವಾ ಗರಿಕೆಗಳು, ಚಿಗರು ಇವುಗಳಿಂದ ಜಗದೊಡೆಯನಾದ ನಾರಾಯಣನನ್ನು ನಿಷ್ಕಾಮವಾಗಿ ಪೂಜಿಸು.

೫೦. ಬ್ರಾಹ್ಮಣನೇ! ದೇವತೆಗಳು, ಋಷಿಗಳು ಮತ್ತು ಪಿತೃಗಳು ಇವರನ್ನು ವಿಧಾನೋಕ್ತಪ್ರಕಾರ ತರ್ಪಣಾದಿಗಳಿಂದ ಆರಾಧಿಸು. ಯಥಾವಿಧಿಯಾಗಿ ಅಗ್ನಿಪರಿಚರ್ಯೆ ಎಂದರೆ ಔಪಾಸನಾದಿಗಳಲ್ಲಿ ನಿರತನಾಗು.

೫೧. ಶಾಂತಚಿತ್ತನಾಗಿ ದೇವಸ್ಥಾನದಲ್ಲಿ ಪ್ರತಿದಿನವೂ ಕಸಗುಡಿಸು ಮತ್ತು ಸಾರಿಸು.

ಶೀರ್ಣಸ್ಫುಟಿತಸಂಧಾನಂ ಕುರುದೇವಗೃಹೇ ಸದಾ ।
ಮಾರ್ಗಶೋಭಾಂ ಚ ದೀಪಂ ಚ ವಿಷ್ಣೋರಾಯತನೇ ಕುರು ॥ ೫೨ ॥

ಕಂದಮೂಲಫಲೈರ್ವಾಪಿ ಸದಾ ಪೂಜಯ ಮಾಧವಂ ।
ಪ್ರದಕ್ಷಿಣನಮಸ್ಕಾರೈಃ ಸ್ತೋತ್ರಾಣಾಂ ಪಠನೈಸ್ತಥಾ ॥ ೫೩ ॥

ಪುರಾಣಶ್ರವಣಂ ಚೈವ ಪುರಾಣಪಠನಂ ತಥಾ ।
ವೇದಾಂತಪಠನಂ ಚೈವ ಪ್ರತ್ಯಹಂ ಕುರು ಶಕ್ತಿತಃ ॥ ೫೪ ॥

ಏವಂ ಸ್ಥಿತೇ ತವಜ್ಞಾನಂ ಭವಿಷ್ಯತ್ಯುತ್ತಮೋತ್ತಮಂ ।
ಜ್ಞಾನಾತ್ಸಮಸ್ತಪಾಪಾನಾಂ ಮೋಕ್ಷೋ ಭವತಿ ನಿಶ್ಚಿತಂ ॥ ೫೫ ॥

ಏವಂ ಪ್ರಬೋಧಿತಸ್ತೇನ ವೇದಮಾಲಿರ್ಮಹಾಮತಿಃ ।
ತಥಾ ಜ್ಞಾನರತೋ ನಿತ್ಯಂ ಜ್ಞಾನಲೇಶಮವಾಪ್ತವಾನ್ ॥ ೫೬ ॥

---

೫೨. ದೇವಸ್ಥಾನದಲ್ಲಿ ಯಾವಭಾಗವಾದರೂ ಒಡೆದು ಬಿದ್ದು ಹೋಗಿದ್ದರೆ ಅದನ್ನು ಸರಿಪಡಿಸು. ವಿಷ್ಣುದೇವಾಲಯದ ದಾರಿಯನ್ನು ಚೆನ್ನಾಗಿ ದುರಸ್ತುಮಾಡಿಸಿ ಅಲಂಕರಿಸಿ ದೇವರ ಸನ್ನಿಧಿಯಲ್ಲಿ ದೀಪವನ್ನು ಹಚ್ಚು.

೫೩. ಗೆಡ್ಡೆ, ಗೆಣಸು, ಹಣ್ಣು ಇವುಗಳನ್ನು ನಿವೇದನೆಮಾಡಿ, ಪ್ರದಕ್ಷಿಣೆ ನಮಸ್ಕಾರ ಮತ್ತು ಸ್ತೋತ್ರಪಾಠಗಳಿಂದ ಮಾಧವನನ್ನು ಯಾವಾಗಲೂ ಪೂಜಿಸು.

೫೪. ಪುರಾಣ ಶ್ರವಣ ಪಠನೆಗಳನ್ನು ಮತ್ತು ವೇದಾಂತಶಾಸ್ತ್ರ ಪಠನವನ್ನು ಸಹ ಪ್ರತಿದಿನವೂ ಶಕ್ತ್ಯನುಸಾರವಾಡು.

೫೫. ಈಪ್ರಕಾರ ವರ್ತಿಸಿದರೆ ನಿನಗೆ ಸರ್ವೋತ್ಕೃಷ್ಟ ಜ್ಞಾನವುಂಟಾಗುವುದು. ಜ್ಞಾನದಿಂದ ಸಕಲ ಪಾಪಗಳೂ ಖಂಡಿತವಾಗಿ ಹೋಗುತ್ತವೆ.

೫೬. ಜಾನಂತಿಮುನಿಯಿಂದ ಈ ಪ್ರಕಾರ ಉಪದೇಶಿಸಲ್ಪಟ್ಟ, ಬಹುಬುದ್ಧಿವಂತನಾದ, ವೇದಮಾಲಿಯು ಅದರಂತೆ ಯಾವಾಗಲೂ ವರ್ತಿಸುತ್ತಾ ಜ್ಞಾನನಿರತನಾಗಿ ಸ್ವಲ್ಪಮಟ್ಟಿಗೆ ಜ್ಞಾನವನ್ನು ಹೊಂದಿದನು.

**ವೇದಮಾಲಿಃ ಕದಾಚಿತ್ತು ಜ್ಞಾನಲೇಶಪ್ರಚೋದಿತಃ ।**
**ಕೋಽಹಂ ಮಮ ಕ್ರಿಯಾ ಕೇತಿ ಸ್ವಯಮೇವ ವ್ಯಚಿಂತಯತ್ ॥ ೫೭ ॥**

**ಮಮ ಜನ್ಮ ಕಥಂ ಜಾತಂ ರೂಪಂ ಕೀದೃಗ್ವಿಧಂ ಮಮ ।**
**ಏವಂ ವಿಚಾರಣಪರೋ ದಿವಾನಿಶಮತಂದ್ರಿತಃ ॥ ೫೮ ॥**

**ಅನಿಶ್ಚಿತಮತಿರ್ಭೂತ್ವಾ ವೇದಮಾಲಿರ್ದ್ವಿಜೋತ್ತಮಃ ।**
**ಪುನರ್ಜಾನಂತಿಮಾಗಮ್ಯ ಪ್ರಣಮ್ಯೇದಮುವಾಚ ಹ ॥ ೫೯ ॥**

**ವೇದಮಾಲಿರುವಾಚ**

**ಮಮ ಚಿತ್ತಮತಿಭ್ರಾಂತಂ ಗುರೋ ಬ್ರಹ್ಮವಿದಾಂ ವರ ।**
**ಕೋಽಹಂ ಮಮ ಕ್ರಿಯಾ ಕಾ ಚ ಮಮ ಜನ್ಮ ಕಥಂ ವದ ॥ ೬೦ ॥**

---

೫೭. ವೇದಮಾಲಿಯು ಒಂದಾನೊಂದು ಕಾಲದಲ್ಲಿ ತನಗುಂಟಾದ ಅಲ್ಪಜ್ಞಾನದಿಂದ ಎಚ್ಚರಿಸಲ್ಪಟ್ಟವನಾಗಿ ನಾನು ಯಾರು? ನನಗೆ ಕರ್ತವ್ಯ ವಾವುದು? ಎಂದು ತಾನಾಗಿಯೇ ಯೋಚಿಸಿದನು.

೫೮–೫೯. ನನಗೆ ಈ ಜನ್ಮವು ಹೇಗೆ ಬಂದಿತು? ನನ್ನ ಸ್ವರೂಪ ವಾದರೂ ಎಂತಹುದು? ಎಂಬುದಾಗಿ ಹಗಲಿರಳು ಆಲಸ್ಯವಿಲ್ಲದೆ ವಿಚಾರ ಮಾಡುತ್ತಾ, ನಿರ್ಣಯವಾಗದೇ ಸಂಶಯಗ್ರಸ್ತನಾಗಿ ದ್ವಿಜೋತ್ತಮನಾದ ವೇದ ಮಾಲಿಯು ಪುನಃ ಜಾನಂತಿಯ ಸಮೀಪಕ್ಕೆ ಬಂದು ನಮಸ್ಕರಿಸಿ ಮಾತ ನಾಡಿದನು.

೬೦. ವೇದಮಾಲಿಯು ಹೇಳಿದನು—ಬ್ರಹ್ಮಜ್ಞಾನಿವರೇಣ್ಯರಾದ ಗುರು ಗಳೇ! ನನ್ನ ಮನಸ್ಸು ಭ್ರಮೆಗೊಂಡು ಬಹಳವಾಗಿ ಕದಲಿದೆ. ನಾನುಯಾರು? ನನ್ನ ಕರ್ತವ್ಯವೇನು? ನನಗೆ ಈ ಜನ್ಮವಾದರೂ ಬಂದ ಬಗೆ ಹೇಗೆ? ಇವೆಲ್ಲ ವನ್ನೂ ಹೇಳಿ.

ಜಾನಂತಿರುವಾಚ

ಸತ್ಯಂ ಸತ್ಯಂ ಮಹಾಭಾಗ ಚಿತ್ತಂ ಭ್ರಾಂತಂ ಸುನಿಶ್ಚಿತಂ ।
ಅವಿದ್ಯಾನಿಲಯಂ ಚಿತ್ತಂ ಕಥಂ ಸದ್ಭಾವಮೇಷ್ಯತಿ ॥ ೬೧ ॥

ಮಮೇತಿ ಗದಿತುಂ ಯತ್ತು ತದಪಿ ಭ್ರಾಂತಿರಿಷ್ಯತೇ ।
ಅಹಂಕಾರೋ ಮನೋಧರ್ಮ ಆತ್ಮನೋ ನ ಹಿ ಪಂಡಿತ ॥ ೬೨ ॥

ಪುನಶ್ಚ ಕೋಽಹಮಿತ್ಯುಕ್ತಂ ವೇದಮಾಲೇ ತ್ವಯಾ ತು ಯತ್ ।
ಮಮ ಜಾತ್ಯಾದಿಶೂನ್ಯಸ್ಯ ಕಥಂ ನಾಮ ಕರೋಮ್ಯಹಂ ॥ ೬೩ ॥

ಅನೌಪಮ್ಯಸ್ವಭಾವಸ್ಯ ನಿರ್ಗುಣಸ್ಯ ಪರಾತ್ಮನಃ
ನೀರೂಪಸ್ಯಾಪ್ರಮೇಯಸ್ಯ ಕಥಂ ನಾಮ ಕರೋಮ್ಯಹಂ ॥ ೬೪ ॥

ಪರಂಜ್ಯೋತಿಃಸ್ವರೂಪಸ್ಯ ಪರಿಪೂರ್ಣಾವ್ಯಯಾತ್ಮನಃ ।
ಅವಿಚ್ಛಿನ್ನಸ್ವಭಾವಸ್ಯ ಕಥ್ಯತೇ ಚ ಕಥಂ ಕ್ರಿಯಾ ॥ ೬೫ ॥

---

೬೧. ಜಾನಂತಿಯು ಹೇಳಿದನು—ಧನ್ಯನೇ! ನಿಜ, ನಿಜ, ಮನಸ್ಸು ಸಂಶಯುಗೊಂಡಿರುವುದು ಖಂಡಿತ. ಅವಿದ್ಯೆಗೆ ಆಶ್ರಯವಾಗಿರುವ ಮನಸ್ಸು ಹೇಗೆ ಸಾಧುತ್ವವನ್ನು ಹೊಂದೀತು?

೬೨. ಜ್ಞಾನಿಯೇ! ನನ್ನದೆಂದು ಹೇಳುವುದೂ ಸಹ ಭ್ರಾಂತಿಯೆಂದು ಸಮ್ಮತವು. ಅಹಂಕಾರವು ಅಂತಃಕರಣದ ಧರ್ಮವು. ಆತ್ಮನ ಧರ್ಮವಲ್ಲ.

೬೩. ವೇದಮಾಲಿಯೇ! ಪುನಃ ನುನು ಯಾರು? ಎಂದು ಕೇಳುತ್ತಿರುವೆ. 'ಅಹಂ' ಎಂಬ ಶಬ್ದ ಮುಖ್ಯವಾಚ್ಯನಾದ ಆತ್ಮನು ಜಾತ್ಯಾದಿರಹಿತನು, ಅಂತಹವನಿಗೆ ಹೇಗೆ ನಾಮಕರಣಮಾಡಲಿ?

೬೪. ಅಸದೃಶಸ್ವಭಾವನು, ಪ್ರಾಕೃತಗುಣರಹಿತನು, ರೂಪರಹಿತನು, ಅಪರಿಚ್ಛಿನ್ನನೂ ಆಗಿರುವ ಪರಮಾತ್ಮನಿಗೆ ಹೇಗೆ ನಾಮಕರಣಮಾಡಲಿ?

೬೫. ಉತ್ಕೃಷ್ಟಜ್ಯೋತಿಸ್ವರೂಪನು, ಅಪ್ರಾಕೃತಗುಣಪರಿಪೂರ್ಣನು, ನಾಶರಹಿತನು, ಅವಿಚ್ಛಿನ್ನಸ್ವಭಾವೋಪೇತನೂ ಆಗಿರುವ ಆತ್ಮನಿಗೆ ಕರ್ತವ್ಯವನ್ನು ಹೇಗೆ ನಿರೂಪಿಸಲಿ?

ಸ್ವಪ್ರಕಾಶಾತ್ಮನೋ ವಿಪ್ರ ನಿತ್ಯಸ್ಯ ಪರಮಾತ್ಮನಃ ।
ಅನಂತಸ್ಯ ಕ್ರಿಯಾ ಚೈವ ಕಥಂ ಜನ್ಮ ಚ ಕಥ್ಯತೇ ॥ ೬೬ ॥

ಜ್ಞಾನೈಕವೇದ್ಯಮಜರಂ ಪರಂ ಬ್ರಹ್ಮ ಸನಾತನಂ ।
ಪರಿಪೂರ್ಣಂ ಪರಾನಂದಂ ತಸ್ಮಾನ್ನಾನ್ಯದಿಹ ದ್ವಿಜ ॥ ೬೭ ॥

ತತ್ವಮಸ್ಯಾದಿವಾಕ್ಯೇಭ್ಯೋ ಜ್ಞಾನಂ ಮೋಕ್ಷಸ್ಯ ಸಾಧನಂ ।
ಜ್ಞಾನೇ ತ್ವನಾಹತೇ ಸಿದ್ಧೇ ಸರ್ವಂ ಬ್ರಹ್ಮಮಯಂ ಭವೇತ್ ॥ ೬೮ ॥

ಏವಂ ಪ್ರಬೋಧಿತಸ್ತೇನ ವೇದಮಾಲಿರ್ಮುನೀಶ್ವರ ।
ಮುಮೋದ ಪಶ್ಯನ್ನಾತ್ಮಾನಮಾತ್ಮನ್ಯೇವಾಚ್ಯುತಂ ಪ್ರಭುಂ ॥ ೬೯ ॥

---

೬೬. ಬ್ರಾಹ್ಮಣನೇ! ಸ್ವಪ್ರಕಾಶಸ್ವರೂಪನು, ನಿತ್ಯನು, ದೇಶಕಾಲಾದ್ಯಪರಿಚ್ಛಿನ್ನನೂ ಆಗಿರುವ ಪರಮಾತ್ಮನಿಗೆ ಕ್ರಿಯೆ ಮತ್ತು ಜನ್ಮಗಳನ್ನು ಹೇಗೆ ಹೇಳಲಿ?

೬೭. ದ್ವಿಜನೇ! ಜ್ಞಾನದಿಂದಲೇ ವೇದ್ಯನು, ಜರಾಮರಣರಹಿತನೂ ಆಗಿರುವ ಪರಬ್ರಹ್ಮನು ಅನಾದಿಯು, ಪರಿಪೂರ್ಣನು, ಉತ್ಕೃಷ್ಟಾನಂದಸ್ವರೂಪನೂ ಆಗಿರುವನು. ಈ ಜಗತ್ತೆಲ್ಲವೂ ಅವನ ಅಧೀನವು; ಅವನಿಗಧೀನವಲ್ಲದ ಬೇರೆಯಾವುದೂ ಜಗತ್ತಿನಲ್ಲಿಲ್ಲ.

೬೮. "ತತ್ವಮಸಿ" ಮುಂತಾದ ಉಪನಿಷದ್ವಾಕ್ಯದಿಂದುಂಟಾಗುವ ತತ್ವಜ್ಞಾನವು ಮೋಕ್ಷಸಾಧನವು. ಅಪ್ರತಿಹತವಾಗಿ ಜ್ಞಾನವು ಸಿದ್ಧಿಸಿದರೆ ಸಕಲವೂ ಬ್ರಹ್ಮಾಧೀನವೆಂಬುದು ಸ್ಪಷ್ಟವಾಗುವುದು.

೬೯. ಮುನೀಶ್ವರನೇ! ಈಪ್ರಕಾರವಾಗಿ ಜಾನಂತಿಮುನಿಯಿಂದ ಬೋಧಿಸಲ್ಪಟ್ಟ ವೇದಮಾಲಿಯು ತನ್ನಲ್ಲಿಯೇ ಅಂತರ್ಯಾಮಿಯಾಗಿರುವ ಅಚ್ಯುತಸ್ವಾಮಿಯನ್ನು ಸಾಕ್ಷಾತ್ಕರಿಸಿ ಸಂತೋಷಪಟ್ಟನು.

ಉಪಾಧಿರಹಿತಂ ಬ್ರಹ್ಮ ಸ್ವಪ್ರಕಾಶಂ ನಿರಂಜನಂ ।
ಅಹಮೇವೇತಿ ನಿಶ್ಚಿತ್ಯ ಪರಾಂ ಶಾಂತಿಮವಾಪ್ತವಾನ್ ॥ ೭೦ ॥

ತತಶ್ಚ ವ್ಯವಹಾರಾರ್ಥಂ ವೇದಮಾಲಿರ್ಮುನೀಶ್ವರಂ ।
ಗುರುಂ ಪ್ರಣಮ್ಯ ಜಾನಂತಿಂ ಸದಾ ಧ್ಯಾನಪರೋಽಭವತ್ ॥ ೭೧ ॥

ಗತೇ ಬಹುತಿಥೇ ಕಾಲೇ ವೇದಮಾಲಿರ್ಮುನೀಶ್ವರ ।
ವಾರಣಾಸೀಪುರಂ ಪ್ರಾಪ್ಯ ಪರಂ ಮೋಕ್ಷಮವಾಪ್ತವಾನ್ ॥ ೭೨ ॥

ಯ ಇಮಂ ಪಠತೇಽಧ್ಯಾಯಂ ಶೃಣುಯಾದ್ವಾ ಸಮಾಹಿತಃ ।
ಸ ಕರ್ಮಪಾಶವಿಚ್ಛೇದಂ ಪ್ರಾಪ್ಯ ಸೌಖ್ಯಮವಾಪ್ನುಯಾತ್ ॥ ೭೩ ॥

ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ ಪ್ರಥಮಪಾದೇ
ಜ್ಞಾನನಿರೂಪಣಂ ನಾಮ ಪಂಚತ್ರಿಂಶೋಽಧ್ಯಾಯಃ

---

೭೦. ಹಾಗೆಯೇ ಪರಿಶೀಲಿಸಿ ನಿರ್ದೋಷನು, ಸ್ವಪ್ರಕಾಶನು, ನಿರುಪಾಧಿಕನು, ಎಂದರೆ ತನ್ನಿಂದ ಭಿನ್ನವಾದ ಗುಣಕ್ರಿಯಾದಿ ಧರ್ಮಶೂನ್ಯನೂ ಆಗಿರುವ ಬ್ರಹ್ಮನೇ ಸರ್ವಥಾ ಅಹೇಯನಾದುದರಿಂದ 'ಅಹಂ' ಎಂಬುವನು ಎಂದು ನಿಶ್ಚೈಸಿ ಉತ್ಕೃಷ್ಟಸುಖವನ್ನು ಪಡೆದನು.

೭೧. ತರುವಾಯ ವೇದಮಾಲಿಯು ಸಂಸಾರವನ್ನು ನಿವೃತ್ತಿಮಾಡಿಕೊಳ್ಳಲು ಮುನಿವರ್ಯನಾದ ಜಾನಂತಿಗುರುವನ್ನು ನಮಸ್ಕರಿಸಿ ಯಾವಾಗಲೂ ಭಗವಂತನ ಧ್ಯಾನಕಾರ್ಯದಲ್ಲಿ ನಿರತನಾದನು.

೭೨. ಮುನಿವರ್ಯನೇ! ಹಾಗೆ ಬಹುದಿನಗಳು ಕಳೆದಮೇಲೆ ವೇದಮಾಲಿಯು ಕಾಶೀಕ್ಷೇತ್ರಕ್ಕೆ ಬಂದು ಉತ್ತಮ ಮೋಕ್ಷವನ್ನು ಹೊಂದಿದನು.

೭೩. ಈ ಅಧ್ಯಾಯವನ್ನು ಶಾಂತಮನಸ್ಕನಾಗಿ ಪಠನ, ಶ್ರವಣಮಾಡುವವನು ಕರ್ಮಬಂಧನದಿಂದ ಬಿಡುಗಡೆಯನ್ನು ಹೊಂದಿ ಸೌಖ್ಯವನ್ನು ಪಡೆಯುವನು.

ಇಂತು ಶ್ರೀಬೃಹನ್ನಾರದೀಯಪುರಾಣದೊಳು ಪೂರ್ವಭಾಗ ಪ್ರಥಮಪಾದದಲ್ಲಿ
ಜ್ಞಾನನಿರೂಪಣವೆಂಬ ಮೂವತ್ತೈದನೆಯ ಅಧ್ಯಾಯವು ಮುಗಿದುದು.

## ಕಥಾಸಾರಾಂಶ

ಭಕ್ತಿಜ್ಞಾನಗಳ ಮಾಹಾತ್ಮ್ಯೆಯನ್ನು ಪುನಃ ನಿರೂಪಿಸತೊಡಗಿ, ಆ ವಿಷಯದಲ್ಲಿ ಯಜ್ಞಮಾಲಿ, ಸುಮಾಲಿಗಳ ಚರಿತ್ರೆಯನ್ನು ಹೇಳುವುದಕ್ಕೋಸ್ಕರ ಅವರ ತಂದೆಯಾದ ವೇದಮಾಲಿ ಎಂಬ ಮಹಾತ್ಮನ ಚರಿತ್ರೆಯು ಇಲ್ಲಿ ವರ್ಣಿತವಾಗಿದೆ. ಅವನು ವೇದಶಾಸ್ತ್ರಾಧ್ಯಯನ ಮಾಡಿ ಜ್ಞಾನ ಸಂಪಾದಿಸಿ, ಜೀವಿಕೆಗಾಗಿ ಅನೇಕ ನಿಷಿದ್ಧಾಚರಣೆಗಳನ್ನು ಮಾಡಿ ಬಹುದ್ರವ್ಯವನ್ನು ಸಂಪಾದಿಸಿದನು. ಈ ಸಂದರ್ಭದಲ್ಲಿ ಆಶೆಯಸ್ವರೂಪ, ಅದರಿಂದಾಗುವ ಅನರ್ಥಗಳನ್ನು ಬಹು ಉದಾಹರಣೆಗಳಿಂದ ವಿವರಿಸಿದೆ. ಕೊನೆಗೆ ಅವನಿಗೆ ವಿರಕ್ತಿಯುಂಟಾಗಿ ಸಂಪಾದಿಸಿದ ದ್ರವ್ಯದಲ್ಲಿ ಅರ್ಧವನ್ನು ಮಕ್ಕಳಿಗೆ ಕೊಟ್ಟು, ಉಳಿದುದನ್ನೆಲ್ಲಾ ಧರ್ಮಮಾಡಿ ಕಾಡಿಗೆಹೋಗಿ ಜಾನಂತಿ ಮುನಿಯಿಂದ ತತ್ತ್ವೋಪದೇಶವನ್ನು ಹೊಂದಿ, ಭಗವಧ್ಯಾನಪರನಾಗಿ ಕಾಶೀಕ್ಷೇತ್ರಕ್ಕೆ ಬಂದು ಮುಕ್ತನಾದನು ಎಂಬ ಕಥೆಯು ಈ ಅಧ್ಯಾಯದಲ್ಲಿ ನಿರೂಪಿಸಲ್ಪಟ್ಟಿದೆ.



# ಷಟ್ತ್ರಿಂಶೋಽಧ್ಯಾಯಃ

**ಸನಕ ಉವಾಚ**

**ವೇದಮಾಲೇಃ ಸುತೌ ಪ್ರೋಕ್ತೌ ಯಾವುಭೌ ಮುನಿಸತ್ತಮ ।**
**ಯಜ್ಞಮಾಲೀ ಸುಮಾಲೀ ಚ ತಯೋಃ ಕರ್ಮಾಧುನೋಚ್ಯತೇ ॥ ೧ ॥**

**ತಯೋರಾದ್ಯೋ ಯಜ್ಞಮಾಲೀ ಬಿಭೇದ ಪಿತೃಸಂಚಿತಂ ।**
**ಧನಂ ದ್ವಿಧಾ ಕನಿಷ್ಠಸ್ಯ ಭಾಗಮೇಕಂ ದದೌ ತದಾ ॥ ೨ ॥**

**ಸುಮಾಲೀ ಚ ಧನಂ ಸರ್ವಂ ವ್ಯಸನಾಭಿರತಃ ಸದಾ ।**
**ಅಪದಾನಾದಿಭಿಶ್ಚೈವ ನಾಶಯಾಮಾಸ ಭೋ ದ್ವಿಜ ॥ ೩ ॥**

---

## ಮೂವತ್ತಾರನೆಯ ಅಧ್ಯಾಯವು

೧. ಸನಕನು ಹೇಳಿದನು—ಮುನಿವರ್ಯನೇ! ಪೂರ್ವಾಧ್ಯಾಯದಲ್ಲಿ ಹೇಳಿದ, ವೇದಮಾಲಿಯ ಪುತ್ರರಾದ ಯಜ್ಞಮಾಲಿ, ಸುಮಾಲಿ ಎಂಬೀರ್ವರ ವೃತ್ತಾಂತವನ್ನು ಈಗ ಹೇಳುವೆನು.

೨. ಅವರಿಬ್ಬರಲ್ಲಿ ಮೊದಲನೆಯವನಾದ ಯಜ್ಞಮಾಲಿಯು ತಂದೆಯಿಂದ ಸಂಗ್ರಹಿಸಿಕೊಡಲ್ಪಟ್ಟ ಹಣವನ್ನು ಎರಡುಭಾಗಮಾಡಿ ಕನಿಷ್ಠನಾದ ಸುಮಾಲಿಗೆ ಒಂದು ಭಾಗವನ್ನು ಕೊಟ್ಟನು.

೩. ದ್ವಿಜನೇ! ಸುಮಾಲಿಯು ಯಾವಾಗಲೂ ಪಾಪಕರ್ಮನಿರತನಾಗಿ ಅಕಾರ್ಯದಲ್ಲಿ ವಿನಿಯೋಗಮಾಡಿದುದರಿಂದ ತನ್ನ ಹಣವನ್ನೆಲ್ಲಾ ಹಾಳು ಮಾಡಿಕೊಂಡನು.

ಗೀತವಾದ್ಯರತೋ ನಿತ್ಯಂ ಮದ್ಯಪಾನರತೋಽಭವತ್
ವೇಶ್ಯಾವಿಭ್ರಮಲುಬ್ಧೋಽಸೌ ಪರದಾರರತೋಽಭವತ್ ॥ ೪ ॥

ದೃಷ್ಟ್ವಾ ಸುಮಾಲಿನಃ ಶೀಲಂ ಯಜ್ಞಮಾಲೀ ಮಹಾಮತಿಃ ।
ಬಭೂವ ದುಃಖಿತೋಽತ್ಯರ್ಥಂ ಭ್ರಾತರಂ ಚೇದಮಬ್ರವೀತ್ ॥ ೫ ॥

ಅಲಮತ್ಯಂತಕಷ್ಟೇನ ವೃತ್ತೇನಾಸ್ಮತ್ಕುಲೇಽನುಜ ।
ತ್ವಮೇಕ ಏವ ದುಷ್ಟಾತ್ಮಾ ಮಹಾಪಾಪರತೋಽಭವಃ ॥ ೬ ॥

ಏವಂ ನಿವಾರಯಂತಂ ತಂ ಬಹುಶೋ ಜ್ಯೇಷ್ಠಸೋದರಂ ।
ಹನಿಷ್ಯಾಮೀತಿ ನಿಶ್ಚಿತ್ಯ ಖಡ್ಗಹಸ್ತಃ ಕಚೇಽಗ್ರಹೀತ್ ॥ ೭ ॥

ತತೋ ಮಹಾರವೋ ಜಜ್ಞೇ ನಗರೇ ಭೃಶದಾರುಣಃ ।
ಬಬಂಧುರ್ನಾಗರಾಶ್ಚೈನಂ ಕುಪಿತಾಸ್ತೇ ಸುಮಾಲಿನಂ ॥ ೮ ॥

---

೪. ಅವನು ಸಂಗೀತ, ವಾದ್ಯ, ಮದ್ಯಪಾನ ಇವುಗಳಲ್ಲಿ ಯಾವಾಗಲೂ ಆಸಕ್ತನಾದನು. ಸೂಳೆಯರ ವಿಲಾಸಗಳಲ್ಲಿ ಆಸಕ್ತನಾಗಿ ಪರಸ್ತ್ರೀ ಸಂಭೋಗ ನಿರತನಾದನು.

೫. ಬಹುಬುದ್ಧಿವಂತನಾದ ಯಜ್ಞಮಾಲಿಯು ಸುಮಾಲಿಯ ನಡತೆಯನ್ನು ನೋಡಿ ಬಹಳ ದುಃಖಪಟ್ಟನು ಮತ್ತು ಸಹೋದರನಿಗೆ ಹೀಗೆ ಬುದ್ಧಿವಾದವನ್ನು ಹೇಳಿದನು.

೬. ತಮ್ಮನೇ! ಈ ಅತ್ಯಂತದುಃಖಕರವಾದ ವ್ಯಾಪಾರವನ್ನು ನಿಲ್ಲಿಸು. ನಮ್ಮವಂಶದಲ್ಲಿ ನೀನೊಬ್ಬನೇ ದುಷ್ಟನಾಗಿ ಪಾಪಕೃತ್ಯಗಳಲ್ಲಿ ನಿರತನಾಗಿರುವೆ ಎಂದು ಹೇಳಿದನು.

೭. ಈರೀತಿ ಬಹುಪ್ರಕಾರವಾಗಿ ತನ್ನ ದುರ್ವ್ಯಾಪಾರವನ್ನು ತಡೆಯುತ್ತಿರುವ ಅಣ್ಣನನ್ನು ಸಂಹರಿಸಬೇಕೆಂದು ನಿಶ್ಚೈಸಿ, ಕತ್ತಿಯನ್ನು ಕೈಯಲ್ಲಿ ತೆಗೆದುಕೊಂಡು ಕೇಶವನ್ನು ಹಿಡಿದುಕೊಂಡನು.

೮. ತರುವಾಯ ಪಟ್ಟಣದಲ್ಲಿ ಅತ್ಯಂತ ಭಯಂಕರವಾದ ದೊಡ್ಡ ಶಬ್ದವಾಯಿತು. ಅದನ್ನು ಕೇಳಿ ಕೋಪಗೊಂಡ ಆ ಪಟ್ಟಣದ ಜನರು ಈ ಸುಮಾಲಿಯನ್ನು ಬಂಧನಮಾಡಿದರು.

ಯಜ್ಞಮಾಲೀ ಹ್ಯಮೋಯಾತ್ಮಾ ಪೌರಾನ್ಸಂಪ್ರಾರ್ಥ್ಯ ದುಃಖಿತಃ ।
ಬಂಧನಾನ್ಮೋಚಯಾಮಾಸ ಭ್ರಾತೃಸ್ನೇಹವಿಮೋಹಿತಃ ॥ ೯ ॥

ಯಜ್ಞಮಾಲೀ ಪುನಶ್ಚಾಪಿ ಬಿಭಿದೇ ಸ್ವಧನಂ ದ್ವಿಧಾ ।
ಆದದೇ ಸ್ವಯಮರ್ಧಂ ಚ ದದಾವರ್ಧಂ ಕನೀಯಸೇ ॥ ೧೦ ॥

ಸುಮಾಲೀತ್ವತಿಮೂಢಾತ್ಮಾ ತದ್ಧನಂ ಚಾಪಿ ನಾರದ ।
ಮೂರ್ಖೈಃ ಪಾಖಂಡಚಂಡಾಲೈರ್ಬುಭುಜೇ ಚ ಮದೋದ್ಧತಃ ॥ ೧೧ ॥

ಅಸತಾಮುಪಭೋಗಾಯ ದುರ್ಜನಾನಾಂ ವಿಭೂತಯಃ ।
ಪಿಚುಮರ್ದಃ ಫಲಾಢ್ಯೋಽಪಿ ಕಾಕೈರೇವೋಪಭುಜ್ಯತೇ ॥ ೧೨ ॥

ಭ್ರಾತ್ರಾ ದತ್ತಂ ಧನಂ ತಚ್ಚ ಸುಮಾಲೀ ನಾಶಯನ್ಮುನೇ ।
ಮದ್ಯಪಾನಪ್ರಮತ್ತಶ್ಚ ಗೋಮಾಂಸಾದೀನ್ಯಭಕ್ಷಯತ್ ॥ ೧೩ ॥

---

೯. ನಿರ್ದೋಷಿಯಾದ ಯಜ್ಞಮಾಲಿಯು ದುಃಖಪಟ್ಟು ತಮ್ಮನಲ್ಲಿ ಅಭಿಮಾನದಿಂದ ಮೋಹಿತನಾಗಿ ಪುರಜನರನ್ನು ಬೇಡಿಕೊಂಡು ತಮ್ಮನನ್ನು ಬಂಧನದಿಂದ ಬಿಡುಗಡೆಮಾಡಿಸಿದನು.

೧೦. ಯಜ್ಞಮಾಲಿಯು ಪುನಃ ತನ್ನ ಹಣವನ್ನು ಎರಡುಭಾಗಮಾಡಿ ಅರ್ಧವನ್ನು ತಾನು ತೆಗೆದುಕೊಂಡು ಉಳಿದ ಅರ್ಧವನ್ನು ತಮ್ಮನಿಗೆ ಕೊಟ್ಟನು.

೧೧. ನಾರದನೇ! ಬಹು ಮೂಢಾತ್ಮನಾದ ಸುಮಾಲಿಯು ಮದದಿಂದ ಕೊಬ್ಬಿ ಆ ಹಣವನ್ನೂ ಸಹ ಮೂರ್ಖರಾದ ಪಾಷಂಡಿ ಚಂಡಾಲರೊಡನೆ ಸೇರಿ ಉಪಭೋಗಿಸಿ ಕಳೆದನು.

೧೨. ದುರ್ಜನರ ಐಶ್ವರ್ಯವು ನಿಷಿದ್ಧೋಪಭೋಗಸಾಧನವಾಗುವುದು. ಬೇವಿನಗಿಡವು ಹಣ್ಣುಗಳಿಂದ ಸಮೃದ್ಧವಾಗಿದ್ದಾಗ್ಯೂ ಆ ಹಣ್ಣುಗಳು ಕಾಗೆಗಳಿಂದಲೇ ತಿನ್ನಲ್ಪಡುತ್ತವೆ.

೧೩. ಅಣ್ಣನು ಕೊಟ್ಟ ಹಣವನ್ನೂ ಸಹ ಸುಮಾಲಿಯು ಹಾಳು ಮಾಡುವವನಾಗಿ ಮದ್ಯಪಾನದಿಂದ ಮದಿಸಿ ಗೋಮಾಂಸ ಮುಂತಾದುವುಗಳನ್ನೂ ಸಹ ತಿನ್ನುತ್ತಿದ್ದನು.

ತ್ಯಕ್ತೋ ಬಂಧುಜನೈಸ್ಸರ್ವೈಶ್ಚಾಂಡಾಲಸ್ತ್ರೀಸಮನ್ವಿತಃ ।
ರಾಜ್ಞಾಽಪಿ ಬಾಧಿತೋ ವಿಪ್ರ ಪ್ರಪೇದೇ ನಿರ್ಜನಂ ವನಂ ॥ ೧೪ ॥

ಯಜ್ಞಮಾಲೀ ಸುಧೀರ್ವಿಪ್ರ ಸದಾ ಧರ್ಮರತೋಽಭವತ್ ।
ಅವಾರಿತಂ ದದಾವನ್ನಂ ಸತ್ಸಂಗಗತಕಲ್ಮಷಃ ॥ ೧೫ ॥

ಪಿತ್ರಾ ಕೃತಾನಿ ಸರ್ವಾಣಿ ತಟಾಕಾದೀನಿ ಸತ್ತಮ ।
ಅಪಾಲಯತ್ಪ್ರಯತ್ನೇನ ಸದಾ ಧರ್ಮಪರಾಯಣಃ ॥ ೧೬ ॥

ವಿಶ್ರಾಣಿತಂ ಧನಂ ಸರ್ವಂ ಯಜ್ಞಮಾಲೇರ್ಮಹಾತ್ಮನಃ ।
ಸತ್ಪಾತ್ರದಾನನಿಷ್ಠಸ್ಯ ಧರ್ಮಮಾರ್ಗಪ್ರವರ್ತಿನಃ ॥ ೧೭ ॥

ಅಹೋ ಸದುಪಭೋಗಾಯ ಸಜ್ಜನಾನಾಂ ವಿಭೂತಯಃ ।
ಕಲ್ಪವೃಕ್ಷಫಲಂ ಸರ್ವಮಮರೈರೇವ ಭುಜ್ಯತೇ ॥ ೧೮ ॥

---

೧೪. ಅವನು ಸಕಲ ಬಂಧು ಜಗಳಿಂದಲೂ ಬಹಿಷ್ಕೃತನಾಗಿ ಚಂಡಾಲ ಸ್ತ್ರೀಸಂಗಮಾಡುತ್ತಾ, ರಾಜರಿಂದಲೂ ದುರ್ನಡತೆಗಾಗಿ ಶಿಕ್ಷಿಸಲ್ಪಟ್ಟು ನಿರ್ಜನವಾದ ಕಾಡಿಗೆ ಹೋದನು.

೧೫. ಬ್ರಾಹ್ಮಣನಾದ ನಾರದನೇ! ಜ್ಞಾನಿಯಾದ ಯಜ್ಞಮಾಲಿಯು ಸರ್ವದಾ ಧರ್ಮಕಾರ್ಯ ನಿರತನಾದನು. ಸಜ್ಜನರ ಸಹವಾಸದಿಂದ ದೋಷಗಳನ್ನು ಹೋಗಲಾಡಿಸಿಕೊಂಡು ತಡೆಯಿಲ್ಲದೇ ಅನ್ನದಾನಮಾಡಿದನು.

೧೬. ಅವನು ಯಾವಾಗಲೂ ಧರ್ಮನಿರತನಾಗಿ ತಂದೆಯಿಂದ ನಿರ್ಮಿಸಲ್ಪಟ್ಟಿದ್ದ ಕೆರೆ ಮುಂತಾದುವುಗಳೆಲ್ಲವನ್ನೂ ಪ್ರಯತ್ನಪೂರ್ವಕವಾಗಿ ಕಾಪಾಡಿದನು.

೧೭. ಸತ್ಪಾತ್ರದಾನಪರನು, ಧರ್ಮಮಾರ್ಗದಲ್ಲಿಯೇ ಪ್ರವರ್ತಿಸುತ್ತಿರುವವನು, ಮಹಾತ್ಮನೂ ಆದ ಯಜ್ಞಮಾಲಿಯ ಹಣವೆಲ್ಲಾ ಹೀಗೆ ಸತ್ಕಾರ್ಯಕ್ಕೆ ವಿನಿಯೋಗಿಸಲ್ಪಟ್ಟಿತು.

೧೮. ಸಜ್ಜನರ ಐಶ್ವರ್ಯವು ಸಾತ್ವಿಕಭೋಗಸಾಧನವಾಗುವುದು ಆಶ್ಚರ್ಯ! ಕಲ್ಪವೃಕ್ಷದ ಫಲವನ್ನೆಲ್ಲಾ ದೇವತೆಗಳೇ ಅನುಭವಿಸುವರು.

**ಧನಂ ವಿಶ್ರಾಣ್ಯ ಧರ್ಮಾರ್ಥಂ ಯಜ್ಞಮಾಲೀ ಮಹಾಮತಿಃ ।**
**ನಿತ್ಯಂ ವಿಷ್ಣುಗೃಹೇ ಸಮ್ಯಕ್ಪರಿಚರ್ಯಾಪರೋಽಭವತ್ ॥ ೧೯ ॥**

**ಕಾಲೇನ ಗಚ್ಛತಾ ತೌ ತು ವೃದ್ಧಭಾವಮುಪಾಗತೌ ।**
**ಯಜ್ಞಮಾಲೀ ಸುಮಾಲೀ ಚ ಹ್ಯೇಕಕಾಲೇ ಮೃತಾವುಭೌ ॥ ೨೦ ॥**

**ಹರಿಪೂಜಾರತಸ್ಯಾಸ್ಯ ಯಜ್ಞಮಾಲೇರ್ಮಹಾತ್ಮನಃ ।**
**ಹರಿಃ ಸಂಪ್ರೇಷಯಾಮಾಸ ವಿಮಾನಂ ಪಾರ್ಷದಾವೃತಂ ॥ ೨೧ ॥**

**ದಿವ್ಯಂ ವಿಮಾನಮಾರುಹ್ಯ ಯಜ್ಞಮಾಲೀ ಮಹಾಮತಿಃ ।**
**ಪೂಜ್ಯಮಾನಃ ಸುರಗಣೈಃ ಸ್ತೂಯಮಾನೋ ಮುನೀಶ್ವರೈಃ ॥ ೨೨ ॥**

**ಗಂಧರ್ವೈರ್ಗೀಯಮಾನಶ್ಚ ಸೇವಿತಶ್ಚಾಪ್ಸರೋಗಣೈಃ ।**
**ಕಾಮಧೇನ್ವಾ ಪುಷ್ಯಮಾಣಶ್ಚಿತ್ರಾಭರಣಭೂಷಿತಃ ॥ ೨೩ ॥**

---

೧೯. ಈರೀತಿಯಾಗಿ ಮಹಾಜ್ಞಾನಿಯಾದ ಯಜ್ಞಮಾಲಿಯು ಹಣವನ್ನು ಧರ್ಮಾರ್ಥವಾಗಿ ವಿನಿಯೋಗಿಸಿ ಪ್ರತಿದಿನವೂ ವಿಷ್ಣುದೇವಾಲಯದಲ್ಲಿ ಚೆನ್ನಾಗಿ ದೇವರ ಸೇವೆ ಮಾಡತೊಡಗಿದನು.

೨೦. ಹೀಗೆಯೇ ಬಹುಕಾಲ ಕಳೆಯಿತು. ಬಳಿಕ ವೃದ್ಧಭಾವವನ್ನು ಹೊಂದಿದ ಯಜ್ಞಮಾಲಿ ಸುಮಾಲಿಗಳಿರ್ವರೂ ಒಂದೇ ಸಮಯದಲ್ಲಿ ಮೃತರಾದರು.

೨೧. ವಿಷ್ಣುಪೂಜಾಪರನಾಗಿ ಮಹಾತ್ಮನಾದ ಯಜ್ಞಮಾಲಿಯನ್ನು ತನ್ನ ಲೋಕಕ್ಕೆ ಕರೆಯಿಸಿಕೊಳ್ಳಲು ಹರಿಯು ಪಾರ್ಷದರಿಂದ ಪರಿವೃತವಾದ ವಿಮಾನವನ್ನು ಕಳುಹಿಸಿದನು.

೨೨-೨೩. ಮಹಾಜ್ಞಾನಿಯಾದ ಯಜ್ಞಮಾಲಿಯು ಆ ದಿವ್ಯವಿಮಾನದಲ್ಲಿ ಕುಳಿತನು. ಆಗ ಅವನನ್ನು ದೇವಸಂಘವು ಪೂಜಿಸಿತು. ಮುನಿವರ್ಯರು ಸ್ತೋತ್ರಮಾಡಿದರು. ಗಂಧರ್ವರು ಗಾನಮಾಡಿದರು. ಅಪ್ಸರ ಸ್ತ್ರೀಗಣಗಳು ಅವನ ಸೇವೆಯಲ್ಲಿ ತೊಡಗಿದುವು. ಕಾಮಧೇನುವು ಇಷ್ಟಾರ್ಥದ ಮಳೆಗರೆಯಿತು. ಹೀಗೆ ವೈಭವದಿಂದ ಯುಕ್ತನಾಗಿ ವಿಚಿತ್ರವಾದ ಆಭರಣಗಳಿಂದಲಂಕರಿಸಲ್ಪಟ್ಟು ದಿವ್ಯವಾದ ವಿಷ್ಣುಲೋಕಕ್ಕೆ ಪ್ರಯಾಣಮಾಡಿದನು.

ಗಚ್ಛನ್ನಿಷ್ಣುಪದಂ ದಿವ್ಯಂ ಮನುಜಂ ಪಥಿ ದೃಷ್ಟವಾನ್ ।
ತಾಡ್ಯಮಾನಂ ಯಮಭಟ್ಟೈಃ ಕ್ಷುತ್ತೃಡ್ಭ್ಯಾಂ ಪರಿಪೀಡಿತಂ ॥ ೨೪ ॥

ಪ್ರೇತಭೂತಂ ವಿವಸ್ತ್ರಂ ಚ ದುಃಖಿತಂ ಪಾಶವೇಷ್ಟಿತಂ ।
ಇತಸ್ತತಃ ಪ್ರಧಾವಂತಂ ವಿಲಪಂತಮನಾಥವತ್ ॥ ೨೫ ॥

ಕ್ರೋಶಂತಂ ಚ ರುದಂತಂ ಚ ದೃಷ್ಟ್ವಾ ಮನಸಿ ವಿವ್ಯಥೇ ।
ಯಜ್ಞಮಾಲೀ ದಯಾಯುಕ್ತೋ ವಿಷ್ಣುದೂತಾನ್ಸಮೀಪಗಾ ॥ ೨೬ ॥

ಕೋsಯಂ ಭಟ್ಟೈರ್ಬಾಧ್ಯಮಾನ ಇತ್ಯಪೃಚ್ಛತ್ಕೃತಾಂಜಲಿಃ ।
ಅಥ ತೇ ಹರಿದೂತಾಸ್ತಂ ಯಜ್ಞಮಾಲಿಂ ಮಹೌಜಸಂ ॥ ೨೭ ॥

ಅಸೌ ಸೂಮಾಲೀ ಭ್ರಾತಾ ತೇ ಪಾಪಾತ್ಮೇತಿ ಸಮಬ್ರುರ್ವ ।
ಯಜ್ಞಮಾಲೀ ಸಮಾಕರ್ಣ್ಯ ವ್ಯಾಖ್ಯಾತಂ ವಿಷ್ಣುಕಿಂಕರೈಃ ॥ ೨೮ ॥

---

೨೪-೨೬. ಹೋಗುವಾಗ ಮಾರ್ಗದಲ್ಲಿ ಅವನು ಪ್ರೇತಜನ್ಮವನ್ನು ಹೊಂದಿ ಯಮದೂತರಿಂದ ಹೊಡೆಯಿಸಿಕೊಳ್ಳಲ್ಪಡುತ್ತಿರುವ, ಹಸಿವು ನೀರಡಿಕೆಗಳಿಂದ ಬಳಲುತ್ತಿರುವ, ಬಟ್ಟೆ ಇಲ್ಲದೇ ದುಃಖಿಸುತ್ತಿರುವ, ಯಮಪಾಶದಿಂದ ಬಂಧಿಸಲ್ಪಟ್ಟಿರುವ, ಅಲ್ಲಲ್ಲಿ ಓಡಾಡುತ್ತಾ ಅನಾಥನಂತೆ ಕೂಗಿ ಅರಚಿ ಅಳುತ್ತಿರುವ ಒಬ್ಬ ಮನುಷ್ಯನನ್ನು ನೋಡಿ ದುಃಖಿಸಿದನು.

೨೬-೨೭. ಯಜ್ಞಮಾಲಿಯು ಕನಿಕರಪಟ್ಟು ಸಮೀಪದಲ್ಲಿರುವ ವಿಷ್ಣುದೂತರಿಗೆ ಕೈಮುಗಿದು ಯಮಭಟರಿಂದ ಹಿಂಸಿಸಲ್ಪಡುತ್ತಿರುವ ಈತನು ಯಾರು? ಎಂದು ಕೇಳಿದನು.

೨೭-೨೮. ಕೂಡಲೇ ಆ ಹರಿದೂತರು ಮಹಾಶಕ್ತನಾದ ಯಜ್ಞಮಾಲಿಯನ್ನು ಕುರಿತು ಇವನು ನಿನ್ನ ಸಹೋದರನಾದ ಪಾಪಿಷ್ಠ ಸುಮಾಲಿಯು ಎಂದು ಹೇಳಿದರು.

೨೮-೨೯. ಯಜ್ಞಮಾಲಿಯು ವಿಷ್ಣುದೂತರು ಹೇಳಿದುದನ್ನು ಕೇಳಿ

ಮನಸಾ ದುಃಖಮಾಪನ್ನಃ ಪುನಃ ಪಪ್ರಚ್ಛ ನಾರದ ।
ಕಥಮಸ್ಯ ಭವೇನ್ಮೋಕ್ಷಃ ಸಂಚಿತೈಃ ಪಾಪಸಂಚಯೈಃ ॥ ೨೯ ॥

ತದುಪಾಯಂ ವದಧ್ವಂ ಮೇ ಯೂಯಂ ಹಿ ಮಮ ಬಾಂಧವಾಃ ।
ಸಖ್ಯಂ ಸಾಪ್ತಪದೀನಂ ಸ್ಯಾದಿತ್ಯಾಹುರ್ಧರ್ಮಕೋವಿದಾಃ ॥ ೩೦ ॥

ಸತಾಂ ಸಾಪ್ತಪದೀ ಮೈತ್ರೀ ಸತ್ಸತಾಂ ತ್ರಿಪದೀ ತಥಾ ।
ಸತ್ಸತಾಮಪಿ ಯೇ ಸಂತಸ್ತೇಷಾಂ ಮೈತ್ರೀ ಪದೇ ಪದೇ ॥ ೩೧ ॥

ತಸ್ಮಾನ್ಮೇ ಬಾಂಧವಾ ಯೂಯಂ ಮಾಂ ನೇತುಂ ಸಮುಪಾಗತಾಃ ।
ಭ್ರಾತಾಽಸ್ಯಯಂ ಮಮ ಯತೋ ಮುಚ್ಯತೇ ತದಿಹೋಚ್ಯತಾಂ ॥ ೩೨ ॥

ಯಜ್ಞಮಾಲೀ ವಚಃ ಶ್ರುತ್ವಾ ವಿಷ್ಣುದೂತಾ ದಯಾಲವಃ ।
ಪುನಃ ಸ್ಮಿತಮುಖಾಃ ಪ್ರೋಚುರ್ಯಜ್ಞಮಾಲಿಂ ಹರಿಪ್ರಿಯಂ ॥ ೩೩ ॥

---

ಮನಸ್ಸಿನಲ್ಲಿ ದುಃಖವನ್ನು ಹೊಂದಿ ಸಂಚಿತ ಪಾಪಸಮೂಹದಿಂದ ಇವನಿಗೆ ಬಿಡುಗಡೆಯು ಹೇಗಾದೀತು ಎಂದು ವಿಷ್ಣುದೂತರನ್ನು ಪುನಃ ಕೇಳಿದನು

೩೦. ಅವನ ಮೋಚನೋಪಾಯವನ್ನು ನನಗೆ ಹೇಳಿರಿ. ನೀವೇ ನನಗೆ ಬಂಧುಗಳು. ಧರ್ಮತತ್ವಜ್ಞರು ಸಪ್ತಪದ ಸಹವಾಸದಿಂದ ಸ್ನೇಹವುಂಟಾಗುತ್ತದೆಂದು ಹೇಳುತ್ತಾರೆ.

೩೧. ಏಳು ಹೆಜ್ಜೆಯ ಸಹವಾಸದಿಂದ ಸಜ್ಜನರ ಮೈತ್ರಿಯು, ಅವರಿಗಿಂತ ಉತ್ತಮ ಸಾಧುಗಳ ಸ್ನೇಹವು ಮೂರು ಹೆಜ್ಜೆಯ ಸಹವಾಸದಿಂದಲೂ, ಅವರಿಗಿಂತಲೂ ಉತ್ತಮ ಸಜ್ಜನರ ಮೈತ್ರಿಯು ಪ್ರತಿಯೊಂದು ಹೆಜ್ಜೆಯ ಸಹವಾಸದಿಂದಲೂ ಸಂಭವಿಸುತ್ತದೆಂದು ಹೇಳುತ್ತಾರೆ.

೩೨. ಆದಕಾರಣ ನನ್ನನ್ನು ಕರೆದುಕೊಂಡುಹೋಗಲು ಬಂದಿರುವ ನೀವು ನನಗೆ ಬಂಧುಗಳು. ನನ್ನ ತಮ್ಮನು ಮುಕ್ತನಾಗುವ ಉಪಾಯವನ್ನು ನೀವು ತಿಳಿಸಬೇಕು.

೩೩. ಯಜ್ಞಮಾಲಿಯು ಹೇಳಿದ ಮಾತನ್ನು ಕೇಳಿ ದಯಾಳುಗಳಾದ ವಿಷ್ಣುದೂತರು ಹರಿಭಕ್ತನಾದ ಯಜ್ಞಮಾಲಿಯನ್ನು ಕುರಿತು ಮಂದಹಾಸ ಯುಕ್ತರಾಗಿ ಮಾತನಾಡಿದರು.

## ವಿಷ್ಣುದೂತಾ ಊಚುಃ

**ಯಜ್ಞಮಾಲಿನ್ಮಹಾಭಾಗ ನಾರಾಯಣಪರಾಯಣ ।**
**ಉಪಾಯಂ ತವ ವಕ್ಷ್ಯಾಮಃ ಸುಮಾಲಿಪ್ರೇಮಮುಕ್ತಿದಂ ॥ ೩೪ ॥**

**ಕೃತಂ ಯತ್ಸುಮಹತ್ಕರ್ಮ ತ್ವಯಾ ಪ್ರಾಕ್ತನಜನ್ಮನಿ ।**
**ಪ್ರವಕ್ಷ್ಯಾಮಃ ಸಮಾಸೇನ ತಚ್ಛೃಣುಷ್ವ ಸಮಾಹಿತಃ ॥ ೩೫ ॥**

**ಪುರಾ ತ್ವಂ ವೈಶ್ಯಜಾತೀಯೋ ನಾಮ್ನಾ ವಿಶ್ವಂಭರಃ ಸ್ಮೃತಃ ।**
**ತ್ವಯಾ ಕೃತಾನಿ ಪಾಪಾನಿ ಮಹಾಂತ್ಯಗಣಿತಾನಿ ವೈ ॥ ೩೬ ॥**

**ಸುಕರ್ಮವಾಸನಾಹೀನೋ ಮಾತಾಪಿತ್ರೋರ್ವಿರೋಧಕೃತ್ ।**
**ಏಕದಾ ಬಂಧುಭಿಸ್ತ್ಯಕ್ತಃ ಶೋಕಸಂತಾಪಪೀಡಿತಃ ॥ ೩೭ ॥**

**ಕ್ಷುಧಾಗ್ನಿನಾಪಿ ಸಂತಪ್ತಃ ಪ್ರಾಪ್ತವಾನ್ಹರಿಮಂದಿರಂ ।**
**ತದಾ ವೃಷ್ಟಿರಭೂತ್ತತ್ರ ತತ್ಸ್ಥಾನಂ ಪಂಕಿಲಂ ಹ್ಯಭೂತ್ ॥ ೩೮ ॥**

---

೩೪-೩೫. ವಿಷ್ಣುದೂತರು ಹೇಳಿದರು-ನಾರಾಯಣಭಕ್ತನೂ, ಧನ್ಯನೂ ಆದ ಯಜ್ಞಮಾಲಿಯೇ! ಸುಮಾಲಿಗೆ ಪ್ರಿಯವಾದ ಮುಕ್ತಿಗೆ ಸಾಧನವನ್ನು ನಿನಗೆ ಹೇಳುತ್ತೇವೆ. ನೀನು ಹಿಂದಿನ ಜನ್ಮದಲ್ಲಿ ಮಾಡಿದ ಮಹತ್ತರ ಕರ್ಮವನ್ನೂ ಹೇಳುತ್ತೇವೆ. ಅದನ್ನು ಸಮಾಧಾನಚಿತ್ತದಿಂದ ಕೇಳು.

೩೬. ಪೂರ್ವದಲ್ಲಿ ನೀನು ವೈಶ್ಯಜಾತಿಯಲ್ಲಿ ವಿಶ್ವಂಭರನೆಂಬ ಹೆಸರಿನಿಂದ ಹುಟ್ಟಿದಿ. ಆಗ ನೀನು ಅಸಂಖ್ಯಾಕಗಳಾದ ಮಹಾ ಪಾಪಗಳನ್ನು ಮಾಡಿದಿ.

೩೭-೩೮. ಸತ್ಕರ್ಮವಾಸನೆಯಿಲ್ಲದೆ ತಾಯಿ ತಂದೆಗಳಿಗೆ ವಿರೋಧ ಮಾಡುತ್ತಾ ಒಂದುದಿನ ಬಂಧುಗಳಿಂದ ಬಿಡಿಸಲ್ಪಟ್ಟವನಾಗಿ ದುಃಖ ಸಂತಾಪ ದಿಂದ ಯುಕ್ತನಾಗಿ, ಹಸಿವೆಯೆಂಬ ಬೆಂಕಿಯಿಂದ ದಹಿಸಲ್ಪಟ್ಟವನಾಗಿ ವಿಷ್ಣು ದೇವಾಲಯಕ್ಕೆ ಬಂದಿ. ಆಗ ಅಲ್ಲಿ ಮಳೆಬಂದು ಸೋರಿದ್ದರಿಂದ ಆ ಸ್ಥಳ ವೆಲ್ಲವೂ ಕೆಸರಾಗಿತ್ತು.

ದೂರೀಕೃತಸ್ತ್ವಯಾ ಪಂಕಸ್ತತ್ಸ್ಥಾನೇ ಸ್ಥಾತುಮಿಚ್ಛಯಾ ।
ಉಪಲೇಪನತಾಂ ಪ್ರಾಪ್ತಂ ತತ್ಸ್ಥಾನಂ ವಿಷ್ಣುಮಂದಿರೇ ॥ ೩೯ ॥

ತ್ವಯೋಷಿತಂ ತು ತದ್ರಾತ್ರೌ ತಸ್ಮಿನ್ ದೇವಾಲಯೇ ದ್ವಿಜ ।
ದಂಶಿತಶ್ಚೈವ ಸರ್ಪೇಣ ಪ್ರಾಪ್ತಂ ಪಂಚತ್ವಮೇವ ಚ ॥ ೪೦ ॥

ತೇನ ಪುಣ್ಯಪ್ರಭಾವೇನ ಉಪಲೇಪಕೃತೇನ ಚ ।
ವಿಪ್ರಜನ್ಮ ತ್ವಯಾ ಪ್ರಾಪ್ತಂ ಹರಿಭಕ್ತಿಸ್ತಥಾಽಚಲಾ ॥ ೪೧ ॥

ಕಲ್ಪಕೋಟಿಶತಂ ಸಾಗ್ರಂ ಸಂಪ್ರಾಪ್ಯ ಹರಿಸನ್ನಿಧಿಂ ।
ತತ್ರೈವ ಜ್ಞಾನಮಾಸಾದ್ಯ ಪರಂ ಮೋಕ್ಷಂ ಗಮಿಷ್ಯಸಿ ॥ ೪೨ ॥

ಅನುಜಂ ಪಾತಕಿಶ್ರೇಷ್ಠಂ ತ್ವಂ ಸಮುದ್ಧರ್ತುಮಿಚ್ಛಸಿ ।
ಉಪಾಯಂ ತವ ವಕ್ಷ್ಯಾಮಿಸ್ತಂ ನಿಬೋಧ ಮಹಾಮತೇ ॥ ೪೩ ॥

---

೩೯. ನೀನು ಅಲ್ಲಿ ಇಗಬೇಕೆಂಬ ಇಚ್ಛೆಯಿಂದ ಕೆಸರನ್ನೆಲ್ಲಾ ಎತ್ತಿ ಹೊರಕ್ಕೆ ಹಾಕಿದೆ. ಅದರಿಂದ ಹರಿದೇವಾಲಯದಲ್ಲಿ ಆ ಪ್ರದೇಶವು ಸಾರಿಸಿ ದಂತಾಯಿತು.

೪೦. ದ್ವಿಜನೇ! ಆ ರಾತ್ರಿ ಆ ದೇವಾಲಯದಲ್ಲಿ ನೀನು ವಾಸವಾಗಿದ್ದಿ. ಆಗ ಅಲ್ಲಿ ನಿನಗೆ ಹಾವು ಕಚ್ಚಿ ಮರಣವು ಸಂಭವಿಸಿತು.

೪೧. ಆ ದೇವಸ್ಥಾನದಲ್ಲಿ ಸಾರಿಸಿದುದರಿಂದ ಬಂದ ಪುಣ್ಯಪ್ರಭಾವದಿಂದ ನಿನಗೆ ಬ್ರಾಹ್ಮಣಜನ್ಮ ಮತ್ತು ದೃಢವಾದ ಹರಿಭಕ್ತಿ ಇವುಗಳುಂಟಾದುವು.

೪೨. ನೂರುಕೋಟಿ ಕಲ್ಪ ಮುಗಿಯುವವರೆಗೂ ಹರಿ ಸಾನ್ನಿಧ್ಯವನ್ನು ಹೊಂದಿ, ಅಲ್ಲಿ ಜ್ಞಾನವನ್ನು ಸಂಪಾದಿಸಿ ಉತ್ತಮ ಮೋಕ್ಷವನ್ನು ಪಡೆಯುವೆ.

೪೩. ಬುದ್ಧಿವಂತನೇ! ಪಾತಕಿವರೇಣ್ಯನಾದ ನಿನ್ನ ತಮ್ಮನನ್ನು ಉದ್ಧಾರಮಾಡಬೇಕೆಂದು ಬಯಸುವೆ. ಅದಕ್ಕೆ ತಕ್ಕ ಉಪಾಯವನ್ನು ಹೇಳುತ್ತೇವೆ ಕೇಳು.

**ಗೋಚರ್ಮಮಾತ್ರಭೂಮೇಸ್ತು ಉಪಲೇಪನಜಂ ಫಲಂ ।**
**ದತ್ವೋದ್ಧರ ಮಹಾಭಾಗ ಭ್ರಾತರಂ ಕೃಪಯಾನ್ವಿತಃ ॥ ೪೪ ॥**

**ಏವಮುಕ್ತೋ ವಿಷ್ಣುದೂತೈರ್ಯಜ್ಞಮಾಲೀ ಮಹಾಮತಿಃ ।**
**ತತ್ಫಲಂ ಪ್ರದದೌ ತಸ್ಮೈ ಭ್ರಾತ್ರೇ ಪಾಪವಿಮುಕ್ತಯೇ ॥ ೪೫ ॥**

**ಸುಮಾಲೀ ಭ್ರಾತೃದತ್ತೇನ ಪುಣ್ಯೇನ ಗತಕಲ್ಮಷಃ ।**
**ಬಭೂವ ಯಮದೂತಾಸ್ತು ತಂ ತ್ಯಕ್ತ್ವಾ ಪ್ರಪಲಾಯಿತಾಃ ॥ ೪೬ ॥**

**ವಿಮಾನಂ ಚಾಗತಂ ಸದ್ಯಃ ಸರ್ವಭೋಗಸಮನ್ವಿತಂ ।**
**ತದಾ ಸುಮಾಲೀ ಸ್ವರ್ಯಾನಮಾರುಹ್ಯ ಮುಮುದೇ ಮುನೇ ॥ ೪೭ ॥**

**ತಾವುಭೌ ಭ್ರಾತರೌ ವಿಪ್ರ ಸುರಬೃಂದನಮಸ್ಕೃತೌ ।**
**ಅವಾಪತುಃ ಭೃಶಂ ಪ್ರೀತಿಂ ಸಮಾಲಿಂಗ್ಯ ಪರಸ್ಪರಂ ॥ ೪೮ ॥**

---

೪೪. ಧನ್ಯನೇ! ದೇವಾಲಯದಲ್ಲಿ ಗೋಚರ್ಮದಷ್ಟು ಭೂಮಿಯನ್ನು ಸಾರಿಸಿದುದರ ಫಲವನ್ನು ನಿನ್ನ ತಮ್ಮನಿಗೆ ಕೊಟ್ಟು, ದಯೆಮಾಡಿ ಅವನನ್ನುದ್ಧರಿಸು.

೪೫. ಮಹಾಬುದ್ಧಿವಂತನಾದ ಯಜ್ಞಮಾಲಿಯು ವಿಷ್ಣುದೂತರು ಹೇಳಿದುದನ್ನು ಕೇಳಿ ಅದರಂತೆ ಅವನ ತಮ್ಮನ ಪಾಪಪರಿಹಾರಮಾಡುವುದಕ್ಕಾಗಿ ।ದೇವಾಲಯದಲ್ಲಿ ಗೋಚರ್ಮದಷ್ಟು ಭೂಮಿಯನ್ನು ಸಾರಿಸಿದುದರ ಫಲವನ್ನು ಕೊಟ್ಟನು.

೪೬. ಸುಮಾಲಿಯು ಅಣ್ಣನು ಕೊಟ್ಟ ಪುಣ್ಯದಿಂದ ತನ್ನ ಪಾಪವನ್ನು ಕಳೆದುಕೊಂಡನು. ಯಮದೂತರು ತಕ್ಷಣದಲ್ಲಿಯೇ ಅವನನ್ನು ಬಿಟ್ಟು ಓಡಿಹೋದರು.

೪೭. ಕೂಡಲೇ ಸಕಲ ಭೋಗಗಳಿಂದ ಸಹಿತವಾದ ವಿಮಾನವು ಬಂದಿತು. ಆಗ ಸುಮಾಲಿಯು ವಿಮಾನವನ್ನು ಹತ್ತಿ ಕುಳಿತು ಸಂತೋಷಪಟ್ಟನು.

೪೮. ಆ ಇಬ್ಬರು ಸಹೋದರರೂ ದೇವಸಂಘದಿಂದ ನಮಸ್ಕೃತರಾಗಿ ಒಬ್ಬರನ್ನೊಬ್ಬರು ಆಲಿಂಗನೆಮಾಡಿಕೊಳ್ಳುತ್ತಾ ಬಹಳ ಸಂತೋಷಪಟ್ಟರು.

ಯಜ್ಞಮಾಲೀ ಸುಮಾಲೀ ಚ ಸ್ತೂಯಮಾನೌ ಮಹರ್ಷಿಭಿಃ ।
ಗೀಯಮಾನೌ ಚ ಗಂಧರ್ವೈರ್ವಿಷ್ಣುಲೋಕಂ ಪ್ರಜಗ್ಮತುಃ ॥ ೪೯ ॥

ಅವಾಪ್ಯ ಹರಿಸಾಲೋಕ್ಯಂ ಸುಮಾಲೀ ಮುನಿಸತ್ತಮ ।
ಯಜ್ಞಮಾಲೀ ಚೋಷತುಸ್ತೌ ಕಲ್ಪಮೇಕಂ ಮುದಾನ್ವಿತೌ ॥ ೫೦ ।

ಭುಕ್ತ್ವಾ ಭೋಗಾನ್ಬಹೂಂಸ್ತತ್ರ ಯಜ್ಞಮಾಲೀ ಮಹಾಮತಿಃ ।
ತತ್ರೈವ ಜ್ಞಾನಸಂಪನ್ನಃ ಪರಂ ಮೋಕ್ಷಮುಪಾಗತಃ ॥ ೫೧ ।

ಸುಮಾಲೀ ತು ಮಹಾಭಾಗೋ ವಿಷ್ಣುಲೋಕೇ ಮುದಾನ್ವಿತಃ ।
ಸ್ಥಿತ್ವಾ ಭೂಮಿಂ ಪುನಃ ಪ್ರಾಪ್ಯ ವಿಪ್ರತ್ವಂ ಸಮುಪಾಗತಃ ॥ ೫೨ ।

ಅತಿಶುದ್ಧೇ ಕುಲೇ ಜಾತೋ ಗುಣವಾನ್ವೇದಪಾರಗಃ ।
ಸರ್ವಸಂಪತ್ಸಮೋಪೇತೋ ಹರಿಭಕ್ತಿಪರಾಯಣಃ ॥ ೫೩ ।

---

೪೯. ಯಜ್ಞಮಾಲಿ ಮತ್ತು ಸುಮಾಲಿ ಇವರಿಬ್ಬರೂ ಮಹರ್ಷಿಗಳಿಂದ ಸ್ತೋತ್ರ, ಗಂಧರ್ವರಿಂದ ಗಾನ, ಇವುಗಳನ್ನು ಮಾಡಿಸಿಕೊಳ್ಳುವವರಾಗಿ ವಿಷ್ಣು ಲೋಕಕ್ಕೆ ಹೋದರು.

೫೦. ಸುಮಾಲಿ ಯಜ್ಞಮಾಲಿಗಳು ಹರಿಸಾಲೋಕ್ಯಪಡೆದು ಒಂದು ಕಲ್ಪ ಪರ್ಯಂತವಾಗಿ ಸಂತೋಷವಾಗಿದ್ದರು.

೫೧. ಯಜ್ಞಮಾಲಿಯು ಅಲ್ಲಿ ಬಹು ಭೋಗಗಳನ್ನು ಅನುಭವಿಸಿ ಅಲ್ಲಿಯೇ ಜ್ಞಾನವನ್ನೂ ಹೊಂದಿ ಉತ್ತಮಮೋಕ್ಷವನ್ನು ಪಡೆದನು.

೫೨. ಧನ್ಯನಾದ ಸುಮಾಲಿಯು ವಿಷ್ಣುಲೋಕದಲ್ಲಿ ಸಂತೋಷದಿಂದಿದ್ದು ಪುನಃ ಭೂಲೋಕಕ್ಕೆ ಬಂದು ಬ್ರಾಹ್ಮಣ ಜನ್ಮವನ್ನು ಹೊಂದಿದನು.

೫೩–೫೪. ಅತ್ಯಂತ ಪರಿಶುದ್ಧವಾದ ವಂಶದಲ್ಲಿ ಹುಟ್ಟಿ, ಗುಣಶಾಲಿಯು,

ವ್ಯಾಹರನ್ಹರಿನಾಮಾನಿ ಪ್ರಪೇದೇ ಜಾಹ್ನವೀತಟಂ ।
ತತ್ರ ಸ್ನಾತಶ್ಚ ಗಂಗಾಯಾಂ ದೃಷ್ಟ್ವಾ ವಿಶ್ವೇಶ್ವರಂ ಪ್ರಭುಂ ॥ ೫೪ ॥

ಅವಾಪ ಪರಮಂ ಸ್ಥಾನಂ ಯೋಗಿನಾಮಪಿ ದುರ್ಲಭಂ ।
ಉಪಲೇಪನಮಾಹಾತ್ಮ್ಯಂ ಕಥಿತಂ ತೇ ಮುನೀಶ್ವರ ॥ ೫೫ ॥

ತಸ್ಮಾತ್ಸರ್ವಪ್ರಯತ್ನೇನ ಸಂಪೂಜ್ಯೋ ಜಗತಾಂ ಪತಿಃ ।
ಅಕಾಮಾದಪಿ ಯೇ ವಿಷ್ಣೋಃ ಸಕೃತ್ಪೂಜಾಂ ಪ್ರಕುರ್ವತೇ ॥ ೫೬ ॥

ನ ತೇಷಾಂ ಭವಬಂಧಸ್ತು ಕದಾಚಿದಪಿ ಜಾಯತೇ ।
ಹರಿಭಕ್ತಿರತಾನ್ಯಸ್ತು ಹರಿಬುದ್ಧ್ಯಾ ಸಮರ್ಚಯೇತ್ ॥ ೫೭ ॥

ತಸ್ಯ ತುಷ್ಯಂತಿ ವಿಪ್ರೇಂದ್ರ ಬ್ರಹ್ಮವಿಷ್ಣುಮಹೇಶ್ವರಾಃ ।
ಹರಿಭಕ್ತಿಪರಾಣಾಂ ತು ಸಂಗಿನಾಂ ಸಂಗಮಾತ್ರತಃ ॥ ೫೮ ॥

---

ವೇದಪಾರಂಗತನು, ಸಕಲ ಸಂಪತ್ತುಗಳ ಸಮೃದ್ಧಿಯನ್ನು ಹೊಂದಿರುವವನು, ಹರಿಭಕ್ತಿನಿರತನೂ ಆಗಿ ಹರಿನಾಮಸಂಕೀರ್ತನೆ ಮಾಡುತ್ತಾ ಗಂಗಾತೀರಕ್ಕೆ ಬಂದನು.

೫೪-೫೫. ಆ ಗಂಗಾನದಿಯಲ್ಲಿ ಸ್ನಾನಮಾಡಿ, ವಿಶ್ವೇಶ್ವರಸ್ವಾಮಿಯನ್ನು ಸಂದರ್ಶಿಸಿ, ಯೋಗಿಗಳಿಗೂ ಹೊಂದಲಶಕ್ಯವಾದ ಉತ್ತಮಸ್ಥಾನವನ್ನು ಪಡೆದನು. ಮುನೀಶ್ವರನಾದ ನಾರದನೇ! ದೇವಸ್ಥಾನದಲ್ಲಿ ಸಾರಿಸುವುದರ ಮಹಿಮೆಯು ನಿನಗೆ ಹೇಳಲ್ಪಟ್ಟಿತು.

೫೬-೫೭. ಆದಕಾರಣ ಸಕಲ ಪ್ರಯತ್ನಗಳಿಂದಲೂ ಜಗದೊಡೆಯನಾದ ನಾರಾಯಣನನ್ನು ಪೂಜಿಸಬೇಕು. ಇಚ್ಛೆಯಿಲ್ಲದಿದ್ದಾಗ್ಯೂ ಒಂದಾವರ್ತಿಯಾದರೂ ವಿಷ್ಣುಪೂಜೆಯನ್ನು ಮಾಡಿದವರಿಗೆ ಸಂಸಾರಬಂಧವು ಯಾವಾಗಲೂ ಉಂಟಾಗುವುದಿಲ್ಲ.

೫೭-೫೮. ಹರಿಭಕ್ತಿನಿಷ್ಠರಾದವರನ್ನು ಹರಿಪ್ರೀತಿಯ ಉದ್ದೇಶದಿಂದ ಪೂಜಿಸುವವನ ವಿಷಯದಲ್ಲಿ ಬ್ರಹ್ಮವಿಷ್ಣುಮಹೇಶ್ವರರು ಸಂತುಷ್ಟರಾಗಿ ಪ್ರಸನ್ನರಾಗುವರು.

**ಮುಚ್ಯತೇ ಸರ್ವಪಾಪೇಭ್ಯೋ ಮಹಾಪಾತಕವಾನಪಿ ।**
**ಹರಿಪೂಜಾಪರಾಣಾಂ ಚ ಹರಿನಾಮರತಾತ್ಮನಾಂ ।**
**ಶುಶ್ರೂಷಾನಿರತಾ ಯಾಂತಿ ಪಾಪಿನೋಽಪಿ ಪರಾಂ ಗತಿಂ　　॥ ೫೯ ॥**

**ಇತಿ ಶ್ರೀ ಬೃಹನ್ನಾರದೀಯಪುರಾಣೇ ಪೂರ್ವಭಾಗೇ ಪ್ರಥಮಪಾದೇ ವಿಷ್ಣುಸೇವಾಪ್ರಭಾವೋ ನಾಮ ಷಟ್ತ್ರಿಂಶೋಽಧ್ಯಾಯಃ**



೫೮-೫೯. ಹರಿಭಕ್ತಿನಿಷ್ಠರ ಸಂಗಮಾಡಿದವರ ಸಹವಾಸಮಾತ್ರದಿಂದ ಮಹಾಪಾತಕಿಯಾಗಿದ್ದಾಗ್ಯೂ ಸಕಲ ಪಾಪಗಳಿಂದಲೂ ಮುಕ್ತನಾಗುವನು. ಹರಿಪೂಜೆಯಲ್ಲಿ ಆಸಕ್ತರಾಗಿ ಹರಿನಾಮಸಂಕೀರ್ತನಪರರಾದವರ ಸೇವೆಯನ್ನು ಆದರದಿಂದ ಮಾಡುವವರು ಪಾಪಿಗಳಾಗಿದ್ದಾಗ್ಯೂ ಉತ್ತಮ ಗತಿಯನ್ನು ಹೊಂದುವರು.

ಇಂತು ಶ್ರೀಬೃಹನ್ನಾರದೀಯಪುರಾಣದೊಳು ಪೂರ್ವಭಾಗ ಪ್ರಥಮಪಾದದಲ್ಲಿ ವಿಷ್ಣುಸೇವಾ ಪ್ರಭಾವ ವರ್ಣನೆಯೆಂಬ ಮೂವತ್ತಾರನೆಯ ಅಧ್ಯಾಯವು ಮುಗಿದುದು.



## ಕಥಾಸಾರಾಂಶ

ಯಜ್ಞಮಾಲಿ ಸುಮಾಲಿಗಳು ಪಿತ್ರಾರ್ಜಿತವಾದ ಹಣವನ್ನು ಭಾಗ ಮಾಡಿ ಕೊಂಡರು. ಯಜ್ಞಮಾಲಿಯು ವಿಹಿತವೃತ್ತಿಯಿಂದ ಜೀವಿಸುತ್ತಿದ್ದನು. ಸುಮಾಲಿಯು ನಾನಾವಿಧವಾದ ದುರ್ವ್ಯಾಪಾರಗಳನ್ನು ಮಾಡಿ ತನ್ನ ಭಾಗದ ಹಣವನ್ನೆಲ್ಲಾ ಕಳೆದುಕೊಳ್ಳಲು ಅಣ್ಣನಾದ ಯಜ್ಞಮಾಲಿಯು ತಮ್ಮನಿಗೆ ಬುದ್ಧಿವಾದವನ್ನು ಹೇಳಿದನು. ಅವನು ಅದನ್ನು ವಿಪರೀತವಾಗಿ ಗ್ರಹಿಸಿ ಅಣ್ಣನನ್ನೇ ಸಂಹರಿಸಲೆತ್ನಿಸಲು ಪೌರಜನರು ಬಂದು ಬಿಡಿಸಿದರು. ತರುವಾಯ ಪುನಃ ಯಜ್ಞಮಾಲಿಯು ತನ್ನ ಭಾಗದಹಣದಲ್ಲಿ ಅರ್ಧವನ್ನು ಅವನಿಗೆ ಕೊಟ್ಟನು. ಅವನು ಅದನ್ನೂ ಕಳೆದುಕೊಂಡನು. ಯಜ್ಞಮಾಲಿಯು ಪಿತೃಕೃತವಾದ ಕೆರೆ ಮುಂತಾದುವನ್ನು ಜೀರ್ಣೋದ್ಧಾರ ಮಾಡುತ್ತಾ ಸತ್ಕಾಲಕ್ಷೇಪಮಾಡುತ್ತಿದ್ದನು. ಹಾಗೆಯೇ ವಯಸ್ಸಾದಮೇಲೆ ಇಬ್ಬರು ಸೋದರರೂ ಒಂದೇ ಸಮಯದಲ್ಲಿ ಮೃತರಾದರು. ವಿಷ್ಣುದೂತರು ವಿಮಾನತಂದು ಯಜ್ಞಮಾಲಿಯನ್ನು ಕರೆದುಕೊಂಡು ಹೋದರು. ಸುಮಾಲಿಯನ್ನು ಯಮಭಟರು ನಾನಾವಿಧ ಯಾತನೆಗಳನ್ನು ಮಾಡುತ್ತಾ ಒಯ್ಯುತ್ತಿದ್ದರು. ಯಜ್ಞಮಾಲಿಯು ದಾರಿಯಲ್ಲಿ ಇವನ ದುರವಸ್ಥೆಯನ್ನು ನೋಡಿ, ವಿಷ್ಣುದೂತರಿಂದ ಅವನ ವೃತ್ತಾಂತವನ್ನು ತಿಳಿದು, ಅವನನ್ನುದ್ಧರಿಸುವ ಉಪಾಯವನ್ನೂ ಸಹ ಅವರಿಂದಲೇ ತಿಳಿದು ದೇವಗೃಹೋಪಲೇಪನೆಯಿಂದ ತಾನು ಸಂಪಾದಿಸಿದ್ದ ಪುಣ್ಯದಲ್ಲಿ ಕೆಲವು ಭಾಗವನ್ನು ಅವನಿಗೆ ಕೊಟ್ಟು ಉದ್ಧರಿಸಿ ಇಬ್ಬರೂ ಒಟ್ಟಿಗೆ ವಿಷ್ಣುಲೋಕದಲ್ಲಿ ಕಲ್ಪಪರ್ಯಂತವಾಗಿದ್ದರು. ಅನಂತರ ಯಜ್ಞಮಾಲಿಯು ಮೋಕ್ಷವನ್ನು ಪಡೆದನು. ಸುಮಾಲಿಯು ಭೂಲೋಕದಲ್ಲಿ ಬ್ರಾಹ್ಮಣನಾಗಿ ಹುಟ್ಟಿ ಸತ್ಕರ್ಮ ಮಾಡಿ ಸದ್ಗತಿಯನ್ನು ಹೊಂದಿದನು ಎಂಬುದಾಗಿ ವಿಷ್ಣುಸೇವಾಪ್ರಭಾವವು ಉಕ್ತವಾಗಿದೆ.

———

# ಸಪ್ತತ್ರಿಂಶೋಽಧ್ಯಾಯಃ

**ಸನಕ ಉವಾಚ**

**ಭೂಯಃ ಶೃಣುಷ್ವ ವಿಪ್ರೇಂದ್ರ ಮಾಹಾತ್ಮ್ಯಂ ಕಮಲಾಪತೇಃ ।**
**ಕಸ್ಯ ನೋ ಜಾಯತೇ ಪ್ರೀತಿಃ ಶ್ರೋತುಂ ಹರಿಕಥಾಮೃತಂ ॥ ೧ ॥**

**ನರಾಣಾಂ ವಿಷಯಾಂಧಾನಾಂ ಮಮತಾಕುಲಚೇತಸಾಂ ।**
**ಏಕಮೇವ ಹರೇರ್ನಾಮ ಸರ್ವಪಾಪಪ್ರಣಾಶನಂ ॥ ೨ ॥**

**ಸಕೃದ್ವಾ ನ ನಮೇದ್ಯಸ್ತು ವಿಷ್ಣುಂ ಪಾಪಹರಂ ನೃಣಾಂ ।**
**ಶ್ವಪಚಂ ತಂ ವಿಜಾನೀಯಾತ್ಕದಾಚಿನ್ನಾಲಪೇಚ್ಚ ತಂ ॥ ೩ ॥**

**ಹರಿಪೂಜಾವಿಹೀನಂ ತು ಯಸ್ಯ ವೇಶ್ಮ ದ್ವಿಜೋತ್ತಮ ।**
**ಸ್ಮಶಾನಸದೃಶಂ ತದ್ಧಿ ಕದಾಚಿದಪಿ ನೋ ವಿಶೇತ್ ॥ ೪ ॥**

---

## ಮುವತ್ತೇಳನೆಯ ಅಧ್ಯಾಯವು

೧. ಸನಕನು ಹೇಳಿದನು—ಬ್ರಾಹ್ಮಣವರ್ಯನಾದ ನಾರದನೇ! ಲಕ್ಷ್ಮೀ ಪತಿಯಾದ ಶ್ರೀಹರಿಯ ಮಹಾತ್ಮ್ಯೆಯನ್ನು ಪುನಃ ಕೇಳು. ಹರಿಕಥೆಯೆಂಬ ಅಮೃತವನ್ನು ಪಾನಮಾಡಲು ಯಾರಿಗೆ ತಾನೇ ಪ್ರೀತಿಯುಂಟಾಗಲಾರದು ?

೨. ವಿಷಯಭೋಗದಿಂದ ಕುರುಡರಾಗಿ ಮಮತೆಯಿಂದ ವ್ಯಗ್ರಚಿತ್ತರಾದ ಮನುಷ್ಯರಿಗೆ ಹರಿನಾಮವೊಂದೇ ಸರ್ವಪಾಪಪರಿಹಾರಕವು.

೩. ಪಾಪಪರಿಹಾರಕನಾದ ವಿಷ್ಣುವನ್ನು ಒಂದಾವರ್ತಿಯಾದರೂ ನಮಸ್ಕರಿಸದಿರುವ ಮನುಷ್ಯನನ್ನು ಶ್ವಪಚನೆಂದು ತಿಳಿಯಬೇಕು. ಅಂತಹವನೊಡನೆ ಯಾವಾಗಲೂ ಮಾತನಾಡಬಾರದು.

೪. ದ್ವಿಜವರ್ಯನೇ! ಹರಿಪೂಜೆಯು ನಡೆಯದಿರುವ ಮನೆಯು ಸ್ಮಶಾನಕ್ಕೆ ಸಮಾನವು. ಅಂತಹ ಮನೆಗೆ ಯಾವಾಗಲೂ ಹೋಗಬಾರದು.

ಹರಿಪೂಜಾವಿಹೀನಾಶ್ಚ ವೇದವಿದ್ವೇಷಿಣಸ್ತಥಾ ।
ಗೋದ್ವಿಜದ್ವೇಷನಿರತಾ ರಾಕ್ಷಸಾಃ ಪರಿಕೀರ್ತಿತಾಃ ॥ ೫ ॥

ಯೋ ವಾ ಕೋ ವಾऽಪಿ ವಿಪ್ರೇಂದ್ರ ವಿಪ್ರದ್ವೇಷಪರಾಯಣಃ ।
ಸಮರ್ಚಯತಿ ಗೋವಿಂದಂ ತತ್ಪೂಜಾ ವಿಫಲಾ ಭವೇತ್ ॥ ೬ ॥

ಅನ್ಯಶ್ರೇಯೋವಿನಾಶಾರ್ಥಂ ಯೋऽರ್ಚಯಂತಿ ಜನಾರ್ದನಂ ।
ಸಾ ಪೂಜೈವ ಮಹಾಭಾಗ ಪೂಜಕಾನಾಶು ಹಂತಿ ವೈ ॥ ೭ ॥

ಹರಿಪೂಜಾಕರೋ ಯಸ್ತು ಯದಿ ಪಾಪಂ ಸಮಾಚರೇತ್ ।
ತಮೇವ ವಿಷ್ಣುದ್ವೇಷ್ಟಾರಂ ಪ್ರಾಹುಸ್ತತ್ತ್ವಾರ್ಥಕೋವಿದಾಃ ॥ ೮ ॥

ಯೇ ವಿಷ್ಣುನಿರತಾಃ ಸಂತಿ ಲೋಕಾನುಗ್ರಹತತ್ಪರಾಃ ।
ಧರ್ಮಕಾರ್ಯರತಾಃ ಶಶ್ವದ್ವಿಷ್ಣುರೂಪಾಸ್ತು ತೇ ಮತಾಃ ॥ ೯ ॥

---

೫. ಹರಿಪೂಜೆಯನ್ನು ಮಾಡದಿರುವವರು, ವೇದ ಗೋವು ದ್ವಿಜ ಇವರುಗಳಲ್ಲಿ ದ್ವೇಷಮಾಡುವವರೂ ಸಹ ರಾಕ್ಷಸರೆಂದು ತಿಳಿಯಬೇಕು.

೬. ವಿಪ್ರೇಂದ್ರನೇ! ಯಾರೇ ಆಗಲಿ ಬ್ರಾಹ್ಮಣರನ್ನು ದ್ವೇಷಿಸುತ್ತಾ ಹರಿಯನ್ನು ಪೂಜಿಸಿದರೆ ಆ ಪೂಜೆಯು ನಿಷ್ಫಲವಾಗುತ್ತದೆ.

೭. ಪರರ ಶ್ರೇಯಸ್ಸನ್ನು ಹಾಳುಮಾಡುವುದಕ್ಕಾಗಿ ಮಾಡುವ ವಿಷ್ಣು ಪೂಜೆಯು ಅಂತಹ ಪೂಜೆಮಾಡಿದವರನ್ನೇ ಶೀಘ್ರವಾಗಿ ಸಂಹರಿಸುತ್ತದೆ.

೮. ಹರಿಪೂಜೆಯನ್ನು ಮಾಡುವವನು ಪಾಪಕೃತ್ಯವನ್ನು ಮಾಡಿದರೆ ಅಂತಹವನನ್ನು ವಿಷ್ಣುದ್ವೇಷಿಯೆಂದು ತತ್ವಜ್ಞರು ಹೇಳುತ್ತಾರೆ.

೯. ಲೋಕಾನುಗ್ರಹಪರರು, ಧರ್ಮಕಾರ್ಯದಲ್ಲಿ ನಿರತರೂ ಆದ ವಿಷ್ಣುಭಕ್ತರು ವಿಷ್ಣುವಿನ ಪರಮಾನುಗ್ರಹಪಾತ್ರರಾದ್ದರಿಂದ ಸಾಕ್ಷಾತ್ ವಿಷ್ಣು ರೂಪರೆಂದು ಉಕ್ತರಾಗಿದ್ದಾರೆ.

**ಕೋಟಿಜನ್ಮಾರ್ಜಿತೈಃ ಪುಣ್ಯೈರ್ವಿಷ್ಣುಭಕ್ತಿಃ ಪ್ರಜಾಯತೇ ।**
**ದೃಢಭಕ್ತಿಮತಾಂ ವಿಷ್ಣೌ ಪಾಪಬುದ್ಧಿಃ ಕಥಂ ಭವೇತ್ ॥ ೧೦ ॥**

**ಜನ್ಮಕೋಟ್ಯರ್ಜಿತಂ ಪಾಪಂ ವಿಷ್ಣುಪೂಜಾರತಾತ್ಮನಾಂ ।**
**ಕ್ಷಯಂ ಯಾಂತಿ ಕ್ಷಣಾದೇವ ತೇಷಾಂ ಸ್ಯಾತ್ಪಾಪಧೀಃ ಕಥಂ ॥ ೧೧ ॥**

**ವಿಷ್ಣುಭಕ್ತಿವಿಹೀನಾ ಯೇ ಚಂಡಲಾಃ ಪರಿಕೀರ್ತಿತಾಃ ।**
**ಚಂಡಾಲಾ ಅಪಿ ವೈ ಶ್ರೇಷ್ಠಾ ಹರಿಭಕ್ತಿಪರಾಯಣಾಃ ॥ ೧೨ ॥**

**ನರಾಣಾಂ ವಿಷಯಾಂಧನಾಂ ಸರ್ವದುಃಖವಿನಾಶಿನೀ ।**
**ಹರಿಸೇವೇತಿ ವಿಖ್ಯಾತಾ ಭುಕ್ತಿಮುಕ್ತಿಪ್ರದಾಯಿನೀ ॥ ೧೩ ॥**

**ಸಂಗಾತ್ಸ್ನೇಹಾದ್ಭಯಾಲ್ಲೋಭಾದಜ್ಞಾನಾದ್ವಾಪಿ ಯೋ ನರಃ ।**
**ವಿಷ್ಣೋರುಪಾಸನಂ ಕುರ್ಯಾತ್ಸೋಽಕ್ಷಯ್ಯಂ ಸುಖಮಶ್ನುತೇ ॥ ೧೪ ॥**

---

೧೦. ಕೋಟ್ಯಂತರ ಜನ್ಮಗಳಲ್ಲಿ ಸಂಪಾದಿಸಲ್ಪಟ್ಟ ಪುಣ್ಯಗಳಿಂದ ವಿಷ್ಣುಭಕ್ತಿಯುಂಟಾಗುತ್ತದೆ. ಆದಕಾರಣ ವಿಷ್ಣುವಿನಲ್ಲಿ ದೃಢವಾದ ಭಕ್ತಿಯುಳ್ಳವರಿಗೆ ಪಾಪಕೃತ್ಯದಲ್ಲಿ ಬುದ್ಧಿಯು ಹೇಗೆ ಬಂದೀತು ?

೧೧. ಕೋಟಿಜನ್ಮಗಳಲ್ಲಿ ಗಳಿಸಿದ ಪಾಪವು ವಿಷ್ಣುಪೂಜೆಯಲ್ಲಿ ನಿರತರಾದವರಿಗೆ ಕ್ಷಣಮಾತ್ರದಲ್ಲಿ ನಾಶವಾಗುತ್ತದೆ. ಅಂತಹ ವಿಷ್ಣುಭಕ್ತರಿಗೆ ಪಾಪಬುದ್ಧಿಯು ಹೇಗೆ ಉಂಟಾದೀತು ?

೧೨. ವಿಷ್ಣುಭಕ್ತಿಯಿಲ್ಲದವರು ಚಂಡಾಲರೆಂದು ಉಕ್ತವಾಗಿದೆ. ಚಂಡಾಲರೂ ಸಹ ಹರಿಭಕ್ತಿನಿಷ್ಠರಾದರೆ ಉತ್ತಮರಾಗುವರು.

೧೩. ಹರಿಸೇವೆಯು ವಿಷಯಭೋಗಗಳಲ್ಲಿ ಮಗ್ನರಾಗಿ ಕುರುಡರಾಗಿರುವ ಮನುಷ್ಯರಿಗೆ ಸಕಲದುಃಖವನ್ನೂ ಪರಿಹರಿಸಿ ಭಕ್ತಿಮುಕ್ತಿಪ್ರದಾಯಕವಾದುದೆಂದು ಪ್ರಸಿದ್ಧವಾಗಿದೆ.

೧೪. ಸಹವಾಸ, ಸ್ನೇಹ, ಭಯ, ಲೋಭ, ಅಥವಾ ಅಜ್ಞಾನ ಇವುಗಳಿಂದಲಾದರೂ ವಿಷ್ಣೂಪಾಸನೆಮಾಡುವ ಮನುಷ್ಯನು ಶಾಶ್ವತಸುಖವನ್ನು ಪಡೆಯುವನು.

ಹರಿಪಾದೋದಕಂ ಯಸ್ತು ಕಣಮಾತ್ರಂ ಪಿಬೇದಪಿ ।
ಸ ಸ್ನಾತಃ ಸರ್ವತೀರ್ಥೇಷು ವಿಷ್ಣೋಃ ಪ್ರಿಯತರೋ ಭವೇತ್ ॥ ೧೫ ॥

ಅಕಾಲಮೃತ್ಯುಶಮನಂ ಸರ್ವವ್ಯಾಧಿವಿನಾಶನಂ ।
ಸರ್ವದುಃಖೋಪಶಮನಂ ಹರಿಪಾದೋದಕಂ ಸ್ಮೃತಂ ॥ ೧೬ ॥

ನಾರಾಯಣಂ ಪರಂಧಾಮ ಜ್ಯೋತಿಷಾಂ ಜ್ಯೋತಿರುತ್ತಮಂ ।
ಯೇ ಪ್ರಪನ್ನಾ ಮಹಾತ್ಮಾನಸ್ತೇಷಾಂ ಮುಕ್ತಿರ್ಹಿ ಶಾಶ್ವತೀ ॥ ೧೭ ॥

ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಂ ।
ಪಠತಾಂ ಶೃಣ್ವತಾಂ ಚೈವ ಸರ್ವಪಾಪಪ್ರಣಾಶನಂ ॥ ೧೮ ॥

ಆಸೀತ್ಪುರಾ ಕೃತಯುಗೇ ಗುಲಿಕೋ ನಾಮ ಲುಬ್ಧಕಃ ।
ಪರದಾರಪರದ್ರವ್ಯಹರಣೇ ಸತತೋದ್ಯತಃ ॥ ೧೯ ॥

---

೧೫. ಒಂದು ತೊಟ್ಟನ್ನಾದರೂ ವಿಷ್ಣುಪಾದೋದಕವನ್ನು ಕುಡಿದವನು ಸಕಲ ತೀರ್ಥಗಳಲ್ಲಿಯೂ ಸ್ನಾನಮಾಡಿದ ಫಲವನ್ನು ಹೊಂದಿ ವಿಷ್ಣುವಿನ ಪರಮಾನುಗ್ರಹಕ್ಕೆ ಪಾತ್ರನಾಗುವನು.

೧೬. ಹರಿಪಾದೋದಕವು ಅಕಾಲಮೃತ್ಯು, ಸಕಲರೋಗಗಳು ಮತ್ತು ಸಕಲದುಃಖಗಳು ಇವುಗಳನ್ನು ನಾಶಪಡಿಸುತ್ತದೆ.

೧೭. ಪ್ರಕಾಶಗಳಿಗೆಲ್ಲಾ ಪ್ರಕಾಶನಶಕ್ತಿಪ್ರದನಾಗಿ ಉತ್ಕೃಷ್ಟತೇಜೋರೂಪನಾದ ನಾರಾಯಣನನ್ನು ಶರಣುಹೊಂದಿದ ಮಹಾತ್ಮರಿಗೆ ಶಾಶ್ವತ ಮುಕ್ತಿಯುಂಟಾಗುವುದು.

೧೮. ಈ ವಿಷಯದಲ್ಲಿ ಉದಾಹರಣೆಯಾಗಿ ಪುರಾತನೇತಿಹಾಸವೊಂದನ್ನು ಹೇಳುತ್ತಾರೆ. ಅದನ್ನು ಶ್ರವಣ ಪಠನ ಮಾಡುವವರಿಗೆ ಸಕಲ ಪಾಪಗಳೂ ನಾಶವಾಗುತ್ತವೆ.

೧೯. ವಿಪ್ರನೇ ! ಹಿಂದೆ ಕೃತಯುಗದಲ್ಲಿ ಗುಲಿಕನೆಂಬ ಒಬ್ಬ ವ್ಯಾಧನಿದ್ದನು. ಅವನು ಪರಸ್ತ್ರೀ ಪರದ್ರವ್ಯ ಇವುಗಳನ್ನು ಅಪಹರಿಸುವುದರಲ್ಲಿ ಯಾವಾಗಲೂ ನಿರತನಾಗಿದ್ದನು.

ಪರನಿಂದಾಪರೋ ನಿತ್ಯಂ ಜಂತೂಪದ್ರವಕೃತ್ತಥಾ ।
ಹೃತವಾನ್ಬ್ರಾಹ್ಮಣಾನ್ಗಾಶ್ಚ ಶತಶೋಽಥ ಸಹಸ್ರಶಃ ॥ ೨೦ ॥

ದೇವಸ್ವಹರಣೇ ನಿತ್ಯಂ ಪರಸ್ವಹರಣೇ ತಥಾ ।
ಉದ್ಯುಕ್ತಃ ಸರ್ವದಾ ವಿಪ್ರ ಕೀನಾಶಾನಾಮಧೀಶ್ವರಃ ॥ ೨೧ ॥

ತೇನ ಪಾಪಾನ್ಯನೇಕಾನಿ ಕೃತಾನಿ ಸುಮಹಾಂತಿ ಚ ।
ನ ತೇಷಾಂ ಶಕ್ಯತೇ ವಕ್ತುಂ ಸಂಖ್ಯಾ ವತ್ಸರಕೋಟಿಭಿಃ ॥ ೨೨ ॥

ಸ ಕದಾಚಿನ್ಮಹಾಪಾಪೋ ಜಂತೂನಾಮಂತಕೋಪಮಃ ।
ಸೌವೀರರಾಜ್ಞೋ ನಗರಂ ಸರ್ವೈರೈಶ್ವರ್ಯಸಮನ್ವಿತಂ ॥ ೨೩ ॥

ಯೋಷಿದ್ಭಿರ್ಭೂಷಿತಾಭಿಶ್ಚ ಸರೋಭಿರ್ನಿರ್ಮಲೋದಕೈಃ ।
ಅಲಂಕೃತಂ ವಿಪಣಿಭಿರ್ಯಯೌ ದೇವಪುರೋಪಮಂ ॥ ೨೪ ॥

---

೨೦. ಸರ್ವದಾ ಪರದೂಷಣೆಮಾಡುತ್ತಾ ಪ್ರಾಣಿಗಳನ್ನು ಹಿಂಸಿಸುವವನಾಗಿ ನೂರಾರು ಅಥವಾ ಸಾವಿರಾರು ಬ್ರಾಹ್ಮಣರು ಮತ್ತು ಗೋವುಗಳು ಇವರನ್ನು ಅಪಹರಿಸಿದನು.

೨೧. ಆ ವ್ಯಾಧನು ದೇವರ ಸ್ವತ್ತು ಮತ್ತು ಪರಸ್ವತ್ತುಗಳನ್ನಪಹರಿಸುವುದರಲ್ಲಿಯೇ ಯಾವಾಗಲೂ ಆಸಕ್ತನಾಗಿದ್ದನು.

೨೨. ಆ ಗುಳಕನಿಂದ ಅನೇಕ ದೊಡ್ಡ ಪಾಪಗಳು ಕೃತವಾಗಿವೆ. ಅವುಗಳ ಲೆಕ್ಕವನ್ನು ಹೇಳಲು ಕೋಟಿವರ್ಷಗಳಾದರೂ ಸಾಧ್ಯವಾಗುವುದಿಲ್ಲ.

೨೩-೨೪. ಪ್ರಾಣಿಗಳಿಗೆ ಯಮನಂತಿರುವ ಆ ಮಹಾಪಾಪಿಯು ಒಂದಾನೊಂದುಕಾಲದಲ್ಲಿ ಸಕಲೈಶ್ವರ್ಯದಿಂದ ಕೂಡಿದ, ಅಲಂಕಾರ ಮಾಡಿಕೊಂಡಿರುವ ಸ್ತ್ರೀಯರು, ಪರಿಶುದ್ಧವಾದ ಜಲದಿಂದ ತುಂಬಿದ ಸರೋವರಗಳು, ಅಂಗಡಿಗಳು ಇವುಗಳಿಂದ ಅಲಂಕೃತವಾದ, ಇಂದ್ರಪಟ್ಟಣಕ್ಕೆ ಸದೃಶವಾದ, ಸೌವೀರರಾಜನ ಪಟ್ಟಣಕ್ಕೆ ಹೋದನು.

**ತಸ್ಯೋಪವನಮಧ್ಯಸ್ಥಂ ರಮ್ಯಂ ಕೇಶವಮಂದಿರಂ ।**
**ಛಾದಿತಂ ಹೇಮಕಲಶೈರ್ದೃಷ್ಟ್ವಾ ವ್ಯಾಧೋ ಮುದಂ ಯಯೌ ॥ ೨೫ ॥**

**ಹರಾಮ್ಯತ್ರ ಸುವರ್ಣಾನಿ ಬಹೂನೀತಿ ವಿನಿಶ್ಚಿತಂ ।**
**ಜಗಾಮಾಭ್ಯಂತರಂ ತಸ್ಯ ಕೀನಾಶಶ್ಚಾರ್ಯಲೋಲುಪಃ ॥ ೨೬ ॥**

**ತತ್ರಾಪಶ್ಯದ್ದ್ವಿಜವರಂ ಶಾಂತಂ ತತ್ತ್ವಾರ್ಥಕೋವಿದಂ ।**
**ಪರಿಚರ್ಯಾಪರಂ ವಿಷ್ಣೋರುತ್ತಂಕಂ ತಪಸಾಂ ನಿಧಿಂ ॥ ೨೭ ॥**

**ಏಕಾಕಿನಂ ದಯಾಳುಂ ಚ ನಿಃಸ್ಪೃಹಂ ಧ್ಯಾನಲೋಲುಪಂ ।**
**ಚೌರ್ಯಾಂತರಾಯಕರ್ತಾರಂ ತಂ ದೃಷ್ಟ್ವಾ ಲುಬ್ಧಕೋ ಮುನೇ ॥ ೨೮ ॥**

**ದ್ರವ್ಯಜಾತಂ ತು ದೇವಸ್ಯ ಹರ್ತುಕಾಮೋಽತಿಸಾಹಸೀ ।**
**ಉತ್ತಂಕಂ ಹಂತುಮಾರೇಭೇ ವಿಧೃತಾಸಿರ್ಮದೋದ್ಧತಃ ॥ ೨೯ ॥**

---

೨೫. ಆ ಪಟ್ಟಣದ ತೋಟದ ಮಧ್ಯಭಾಗದಲ್ಲಿದ್ದ ಬಂಗಾರದ ಕಲಶಗಳಿಂದ ಆಚ್ಛಾದಿತವಾದ, ಮನೋಹರವಾದ ಕೇಶವ ದೇವಾಲಯವನ್ನು ವ್ಯಾಧನು ನೋಡಿ ಸಂತೋಷಪಟ್ಟನು.

೨೬. ಕದಿಯುವುದರಲ್ಲೇ ಆಸಕ್ತನಾದ ಆ ಲುಬ್ಧಕನು ಈ ದೇವಾಲಯದಲ್ಲಿ ಬಹು ಬಂಗಾರವನ್ನು ಅಪಹರಿಸುವೆನೆಂದು ನಿಶ್ಚೈಸಿ ಅದರೊಳಕ್ಕೆ ಹೋದನು.

೨೭. ಅಲ್ಲಿ ಶಾಂತನು, ತತ್ತ್ವಜ್ಞಾನಿಯು, ವಿಷ್ಣುಸೇವಾನಿರತನು ತಪೋನಿಧಿಯೂ ಆದ ಉತ್ತಂಕನೆಂಬ ಬ್ರಾಹ್ಮಣಶ್ರೇಷ್ಠನನ್ನು ನೋಡಿದನು.

೨೮-೨೯. ನಾರದಮುನಿಯೇ ! ಆಶಾಪರನಾದ ವ್ಯಾಧನು ಏಕಾಕಿಯು, ದಯಾಳುವು, ಆಶೆಯಿಲ್ಲದವನು, ಧ್ಯಾನದಲ್ಲಿ ಮಗ್ನನಾಗಿರುವವನೂ ಆದ ಉತ್ತಂಕನನ್ನು ತಾನು ಕದಿಯುವುದಕ್ಕೆ ವಿಘ್ನಕಾರಿಯೆಂದು ತಿಳಿದು ದೇವರ ದ್ರವ್ಯವನ್ನೆಲ್ಲಾ ಅಪಹರಿಸಬೇಕೆಂದಪೇಕ್ಷೆಯುಳ್ಳವನಾಗಿ ಮದದಿಂದ ಕೊಬ್ಬಿ ಅತ್ಯಂತ ಸಾಹಸದಿಂದ ಕತ್ತಿಯನ್ನು ತೆಗೆದುಕೊಂಡು ಉತ್ತಂಕನನ್ನು ಹಿಂಸಿಸಲು ಆರಂಭಿಸಿದನು.

ಪಾದೇನಾಕ್ರಮ್ಯ ತದ್ವಕ್ಷೋ ಜಟಾಃ ಸಂಗೃಹ್ಯ ಪಾಣಿನಾ ।
ಹಂತುಂ ಕೃತಮತಿಂ ವ್ಯಾಧಮುತ್ತಂಕಃ ಪ್ರೇಕ್ಷ್ಯ ಚಾಬ್ರವೀತ್ ॥ ೩೦ ॥

ಉತ್ತಂಕ ಉವಾಚ

ಭೋ ಭೋ ಸಾಧೋ ವೃಥಾ ಮಾಂ ತ್ವಂ ಹನಿಷ್ಯಸಿ ನಿರಾಗಸಂ ।
ಮಯಾ ಕಿಮಪರಾದ್ಧಂ ತೇ ತದ್ವದಸ್ವ ಮಹಾಮತೇ ॥ ೩೧ ॥

ಕೃತಾಪರಾಧಿನಾಂ ಲೋಕೇ ಶಕ್ತಾಃ ಶಿಕ್ಷಾಂ ಪ್ರಕುರ್ವತೇ ।
ನ ಹಿ ಸೌಮ್ಯ ವೃಥಾ ಘ್ನಂತಿ ಸಜ್ಜನಾ ಅಪಿ ಪಾಪಿನಃ ॥ ೩೨ ॥

ವಿರೋಧಿಷ್ವಪಿ ಮೂರ್ಖೇಷು ನಿರೀಕ್ಷ್ಯಾವಸ್ಥಿತಾನ್ಗುಣಾನ್ ।
ವಿರೋಧಂ ನ ಹಿ ಕುರ್ವಂತಿ ಸಜ್ಜನಾಃ ಶಾಂತಚೇತಸಃ ॥ ೩೩ ॥

ಬಹುಧಾ ಬಾಧ್ಯಮಾನೋಽಪಿ ಯೋ ನರಃ ಕ್ಷಮಯಾನ್ವಿತಃ ।
ತಮುತ್ತಮಂ ನರಂ ಪ್ರಾಹುರ್ವಿಷ್ಣೋಃ ಪ್ರಿಯತರಂ ಸದಾ ॥ ೩೪ ॥

---

೩೦. ವಕ್ಷಸ್ಥಲವನ್ನು ಕಾಲಿನಿಂದ ತುಳಿದುಕೊಂಡು ಜಟೆಗಳನ್ನು ಕೈಯಿಂದ ಹಿಡಿದು ತನ್ನನ್ನು ಸಂಹರಿಸಲು ನಿಶ್ಚಯಮಾಡಿದ ವ್ಯಾಧನನ್ನು ನೋಡಿ ಉತ್ತಂಕನು ಹೀಗೆ ಹೇಳಿದನು.

೩೧. ಮಹಾಬುದ್ಧಿವಂತನಾದ ಸಾಧುವೇ! ನಿರಪರಾಧಿಯಾದ ನನ್ನನ್ನು ಏಕೆ ಕೊಲ್ಲುವೆ? ನಾನು ನಿನಗೆ ಏನು ತಪ್ಪುಮಾಡಿದೆನು? ಅದನ್ನು ಹೇಳು.

೩೨. ಸೌಮ್ಯನೇ! ಲೋಕದಲ್ಲಿ ಶಕ್ತರಾದವರು ತಪ್ಪುಮಾಡಿದವರನ್ನು ಶಿಕ್ಷಿಸುವರು. ಸಜ್ಜನರು ಪಾಪಿಗಳನ್ನೂ ಸಹ ನಿಷ್ಕಾರಣವಾಗಿ ಕೊಲ್ಲುವುದಿಲ್ಲ.

೩೩. ಶಾಂತಚಿತ್ತರಾದ ಸಜ್ಜನರು ದ್ವೇಷಿಗಳಾದಾಗ್ಯೂ ಮೂರ್ಖರಲ್ಲಿರುವ ಗುಣಗಳನ್ನು ನೋಡಿ ಅವರನ್ನು ವಿರೋಧಿಸುವುದಿಲ್ಲ.

೩೪. ಬಹು ವಿಧವಾಗಿ ಬಾಧಿಸಲ್ಪಟ್ಟರೂ ಸಹನೆಯಿಂದಿರುವ ಮನುಷ್ಯನನ್ನು ಉತ್ತಮನು, ಸರ್ವದಾ ವಿಷ್ಣುಪ್ರೀತಿಪಾತ್ರನು ಎಂಬುದಾಗಿ ಹೇಳಿರುತ್ತಾರೆ.

**ಸುಜನೋ ನ ಯಾತಿ ವೈರಂ ಪರಹಿತಬುದ್ಧಿರ್ವಿನಾಶಕಾಲೇऽಪಿ ।**
**ಛೇದೇऽಪಿ ಚಂದನತರುಃ ಸುರಭಯತಿ ಮುಖಂ ಕುಠಾರಸ್ಯ ॥ ೩೫ ॥**

**ಅಹೋ ವಿಧಿಃ ಸುಬಲವಾನ್ಬಾಧತೇ ಬಹುಧಾ ಜನಾನ್ ।**
**ಸರ್ವಸಂಗವಿಹೀನೋऽಪಿ ಬಾಧ್ಯತೇ ಹಿ ದುರಾತ್ಮನಾ ॥ ೩೬ ॥**

**ಅಹೋ ನಿಷ್ಕಾರಣಂ ಲೋಕೇ ಬಾಧತೇ ಬಹುಧಾ ಜನಾನ್ ।**
**ಸರ್ವಸಂಗವಿಹೀನೋಽಪಿ ಬಾಧ್ಯತೇ ಪಿಶುನೈರ್ಜನೈಃ ।**
**ತತ್ರಾಪಿ ಸಾಧೂನ್ಬಾಧಂತೇ ನ ಸಮಾನಾನ್ಕದಾಚನ ॥ ೩೭ ॥**

**ಮೃಗಮೀನಸಜ್ಜನಾನಾಂ ತೃಣಜಲಸಂತೋಷವಿಹಿತವೃತ್ತೀನಾಂ ।**
**ಲುಬ್ಧಕಧೀವರಪಿಶುನಾ ನಿಷ್ಕಾರಣವೈರಿಣೋ ಜಗತಿ ॥ ೩೮ ॥**

---

೩೫. ಸಜ್ಜನರು ತಮಗೆ ವಿನಾಶಕಾಲ ಬಂದಾಗ್ಯೂ ಪರೋಪಕಾರ ಮಾಡಬೇಕೆಂಬ ಬುದ್ಧಿಯುಳ್ಳವರೇ ಆಗಿರುತ್ತಾರೆ. ಅವರು ಯಾರನ್ನೂ ದ್ವೇಷಿಸುವುದಿಲ್ಲ. ಗಂಧದ ಮರವನ್ನು ಕತ್ತರಿಸಿದರೂ ಸಹ ಅದು ತನ್ನನ್ನು ಕತ್ತರಿಸಿದ ಕೊಡಲಿಯ ಮುಖಭಾಗವನ್ನು ಸುಗಂಧವುಳ್ಳದನ್ನಾಗಿಯೇ ಮಾಡುತ್ತದೆ.

೩೬. ಅಯ್ಯೋ! ವಿಧಿಯು ಬಲಿಷ್ಠವು. ಜನಗಳನ್ನು ಬಹುವಿಧವಾಗಿ ಬಾಧಿಸುತ್ತದೆ. ಸರ್ವಸಂಗರಹಿತನಾದಾಗ್ಯೂ ಸುಜನನು ದುಷ್ಟಜನರಿಂದ ಬಾಧಿಸಲ್ಪಡುತ್ತಾನೆ.

೩೭. ಅಯ್ಯೋ! ಲೋಕದಲ್ಲಿ ದುಷ್ಟರು ಕಾರಣವಿಲ್ಲದೇ ಅನೇಕವಿಧವಾಗಿ ಜನರನ್ನು ಬಾಧಿಸುವರು. ಸರ್ವಸಂಗಪರಿತ್ಯಾಗ ಮಾಡಿದವನನ್ನೂ ಚಾಡಿಕೋರರು ಹಿಂಸಿಸುವರು. ಅದರಲ್ಲಿಯೂ ಸಾಧುಗಳನ್ನು ವಿಶೇಷವಾಗಿ ಹಿಂಸಿಸುವರು. ತಮಗೆ ಸಮಾನರು ಅಥವಾ ಅಧಿಕರನ್ನು ಯಾವಾಗಲೂ ಹಿಂಸಿಸುವುದಿಲ್ಲ.

೩೮. ಹುಲ್ಲು ತಿಂದು ಜೀವಿಸುವ ಜಿಂಕೆ, ನೀರುಕುಡಿದು ಬದುಕಿರುವ ಮೀನು ಮತ್ತು ಸಂತೋಷವಾಗಿ ವಿಹಿತವ್ಯಾಪಾರವನ್ನು ಮಾಡುತ್ತಿರುವ ಸಜ್ಜನರು ಇವರುಗಳಿಗೆ ಲೋಕದಲ್ಲಿ ನಿಷ್ಕಾರಣವಾಗಿ ಬೇಡನು, ಬೆಸ್ತ, ದುರ್ಜನ ಇವರುಗಳು ಶತ್ರುಗಳಾಗುವರು.

ಅಹೋ ಬಲವತೀ ಮಾಯಾ ಮೋಹಯತ್ಯಖಿಲಂ ಜಗತ್ ।
ಪುತ್ರಮಿತ್ರಕಲತ್ರಾರ್ಥಂ ಸರ್ವಂ ದುಃಖೇನ ಯೋಜಯೇತ್ ॥ ೩೯ ॥
ಪರದ್ರವ್ಯಾಪಹಾರೇಣ ಕಲತ್ರಂ ಪೋಷಿತಂ ತ್ವಯಾ ॥ ೪೦ ॥

ಅಂತೇ ತತ್ಸರ್ವಮುತ್ಸೃಜ್ಯ ಏಕ ಏವ ಪ್ರಯಾತಿ ವೈ ।
ಮಮ ಮಾತಾ ಮಮ ಪಿತಾ ಮಮ ಭಾರ್ಯಾ ಮಮಾತ್ಮಜಾಃ ॥ ೪೧ ॥

ಮಮೇದಮಿತಿ ಜಂತೂನಾಂ ಮಮತಾ ಬಾಧತೇ ವೃಥಾ ।
ಯಾವದರ್ಜಯತಿ ದ್ರವ್ಯಂ ತಾವದೇವ ಹಿ ಬಾಂಧವಾಃ ॥ ೪೨ ॥

ಧರ್ಮಾಧರ್ಮೌ ಸಹೈವಾಸ್ತಾಮಿಹಾಮುತ್ರ ನ ಚಾಪರಃ ।
ಧರ್ಮಾಧರ್ಮಾರ್ಜಿತೈರ್ದ್ರವ್ಯೈಃ ಪೋಷಿತಾ ಯೇನ ಯೇ ನರಾಃ ॥ ೪೩ ॥

ಮೃತಮಗ್ನಿಮುಖೇ ಹುತ್ವಾ ಘೃತಾನ್ನಂ ಭುಂಜತೇ ಹಿ ತೇ ।
ಗಚ್ಛಂತಂ ಪರಲೋಕಂ ಚ ನರಂ ತು ಹ್ಯನುತಿಷ್ಠತಃ ॥ ೪೪ ॥

---

೩೯. ಅಯ್ಯೋ ! ಮಾಯೆಯು ಬಲಿಷ್ಠವು. ಅದು ಸಕಲಲೋಕವನ್ನೂ ಮೋಹಪಡಿಸುತ್ತದೆ. ಮಕ್ಕಳು, ಸ್ನೇಹಿತರು ಹೆಂಡತಿ ಇವರಿಗಾಗಿ ಸರ್ವ ದುಃಖಗಳನ್ನೂ ಅನುಭವಿಸುವಂತೆ ಮಾಡುತ್ತದೆ.

೪೦–೪೨. ಪರದ್ರವ್ಯವನ್ನಪಹರಿಸಿ ಹೆಂಡತಿಯನ್ನು ನೀನು ಕಾಪಾಡಿದೆ. ಆದರೂ ಕೊನೆಯಲ್ಲಿ ಎಲ್ಲವನ್ನೂ ಬಿಟ್ಟು ಒಬ್ಬನೇ ಹೊರಡಬೇಕು. ನನ್ನ ತಾಯಿ, ನನ್ನ ತಂದೆ, ನನ್ನ ಹೆಂಡತಿ, ನನ್ನ ಮಕ್ಕಳು, ನನ್ನ ಮನೆ ಎಂಬುದಾಗಿ ಜನರಿಗೆ ಮಮತೆಯು (ಅಭಿಮಾನ) ಸುಮ್ಮನೇ ಬಾಧಿಸುತ್ತದೆ. ದ್ರವ್ಯವನ್ನು ಸಂಪಾದಿಸಿ ಕೊಡುತ್ತಿರುವವರೆಗೂ ಬಂಧುಗಳು ಆದರಿಸುವರು.

೪೩-೪೪. ಧರ್ಮ ಮತ್ತು ಅಧರ್ಮಗಳು ಮಾತ್ರವೇ ಮನುಷ್ಯನ ಜೊತೆಯಲ್ಲಿ ಬರುತ್ತವೆ. ಇನ್ನಾವುದೂ ಬರುವುದಿಲ್ಲ. ಧರ್ಮಾಧರ್ಮಗಳಿಂದ ಸಂಪಾದಿತವಾದ ದ್ರವ್ಯದಿಂದ ಪೋಷಿಸಲ್ಪಟ್ಟ ಜನರು, ಪೋಷಕನು ಸತ್ತರೆ ಅವನನ್ನು ಬೆಂಕಿಯಿಂದ ಸುಟ್ಟು ತುಪ್ಪಾನ್ನವನ್ನು ಭೋಜನ ಮಾಡುವರು.

ಧರ್ಮಾಧರ್ಮೌ ನ ಚ ಧನಂ ನ ಪುತ್ರಾ ನ ಚ ಬಾಂಧವಾಃ ।
ಕಾಮಃ ಸಮೃದ್ಧಿಮಾಯಾತಿ ನರಾಣಾಂ ಪಾಪಕರ್ಮಿಣಾಂ ॥ ೪೫ ॥

ಕಾಮಃ ಸಂಕ್ಷಯಮಾಯಾತಿ ನರಾಣಾಂ ಪುಣ್ಯಕರ್ಮಿಣಾಂ ।
ವೃಥೈವ ವ್ಯಾಕುಲಾ ಲೋಕಾ ಧನಾದೀನಾಂ ಸದಾಽಽರ್ಜನೇ ॥ ೪೬ ॥

ಯದ್ಭಾವಿ ತದ್ಭವತ್ಯೇವ ಯದಭಾವ್ಯಂ ನ ತದ್ಭವೇತ್ ।
ಇತಿ ನಿಶ್ಚಿತಬುದ್ಧೀನಾಂ ನ ಚಿಂತಾ ಬಾಧತೇ ಕ್ವಚಿತ್ ॥ ೪೭ ॥

ದೈವಾಧೀನಮಿದಂ ಸರ್ವಂ ಜಗತ್ಸ್ಥಾವರಜಂಗಮಂ ।
ತಸ್ಮಾಜ್ಜನ್ಮ ಚ ಮೃತ್ಯುಂ ಚ ದೈವಂ ಜಾನಾತಿ ನಾಪರಃ ॥ ೪೮ ॥

ಯತ್ರ ಕುತ್ರ ಸ್ಥಿತಸ್ಯಾಪಿ ಯದ್ಭಾವ್ಯಂ ತದ್ಭವೇದ್ಧ್ರುವಂ ।
ಲೋಕಸ್ತು ತದವಿಜ್ಞಾಯ ವೃಥಾಽಽಯಾಸಂ ಕರೋತಿ ಹಿ ॥ ೪೯ ॥

---

೪೪–೪೫. ಪರಲೋಕಕ್ಕೆ ಹೋಗುವಾಗ ಮನುಷ್ಯನಿಗೆ ತಾನು ಮಾಡಿದ ಧರ್ಮಾಧರ್ಮಗಳು ಮಾತ್ರ ಅನುಸರಿಸಿ ಬರುತ್ತವೆ. ಹಣ, ಮಕ್ಕಳು, ಬಂಧುಗಳು ಯಾರೂ ಬರುವುದಿಲ್ಲ. ಪಾಪಕೃತ್ಯವನ್ನು ಮಾಡಿದ ಮನುಷ್ಯರಿಗೆ ಕಾಮವು ಹೆಚ್ಚುತ್ತದೆ.

೪೬. ಪುಣ್ಯವಂತರಿಗೆ ದುರಾಶೆಯು ಹೋಗುತ್ತದೆ. ಜನರು ಯಾವಾಗಲೂ ಹಣ ಮುಂತಾದುವನ್ನು ಸಂಪಾದಿಸಬೇಕೆಂದು ವ್ಯರ್ಥವಾಗಿ ವ್ಯಾಕುಲ ಚಿತ್ತದಿಂದ ಕ್ಲೇಶಪಡುತ್ತಿರುವರು.

೪೭. ಹರಿಯು ಆಗಬೇಕೆಂದು ನಿಯಮಿಸಿರುವುದು ಆಗಿಯೇ ಆಗುತ್ತದೆ. ಆಗಬಾರದೆಂದು ಸಂಕಲ್ಪಿಸಿರುವುದು ಆಗುವುದೇ ಇಲ್ಲ. ಈ ರೀತಿ ನಿರ್ಣಯವುಳ್ಳವರಿಗೆ ಯಾವಾಗಲೂ ಚಿಂತೆಯು ಬಾಧಿಸುವುದಿಲ್ಲ.

೪೮. ಈ ಚರಾಚರಾತ್ಮಕ ಪ್ರಪಂಚವೆಲ್ಲವೂ ದೈವಾಧೀನವು. ಆದುದರಿಂದ ಜನನ ಮರಣಗಳನ್ನು ದೈವವು ತಿಳಿದಿದೆ. ಇನ್ನಾರೂ ತಿಳಿಯಲಾರರು.

೪೯. ಎಲ್ಲಿದ್ದರೂ ಭಗವಂತನ ಇಚ್ಛಾನುಸಾರವಾಗಿ ಆಗಬೇಕಾದುದು ಆಗಿಯೇ ಆಗುತ್ತದೆ. ಜನರಾದರೋ ಅದನ್ನರಿಯದೇ ವ್ಯರ್ಥವಾಗಿ ಶ್ರಮಪಡುತ್ತಾರೆ.

ಅಹೋ ದುಃಖಂ ಮನುಷ್ಯಾಣಾಂ ಮಮತಾಕುಲಚೇತಸಾಂ ।
ಮಹಾಪಾಪಾನಿ ಕೃತ್ವಾಽಪಿ ಪರಾನ್ಪುಷ್ಯಂತಿ ಯತ್ನತಃ ॥ ೫೦ ॥

ಆರ್ಜಿತಂ ಚ ಧನಂ ಸರ್ವಂ ಭುಂಜತೇ ಬಾಂಧವಾಃ ಸದಾ ।
ಸ್ವಯಮೇಕತಮೋ ಮೂಢಸ್ತತ್ಪಾಪಫಲಮಶ್ನುತೇ ॥ ೫೧ ॥

ಇತಿ ಬ್ರುವಾಣಂ ತಮೃಷಿಂ ವಿಮುಚ್ಯ ಭಯವಿಹ್ವಲಃ ।
ಗುಲಿಕಃ ಪ್ರಾಂಜಲಿಃ ಪ್ರಾಹ ಕ್ಷಮಸ್ವೇತಿ ಪುನಃ ಪುನಃ ॥ ೫೨ ॥

ಸತ್ಸಂಗಸ್ಯ ಪ್ರಭಾವೇಣ ಹರಿಸನ್ನಿಧಿಮಾತ್ರತಃ ।
ಗತಪಾಪೋ ಲುಬ್ಧಕಶ್ಚ ಹ್ಯನುತಾಪೀದಮಬ್ರವೀತ್ ॥ ೫೩ ॥

ಗುಲಿಕ ಉವಾಚ

ಮಯಾ ಕೃತಾನಿ ಪಾಪಾನಿ ಮಹಾಂತಿ ಸುಬಹೂನಿ ಚ ।
ತಾನಿ ಸರ್ವಾಣಿ ನಷ್ಟಾನಿ ವಿಪ್ರೇಂದ್ರ ತವ ದರ್ಶನಾತ್ ॥ ೫೪ ॥

---

೫೦. ಅಯ್ಯೋ ಪಾಪ! ಅಭಿಮಾನದಿಂದ ವ್ಯಗ್ರಚಿತ್ತರಾದ ಮನುಷ್ಯರಿಗೆ ದುಃಖವು ತಪ್ಪುವುದಿಲ್ಲ. ಮಹಾಪಾಪಗಳನ್ನು ಮಾಡಿಯಾದರೂ ಪ್ರಯಾಸದಿಂದ ಇತರರನ್ನು ಪೋಷಿಸುವರು.

೫೧. ಮನುಷ್ಯನು ಗಳಿಸಿದ ಹಣವನ್ನೆಲ್ಲಾ ಅವನ ಬಂಧುಗಳು ಯಾವಾಗಲೂ ಅನುಭವಿಸುವರು. ಮೂಢನಾದ ತಾನೊಬ್ಬನೇ ಅದರ ಪಾಪಫಲವನ್ನು ಅನುಭವಿಸುವನು.

೫೨. ಈ ರೀತಿ ಹೇಳುತ್ತಿರುವ ಆ ಋಷಿಯನ್ನು ಕೊಲ್ಲದೇ ಬಿಟ್ಟು ಭಯಾಕ್ರಾಂತನಾಗಿ ಗುಳಿಕನು ಕೈಮುಗಿದು ಕ್ಷಮಿಸಬೇಕೆಂದು ಪುನಃಪುನಃ ಕೇಳಿಕೊಂಡನು.

೫೩. ಸಜ್ಜನ ಸಹವಾಸದ ಮಹಿಮೆಯಿಂದ ಮತ್ತು ಹರಿಸಾನ್ನಿಧ್ಯ ಮಾತ್ರದಿಂದಲೂ ಪಾಪವನ್ನು ಕಳೆದುಕೊಂಡು ಲುಬ್ಧಕನು ಪಶ್ಚಾತ್ತಾಪಪಡುತ್ತಾ ಹೀಗೆ ಮಾತನಾಡಿದನು-

೫೪. ಬ್ರಾಹ್ಮಣವರ್ಯನೇ! ನಾನು ಅತ್ಯಧಿಕವಾದ ಪಾಪಕೃತ್ಯಗಳನ್ನು ಮಾಡಿರುತ್ತೇನೆ. ಅವುಗಳೆಲ್ಲವೂ ನಿನ್ನ ದರ್ಶನದಿಂದ ನಷ್ಟವಾದುವು.

**ಅಹೋಽಹಂ ಪಾಪಧೀರ್ನಿತ್ಯಂ ಮಹಾಪಾಪಮುಪಾಚರಂ ।**
**ಕಥಂ ಮೇ ನಿಷ್ಕೃತಿರ್ಭೂಯಾತ್ ಯಾಮಿ ಕಂ ಶರಣಂ ವಿಭೋ ॥ ೫೫ ॥**

**ಪೂರ್ವಜನ್ಮಾರ್ಜಿತೈಃ ಪಾಪೈಃ ಲುಬ್ಧಕತ್ವಮವಾಪ್ತವಾನ್ ।**
**ಅತ್ರಾಪಿ ಪಾಪಜಾಲಾನಿ ಕೃತ್ವಾ ಕಾಂ ಗತಿಮಾಪ್ನುಯಾಂ ॥ ೫೬ ॥**

**ಅಹೋ ಮಮಾಯುಃ ಕ್ಷಯಮೇತಿ ಶೀಘ್ರಂ**
**ಪಾಪಾನ್ಯನೇಕಾನಿ ಸಮಾರ್ಜಿತಾನಿ ।**
**ಪ್ರತಿಕ್ರಿಯಾ ನೈವ ಕೃತಾ ಮಯೈಷಾಂ**
**ಗತಿಶ್ಚ ಕಾ ಸ್ಯಾನ್ಮಮ ಜನ್ಮ ಕಿಂ ವಾ ॥ ೫೭ ॥**

**ಅಹೋ ವಿಧಿಃ ಪಾಪಶತಾಕುಲಂ ಮಾಂ**
**ಕಿಂ ಸೃಷ್ಟವಾನ್ಪಾಪತರಂ ಚ ಶಶ್ವತ್ ।**
**ಕಥಂ ಚ ಯತ್ಪಾಪಫಲಂ ಚ ಭೋಕ್ಷ್ಯೇ**
**ಕಿಯತ್ಸು ಜನ್ಮಸ್ವಹಮುಗ್ರಕರ್ಮಾ ॥ ೫೮ ॥**

---

೫೫. ಅಯ್ಯೋ! ನಾನು ಪಾಪಬುದ್ಧಿಯು. ಪ್ರತಿದಿನವೂ ಮಹಾಪಾಪವನ್ನು ಮಾಡಿರುವೆನು. ನನಗೆ ಅದರ ಪರಿಹಾರವು ಹೇಗೆ ಆದೀತು? ಪ್ರಭುವೇ! ಯಾರನ್ನು ಶರಣುಹೊಂದಲಿ ?

೫೬. ಹಿಂದಿನ ಜನ್ಮಗಳಲ್ಲಿ ಗಳಿಸಿದ ಪಾಪಗಳಿಂದ ಬೇಡನ ಜನ್ಮವು ಬಂದಿತು. ಈ ಜನ್ಮದಲ್ಲಿಯೂ ಪಾಪರಾಶಿಯನ್ನು ಗಳಿಸಿರುವುದರಿಂದ ನನಗೆ ಯಾವ ಗತಿಯಾಗುವುದೋ? ತಿಳಿಯದು.

೫೭. ಅಯ್ಯೋ! ನನ್ನ ಆಯುಸ್ಸು ಬೇಗ ಕ್ಷೀಣವಾಗುವುದು. ಬಹು ಪಾಪಗಳನ್ನು ಮಾಡಿರುವೆನು. ಇವುಗಳಿಗೆ ಪ್ರತೀಕಾರವು ನನ್ನಿಂದ ಆಚರಿಸಲ್ಪಟ್ಟಿಲ್ಲ. ನನಗೇನು ಗತಿ ? ಮುಂದೆ ಯಾವ ಜನ್ಮ ಬರುವುದೋ ?

೫೮. ಅಯ್ಯೋ! ನೂರಾರುಪಾಪಗಳನ್ನು ಮಾಡಿ ಪಾಪಿಷ್ಠನಾಗಿರುವ ನನ್ನನ್ನು ವಿಧಿಯು ಪುನಃ ಏಕೆ ಸೃಷ್ಟಿಸಿತು? ಭಯಂಕರಪಾಪಮಾಡಿರುವ ನಾನು ಅದರ ಫಲಗಳನ್ನು ಎಷ್ಟು ಜನ್ಮಗಳಲ್ಲಿ ಹೇಗೆ ಅನುಭವಿಸಬೇಕೋ ?

ಏವಂ ವಿನಿಂದನ್ನಾತ್ಮಾನಮಾತ್ಮನಾ ಲುಬ್ಧಕಸ್ತದಾ ।
ಅಂತಸ್ತಾಪಾಗ್ನಿಸಂತಪ್ತಃ ಸದ್ಯಃ ಪಂಚತ್ವಮಾಗತಃ ॥ ೫೯ ॥

ಉತ್ತಂಕಃ ಪತಿತಂ ಪ್ರೇಕ್ಷ್ಯ ಲುಬ್ಧಕಂ ತಂ ದಯಾಪರಃ ।
ವಿಷ್ಣುಪಾದೋದಕೇನೈನಮಭಿಷಿಂಚನ್ಮಹಾಮತಿಃ ॥ ೬೦ ॥

ಹರಿಪಾದೋದಕಸ್ಪರ್ಶಾಲ್ಲುಬ್ಧಕೋ ಗತಕಲ್ಮಷಃ ।
ದಿವ್ಯಂ ವಿಮಾನಮಾರುಹ್ಯ ಮುನಿಮೇತದಥಾಬ್ರವೀತ್ ॥ ೬೧ ॥

ಗುಲಿಕ ಉವಾಚ

ಉತ್ತಂಕ ಮುನಿಶಾರ್ದೂಲ ಗುರುಸ್ತ್ವಂ ಮಮ ಸುವ್ರತ
ವಿಮುಕ್ತಸ್ತ್ವತ್ಪ್ರಸಾದೇನ ಮಹಾಪಾತಕಬಂಧನಾತ್ ॥ ೬೨ ॥

ಗತಸ್ತ್ವದುಪದೇಶಾನ್ಮೇ ಸಂತಾಪೋ ಮುನಿಪುಂಗವ ।
ತಥೈವ ಸರ್ವಪಾಪಾನಿ ವಿನಷ್ಟಾನ್ಯತಿವೇಗತಃ ॥ ೬೩ ॥

---

೫೯. ಈ ಪ್ರಕಾರ ತನ್ನನ್ನು ತಾನೇ ದೂಷಿಸಿಕೊಳ್ಳುತ್ತಾ ಬೇಡನು ಆಗ ಅಂತಸ್ತಾಪವೆಂಬ ಅಗ್ನಿಯಿಂದ ದಹಿಸಲ್ಪಟ್ಟವನಾಗಿ ತಕ್ಷಣದಲ್ಲಿಯೇ ಮೃತನಾದನು.

೬೦. ಮಹಾಬುದ್ಧಿಶಾಲಿಯಾದ ಉತ್ತಂಕನು ಸತ್ತು ಬಿದ್ದ ಆ ಬೇಡನನ್ನು ನೋಡಿ ದಯಾಪರವಶನಾಗಿ ವಿಷ್ಣುಪಾದೋದಕದಿಂದ ಅವನಿಗೆ ಅಭಿಷೇಕಮಾಡಿದನು.

೬೧. ವಿಷ್ಣುಪಾದೋದಕಸ್ಪರ್ಶಮಾತ್ರದಿಂದ ಬೇಡನು ತನ್ನ ಪಾಪಗಳನ್ನು ಹೋಗಲಾಡಿಸಿಕೊಂಡು ಅಲ್ಲಿಯೇ ಲಭಿಸಿದ ದಿವ್ಯವಾದ ವಿಮಾನವನ್ನು ಹತ್ತಿ ಕುಳಿತು ಉತ್ತಂಕಮುನಿಯೊಡನೆ ಹೀಗೆ ಮಾತನಾಡಿದನು.

೬೨. ಸಮೀಚೀನ ವ್ರತಾನುಷ್ಠಾನಮಾಡಿದ ಮುನಿವರೇಣ್ಯನಾದ ಉತ್ತಂಕನೇ ! ನಿನ್ನ ಅನುಗ್ರಹದಿಂದ ಮಹಾಪಾಪಗಳೆಂಬ ಬಂಧನದ ದೆಸೆಯಿಂದ ಮುಕ್ತನಾದೆನು. ನೀನೇ ನನಗೆ ಗುರುವು.

೬೩. ಮುನಿಶ್ರೇಷ್ಠನೇ! ನಿನ್ನ ಉಪದೇಶದಿಂದ ನನಗೆ ಸಂತಾಪವು ಹೋಯಿತು. ಅದರಂತೆಯೇ ಸಕಲ ಪಾಪಗಳೂ ಬಹುಬೇಗ ನಷ್ಟವಾದುವು.

**ಹರಿಪಾದೋದಕಂ ಯಸ್ಮಾನ್ಮಯಿ ತ್ವಂ ಸಿಕ್ತವಾನ್ಮುನೇ ।**
**ಪ್ರಾಪಿತೋಽಸ್ಮಿ ತ್ವಯಾ ತಸ್ಮಾತ್ತದ್ವಿಷ್ಣೋಃ ಪರಮಂ ಪದಂ ॥ ೬೪ ॥**

**ತ್ವಯಾಽಹಂ ತಾರಿತೋ ವಿಪ್ರ ಪಾಪಾದಸ್ಮಾಚ್ಛರೀರತಃ ।**
**ತಸ್ಮಾನ್ನತೋಽಸ್ಮಿ ತೇ ವಿದ್ವನ್ಮತ್ಕೃತಂ ತತ್ ಕ್ಷಮಸ್ವ ಮೇ ॥ ೬೫ ॥**

**ಇತ್ಯುಕ್ತ್ವಾ ದೇವಕುಸುಮೈಃ ಮುನಿಶ್ರೇಷ್ಠಂ ಸಮಾಕಿರತ್ ।**
**ಪ್ರದಕ್ಷಿಣಾತ್ರಯಂ ಕೃತ್ವಾ ನಮಸ್ಕಾರಂ ಚಕಾರ ಸಃ ॥ ೬೬ ॥**

**ತತೋ ವಿಮಾನಮಾರುಹ್ಯ ಸರ್ವಕಾಮಸಮನ್ವಿತಂ ।**
**ಅಪ್ಸರೋಗಣಸಂಕೀರ್ಣಃ ಪ್ರಪೇದೇ ಹರಿಮಂದಿರಂ ॥ ೬೭ ॥**

**ಏತದ್ದೃಷ್ಟ್ವಾ ವಿಸ್ಮಿತೋಽಸೌ ಹ್ಯುತ್ತಂಕಃ ತಪಸಾಂ ನಿಧಿಃ ।**
**ಶಿರಸ್ಯಂಜಲಿಮಾಧಾಯ ತುಷ್ಟಾವ ಕಮಲಾಪತಿಂ ॥ ೬೮ ॥**

---

೬೪. ಮುನಿಯೇ! ನೀನು ಹರಿಪಾದೋದಕದಿಂದ ನನಗೆ ಅಭಿಷೇಚನೆಮಾಡಿರುವುದರಿಂದ ವೈಕುಂಠಾದಿಸ್ಥಾನವು ಲಭಿಸುವಂತೆ ಮಾಡಿರುವೆ.

೬೫. ಬ್ರಾಹ್ಮಣನೇ! ಪಾಪಮಯವಾದ ಈ ಶರೀರದಿಂದ ನೀನೇ ದಾಟಿಸಿರುವೆ. ಆದಕಾರಣ ವಿದ್ವಾಂಸನೇ! ನಿನಗೆ ನಮಸ್ಕಾರಮಾಡುವೆನು. ನಾನು ಮಾಡಿದ ತಪ್ಪನ್ನೆಲ್ಲಾ ಕ್ಷಮಿಸು ಎಂದು ಪ್ರಾರ್ಥಿಸಿದನು.

೬೬. ಆ ಗುಳಿಕನು ಹೀಗೆ ಹೇಳಿ ದೇವಪುಷ್ಪಗಳಿಂದ ಮುನಿವರ್ಯನನ್ನು ಪೂಜಿಸಿದವನಾಗಿ ಮೂರು ಪ್ರದಕ್ಷಿಣೆಗಳನ್ನು ಮಾಡಿ ನಮಸ್ಕಾರವನ್ನು ಮಾಡಿದನು.

೬೭. ಅನಂತರ ಸಕಲೇಷ್ಟಾರ್ಥಗಳಿಂದ ಕೂಡಿದ ವಿಮಾನದಲ್ಲಿ ಕುಳಿತು ಅಪ್ಸರಸ್ತ್ರೀಯರ ಸಮೂಹದಿಂದ ಕೂಡಿ ವಿಷ್ಣುಮಂದಿರಕ್ಕೆ ತೆರಳಿದನು.

೬೮. ತಪೋನಿಧಿಯಾದ ಉತ್ತಂಕನು ಇದನ್ನು ನೋಡಿ ಆಶ್ಚರ್ಯಗೊಂಡು ತಲೆಯಮೇಲೆ ಕೈಗಳನ್ನು ಜೋಡಿಸಿ ಲಕ್ಷ್ಮೀಪತಿಯನ್ನು ಸ್ತೋತ್ರಮಾಡಿದನು.

ತೇನ ಸ್ತುತೋ ಮಹಾವಿಷ್ಣುರ್ದತ್ತವಾನ್ವರಮುತ್ತಮಂ ।
ವರೇಣ ತೇನೋತ್ತಂಕೋಽಪಿ ಪ್ರಪೇದೇ ಪರಮಂ ಪದಂ　　　　॥ ೬೯ ॥

ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ ಪ್ರಥಮಪಾದೇ
ವಿಷ್ಣುಮಾಹಾತ್ಮ್ಯೇ ಸಪ್ತತ್ರಿಂಶೋಽಧ್ಯಾಯಃ



---

೬೯. ಮಹಾವಿಷ್ಣುವು ಅವನ ಸ್ತೋತ್ರಕ್ಕೆ ಮೆಚ್ಚಿ ಉತ್ತಂಕನಿಗೆ ಉತ್ತಮವರವನ್ನು ಕೊಟ್ಟನು. ಅದರಿಂದ ಅವನೂ ಮೋಕ್ಷರೂಪವಾದ ಉತ್ತಮಸ್ಥಾನವನ್ನು ಹೊಂದಿದನು.

ಇಂತು ಶ್ರೀಬೃಹನ್ನಾರದೀಯಪುರಾಣದೊಳು ಪೂರ್ವಭಾಗ ಪ್ರಥಮಪಾದದಲ್ಲಿ
ವಿಷ್ಣುಮಾಹಾತ್ಮ್ಯಕಥನವೆಂಬ ಮೂವತ್ತೇಳನೆಯ ಅಧ್ಯಾಯವು
ಮುಗಿದುದು.



## ಕಥಾಸಾರಾಂಶ

ವಿಷ್ಣುವಿನ ಮಹಿಮೆಯನ್ನು ವರ್ಣಿಸಲಾರಂಭಿಸಿ ಆ ವಿಷಯದಲ್ಲಿ ಗುಳಿಕನೆಂಬ ವ್ಯಾಧನ ಚರಿತ್ರೆಯು ಉದಾಹರಿಸಲ್ಪಟ್ಟಿದೆ. ಗುಳಿಕನು ಕದಿಯುವುದೇ ಮುಂತಾದ ನಾನಾ ವಿಧವಾದ ದುರ್ವ್ಯಾಪಾರದಿಂದ ಬಹು ದ್ರವ್ಯವನ್ನು ಸಂಪಾದಿಸಿದ್ದನು. ಅವನು ಒಂದಾನೊಂದು ಕಾಲದಲ್ಲಿ ಸೌವೀರನಗರಕ್ಕೆ ಹೋಗಿ ಒಂದು ದೇವಾಲಯದಲ್ಲಿ ಕದಿಯಲು ಯತ್ನಿಸಿದಾಗ ಅಲ್ಲಿದ್ದ ಭಕ್ತನಾದ ಉತ್ತಂಕನನ್ನು ತನ್ನ ಕಳ್ಳತನಕ್ಕೆ ಅಡ್ಡಿ ತಂದಾನೆಂಬ ಭಾವನೆಯಿಂದ ಕೊಲ್ಲಲು ಯತ್ನಿಸಿದನು. ಆಗ ಅವನು ಗುಳಿಕನಿಗೆ ನಿರಪರಾಧಿಯಾದ ನನ್ನನ್ನು ಏಕೆ ಕೊಲ್ಲುವೆ? ಎಂದು ಹೇಳಿ ಬಹುವಿಧವಾಗಿ ತತ್ತ್ವೋಪದೇಶಮಾಡಿದನು. ಅದರಿಂದ ಆ ಬೇಡನು ವಿವೇಕವನ್ನು ಹೊಂದಿ ತಾನು ಮಾಡಿದ ಪಾಪವನ್ನು ಸ್ಮರಿಸಿಕೊಂಡು ಪಶ್ಚಾತ್ತಾಪಪಟ್ಟು ಉತ್ತಂಕನಿಗೆ ನಮಸ್ಕರಿಸಿ ತನ್ನ ವೃತ್ತಾಂತವನ್ನು ಹೇಳಿ ಕ್ಷಮೆಯನ್ನು ಬೇಡಿದನು. ಕೂಡಲೇ ಅವನು ಮೃತನಾಗಲು ದಿವ್ಯ ವಿಮಾನವನ್ನು ತಂದು ವಿಷ್ಣುದೂತರು ಅವನನ್ನು ಹರಿಮಂದಿರಕ್ಕೆ ಕರೆದೊಯ್ದರು. ಇದನ್ನೆಲ್ಲಾ ನೋಡಿ ಉತ್ತಂಕನು ವಿಷ್ಣುವನ್ನು ಸ್ತೋತ್ರಮಾಡಿದನು. ಅನಂತರ ಅವನೂ ಸಹ ಶ್ರೀಹರಿಯ ಪ್ರಸಾದದಿಂದ ಸದ್ಗತಿಯನ್ನು ಪಡೆದನು.

---

# ಅಷ್ಟತ್ರಿಂಶೋಽಧ್ಯಾಯಃ

ನಾರದ ಉವಾಚ

ಕಿಂ ತತ್ಸ್ತೋತ್ರಂ ಮಹಾಭಾಗ ಕಥಂ ತುಷ್ಟೋ ಜನಾರ್ದನಃ ।
ಉತ್ತಂಕಃ ಪುಣ್ಯಪುರುಷಃ ಕೀದೃಶಂ ಲಬ್ಧವಾನ್ವರಂ ॥ ೧ ॥

ಸನಕ ಉವಾಚ

ಉತ್ತಂಕಸ್ತು ತದಾ ವಿಪ್ರೋ ಹರಿಧ್ಯಾನಪರಾಯಣಃ ।
ಪಾದೋದಕಸ್ಯ ಮಾಹಾತ್ಮ್ಯಂ ದೃಷ್ಟ್ವಾ ತುಷ್ಟಾವ ಭಕ್ತಿತಃ ॥ ೨ ॥

ಉತ್ತಂಕ ಉವಾಚ

ನತೋಽಸ್ಮಿ ನಾರಾಯಣಮಾದಿದೇವಂ
ಜಗನ್ನಿವಾಸಂ ಜಗದೇಕಬಂಧುಂ ।
ಚಕ್ರಾಬ್ಜಶಾಙ್ಗಾಸಿಧರಂ ಮಹಾಂತಂ
ಸ್ಮೃತಾರ್ತಿನಿಘ್ನಂ ಶರಣಂ ಪ್ರಪದ್ಯೇ ॥ ೩ ॥

---

## ಮೂವತ್ತೆಂಟನೆಯ ಅಧ್ಯಾಯವು

೧. ನಾರದನು ಹೇಳಿದನು—ಧನ್ಯನಾದ ಸನಕನೇ! ಉತ್ತಂಕನು ಮಾಡಿದ ಸ್ತೋತ್ರವಾವುದು? ಹರಿಯು ಹೇಗೆ ಸಂತುಷ್ಟನಾದನು? ಪುಣ್ಯ ಪುರುಷನಾದ ಉತ್ತಂಕನು ಎಂತಹ ವರವನ್ನು ಪಡೆದನು?

೨. ಸನಕನು ಹೇಳಿದನು—ವಿಷ್ಣುಧ್ಯಾನನಿರತನಾದ ಉತ್ತಂಕನು ಹರಿಪಾದೋದಕದ ಮಹಿಮೆಯನ್ನು ನೋಡಿ ಭಕ್ತಿಯಿಂದ ಹರಿಯನ್ನು ಸ್ತುತಿಸಿದನು.

೩. ಉತ್ತಂಕನು ಸ್ತುತಿಸಿದನು—ಜಗತ್ತಿಗೆ ಮೂಲಕಾರಣನು, ಜಗದಂತರ್ಯಾಮಿಯು, ಜಗತ್ತಿಗೆ ಮುಖ್ಯಬಂಧುವು, ಚಕ್ರ ಪದ್ಮ ಶಂಖ ಮತ್ತು ಖಡ್ಗ ಇವುಗಳನ್ನು ಧರಿಸಿರುವವನು, ಮಹಾತ್ಮನು, ಸ್ಮರಿಸುವವರ ಸಂಕಟ ಪರಿಹಾರಕನೂ ಆಗಿರುವ ನಾರಾಯಣನನ್ನು ನಮಸ್ಕರಿಸಿ ಶರಣುಹೊಂದುವೆನು.

ಯನ್ನಾಭಿಜಾಬ್ಜಪ್ರಭವೋ ವಿಧಾತಾ
ಸೃಜತ್ಯಮುಂ ಲೋಕಸಮುಚ್ಚಯಂ ಚ ।
ಯತ್ಕ್ರೋಧಜೋ ಹಂತಿ ಜಗಚ್ಚ ರುದ್ರ-
ಸ್ತಮಾದಿದೇವಂ ಪ್ರಣತೋಽಸ್ಮಿ ವಿಷ್ಣುಂ ॥ ೪ ॥

ಪದ್ಮಾಪತಿಂ ಪದ್ಮದಲಾಯತಾಕ್ಷಂ
ವಿಚಿತ್ರವೀರ್ಯಂ ನಿಖಿಲೈಕಹೇತುಂ ।
ವೇದಾಂತವೇದ್ಯಂ ಪುರುಷಂ ಪುರಾಣಂ
ತೇಜೋನಿಧಿಂ ವಿಷ್ಣುಮಹಂ ಪ್ರಪನ್ನಃ ॥ ೫ ॥

ಆತ್ಮಾಽಕ್ಷರಃ ಸರ್ವಗತೋಽಚ್ಯುತಾಖ್ಯೋ
ಜ್ಞಾನಾತ್ಮಕೋ ಜ್ಞಾನವಿದಾಂ ಶರಣ್ಯಃ ।
ಜ್ಞಾನೈಕವೇದ್ಯೋ ಭಗವಾನನಾದಿಃ
ಪ್ರಸೀದತಾಂ ವ್ಯಷ್ಟಿಸಮಷ್ಟಿರೂಪಃ ॥ ೬ ॥

---

೪. ಯಾರ ನಾಭಿಕಮಲದಲ್ಲಿ ಹುಟ್ಟಿದ ಚತುರ್ಮುಖನು ಈ ಲೋಕ ಸಮೂಹವನ್ನು ಸೃಷ್ಟಿಸಿದನೋ, ಯಾರ ಕ್ರೋಧದಿಂದ ಹುಟ್ಟಿದ ರುದ್ರನು ಈ ಜಗತ್ತನ್ನು ಸಂಹರಿಸಿದನೋ, ಅಂತಹ ಆದಿದೇವನಾದ ವಿಷ್ಣುವನ್ನು ನಮಸ್ಕರಿಸುವೆನು.

೫. ಲಕ್ಷ್ಮೀಪತಿಯು, ಕಮಲದಳದಂತೆ ವಿಶಾಲವಾದ ಕಣ್ಣುಗಳುಳ್ಳವನು, ವಿಲಕ್ಷಣ ಸಾಮರ್ಥ್ಯವಂತನು, ಸಮಸ್ತಕ್ಕೂ ಮುಖ್ಯಕಾರಣನು, ಉಪನಿಷತ್ಪ್ರತಿಪಾದ್ಯನು, ಪುರಾಣಪುರುಷನು, ತೇಜೋನಿಧಿಯೂ ಆಗಿರುವ ವಿಷ್ಣುವನ್ನು ನಾನು ಶರಣುಹೊಂದುವೆನು.

೬. ಸ್ವಾಮಿಯು, ನಾಶರಹಿತನು, ಸರ್ವಪದಾರ್ಥಗಳಲ್ಲಿಯೂ ಇರುವವನು, ಅಚ್ಯುತನಾಮಕನು, ಜ್ಞಾನಸ್ವರೂಪನು, ಜ್ಞಾನರೂಪಿಯಾದ ಭಗವಂತನನ್ನು ತಿಳಿಯುವವರಿಗೆ ರಕ್ಷಕನು, ಜ್ಞಾನಮಾತ್ರದಿಂದಲೇ ಗಮ್ಯನು, ಅನಾದಿಯು ಮತ್ತು ವ್ಯಷ್ಟಿಸಮಷ್ಟಿರೂಪನೂ ಆಗಿರುವ ಭಗವಂತನು ಪ್ರಸನ್ನನಾಗಲಿ.

ಅನಂತವೀರ್ಯೋ ಗುಣಜಾತಿಹೀನೋ
ಗುಣಾತ್ಮಕೋ ಜ್ಞಾನವಿದಾಂ ವರಿಷ್ಠಃ ।
ನಿತ್ಯಃ ಪ್ರಪನ್ನಾರ್ತಿಹರಃ ಪರಾತ್ಮಾ
ದಯಾಂಬುಧಿರ್ಮೇ ವರದಸ್ತು ಭೂಯಾತ್ ॥ ೭ ॥

ಯಃ ಸ್ಥೂಲಸೂಕ್ಷ್ಮಾದಿವಿಶೇಷಭೇದೈ-
ರ್ಜಗದ್ಯಥಾವತ್ಸ್ವಕೃತಂ ಪ್ರವಿಷ್ಟಃ ।
ತ್ವಮೇವ ತತ್ಸರ್ವಮನಂತಸಾರಂ
ತ್ವತ್ತಃ ಪರಂ ನಾಸ್ತಿ ಯತಃ ಪರಾರ್ಥ ॥ ೮ ॥

ಅಗೋಚರಂ ಯತ್ತವ ಶುದ್ಧರೂಪಂ
ಮಾಯಾವಿಹೀನಂ ಗುಣಜಾತಿಹೀನಂ ।
ನಿರಂಜನಂ ನಿರ್ಮಲಮಪ್ರಮೇಯಂ
ಪಶ್ಯಂತಿ ಸಂತಃ ಪರಮಾರ್ಥಸಂಜ್ಞಂ ॥ ೯ ॥

---

೭. ಅಪರಿಮಿತ ಸಾಮರ್ಥ್ಯವುಳ್ಳವನು, ಲೌಕಿಕ ಗುಣಜಾತಿಶೂನ್ಯನು, ಗುಣಸ್ವರೂಪನು, ಜ್ಞಾನಿಗಳಲ್ಲಿ ಉತ್ತಮನು, ನಿತ್ಯನು, ಶರಣಾಗತರ ದುಃಖವನ್ನು ಪರಿಹರಿಸುವವನು ಮತ್ತು ದಯಾಸಾಗರನೂ ಆದ ಪರಮಾತ್ಮನು ನನಗೆ ವರಪ್ರದನಾಗಲಿ.

೮. ಪರಮಾತ್ಮನೇ ! ನೀನು ಯಥಾವತ್ತಾಗಿ ಸ್ಥೂಲ ಸೂಕ್ಷ್ಮ ಮುಂತಾದ ಅವಾಂತರ ಭೇದಗಳುಳ್ಳ ಜಗತ್ತನ್ನು ಸೃಷ್ಟಿಸಿ ಅದರಲ್ಲಿ ಪ್ರವೇಶಿಸಿದವನಾಗಿ ಅದೆಲ್ಲವೂ ನೀನೇ ಎನಿಸಿರುವೆ. ನಿನಗಿಂತ ಬೇರೆಯಾದ ಅಪರಿಮಿತ ಶ್ರೇಷ್ಠ ವಸ್ತುವಿಲ್ಲ.

೯. ನಿನ್ನ ಪರಿಶುದ್ಧಸ್ವರೂಪವು ಅಗೋಚರವು. ಜ್ಞಾನಿಗಳಾದ ಸಜ್ಜನರು ಮಾಯಾರಹಿತವು, ನಿರ್ದೋಷವು, ಪರಿಶುದ್ಧವು, ಅಪ್ರಮೇಯವೂ ಆಗಿ ಸರ್ವೋತ್ತಮವೆನಿಸಿದ ನಿನ್ನ ಸ್ವರೂಪವನ್ನು ಸಾಕ್ಷಾತ್ಕರಿಸಿಕೊಳ್ಳುವರು.

ಏಕೇನ ಹೇಮ್ನೈವ ವಿಭೂಷಣಾನಿ
ಯಾತಾನಿ ಭೇದತ್ವಮುಪಾಧಿಭೇದಾತ್ ।
ತಥೈವ ಸರ್ವೇಶ್ವರ ಏಕ ಏವ
ಪ್ರದೃಶ್ಯತೇ ಭಿನ್ನ ಇವಾಖಿಲಾತ್ಮಾ ॥ ೧೦ ॥

ಯನ್ಮಾಯಯಾ ಮೋಹಿತಚೇತಸೋ ಯೇ
ಪಶ್ಯಂತಿ ನಾತ್ಮಾನಮಪಿ ಪ್ರಸಿದ್ಧಂ ।
ತ ಏವ ಮಾಯಾರಹಿತಾಸ್ತದೈವ
ಪಶ್ಯಂತಿ ಸರ್ವಾತ್ಮಕಮಾತ್ಮರೂಪಂ ॥ ೧೧ ॥

ವಿಭುಂ ಜ್ಯೋತಿರನೌಪಮ್ಯಂ ವಿಷ್ಣುಸಂಜ್ಞಂ ನಮಾಮ್ಯಹಂ ।
ಸಮಸ್ತಮೇತದುದ್ಭೂತಂ ಯತೋ ಯತ್ರ ಪ್ರತಿಷ್ಠಿತಂ ॥ ೧೨ ॥

ಯತಶ್ಚೈತನ್ಯಮಾಯಾತಂ ಯದ್ರೂಪಂ ತಸ್ಯ ವೈ ನಮಃ ।
ಅಪ್ರಮೇಯಮನಾಧಾರಮಾಧಾರಾಧೇಯರೂಪಕಂ ॥ ೧೩ ॥

---

೧೦. ಒಂದೇ ಬಂಗಾರದಿಂದ ಭಿನ್ನವಾದ ಅನೇಕ ಆಭರಣಗಳು ಆಕಾರಭೇದದಿಂದ ಆಗುವಂತೆ ಸರ್ವಾಂತರ್ಗತನಾಗಿರುವ ಸರ್ವೇಶ್ವರನು ಒಬ್ಬನೇ ಆದರೂ ಭಿನ್ನಭಿನ್ನ ಪದಾರ್ಥಗಳಲ್ಲಿ ಭಿನ್ನನಂತೆ ತೋರುವನು.

೧೧. ಯಾರು ಯಾವ ಮಾಯೆಯಿಂದ ಮೋಹಿತಮನಸ್ಕರಾಗಿ ಪ್ರಸಿದ್ಧನಾಗಿದ್ದಾಗ್ಯೂ ಆತ್ಮನನ್ನು ನೋಡುವುದಿಲ್ಲವೋ ಅವರೇ ಆ ಮಾಯೆಯನ್ನು ಕಳೆದುಕೊಂಡರೆ ತಕ್ಷಣದಲ್ಲಿಯೇ ಸರ್ವಾಂತರ್ಗತವಾದ ಆತ್ಮರೂಪವನ್ನು ನೋಡುವರು.

೧೨. ಈ ಸಕಲ ಪ್ರಪಂಚದ ಉತ್ಪತ್ತಿಸ್ಥಿತಿಗಳಿಗೆ ಕಾರಣವು, ಅದ್ವಿತೀಯವು, ವ್ಯಾಪ್ತವೂ ಆಗಿರುವ ವಿಷ್ಣುವೆಂಬ ತೇಜಸ್ಸನ್ನು ನಮಸ್ಕರಿಸುವೆನು.

೧೩. ಯಾರಿಂದ ಚೈತನ್ಯವು ಬಂದಿತೋ, ಯಾರ ಸ್ವರೂಪವು ಅಪ್ರಮೇಯವು, ಆಶ್ರಯರಹಿತವು, ಸ್ವತಃ ಆಧಾರಾಧೇಯರೂಪವೂ ಆಗಿದೆಯೋ ಅಂತಹ ಹರಿಗೆ ನಮಸ್ಕಾರ.

ಪರಮಾನಂದಚಿನ್ಮಾತ್ರಂ ವಾಸುದೇವಂ ನತೋಽಸ್ಮ್ಯಹಂ ।
ಹೃದ್ಗುಹಾನಿಲಯಂ ದೇವಂ ಯೋಗಿಭಿಃ ಪರಿಸೇವಿತಂ ॥ ೧೪ ॥

ಯೋಗಾನಾಮಾದಿಭೂತಂ ತಂ ನಮಾಮಿ ಪ್ರಣವಸ್ಥಿತಂ ।
ನಾದಾತ್ಮಕಂ ನಾದಬೀಜಂ ಪ್ರಣವಾತ್ಮಕಮವ್ಯಯಂ ॥ ೧೫ ॥

ಸದ್ಭಾವಂ ಸಚ್ಚಿದಾನಂದಂ ತಂ ವಂದೇ ತಿಗ್ಮಚಕ್ರಿಣಂ ।
ಅಜರಂ ಸಾಕ್ಷಿಣಂ ತ್ವಸ್ಯ ಹ್ಯವಾಙ್ಮನಸಗೋಚರಂ ॥ ೧೬ ॥

ನಿರಂಜನಮನಂತಾಖ್ಯಂ ವಿಷ್ಣುರೂಪಂ ನತೋಽಸ್ಮ್ಯಹಂ ।
ಇಂದ್ರಿಯಾಣಿ ಮನೋ ಬುದ್ಧಿಃ ಸತ್ವಂ ತೇಜೋ ಬಲಂ ಧೃತಿಃ ॥ ೧೭ ॥

ವಾಸುದೇವಾತ್ಮಕಾನ್ಯಾಹುಃ ಕ್ಷೇತ್ರಂ ಕ್ಷೇತ್ರಜ್ಞಮೇವ ಚ ।
ವಿದ್ಯಾವಿದ್ಯಾತ್ಮಕಂ ಪ್ರಾಹುಃ ಪರಾತ್ಪರತರಂ ತಥಾ ॥ ೧೮ ॥

---

೧೪. ಉತ್ಕೃಷ್ಟಾನಂದ ಜ್ಞಾನ ಮಾತ್ರ ಸ್ವರೂಪನು, ಯೋಗಿಗಳಿಂದ ಸೇವಿಸಲ್ಪಡುತ್ತಿರುವವನು, ಹೃದಯಗುಹೆಯಲ್ಲಿ ನೆಲೆಸಿರುವವನೂ ಆಗಿರುವ ವಾಸುದೇವನಾಮಕನಾದ ದೇವನನ್ನು ನಮಸ್ಕರಿಸುವೆನು.

೧೫. ಯೋಗಿಗಳಿಗೆ ಮೂಲಭೂತನು, ಪ್ರಣವಮಂತ್ರದಲ್ಲಿ ಸನ್ನಿಹಿತನು, ನಾದಾತ್ಮಕನು, ನಾದಮೂಲನು, ಪ್ರಣವಪ್ರತಿಪಾದ್ಯನು, ಮತ್ತು ನಾಶರಹಿತನೂ ಆಗಿರುವ ಆ ವಿಷ್ಣುವನ್ನು ನಮಸ್ಕರಿಸುತ್ತೇನೆ.

೧೬. ಸಾಧುಭಾವೋಪೇತನು, ಸಚ್ಚಿದಾನಂದಸ್ವರೂಪನು, ತೀಕ್ಷ್ಣವಾದ ಚಕ್ರಾಯುಧವನ್ನು ಧರಿಸಿರುವವನು, ವಾರ್ಧಿಕ್ಯರಹಿತನು, ಈ ಜಗತ್ತಿಗೆ ಸಾಕ್ಷಿಭೂತನು, ವಾಕ್ಕು ಮನಸ್ಸು ಮುಂತಾದ ಇಂದ್ರಿಯಗಳಿಗೆ ಗೋಚರನಾಗದಿರುವವನೂ ಆಗಿರುವ ಆ ವಿಷ್ಣುವನ್ನು ನಮಸ್ಕರಿಸುತ್ತೇನೆ.

೧೭-೧೯. ನಿರ್ದೋಷವಾದ ಅನಂತವೆಂಬ ವಿಷ್ಣುರೂಪವನ್ನು ನಮಸ್ಕರಿಸುತ್ತೇನೆ. ಇಂದ್ರಿಯಗಳು, ಮನಸ್ಸು, ಬುದ್ಧಿ, ಸತ್ವ, ತೇಜಸ್ಸು, ಶಕ್ತಿ, ಧೈರ್ಯ ಇವುಗಳೆಲ್ಲವೂ ವಾಸುದೇವನ ಅಧೀನಗಳು, ಕ್ಷೇತ್ರ, ಕ್ಷೇತ್ರಜ್ಞ ಇವುಗಳು ವಿದ್ಯಾವಿದ್ಯಾತ್ಮಕಗಳು ಎಂಬುದಾಗಿಯೂ ಹೇಳುತ್ತಾರೆ. ಉತ್ತಮೋತ್ತಮನು

**ಅನಾದಿನಿಧನಂ ಶಾಂತಂ ಸರ್ವಧಾತಾರಮಚ್ಯುತಂ ।**
**ಯೇ ಪ್ರಪನ್ನಾ ಮಹಾತ್ಮಾನಸ್ತೇಷಾಂ ಮುಕ್ತಿರ್ಹಿ ಶಾಶ್ವತೀ ॥ ೧೯ ॥**

**ವರಂ ವರೇಣ್ಯಂ ವರದಂ ಪುರಾಣಂ**
**ಸನಾತನಂ ಸರ್ವಗತಂ ಪ್ರಸನ್ನಂ ।**
**ನತೋಽಸ್ಮಿ ಭೂಯೋಽಪಿ ನತೋಽಸ್ಮಿ ಭೂಯೋ**
**ನತೋಽಸ್ಮಿ ಭೂಯೋ ನತೋಽಸ್ಮಿ ಭೂಯಃ ॥ ೨೦ ॥**

**ಯತ್ಪಾದತೋಯಂ ಭವರೋಗವೈದ್ಯೋ**
**ಯತ್ಪಾದಪಾಂಸುರ್ವಿಮಲತ್ವ ಸಿದ್ಧ್ಯೈ ।**
**ಯನ್ನಾಮದುಷ್ಕರ್ಮನಿವಾರಣಾಯ**
**ತಮಪ್ರಮೇಯಂ ಪುರುಷಂ ಭಜಾಮಿ ॥ ೨೧ ॥**

**ಸದ್ರೂಪಂ ತಮಸದ್ರೂಪಂ ಸದಸದ್ರೂಪಮವ್ಯಯಂ ।**
**ತತ್ತದ್ವಿಲಕ್ಷಣಂ ಶ್ರೇಷ್ಠಂ ಶ್ರೇಷ್ಠಾಚ್ಛ್ರೇಷ್ಠತರಂ ಭಜೇ ॥ ೨೨ ॥**

---

ಅನಾದ್ಯನಂತನು, ಶಾಂತಸ್ವಭಾವೋಪೇತನು, ಸರ್ವಸೃಷ್ಟಿಕರ್ತೃವೂ ಆಗಿರುವ ಅಚ್ಯುತನನ್ನು ಶರಣುಹೊಂದಿದ ಮಹಾತ್ಮರಿಗೆ ಶಾಶ್ವತ ಮುಕ್ತಿಯು ಲಭಿಸುತ್ತದೆ.

೨೦. ಶ್ರೇಷ್ಠನು, ಉತ್ತಮೋತ್ತಮನು, ವರಪ್ರದನು, ಪುರಾತನನು ಅನಾಧಿಯು, ವ್ಯಾಪಕನು, ಪ್ರಸನ್ನಮುಖನೂ ಆಗಿರುವ ಹರಿಯನ್ನು ನಮಸ್ಕರಿಸುವೆನು, ಪುನಃ ನಮಿಸುವೆನು, ಪುನಃ ನಮಿಸುವೆನು, ಪುನಃಪುನಃ ನಮಿಸುವೆನು.

೨೧. ಯಾರ ಪಾದೋದಕವು ಸಂಸಾರವೆಂಬ ರೋಗವನ್ನು ಪರಿಹರಿಸುವ ವೈದ್ಯನಂತಿರುವುದೋ, ಯಾರ ಪಾದಧೂಳಿಯು ಪವಿತ್ರತೆಯನ್ನುಂಟುಮಾಡುವುದೋ, ಯಾರ ನಾಮವು ದುಷ್ಕರ್ಮವನ್ನು ಪರಿಹಾರಮಾಡುವುದೋ ಅಂತಹ ಅಪ್ರಮೇಯಪುರುಷನನ್ನು ಭಜಿಸುತ್ತೇನೆ.

೨೨. ಸ್ವತಂತ್ರನು, ಭಕ್ತರಲ್ಲದವರಿಗೆ ಗಮ್ಯನಲ್ಲವಾದಕಾರಣ ಅಸತ್ ಎನಿಸಿರುವವನು, ಸದಸದ್ರೂಪನು, ನಾಶರಹಿತನು, ತತ್ತದ್ವಿಲಕ್ಷಣನು, ಶ್ರೇಷ್ಠನು, ಶ್ರೇಷಕ್ಕಿಂತಲೂ ಅತಿಶಯಿತ ಶ್ರೇಷ್ಠನೂ ಆಗಿರುವ ಹರಿಯನ್ನು ಭಜಿಸುತ್ತೇನೆ.

**ನಿರಂಜನಂ ನಿರಾಕಾರಂ ಪೂರ್ಣಮಾಕಾಶಮಧ್ಯಗಂ ।**
**ಪರಂ ಚ ವಿದ್ಯಾವಿದ್ಯಾಭ್ಯಾಂ ಹೃದಂಬುಜನಿವಾಸಿನಂ ॥ ೨೩ ॥**

**ಸ್ವಪ್ರಕಾಶಮನಿರ್ದೇಶ್ಯಂ ಮಹತಾಂ ಚ ಮಹತ್ತರಂ ।**
**ಅಣೋರಣೀಯಾಂಸಮಜಂ ಸರ್ವೋಪಾಧಿವಿವರ್ಜಿತಂ ॥ ೨೪ ॥**

**ಯನ್ನಿತ್ಯಂ ಪರಮಾನಂದಂ ಪರಂ ಬ್ರಹ್ಮ ಸನಾತನಂ ।**
**ವಿಷ್ಣುಸಂಜ್ಞಂ ಜಗದ್ಧಾಮ ತಮಸ್ಮಿ ಶರಣಂ ಗತಃ ॥ ೨೫ ॥**

**ಯಂ ಭಜಂತಿ ಕ್ರಿಯಾನಿಷ್ಠಾ ಯಂ ಪಶ್ಯಂತಿ ಚ ಯೋಗಿನಃ ।**
**ಪೂಜ್ಯಾತ್ಪೂಜ್ಯತರಂ ಶಾಂತಂ ಗತೋಽಸ್ಮಿ ಶರಣಂ ಪ್ರಭುಂ ॥ ೨೬ ॥**

**ಯಂ ನ ಪಶ್ಯಂತಿ ವಿದ್ವಾಂಸೋ ಯ ಏತದ್ವ್ಯಾಪ್ಯ ತಿಷ್ಠತಿ ।**
**ಸರ್ವಸ್ಮಾದಧಿಕಂ ನಿತ್ಯಂ ನತೋಽಸ್ಮಿ ವಿಭುಮವ್ಯಯಂ ॥ ೨೭ ॥**

---

೨೩–೨೫. ನಿರ್ದೋಷನು ಲೌಕಿಕಾಕಾರಶೂನ್ಯನು, ಪರಿಪೂರ್ಣನು, ಹೃದಯಾಕಾಶ ಮಧ್ಯದಲ್ಲಿರುವವನು, ವಿದ್ಯೆ, ಅವಿದ್ಯೆ ಇವುಗಳಿಗಿಂತ ವಿಲಕ್ಷಣನು ಹೃದಯಕಮಲದಲ್ಲಿರುವವನು, ಸ್ವಪ್ರಕಾಶನು, ಅನಿರ್ದೇಶ್ಯನು, ದೊಡ್ಡವಸ್ತುಗಳಿಗಿಂತ ದೊಡ್ಡವನು, ಅಣುಗಳಿಗಿಂತಲೂ ಅಣುತರನು, ಉತ್ಪತ್ತಿರಹಿತನು, ಸಕಲೋಪಾಧಿರಹಿತನು, ನಿತ್ಯನು, ಉತ್ಕೃಷ್ಟಾನಂದ ಸ್ವರೂಪನು, ಅನಾದಿಯು ಜಗದ್ವ್ಯಾಪ್ತನೂ ಆಗಿರುವ ವಿಷ್ಣುವೆಂಬ ಪರಬ್ರಹ್ಮನಿಗೆ ಶರಣಾಗತನಾಗುತ್ತೇನೆ.

೨೬. ಕರ್ಮಯೋಗಿಗಳು ಭಜಿಸುವಂತಹ, ಜ್ಞಾನಯೋಗಿಗಳು ನೋಡುವಂತಹ, ಪೂಜ್ಯವಸ್ತುವಿಗಿಂತಲೂ ಅಧಿಕಪೂಜ್ಯನಾದ ಶಾಂತಪ್ರಭುವಿಗೆ ಶರಣಾಗತನಾಗಿದ್ದೇನೆ.

೨೭. ಈ ಜಗತ್ತಿನಲ್ಲೆಲ್ಲಾ ವ್ಯಾಪಿಸಿದ್ದಾಗ್ಯೂ ಜ್ಞಾನಿಗಳಿಗೂ ಕಾಣಿಸದಿರುವ, ಸರ್ವೋಚ್ಚನು, ನಾಶರಹಿತನೂ ಆಗಿರುವ ಸ್ವಾಮಿಯನ್ನು ನಮಸ್ಕರಿಸುತ್ತೇನೆ.

ಅಂತಃಕರಣಸಂಯೋಗಾಜ್ಜೀವ ಇತ್ಯುಚ್ಯತೇ ಚ ಯಃ ।
ಅವಿದ್ಯಾಕಾರ್ಯರಹಿತಃ ಪರಮಾತ್ಮೇತಿ ಗೀಯತೇ ॥ ೨೮ ॥

ಸರ್ವಾತ್ಮಕಂ ಸರ್ವಹೇತುಂ ಸರ್ವಕರ್ಮಫಲಪ್ರದಂ ।
ವರಂ ವರೇಣ್ಯಮಜರಂ ಪ್ರಣತೋಽಸ್ಮಿ ಪರಾತ್ಪರಂ ॥ ೨೯ ॥

ಸರ್ವಜ್ಞಂ ಸರ್ವಗಂ ಶಾಂತಂ ಸರ್ವಾಂತರ್ಯಾಮಿಣಂ ಹರಿಂ ।
ಜ್ಞಾನಾತ್ಮಕಂ ಜ್ಞಾನನಿಧಿಂ ಜ್ಞಾನಸಂಸ್ಥಂ ವಿಭುಂ ಭಜೇ ॥ ೩೦ ॥

ನಮಾಮ್ಯಹಂ ವೇದನಿಧಿಂ ಮುರಾರಿಂ
ವೇದಾಂತವಿಜ್ಞಾನಸುನಿಶ್ಚಿತಾರ್ಥಂ ।
ಸೂರ್ಯೇಂದುವತ್ಪ್ರೋಜ್ಜ್ವಲನೇತ್ರಮಿಂದ್ರಂ
ಖಗಸ್ವರೂಪಂ ಖಪತಿಸ್ವರೂಪಂ ॥ ೩೧ ॥

---

೨೮-೨೯. ಯಾವನು ಪ್ರಾಣಿಗಳ ಹೃದಯದಲ್ಲಿದ್ದು ಜೀವಶಬ್ದವಾಚ್ಯನಾಗುವನೋ ಮತ್ತು ಅವಿದ್ಯೆಗೆ ಬದ್ಧನಾಗದಿರುವುದರಿಂದ ಪರಮಾತ್ಮನೆನಿಸುವನೋ ಅಂತಹ, ಸರ್ವಾಂತರ್ಗತನು, ಸರ್ವಕಾರಣನು, ಸಕಲ ಕರ್ಮಗಳಿಗೂ ಫಲಪ್ರದನು ಉತ್ತಮನು, ಉತ್ತಮೋತ್ತಮನು, ಪರಾತ್ಪರನು, ವಾರ್ಧಿಕ್ಯರಹಿತನೂ ಆದ ದೇವನನ್ನು ನಮಸ್ಕರಿಸುತ್ತೇನೆ.

೩೦. ಸರ್ವಜ್ಞನು, ಸರ್ವವ್ಯಾಪ್ತನು, ಶಾಂತನು, ಸರ್ವಾಂತರ್ಯಾಮಿಯು, ಜ್ಞಾನಸ್ವರೂಪನು, ಜ್ಞಾನಪೂರ್ಣನು, ಜ್ಞಾನಸ್ಥಿತನು, ಸರ್ವಶಕ್ತನೂ ಆದ ಹರಿಯನ್ನು ಭಜಿಸುತ್ತೇನೆ.

೩೧. ವೇದನಿಧಿಯು, ವೇದಾಂತವಿಜ್ಞಾನದಿಂದ ನಿರ್ಣಯಿಸಲ್ಪಟ್ಟ ಸ್ವರೂಪವುಳ್ಳವನು, ಸೂರ್ಯಚಂದ್ರರಂತೆ ಪ್ರಕಾಶಮಾನವಾದ ನೇತ್ರಗಳುಳ್ಳವನು, ಪರಮೈಶ್ವರ್ಯೋಪೇತನು, ಪಕ್ಷಿಸ್ವರೂಪನು, ಖಪತಿ ಸ್ವರೂಪನೂ ಆದ ಕೃಷ್ಣನನ್ನು ನಮಸ್ಕರಿಸುತ್ತೇನೆ.

ಸರ್ವೇಶ್ವರಂ ಸರ್ವಗತಂ ಮಹಾಂತಂ
ವೇದಾತ್ಮಕಂ ವೇದವಿದಾಂ ವರಿಷ್ಠಂ ।
ತಂ ವಾಙ್ಮನೋಽಚಿಂತ್ಯಮನಂತಶಕ್ತಿಂ
ಧ್ಯಾನೈಕವೇದ್ಯಂ ಪುರುಷಂ ಭಜಾಮಿ　　॥ ೩೨ ॥

ಇಂದ್ರಾಗ್ನಿಕಾಲಾಸುರಪಾಶಿವಾಯು-
ಸೋಮೇಶಮಾರ್ತಾಂಡಪುರಂದರಾದ್ಯೈಃ ।
ಯಃ ಪಾತಿ ಲೋಕಾನ್ ಪರಿಪೂರ್ಣಭಾವ-
ಸ್ತಮಪ್ರಮೇಯಂ ಶರಣಂ ಪ್ರಪದ್ಯೇ　　॥ ೩೩ ॥

ಸಹಸ್ರಶೀರ್ಷಂ ಚ ಸಹಸ್ರಪಾದಂ
ಸಹಸ್ರಬಾಹುಂ ಚ ಸಹಸ್ರನೇತ್ರಂ ।
ಸಮಸ್ತಯಜ್ಞೈಃ ಪರಿಜುಷ್ಟಮಾದ್ಯಂ
ನತೋಽಸ್ಮಿ ತುಷ್ಟಿಪ್ರದಮುಗ್ರವೀರ್ಯಂ　　॥ ೩೪ ॥

---

೩೨. ಸರ್ವೇಶ್ವರನು, ಸರ್ವಾಂತರ್ಗತನು, ಪೂರ್ಣನು, ವೇದಪ್ರತಿಪಾದ್ಯನು, ವೇದಜ್ಞಾನಿವರೇಣ್ಯನು, ವಾಕ್ಕು ಮತ್ತು ಮನಸ್ಸುಗಳಿಗೆ ಗೋಚರವಾಗದಿರುವವನು ಅಪರಿಮಿತ ಶಕ್ತಿಮಂತನು, ಧ್ಯಾನಮಾತ್ರದಿಂದಲೇ ವೇದ್ಯನೂ ಆಗಿರುವ ಪುರುಷನನ್ನು ಭಜಿಸುತ್ತೇನೆ.

೩೩. ಇಂದ್ರ, ಅಗ್ನಿ, ಯಮ. ನಿಋತಿ, ವರುಣ, ವಾಯು, ಕುಬೇರ, ಈಶಾನ, ಸೂರ್ಯ, ಪುರಂದರ ಮುಂತಾದವರಿಂದ ಲೋಕವನ್ನು ರಕ್ಷಣೆಮಾಡಿಸುತ್ತಿರುವವನು, ಅಪ್ರಮೇಯನು, ಪರಿಪೂರ್ಣನೂ ಆಗಿರುವ ದೇವನನ್ನು ಶರಣುಹೊಂದುವೆನು.

೩೪. ಬಹುಶಿರಸ್ಸು, ಬಹುಪಾದಗಳು, ಬಹುಬಾಹುಗಳು, ಬಹುಕಣ್ಣುಗಳು ಇವುಗಳುಳ್ಳವನು, ಸಮಸ್ತಯಜ್ಞಗಳಿಂದಲೂ ಆರಾಧ್ಯನು, ಸಂತೋಷದಾಯಕನು, ವಿಲಕ್ಷಣಸಾಮರ್ಥ್ಯವಂತನೂ ಆಗಿರುವ, ಮೂಲಕಾರಣನಾದ ದೇವನನ್ನು ನಮಸ್ಕರಿಸುತ್ತೇನೆ.

ಕಾಲಾತ್ಮಕಂ ಕಾಲವಿಭಾಗಹೇತುಂ
ಗುಣತ್ರಯಾತೀತಮಹಂ ಗುಣಜ್ಞಂ ।
ಗುಣಪ್ರಿಯಂ ಕಾಮದಮಸ್ತಸಂಗ-
ಮತೀಂದ್ರಿಯಂ ವಿಶ್ವಭುಜಂ ವಿತೃಷ್ಣಂ ॥ ೩೫ ॥

ನಿರೀಹಮಗ್ರ್ಯಂ ಮನಸಾಪ್ಯಗಮ್ಯಂ
ಮನೋಮಯಂ ಚಾನ್ನಮಯಂ ನಿರೂಢಂ ।
ವಿಜ್ಞಾನಭೇದಪ್ರತಿಪನ್ನಕಲ್ಪಂ
ಅವಾಙ್ಮಯಂ ಪ್ರಾಣಮಯಂ ಭಜಾಮಿ ॥ ೩೬ ॥

ನ ಯಸ್ಯ ರೂಪಂ ನ ಬಲಪ್ರಭಾವೌ
ನ ಯಸ್ಯ ಕರ್ಮಾಣಿ ನ ಯತ್ಪ್ರಮಾಣಂ ।
ಜಾನಂತಿ ದೇವಾಃ ಕಮಲೋದ್ಭವಾದ್ಯಾ
ಸ್ತೋಷ್ಯಾಮ್ಯಹಂ ತಂ ಕಥಮಾತ್ಮರೂಪಂ ॥ ೩೭ ॥

---

೩೫–೩೬. ಕಾಲನಿಯಾಮಕನು, ಕಾಲವಿಭಾಗವನ್ನು ಮಾಡಿದವನು, ಸತ್ವ ರಜಸ್ತಮೋಗುಣಗಳಿಗೆ ಬದ್ಧನಲ್ಲದವನು, ಗುಣಗ್ರಾಹಿಯು, ಗುಣವನ್ನು ಪ್ರೀತಿಸುವವನು, ಇಷ್ಟಾರ್ಥಪ್ರದನು, ಸಂಗರಹಿತನು, ಇಂದ್ರಿಯಗಳಿಗೆ ಗೋಚರನಾಗದಿರುವವನು, ಸಮಸ್ತಸಾರಭೋಕ್ತನು, ತೃಷ್ಣೆಯಿಲ್ಲದವನು, ನಿಸ್ಪೃಹನು, ಶ್ರೇಷ್ಠನು, ಮನಸ್ಸಿಗೂ ಗೋಚರನಾಗದಿರುವವನು, ಜ್ಞಾನಪ್ರಚುರನು, ಜಗತ್ಕಾರಣನು, ಶಾಶ್ವತನು, ಭಿನ್ನವಿಜ್ಞಾನಗಳಿಂದ ಜ್ಞಾತಪ್ರಾಯನು, ವಾಗಿಂದ್ರಿಯಾಗೋಚರನು, ಜಗಚ್ಛ್ರೇಷ್ಟಕನೂ ಆಗಿರುವ ದೇವನನ್ನು ಭಜಿಸುವೆನು.

೩೭. ಯಾರ ರೂಪ, ಶಕ್ತಿ, ಪರಾಕ್ರಮ, ಕ್ರಿಯೆ, ಪ್ರಮಾಣ ಇವುಗಳನ್ನು ಬ್ರಹ್ಮಾದಿದೇವತೆಗಳೂ ಸಹ ತಿಳಿಯುವುದಿಲ್ಲವೋ ಅಂತಹ ಆತ್ಮಸ್ವರೂಪವನ್ನು ನಾನು ಹೇಗೆ ಸ್ತುತಿಸಲಿ ?

ಸಂಸಾರಸಿಂಧೌ ಪತಿತಂ ಜಡಂ ಮಾಂ
ಮೋಹಾಕುಲಂ ಕಾಮಶತೇನ ಬದ್ಧಂ ।
ಅಕೀರ್ತಿಭಾಜಂ ಪಿಶುನಂ ಕೃತಘ್ನಂ
ಸದಾಽಶುಚಿಂ ಪಾಪರತಂ ಪ್ರಮನ್ಯುಂ ।
ದಯಾಂಬುಧೇ ಪಾಹಿ ಭಯಾಕುಲಂ ಮಾಂ
ಪುನಃ ಪುನಸ್ತ್ವಾಂ ಶರಣಂ ಪ್ರಪದ್ಯೇ ॥ ೩೮ ॥

ಇತಿ ಪ್ರಸಾದಿತಸ್ತೇನ ದಯಾಲುಃ ಕಮಲಾಪತಿಃ ।
ಪ್ರತ್ಯಕ್ಷತಾಮಗಾತ್ತಸ್ಯ ಭಗವಾಂಸ್ತೇಜಸಾಂ ನಿಧಿಃ ॥ ೩೯ ॥

ಅತಸೀಪುಷ್ಪಸಂಕಾಶಂ ಫುಲ್ಲಪಂಕಜಲೋಚನಂ ॥ ೪೦ ॥

ಕಿರೀಟಿನಂ ಕುಂಡಲಿನಂ ಹಾರಕೇಯೂರಭೂಷಿತಂ ।
ಶ್ರೀವತ್ಸಕೌಸ್ತುಭಧರಂ ಹೇಮಯಜ್ಞೋಪವೀತಿನಂ ॥ ೪೧ ॥

---

೩೮. ಸಂಸಾರಸಮುದ್ರದಲ್ಲಿ ಮುಳಗಿರುವವನು, ಜಡಪ್ರಾಯನು, ಮೋಹಾವಿಷ್ಟನು, ನೂರಾರು ಕಾಮನೆಗಳಿಂದ ಬಂಧಿತನು, ಅಪಕೀರ್ತಿಯನ್ನು ಪಡೆದಿರುವವನು, ಚಾಡಿಕೋರನು, ಕೃತಘ್ನನು ಯಾವಾಗಲೂ ಅಶುದ್ಧನು, ಪಾಪಕೃತ್ಯಗಳಲ್ಲಿ ಆಸಕ್ತನು, ಕೋಪಿಷ್ಠನು, ಭೀತನೂ ಆಗಿರುವ ನನ್ನನ್ನು ಸಂರಕ್ಷಿಸು. ದಯಾಸಾಗರನೇ! ಪುನಃ ಪುನಃ ನಿನಗೆ ಶರಣಾಗತನಾಗಿರುತ್ತೇನೆ.

೩೯. ಈ ರೀತಿ ಉತ್ತಂಕನು ಮಾಡಿದ ಪ್ರಾರ್ಥನೆಯಿಂದ ಪ್ರಸನ್ನನಾದ ದಯಾಳವು, ಲಕ್ಷ್ಮೀಪತಿಯು, ತೇಜೋನಿಧಿಯೂ ಆದ ಭಗವಂತನು ಅವನಿಗೆ ಪ್ರತ್ಯಕ್ಷನಾದನು.

೪೦–೪೪. ಅಗಸೆಯ ಹೂವಿನಂತೆ ಹೊಳೆಯುತ್ತಿರುವವನು, ಅರಳಿದ ಪದ್ಮಗಳಂತೆ ನೇತ್ರಗಳುಳ್ಳವನು, ಕಿರೀಟ, ಕುಂಡಲ (ಕಡಕು)ಗಳನ್ನು ಧರಿಸಿರುವವನು, ಹಾರ, ಕೇಯೂರ ಇವುಗಳಿಂದಲಂಕೃತನು, ಶ್ರೀವತ್ಸ ಮತ್ತು ಕೌಸ್ತುಭಗಳನ್ನು ಧರಿಸಿರುವವನು, ಸುವರ್ಣಯಜ್ಞೋಪವೀತಧಾರಿಯು, ಮೂಗಿನಲ್ಲಿ

ನಾಸಾವಿನ್ಯಸ್ತಮುಕ್ತಾಭವರ್ಧಮಾನತನುಚ್ಛವಿಂ ।
ಪೀತಾಂಬರಧರಂ ದೇವಂ ವನಮಾಲಾವಿಭೂಷಿತಂ ॥ ೪೨ ॥

ತುಲಸೀಕೋಮಲದಲೈರರ್ಚಿತಾಂಘ್ರಿಂ ಮಹಾದ್ಯುತಿಂ ।
ಕಿಂಕಿಣೀ ನೂಪುರಾದ್ಯೈಶ್ಚ ಶೋಭಿತಂ ಗರುಡಧ್ವಜಂ ॥ ೪೩ ॥

ದೃಷ್ಟ್ವಾ ನನಾಮ ವಿಪ್ರೇಂದ್ರೋ ದಂಡವತ್ಕ್ಷಿತಿಮಂಡಲೇ ।
ಅಭ್ಯಷಿಂಚದ್ಧರೇಃ ಪಾದಾವುತ್ತಂಕೋ ಹರ್ಷವಾರಿಭಿಃ ॥ ೪೪ ॥

ಮುರಾರೇ ರಕ್ಷರಕ್ಷೇತಿ ವ್ಯಾಹರನ್ನಾನ್ಯಧೀಸ್ತದಾ ।
ತಮುತ್ಥಾಪ್ಯ ಮಹಾವಿಷ್ಣುರಾಲಿಲಿಂಗ ದಯಾಪರಃ ॥ ೪೫ ॥

ವರಂ ವೃಣೀಷ್ವ ವತ್ಸೇತಿ ಪ್ರೋವಾಚ ಮುನಿಪುಂಗವಂ ।
ಅಸಾಧ್ಯಂ ನಾಸ್ತಿ ಕಿಂ ಚಿತ್ತೇ ಪ್ರಸನ್ನೇ ಮಯಿ ಸತ್ತಮ ॥ ೪೬ ॥

---

ಧರಿಸಿದ ಮುತ್ತಿನ ಕಾಂತಿಯಿಂದ ಹೆಚ್ಚಾದ ಶರೀರತೇಜಸ್ಸುಳ್ಳವನು, ಪೀತಾಂಬರ ಧಾರಿಯು, ವನಮಾಲೆಯಿಂದಲಂಕೃತನು, ಕೋಮಲವಾದ ತುಳಸೀದಳಗಳಿಂದ ಪೂಜಿಸಲ್ಪಟ್ಟ ಪಾದಗಳುಳ್ಳವನು, ಮಹಾಕಾಂತಿಮಂತನು, ಕಿಂಕಿಣೀ ಮತ್ತು ಕಾಲುಕಡಗ ಮುಂತಾದುವುಗಳಿಂದ ಅಲಂಕೃತನೂ ಆಗಿರುವ ಗರುಡಧ್ವಜನಾದ ಹರಿಯನ್ನು ನೋಡಿ ಬ್ರಾಹ್ಮಣ ಶ್ರೇಷ್ಠನಾದ ಉತ್ತಂಕನು ಭೂಮಿಯಲ್ಲಿ ದಂಡ ಪ್ರಣಾಮ ಮಾಡಿದನು. ಅವನು ಹರ್ಷಾಶ್ರುಗಳಿಂದ ಹರಿಯ ಪಾದಗಳಿಗೆ ಅಭಿಷೇಕಮಾಡಿದನು.

೪೫. ಆಗ ಅವನು ಮುರಾರಿಯೇ! ರಕ್ಷಿಸು ರಕ್ಷಿಸು ಎಂಬುದಾಗಿ ಅನನ್ಯಭಾವದಿಂದ ಕೂಗಿದನು. ಕೂಡಲೇ ದಯಾಪರನಾದ ಮಹಾವಿಷ್ಣುವು ಅವನನ್ನು ಎಬ್ಬಿಸಿ ಆಲಿಂಗನೆ ಮಾಡಿಕೊಂಡನು.

೪೬. ವತ್ಸ! ಸಾಧುವರ್ಯ! ವರವನ್ನು ಕೇಳು. ನಾನು ಪ್ರಸನ್ನನಾಗಿರುವಾಗ ನಿನಗೆ ಯಾವುದೂ ಅಸಾಧ್ಯವಲ್ಲ ಎಂದು ಹರಿಯು ಉತ್ತಂಕಮುನಿವರ್ಯನಿಗೆ ಹೇಳಿದನು.

ಇತೀರಿತಂ ಸಮಾಕರ್ಣ್ಯ ಹ್ಯುತ್ತಂಕಶ್ಚಕ್ರಪಾಣಿನಾ ।
ಪುನಃ ಪ್ರಣಮ್ಯ ತಂ ಪ್ರಾಹ ದೇವದೇವಂ ಜನಾರ್ದನಂ ॥ ೪೭ ॥

ಕಿಂ ಮಾಂ ಮೋಹಯಸೀಶ ತ್ವಂ ಕಿಮನ್ಯೈರ್ದೇವ ಮೇ ವರೈಃ ।
ತ್ವಯಿ ಭಕ್ತಿರ್ದೃಢಾ ಮೇಽಸ್ತು ಜನ್ಮಜನ್ಮಾಂತರೇಷ್ವಪಿ ॥ ೪೮ ॥

ಕೀಟೇಷು ಪಕ್ಷಿಷು ಮೃಗೇಷು ಸರೀಸೃಪೇಷು
ರಕ್ಷಃಪಿಶಾಚಮನುಜೇಷ್ವಪಿ ಯತ್ರ ಯತ್ರ ।
ಜಾತಸ್ಯ ಮೇ ಭವತು ಕೇಶವ ತೇ ಪ್ರಸಾದಾ
ತ್ತ್ವಯ್ಯೇವ ಭಕ್ತಿರಚಲಾಽವ್ಯಭಿಚಾರಿಣೀ ಚ ॥ ೪೯ ॥

ಏವಮಸ್ತ್ವಿತಿ ಲೋಕೇಶಃ ಶಂಖಪ್ರಾಂತೇನ ಸಂಸ್ಪೃಶನ್ ।
ದಿವ್ಯಜ್ಞಾನಂ ದದೌ ತಸ್ಮೈ ಯೋಗಿನಾಮಪಿ ದುರ್ಲಭಂ ॥ ೫೦ ॥

---

೪೭. ಈ ಪ್ರಕಾರ ಚಕ್ರಪಾಣಿಯು ಹೇಳಿದುದನ್ನು ಕೇಳಿ ಉತ್ತಂಕನು ಪುನಃ ನಮಸ್ಕರಿಸಿ ದೇವೋತ್ತಮನಾದ ಆ ಜನಾರ್ದನನನ್ನು ಕುರಿತು ಮಾತನಾಡಿದನು.

೪೮. ಸ್ವಾಮಿಯೇ! ನೀನು ನನ್ನನ್ನು ಮೋಹಪಡಿಸುವೆಯಾ ಏನು? ದೇವನೇ! ಬೇರೆ ವರಗಳು ನನಗೇತಕ್ಕೆ? ಜನ್ಮಜನ್ಮಾಂತರಗಳಲ್ಲಿಯೂ ನಿನ್ನಲ್ಲಿ ಭಕ್ತಿಯು ನನಗೆ ದೃಢವಾಗಿರಲಿ. ಇದೇ ನನ್ನ ಪ್ರಾರ್ಥನೆ.

೪೯. ಕೇಶವನೇ! ಕೀಟ, ಪಕ್ಷಿ, ಮೃಗ, ಸರ್ಪ, ರಾಕ್ಷಸ, ಪಿಶಾಚ ಮತ್ತು ಮನುಷ್ಯ ಇವುಗಳಲ್ಲಿ ಎಲ್ಲಿ ನನಗೆ ಜನ್ಮಬಂದರೂ ಸರಿ, ಅಲ್ಲೆಲ್ಲಾ ನನಗೆ ನಿನ್ನ ಅನುಗ್ರಹದಿಂದ ನಿನ್ನಲ್ಲಿಯೇ ಭಕ್ತಿಯು ಸ್ಥಿರವಾಗಿಯೂ, ಅನತಿಪ್ರಸಕ್ತವಾಗಿಯೂ ಇರಲಿ.

೫೦. ಜಗದೊಡೆಯನಾದ ಹರಿಯು ಶಂಖದ ಕೊನೆಯಭಾಗವನ್ನು ಅವನ ಮೇಲಿಟ್ಟು ಹಾಗೆಯೇ ಆಗಲೆಂದು ಅನುಗ್ರಹಿಸಿ ಯೋಗಿಗಳಿಗೂ ಸಹ ದುರ್ಲಭವಾದ ದಿವ್ಯಜ್ಞಾನವನ್ನು ಅವನಿಗೆ ಕೊಟ್ಟನು.

ಪುನಃ ಸ್ತುವಂತಂ ವಿಪ್ರೇಂದ್ರಂ ದೇವದೇವೋ ಜನಾರ್ದನಃ ।
ಇದಮಾಹ ಸ್ಮಿತಮುಖೋ ಹಸ್ತಂ ತಚ್ಛಿರಸಿ ನ್ಯಸನ್ ॥ ೫೧ ॥

ಶ್ರೀಭಗವಾನುವಾಚ

ಆರಾಧಯ ಕ್ರಿಯಾಯೋಗೈರ್ಮಾಂ ಸದಾ ದ್ವಿಜಸತ್ತಮ ।
ನರನಾರಾಯಣಸ್ಥಾನಂ ವ್ರಜ ಮೋಕ್ಷಂ ಗಮಿಷ್ಯಸಿ ॥ ೫೨ ॥

ತ್ವಯಾ ಕೃತಮಿದಂ ಸ್ತೋತ್ರಂ ಯಃ ಪಠೇತ್ಸತತಂ ನರಃ ।
ಸರ್ವಾನ್ಕಾಮಾನವಾಪ್ಯಾಂತೇ ಮೋಕ್ಷಭಾಗೀ ಭವೇತ್ತತಃ ॥ ೫೩ ॥

ಇತ್ಯುಕ್ತ್ವಾ ಮಾಧವೋ ವಿಪ್ರಂ ತತ್ರೈವಾಂತರ್ದಧೇ ಮುನೇ ।
ನರನಾರಾಯಣಸ್ಥಾನಮುತ್ತಂಕೋಽಪಿ ತತೋ ಯಯೌ ॥ ೫೪ ॥

---

೫೧. ಪುನಃ ಸ್ತುತಿಸುತ್ತಿರುವ ಬ್ರಾಹ್ಮಣವರ್ಯನಾದ ಉತ್ತಂಕನನ್ನು ನೋಡಿ, ದೇವೋತ್ತಮನಾದ ಜನಾರ್ದನನು ಮಂದಹಾಸಯುಕ್ತನಾಗಿ ಅವನ ತಲೆಯಮೇಲೆ ಕೈಯನ್ನಿಟ್ಟು ಹೀಗೆ ನುಡಿಗನು.

೫೨. ಭಗವಂತನು ಹೇಳಿದನು :— ದ್ವಿಜವರ್ಯನೇ! ಕರ್ಮಯೋಗಗಳಿಂದ ನನ್ನನ್ನು ಸರ್ವದಾ ಆರಾಧಿಸು. ನರನಾರಾಯಣಾಶ್ರಮಕ್ಕೆ ಹೋಗು. ಮೋಕ್ಷವನ್ನು ಪಡೆಯುವೆ.

೫೩. ನೀನು ಮಾಡಿದ ಸ್ತೋತ್ರವನ್ನು ಪ್ರತಿದಿನವೂ ಪಠನಮಾಡುವ ಮನುಷ್ಯನು ಸಕಲೇಷ್ಟಾರ್ಥಗಳನ್ನು ಪಡೆದು ಕೊನೆಗೆ ಮೋಕ್ಷವನ್ನೂ ಪಡೆಯುವನು.

೫೪. ನಾರದಮುನಿಯೇ! ಮಾಧವನು ಬ್ರಾಹ್ಮಣನಿಗೆ ಈ ರೀತಿ ಹೇಳಿ ಅಲ್ಲಿಯೇ ಅಂತರ್ಧಾನನಾದನು. ತರುವಾಯ ಉತ್ತಂಕನೂ ಸಹ ನರನಾರಾಯಣಾಶ್ರಮಕ್ಕೆ ಹೋದನು.

**ತಸ್ಮಾದ್ಭಕ್ತಿಃ ಸದಾ ಕಾರ್ಯಾ ದೇವದೇವಸ್ಯ ಚಕ್ರಿಣಃ ।**
**ಹರಿಭಕ್ತಿಃ ಪರಾ ಪ್ರೋಕ್ತಾ ಸರ್ವಕಾಮಫಲಪ್ರದ ॥ ೫೫ ॥**

**ಉತ್ತಂಕೋ ಭಕ್ತಿಭಾವೇನ ಕ್ರಿಯಾಯೋಗಪರೋ ಮುನೇ ।**
**ಪೂಜಯನ್ಮಾಧವಂ ನಿತ್ಯಂ ನರನಾರಾಯಣಾಶ್ರಮೇ ॥ ೫೬ ॥**

**ಜ್ಞಾನವಿಜ್ಞಾನಸಂಪನ್ನಃ ಸಂಛಿನ್ನದ್ವೈತಸಂಶಯಃ ।**
**ಅವಾಪ ದುರವಾಪಂ ವೈ ತದ್ವಿಷ್ಣೋಃ ಪರಮಂ ಪದಂ ॥ ೫೭ ॥**

**ಪೂಜಿತೋ ನಮಿತೋ ವಾಽಪಿ ಸಂಸ್ಮೃತೋ ವಾಽಪಿ ಮೋಕ್ಷದಃ ।**
**ನಾರಾಯಣೋ ಜಗನ್ನಾಥೋ ಭಕ್ತಾನಾಂ ಮಾನವರ್ಧನಃ ॥ ೫೮ ॥**

**ತಸ್ಮಾನ್ನಾರಾಯಣಂ ದೇವಮನಂತಮಪರಾಜಿತಂ ।**
**ಇಹಾಮುತ್ರ ಸುಖಪ್ರೇಪ್ಸುಃ ಪೂಜಯೇದ್ಭಕ್ತಿಸಂಯುತಃ ॥ ೫೯ ॥**

---

೫೫. ಆದಕಾರಣ ದೇವೋತ್ತಮನು, ಚಕ್ರಾಯುಧಧಾರಿಯೂ ಆದ ಹರಿಯಲ್ಲಿ ಯಾವಾಗಲೂ ಭಕ್ತಿಯನ್ನು ಮಾಡಬೇಕು. ಹರಿಭಕ್ತಿಯು ಸಕಲೇಷ್ಟಾರ್ಥಪ್ರದವು ಮತ್ತು ಉತ್ಕೃಷ್ಟವು ಎಂದು ವಿಹಿತವಾಗಿದೆ.

೫೬–೫೭. ನಾರದಮುನಿಯೇ! ಉತ್ತಂಕನು ನರನಾರಾಯಣಾಶ್ರಮದಲ್ಲಿ ಭಕ್ತಿಭಾವದಿಂದ ಕರ್ಮಯೋಗನಿಷ್ಠನಾಗಿ ಪ್ರತಿದಿನವೂ, ನಾರಾಯಣನನ್ನು ಪೂಜಿಸುವವನಾಗಿ ಜ್ಞಾನ, ವಿಜ್ಞಾನ ಇವುಗಳನ್ನು ಹೊಂದಿ ಸರ್ವಾಂತರ್ಗತನಾದ ಭಗವಂತನಲ್ಲಿ ದ್ವೈತಸಂಶಯವನ್ನು ಕಳೆದುಕೊಂಡು ಹೊಂದಲಶಕ್ಯವಾದ ವಿಷ್ಣುವಿನ ಪರಮಪದ ಎಂದರೆ ವೈಕುಂಠಾದಿ ಸ್ಥಾನವನ್ನು ಪಡೆದನು.

೫೮. ಪೂಜೆ, ನಮಸ್ಕಾರ, ಭಕ್ತಿಪೂರ್ವಕಸ್ಮರಣೆ ಇವುಗಳಿಂದ ಆರಾಧಿಸಲ್ಪಟ್ಟರೆ ಮುಕ್ತಿಯನ್ನು ಕೊಡುವನು. ಜಗದೊಡೆಯನೂ ಆದ ನಾರಾಯಣನು ಭಕ್ತರ ಮಾನವನ್ನು ವೃದ್ಧಿಗೊಳಿಸುವನು.

೫೯. ಆದಕಾರಣ ಯಾರಿಂದಲೂ ಪರಾಜಿತನಾಗದಿರುವ ಅಪರಿಮಿತನಾದ ನಾರಾಯಣದೇವನನ್ನು ಐಹಿಕಾಮುಷ್ಮಿಕ ಸುಖವನ್ನು ಬಯಸುವವನು ಭಕ್ತಿಯಿಂದ ಪೂಜಿಸಬೇಕು.

**ಯಃ ಪಠೇದಿದಮಾಖ್ಯಾನಂ ಶ್ರುಣುಯಾದ್ವಾ ಸಮಾಹಿತಃ ।**
**ಸೋಽಪಿ ಸರ್ವಾಘನಿರ್ಮುಕ್ತಃ ಪ್ರಯಾತಿ ಭವನಂ ಹರೇಃ ॥ ೬೦ ॥**

**ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ ಪ್ರಥಮಪಾದೇ ವಿಷ್ಣುಮಾಹಾತ್ಮ್ಯಂ ನಾಮಾಷ್ಟತ್ರಿಂಶೋಽಧ್ಯಾಯಃ**

---

೬೦. ಈ ಉಪಾಖ್ಯಾನವನ್ನು ಸಮಾಧಾನಮನಸ್ಕನಾಗಿ ಶ್ರವಣ ಪಠನ ಮಾಡುವವನು ಸಕಲ ಪಾಪಗಳಿಂದ ಬಿಡುಗಡೆಯನ್ನು ಹೊಂದಿ ಹರಿಯ ಲೋಕಕ್ಕೆ (ವೈಕುಂಠ) ಹೋಗುವನು.

ಇಂತು ಶ್ರೀಬೃಹನ್ನಾರದೀಯ ಪುರಾಣದೊಳು ಪೂರ್ವಭಾಗ ಪ್ರಥಮಪಾದದಲ್ಲಿ ವಿಷ್ಣುಮಹಿಮೆಯ ಕಥನವೆಂಬ ಮೂವತ್ತೆಂಟನೆಯ ಅಧ್ಯಾಯವು ಮುಗಿದುದು.

**ಕಥಾಸಾರಾಂಶ.**

ಉತ್ತಂಕನು ಗುಳಿಕನಿಗೆ ಹರಿಪಾದೋದಕಪ್ರೋಕ್ಷಣೆಮಾಡಿದ ಕೂಡಲೇ ವಿಮಾನವು ಬಂದು ಅದರ ಮೂಲಕವಾಗಿ ಗುಳಿಕನು ವಿಷ್ಣುಲೋಕಕ್ಕೆ ಹೊರಟುದನ್ನು ನೋಡಿ ಆಶ್ಚರ್ಯಗೊಂಡು, ಅವನು ಮಾಡಿದ ಹರಿಸ್ತುತಿಯು ಈ ಅಧ್ಯಾಯದಲ್ಲಿ ಉಕ್ತವಾಗಿದೆ. ಈ ಸ್ತುತಿಯಲ್ಲಿ ಬಹಳವಾಗಿ ತತ್ವಾರ್ಥಗಳು ಅಡಗಿವೆ. ಈ ಸ್ತುತಿಯನ್ನು ಕೇಳಿದ ಕೂಡಲೇ ಹರಿಯು ಉತ್ತಂಕನಿಗೆ ಪ್ರತ್ಯಕ್ಷನಾಗಿ ಅವನು ಯಾಚಿಸಿದ ಸತತ ಹರಿಭಕ್ತಿಯನ್ನು ಅವನಿಗೆ ಅನುಗ್ರಹಿಸಿ, ನರನಾರಾಯಣಾಶ್ರಮಕ್ಕೆ ಹೋಗು ಅಲ್ಲಿ ಕ್ರಿಯಾಯೋಗಪರನಾಗಿರು ಅದರಿಂದ ನಿನಗೆ ಮುಕ್ತಿಯು ಲಭಿಸುತ್ತದೆ ಎಂದು ಹೇಳಿ ಅಂತರ್ಧಾನನಾದನು. ಅವನೂ ಅದರಂತೆ ಆಚರಿಸಿ ಮುಕ್ತನಾದನು. ಈ ಅಧ್ಯಾಯವನ್ನು ಶ್ರವಣ, ಪಠನ ಮಾಡುವವರಿಗೂ ಸಹ ವಿಷ್ಣುಲೋಕ ಪ್ರಾಪ್ತಿಯಾಗುತ್ತದೆಂದು ಫಲವು ಉಕ್ತವಾಗಿದೆ.

# ಏಕೋನಚತ್ವಾರಿಂಶೋಽಧ್ಯಾಯಃ

---

**ಸನಕ ಉವಾಚ**

**ಭೂಯಃ ಶೃಣುಷ್ವ ವಿಪ್ರೇಂದ್ರ ಮಾಹಾತ್ಮ್ಯಂ ಪರಮೇಷ್ಠಿನಃ ।**
**ಸರ್ವಪಾಪಹರಂ ಪುಣ್ಯಂ ಭುಕ್ತಿಮುಕ್ತಿಪ್ರದಂ ನೃಣಾಂ ॥ ೧ ॥**

**ಅಹೋ ಹರಿಕಥಾ ಲೋಕೇ ಪಾಪಘ್ನೀ ಪುಣ್ಯದಾಯಿನೀ ।**
**ಶೃಣ್ವತಾಂ ವದತಾಂ ಚೈವ ತದ್ಭಕ್ತಾನಾಂ ವಿಶೇಷತಃ ॥ ೨ ॥**

**ಹರಿಭಕ್ತಿರಸಾಸ್ವಾದಮುದಿತಾ ಯೇ ನರೋತ್ತಮಾಃ ।**
**ನಮಸ್ಕರೋಮ್ಯಹಂ ತೇಭ್ಯೋ ಯತ್ಸಂಗಾನ್ಮುಕ್ತಿಭಾಙ್ನರಃ ॥ ೩ ॥**

---

## ಮೂವತ್ತೊಂಭತ್ತನೆಯ ಅಧ್ಯಾಯವು

೧. ಸನಕನು ಹೇಳಿದನು—ಬ್ರಾಹ್ಮಣವರ್ಯನೇ! ಮನುಷ್ಯರಿಗೆ ಸಕಲ ಪಾಪಪರಿಹಾರಕವು, ಪುಣ್ಯಕರವು, ಐಹಿಕದಲ್ಲಿ ಭೋಗ ಪರಲೋಕದಲ್ಲಿ ಮುಕ್ತಿ ಇವುಗಳನ್ನು ಕೊಡುವುದೂ ಆಗಿರುವ ಸೃಷ್ಟಿಕರ್ತನ ಮಹಿಮೆಯನ್ನು ಪುನಃ ಹೇಳುವೆನು ಕೇಳು.

೨. ಲೋಕದಲ್ಲಿ ಹರಿಕಥೆಯು ಅದನ್ನು ಶ್ರವಣಪಠನಮಾಡುವ ಭಕ್ತರಿಗೆ ವಿಶೇಷವಾಗಿ ಪಾಪಪರಿಹಾರಮಾಡಿ ಪುಣ್ಯವನ್ನು ಕೊಡುತ್ತದೆ ಆಶ್ಚರ್ಯ !

೩. ಮನುಷ್ಯನು ಯಾರ ಸಹವಾಸದಿಂದ ಮುಕ್ತಿಯನ್ನು ಪಡೆಯುವನೋ, ಅಂತಹ, ಹರಿಭಕ್ತಿರಸವನ್ನು ಆಸ್ವಾದನೆಮಾಡಿ ಸಂತೋಷಿಸುತ್ತಿರುವ ಮನುಷ್ಯೋತ್ತಮರಿಗೆ ನಮಸ್ಕಾರಮಾಡುವೆನು.

ಹರಿಭಕ್ತಿಪರಾ ಯೇ ತು ಹರಿನಾಮಪರಾಯಣಾಃ ।
ದುರ್ವೃತ್ತಾ ವಾ ಸುವೃತ್ತಾ ವಾ ತೇಭ್ಯೋ ನಿತ್ಯಂ ನಮೋನಮಃ ॥ ೪ ॥

ಸಂಸಾರಸಾಗರಂ ತರ್ತುಂ ಯ ಇಚ್ಛೇನ್ಮುನಿಪುಂಗವ ।
ಸ ಭಜೇದ್ಧರಿಭಕ್ತಾನಾಂ ಭಕ್ತಾನ್ವೈ ಪಾಪಹಾರಿಣಃ ॥ ೫ ॥

ದೃಷ್ಟಃ ಸ್ಮೃತೋ ಪೂಜಿತೋ ವಾ ಧ್ಯಾತಃ ಪ್ರಣಮಿತೋಽಪಿ ವಾ ।
ಸಮುದ್ಧರತಿ ಗೋವಿಂದೋ ದುಸ್ತರಾದ್ಭವಸಾಗರಾತ್ ॥ ೬ ॥

ಸ್ವಪನ್ಭುಂಜನ್ವ್ರಜಂಸ್ತಿಷ್ಠನ್ನುತ್ತಿಷ್ಠಂಶ್ಚ ವದಂಸ್ತಥಾ ।
ಚಿಂತಯೇದ್ಯೋ ಹರೇರ್ನಾಮ ತಸ್ಮೈ ನಿತ್ಯಂ ನಮೋನಮಃ ॥ ೭ ॥

ಅಹೋ ಭಾಗ್ಯಮಹೋಭಾಗ್ಯಂ ವಿಷ್ಣುಭಕ್ತಿರತಾತ್ಮನಾಂ ।
ಯೇಷಾಂ ಮುಕ್ತಿಃ ಕರಸ್ಥೈವ ಯೋಗಿನಾಮಪಿ ದುರ್ಲಭಾ ॥ ೮ ॥

---

೪. ಹರಿಭಕ್ತಿನಿಷ್ಠರಾದವರು ದುರಾಚಾರಿಗಳಾಗಲಿ ಅಥವಾ ಸದಾಚಾರಿಗಳಾಗಲಿ ಅವರಿಗೆ ಸದಾ ನಮಸ್ಕಾರ ಮಾಡುವೆನು.

೫. ಮುನಿಶ್ರೇಷ್ಠ ! ಸಂಸಾರವೆಂಬ ಸಮುದ್ರವನ್ನು ದಾಟಲು ಇಚ್ಛಿಸುವವನು ಪಾಪಪರಿಹಾರಕರಾದ ಹರಿಭಕ್ತರನ್ನು ಭಜಿಸಬೇಕು.

ದರ್ಶನ, ಸ್ಮರಣೆ, ಪೂಜೆ, ಧ್ಯಾನ ಮತ್ತು ನಮಸ್ಕಾರ ಇವುಗಳಿಂದ ಆರಾಧಿಸಲ್ಪಟ್ಟ ಗೋವಿಂದನು ದಾಟಲಶಕ್ಯವಾದ ಸಂಸಾರಸಮುದ್ರವನ್ನು ದಾಟಿಸುವನು.

೭, ನಿದ್ದೆ, ಊಟ, ಸಂಚಾರ, ಕೂಡುವುದು, ನಿಲ್ಲುವುದು ಮತ್ತು ಮಾತನಾಡುವುದು, ಈ ಸಮಯಗಳಲ್ಲೆಲ್ಲಾ ಹರಿನಾಮವನ್ನು ಸ್ಮರಿಸುತ್ತಿರುವವನಿಗೆ ಸದಾ ನಮಸ್ಕಾರ, ನಮಸ್ಕಾರ.

೮. ಆಶ್ಚರ್ಯ ! ಯೋಗಿಗಳಿಗೂ ದುರ್ಲಭವಾದ ಮೋಕ್ಷವು ವಿಷ್ಣುಭಕ್ತಿನಿರತರಾದವರ ಕೈಯಲ್ಲಿಯೇ ಇದೆ. ಅವರ ಭಾಗ್ಯವೇ ಭಾಗ್ಯ, ಆಶ್ಚರ್ಯ.

**ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಂ ।**
**ವದತಾಂ ಶೃಣ್ವತಾಂ ಚೈವ ಸರ್ವಪಾಪಪ್ರಣಾಶನಂ ॥ ೯ ॥**

**ಆಸೀತ್ಪುರಾ ಮಹೀಪಾಲಃ ಸೋಮವಂಶಸಮುದ್ಭವಃ ।**
**ಜಯಧ್ವಜ ಇತಿ ಖ್ಯಾತೋ ನಾರಾಯಣಪರಾಯಣಃ ॥ ೧೦ ॥**

**ವಿಷ್ಣೋರ್ದೇವಾಲಯೇ ನಿತ್ಯಂ ಸಂಮಾರ್ಜನಪರಾಯಣಃ ।**
**ದೀಪದಾನರತಶ್ಚೈವ ಸರ್ವಭೂತದಯಾಪರಃ ॥ ೧೧ ॥**

**ಸ ಕದಾಚಿನ್ಮಹೀಪಾಲೋ ರೇವಾತೀರೇ ಮನೋರಮೇ ।**
**ವಿಚಿತ್ರಕುಸುಮೋಪೇತಂ ಕೃತವಾನ್ವಿಷ್ಣುಮಂದಿರಂ ॥ ೧೨ ॥**

**ಸ ತತ್ರ ನೃಪಶಾರ್ದೂಲಃ ಸದಾ ಸಂಮಾರ್ಜನೇ ರತಃ ।**
**ದೀಪದಾನಪರಶ್ಚೈವ ವಿಶೇಷೇಣ ಹರಿಪ್ರಿಯಃ ॥ ೧೩ ॥**

---

೯. ಈ ವಿಷಯದಲ್ಲಿ ಕೇಳುವವರ ಮತ್ತು ಹೇಳುವವರ ಪಾಪವನ್ನು ನಾಶಪಡಿಸುವಂತಹ ಪ್ರಾಚೀನವಾದೊಂದು ಇತಿಹಾಸವನ್ನು ಉದಾಹರಣೆಯಾಗಿ ಹೇಳುತ್ತಾರೆ.

೧೦-೧೧. ಪೂರ್ವದಲ್ಲಿ ನಾರಾಯಣನ ಭಕ್ತನು, ವಿಷ್ಣುದೇವಾಲಯದಲ್ಲಿ ನಿತ್ಯವೂ ಆದರದಿಂದ ಕಸಗುಡಿಸುವವನು, ದೀಪದಾನಮಾಡುತ್ತಿರುವವನು, ಸಕಲ ಪ್ರಾಣಿಗಳಲ್ಲಿಯೂ ದಯೆಯನ್ನು ತೋರಿಸುವವನೂ ಆಗಿದ್ದ ಚಂದ್ರವಂಶದಲ್ಲಿ ಹುಟ್ಟಿದ ಜಯಧ್ವಜನೆಂಬ ಪ್ರಸಿದ್ಧನಾದ ದೊರೆಯಿದ್ದನು.

೧೨. ಆ ರಾಜನು ಒಂದಾನೊಂದು ಕಾಲದಲ್ಲಿ ಮನೋಹರವಾದ ರೇವಾನದಿಯ ತೀರದಲ್ಲಿ ವಿಚಿತ್ರಪುಷ್ಪಗಳಿಂದ ಕೂಡಿದ ವಿಷ್ಣುದೇವಾಲಯವನ್ನು ನಿರ್ಮಾಣಮಾಡಿಸಿದನು.

೧೩. ಆ ರಾಜಶ್ರೇಷ್ಠನು ಯಾವಾಗಲೂ ಆ ದೇವಾಲಯದಲ್ಲಿ ಸಂಮಾರ್ಜನೆ (ಕಸಗುಡಿಸುವುದು) ಮಾಡುವವನಾಗಿ ದೀಪದಾನಮಾಡುತ್ತಾ ವಿಶೇಷವಾಗಿ ಶ್ರೀಹರಿಯ ಪ್ರೀತಿಗೆ ಪಾತ್ರನಾಗಿದ್ದನು.

ಹರಿನಾಮಪರೋ ನಿತ್ಯಂ ಹರಿಸಂಸಕ್ತಮಾನಸಃ ।
ಹರಿಪ್ರಣಾಮನಿರತೋ ಹರಿಭಕ್ತಜನಪ್ರಿಯಃ ॥ ೧೪ ॥

ವೀತಿಹೋತ್ರ ಇತಿ ಖ್ಯಾತೋ ಹ್ಯಾಸೀತ್ತಸ್ಯ ಪುರೋಹಿತಃ ।
ಜಯಧ್ವಜಸ್ಯ ಚರಿತಂ ದೃಷ್ಟ್ವಾ ವಿಸ್ಮಯಮಾಗತಃ ॥ ೧೫ ॥

ಕದಾಚಿದುಪವಿಷ್ಟಂ ತಂ ರಾಜಾನಂ ವಿಷ್ಣುತತ್ಪರಂ ।
ಅಪೃಚ್ಛದ್ವೀತಿಹೋತ್ರಸ್ತು ವೇದವೇದಾಂಗಪಾರಗಃ ॥ ೧೬ ॥

ವೀತಿಹೋತ್ರ ಉವಾಚ

ರಾಜನ್ಪರಮಧರ್ಮಜ್ಞ ಹರಿಭಕ್ತಿಪರಾಯಣ ।
ವಿಷ್ಣುಭಕ್ತಿಮತಾಂ ಪುಂಸಾಂ ಶ್ರೇಷ್ಠೋऽಸಿ ಭರತರ್ಷಭ ॥ ೧೭ ॥

ಸಂಮಾರ್ಜನಪರೋ ನಿತ್ಯಂ ದೀಪದಾನರತಸ್ತಥಾ ।
ತನ್ಮೇ ವದ ಮಹಾಭಾಗ ಕಿಂ ತ್ವಯಾ ವಿದಿತಂ ಫಲಂ ॥ ೧೮ ॥

---

೧೪. ಅವನು ಯಾವಾಗಲೂ ಹರಿನಾಮಸಂಕೀರ್ತನಪರನು, ಮನಸ್ಸಿನಲ್ಲಿ ಹರಿಯನ್ನು ಧ್ಯಾನಿಸುವವನು, ಹರಿಗೆ ನಮಸ್ಕಾರ ಮಾಡುವುದರಲ್ಲಾಸಕ್ತನು ಮತ್ತು ಹರಿಭಕ್ತಜನರ ಅಭಿಮಾನಕ್ಕೆ ಪಾತ್ರನೂ ಆಗಿದ್ದನು.

೧೫. ಆ ರಾಜನಿಗೆ ವೀತಿಹೋತ್ರನೆಂದು ಪ್ರಸಿದ್ಧನಾದ ಪುರೋಹಿತನಿದ್ದನು. ಅವನು ಜಯಧ್ವಜರಾಜನ ವ್ಯಾಪಾರವನ್ನು ನೋಡಿ ಆಶ್ಚರ್ಯಗೊಂಡನು-

೧೬. ಒಂದಾನೊಂದು ದಿನ ವಿಷ್ಣುಧ್ಯಾನಪರನಾಗಿ ಕುಳಿತಿದ್ದ ಆ ರಾಜನನ್ನು ವೇದವೇದಾಂಗಪಾರಂಗತನಾದ ವೀತಿಹೋತ್ರನು ಕೇಳಿದನು.

೧೭. ವೀತಿಹೋತ್ರನು ಹೇಳಿದನು—ಉತ್ತಮ ಧರ್ಮಸೂಕ್ಷ್ಮಗಳನ್ನು ತಿಳಿದಿರುವವನು, ಹರಿಭಕ್ತಿನಿರತನು, ಭರತಕುಲಾಗ್ರಣಿಯೂ ಆದ ದೊರೆಯೇ ! ನೀನು ವಿಷ್ಣುಭಕ್ತರಲ್ಲಿ ಉತ್ತಮನಾಗಿರುವೆ.

೧೮. ಪ್ರತಿದಿನವೂ ಸಂಮಾರ್ಜನೆ, ದೀಪದಾನ ಇವುಗಳಲ್ಲಿಯೇ ಆಸಕ್ತನಾಗಿರುವೆ, ಧನ್ಯನೇ! ನೀನು ಅದಕ್ಕೆ ಏನು ಫಲವೆಂದು ತಿಳಿದಿರುವಿ ? ಅದನ್ನು ನನಗೆ ಹೇಳು.

**ಸಂಪಾದನೇ ತು ವರ್ತೀನಾಂ ತೈಲಸಂಪಾದನೇ ತಥಾ ।**
**ಉದ್ಯುಕ್ತೋಽಸಿ ಸದಾ ಭದ್ರ ಯದ್ವಿಷ್ಣೋರ್ಗೃಹಮಾರ್ಜನೇ ॥ ೧೯ ॥**

**ಕರ್ಮಾಣ್ಯನ್ಯಾನಿ ಸಂತ್ಯೇವ ವಿಷ್ಣೋಃ ಪ್ರೀತಿಕರಾಣಿ ಚ ।**
**ತಥಾಪಿ ಕಿಂ ಮಹಾಭಾಗ ಏತಯೋಃ ಸತತೋದ್ಯತಃ ॥ ೨೦ ॥**

**ಸರ್ವಾತ್ಮನಾ ಮಹಾಪುಣ್ಯಂ ನರೇಶ ವಿದಿತಂ ಚ ಯತ್ ।**
**ತದ್ಬ್ರೂಹಿ ಮೇ ಗುಹ್ಯತಮಂ ಪ್ರೀತಿರ್ಮಯಿ ತವಾಸ್ತಿ ಚೇತ್ ॥ ೨೧ ॥**

**ಪುರೋಧಸೈವಮುಕ್ತಸ್ತು ಪ್ರಹಸನ್ಸ ಜಯಧ್ವಜಃ ।**
**ವಿನಯಾವನತೋ ಭೂತ್ವಾ ಪ್ರೋವಾಚೇದಂ ಕೃತಾಂಜಲಿಃ ॥ ೨೨ ॥**

**ಜಯಧ್ವಜ ಉವಾಚ**

**ಶೃಣುಷ್ವ ವಿಪ್ರಶಾರ್ದೂಲ ಯಥೈವಾಚರಿತಂ ಪುರಾ ।**
**ಜಾತಿಸ್ಮರತ್ವಾಜ್ಜಾನಾಮಿ ಶ್ರೋತೄಣಾಂ ವಿಸ್ಮಯಪ್ರದಂ ॥ ೨೩ ॥**

---

೧೯. ಭದ್ರನೇ ! ನೀನು ಸರ್ವದಾ ಬತ್ತಿ, ಎಣ್ಣೆಗಳನ್ನು ಸಂಪಾದಿಸುವುದರಲ್ಲಿಯೂ ವಿಷ್ಣುದೇವಸ್ಥಾನದ ಸಂಮಾರ್ಜನೆಯಲ್ಲಿಯೂ ಉದ್ಯುಕ್ತನಾಗಿರುವೆ.

೨೦. ವಿಷ್ಣುಪ್ರೀತಿಕರವಾದ ಇತರ ಕರ್ಮಗಳು ಬೇಕಾದಷ್ಟಿವೆ. ಆದಾಗ್ಯೂ ನೀನು ಇವೆರಡು ಕರ್ಮಗಳಲ್ಲಿಯೇ ಉದ್ಯುಕ್ತನಾಗಿರುವೆ.

೨೧. ದೊರೆಯೇ ! ನಿನಗೆ ನನ್ನಲ್ಲಿ ನಿಜವಾದ ಅಭಿಮಾನವಿದ್ದರೆ ಸಂಮಾರ್ಜನೆ ಮುಂತಾದುವುಗಳಿಂದ ಉಂಟಾಗುವುದೆಂದು ನೀನು ತಿಳಿದಿರುವ ಅತಿ ಗೋಪ್ಯವಾದ ಮಹಾಪುಣ್ಯವನ್ನು ಸಮಗ್ರವಾಗಿ ತಿಳಿಸು.

೨೨. ಪುರೋಹಿತನು ಹೀಗೆ ಹೇಳಿದುದನ್ನು ಕೇಳಿ ಆ ಜಯಧ್ವಜನು ನಕ್ಕು, ವಿನಯದಿಂದ ಬಗ್ಗಿ ಕೈಮುಗಿದು ಹೀಗೆ ಹೇಳಿದನು.

೨೩. ಜಯಧ್ವಜನು ನುಡಿದನು—ಬ್ರಾಹ್ಮಣಶ್ರೇಷ್ಠನೇ ! ಪೂರ್ವದಲ್ಲಿ ಹೇಗೆ ನಡೆಯಿತೆಂಬುದನ್ನು ಕೇಳು. ಅದು ಕೇಳುವವರಿಗೆ ಆಶ್ಚರ್ಯಕರವು. ಜನ್ಮಾಂತರಸ್ಮರಣೆಯುಳ್ಳವನಾದುದರಿಂದ ನಾನು ಅದನ್ನು ತಿಳಿದಿರುವೆನು.

**ಆಸೀತ್ಪುರಾ ಕೃತಯುಗೇ ಬ್ರಹ್ಮನ್ಸ್ವಾರೋಚಿಷೇऽಂತರೇ ।**
**ರೈವತೋ ನಾಮ ವಿಪ್ರೇಂದ್ರೋ ವೇದವೇದಾಂಗಪಾರಗಃ ॥ ೨೪ ॥**

**ಅಯಾಜ್ಯಯಾಜಕಶ್ಚೈವ ಸದೈವ ಗ್ರಾಮಯಾಜಕಃ ।**
**ಪಿಶುನೋ ನಿಷ್ಠುರಶ್ಚೈವ ಹ್ಯಪಣ್ಯಾನಾಂ ಚ ವಿಕ್ರಯೀ ॥ ೨೫ ॥**

**ನಿಷಿದ್ಧಕರ್ಮಾಚರಣಾತ್ಪರಿತ್ಯಕ್ತಃ ಸ ಬಂಧುಭಿಃ ।**
**ದರಿದ್ರೋ ದುಃಖಿತಶ್ಚೈವ ಶೀರ್ಣಾಂಗೋ ವ್ಯಾಧಿತೋऽಭವತ್ ॥ ೨೬ ॥**

**ಸ ಕದಾಚಿದ್ಧನಾರ್ಥಂ ತು ಪೃಥಿವ್ಯಾಂ ಪರ್ಯಟನ್ ದ್ವಿಜಃ ।**
**ಮಮಾರ ನರ್ಮದಾ ತೀರೇ ಶ್ವಾಸಕಾಸಪ್ರಪೀಡಿತಃ ॥ ೨೭ ॥**

**ತಸ್ಮಿನ್ಮೃತೇ ತಸ್ಯ ಭಾರ್ಯಾ ನಾಮ್ನಾ ಬಂಧುಮತೀ ಮುನೇ ।**
**ಕಾಮಚಾರಪರಾ ಸಾ ತು ಪರಿತ್ಯಕ್ತಾ ಚ ಬಂಧುಭಿಃ ॥ ೨೮ ॥**

---

೨೪. ಬ್ರಾಹ್ಮಣನೇ! ಹಿಂದಿನ ಸ್ವಾರೋಚಿಷಮನ್ವಂತರದ ಕೃತಯುಗದಲ್ಲಿ ವೇದ ಮತ್ತು ವೇದಾಂಗಗಳಲ್ಲಿ ಪಾರಂಗತನಾದ ರೈವತನೆಂಬ ಬ್ರಾಹ್ಮಣಶ್ರೇಷ್ಠನಿದ್ದನು.

೨೫-೨೬. ಅವನು ಯಾವಾಗಲೂ ಅಯೋಗ್ಯರಿಗೆ ಯಾಗಾದಿಗಳನ್ನು ಮಾಡಿಸುವವನು, ಗ್ರಾಮಪುರೋಹಿತನು, ಚಾಡಿಕೋರನು, ನಿಷ್ಠುರಭಾಷಿಯು, ನಿಷಿದ್ಧಪದಾರ್ಥವನ್ನು ಮಾರುವವನೂ ಆಗಿ ನಿಷಿದ್ಧಕರ್ಮಗಳನ್ನು ಮಾಡುತ್ತಿದ್ದನಾದಕಾರಣ ಬಂಧುಗಳಿಂದ ಬಹಿಷ್ಕೃತನಾಗಿ ದುಃಖಿಯು, ಬಡವನು, ರೋಗದಿಂದ ಅಂಗಶೈಥಿಲ್ಯವುಳ್ಳವನೂ ಆದನು.

೨೭. ಅವನು ಒಂದಾನೊಂದು ಕಾಲದಲ್ಲಿ ಹಣವನ್ನು ಸಂಪಾದಿಸಬೇಕೆಂದು ತಿರುಗುತ್ತಾ ನರ್ಮದಾನದಿಯ ತೀರದಲ್ಲಿ ಶ್ವಾಸರೋಗದಿಂದ ಪೀಡಿತನಾಗಿ ಮೃತನಾದನು.

೨೮. ನಾರದಮುನಿಯೇ ! ರೈವತನು ಸತ್ತಮೇಲೆ ಬಂಧುಮತಿ ಎಂಬ ಅವನ ಹೆಂಡತಿಯು ಸ್ವೇಚ್ಛಾವಿಹಾರಪರಳಾಗಿ ಬಂಧುಗಳಿಂದ ಬಹಿಷ್ಕೃತಳಾದಳು.

ತಸ್ಯಾಂ ಜಾತೋಽಸ್ಮಿ ಚಂಡಾಲೋ ದಂಡಕೇತುರಿತಿ ಶ್ರುತಃ ।
ಮಹಾಪಾಪರತೋ ನಿತ್ಯಂ ಬ್ರಹ್ಮದ್ವೇಷಪರಾಯಣಃ ॥ ೨೯ ॥

ಪರದಾರಪರದ್ರವ್ಯಲೋಲುಪೋ ಜಂತುಹಿಂಸಕಃ ।
ಗಾವಶ್ಚ ವಿಪ್ರಾ ಬಹವೋ ನಿಹತಾ ಮೃಗಪಕ್ಷಿಣಃ ॥ ೩೦ ॥

ಮೇರುತುಲ್ಯಸುವರ್ಣಾನಿ ಬಹೂನ್ಯಪಹೃತಾನಿ ಚ ।
ಮದ್ಯಪಾನರತೋ ನಿತ್ಯಂ ಬಹುಶೋ ಮಾರ್ಗರೋಧಕೃತ್ ॥ ೩೧ ॥

ಪಶುಪಕ್ಷಿಮೃಗಾದೀನಾಂ ಜಂತೂನಾಮಂತಕೋಪಮಃ ।
ಕದಾಚಿತ್ಕಾಮಸಂತಪ್ತೋ ರಂತುಕಾಮಃ ಪರಸ್ತ್ರಿಯಂ ॥ ೩೨ ॥

ಶೂನ್ಯಂ ವಿಷ್ಣುಗೃಹಂ ದೃಷ್ಟ್ವಾ ಪ್ರವಿಷ್ಟಶ್ಚ ಸ್ತ್ರಿಯಾ ಸಹ ।
ನಿಶಿ ರಾಮೋಪಭೋಗಾರ್ಥಂ ಶಯಿತಂ ತತ್ರ ಕಾಮಿನಾ ॥ ೩೩ ॥

---

೨೯-೩೦. ಅವಳಲ್ಲಿ ದಂಡಕೇತುವೆಂಬ ಹೆಸರಿನಿಂದ ಚಂಡಾಲನಾಗಿ ಹುಟ್ಟಿದ್ದೆನು. ಆಗ ನಾನು ಯಾವಾಗಲೂ ಮಹಾಪಾಪಕೃತ್ಯಗಳಲ್ಲಿ ಆಸಕ್ತನು, ಬ್ರಾಹ್ಮಣದ್ವೇಷಿಯು, ಪರಸ್ತ್ರೀ ಪರದ್ರವ್ಯ ಇವುಗಳನ್ನಾಶಿಸುವವನು, ಪ್ರಾಣಿ ಹಿಂಸಕನೂ ಆಗಿದ್ದೆನು. ಬಹುವಾಗಿ ಗೋಬ್ರಾಹ್ಮಣರು, ಮೃಗ, ಪಕ್ಷಿ ಇವುಗಳನ್ನು ಕೊಂದಿರುವೆನು. ಮೇರುಪರ್ವತದಷ್ಟು ಬಂಗಾರಗಳನ್ನು ಬಹುವಾಗಿ ಅಪಹರಿಸಿರುವೆನು.

೩೧-೩೨. ನಿತ್ಯವೂ ಮದ್ಯಪಾನನಿರತನು, ಬಹುವಿಧವಾಗಿ ದಾರಿಗಳಿಗೆ ಅಡ್ಡಹಾಕುವವನು, ಪಶು, ಪಕ್ಷಿ, ಮೃಗ ಮುಂತಾದ ಜಂತುಗಳಿಗೆ ಯಮನಂತೆ ಭಯಂಕರನೂ ಆಗಿದ್ದೆನು.

೩೨-೩೩. ಒಂದಾನೊಂದು ದಿನ ಕಾಮಾತುರನಾಗಿ ಪರಸ್ತ್ರೀಸಂಭೋಗ ಮಾಡಬೇಕೆಂಬ ಆಶೆಯಿಂದ ನಿರ್ಜನವಾದ ವಿಷ್ಣುದೇವಾಲಯವೊಂದನ್ನು ನೋಡಿ ಅದರೊಳಕ್ಕೆ ಆ ಹೆಂಗಸಿನೊಡನೆ ಪ್ರವೇಶಿಸಿದೆನು. ಕಾಮಾತುರನಾದ ನಾನು ಆ ರಾತ್ರಿ ಹೆಂಗಸಿನ ಉಪಭೋಗಕ್ಕಾಗಿ ಅಲ್ಲಿಯೇ ಮಲಗಿದೆನು.

ಬ್ರಹ್ಮನ್ಸ್ವವಸ್ತ್ರಪ್ರಾಂತೇನ ಕಿಯದ್ದೇಶಃ ಪ್ರಮಾರ್ಜಿತಃ ।
ಯಾವಂತ್ಯಃ ಪಾಂಶುಕಣಿಕಾಸ್ತತ್ರ ಸಂಮಾರ್ಜಿತಾ ದ್ವಿಜ ॥ ೩೪ ॥

ತಾವಜ್ಜನ್ಮಕೃತಂ ಪಾಪಂ ತದೈವ ಕ್ಷಯಮಾಗತಂ ।
ಪ್ರದೀಪಸ್ಸ್ಥಾಪಿತಸ್ತತ್ರ ಸುರತಾರ್ಥಂ ದ್ವಿಜೋತ್ತಮ ॥ ೩೫ ॥

ತೇನಾಪಿ ಮಮ ದುಷ್ಕರ್ಮ ನಿಃಶ್ಶೇಷಂ ಕ್ಷಯಮಾಗತಂ ।
ಏವಂಸ್ಥಿತೇ ವಿಷ್ಣುಗೃಹೇ ಆಗತಾಃ ಪುರಪಾಲಕಾಃ ॥ ೩೬ ॥

ಜಾರೋsಯಮಿತಿ ಮಾಂ ತಾಂ ಚ ಹತವಂತಃ ಪ್ರಸಹ್ಯ ವೈ ।
ಆವಾಂ ನಿಹತ್ಯ ತೇ ಸರ್ವೇ ನಿವೃತ್ತಾಃ ಪುರರಕ್ಷಕಾಃ ॥ ೩೭ ॥

ಯದಾ ತದೈವ ಸಂಪ್ರಾಪ್ತಾ ವಿಷ್ಣುದೂತಾಶ್ಚತುರ್ಭುಜಾಃ ।
ಕಿರೀಟಕುಂಡಲಧರಾಃ ವನಮಾಲಾವಿಭೂಷಿತಾಃ ॥ ೩೮ ॥

---

೩೪.೩೫. ಬ್ರಾಹ್ಮಣನೇ! ನನ್ನ ಬಟ್ಟೆಯ ಕೊನೆಯಿಂದ ಎಷ್ಟು ಪ್ರದೇಶವು ಗುಡಿಸಲ್ಪಟ್ಟಿತೋ, ಅಲ್ಲಿ ಎಷ್ಟು ಧೂಳಿಕಣಗಳು ಗುಡಿಸಲ್ಪಟ್ಟವೋ ಅಷ್ಟು ಜನ್ಮಗಳಲ್ಲಿ ಮಾಡಿದ್ದ ಪಾಪವು ತಕ್ಷಣದಲ್ಲಿಯೇ ನಾಶವಾಯಿತು.

೩೫-೩೭. ದ್ವಿಜೋತ್ತಮನೇ! ಆ ದೇವಾಲಯದಲ್ಲಿ ಸಂಭೋಗಸೌಕರ್ಯಕ್ಕಾಗಿ ದೀಪವನ್ನು ಹಚ್ಚಿದೆನು. ಅದರಿಂದಲೂ ನನ್ನ ಪಾಪವು ನಿಶ್ಶೇಷವಾಗಿ ಹೋಯಿತು. ಹೀಗಿರುವಾಗ ಪಟ್ಟಣದ ಕಾವಲುಗಾರರು ವಿಷ್ಣುಗೃಹಕ್ಕೆ ಬಂದು ಇವನು ಜಾರನೆಂದು ತಿಳಿದು ನನ್ನನ್ನೂ ಆ ಹೆಂಗಸನ್ನೂ ಸಹ ಹಿಡಿದು ಕೊಂದರು. ಹೀಗೆ ನಮ್ಮಿಬ್ಬರನ್ನೂ ಕೊಂದು ಅವರೆಲ್ಲರೂ ಹೊರಟುಹೋದರು.

೩೮. ಪುರಪಾಲಕರು ಹೋದಕೂಡಲೇ ಚತುರ್ಭುಜಗಳುಳ್ಳವರು, ಕಿರೀಟಕುಂಡಲಧಾರಿಗಳು, ವನಮಾಲೆಯಿಂದಲಂಕೃತರೂ ಆಗಿರುವ ವಿಷ್ಣುದೂತರು ಬಂದರು.

ತೈಸ್ತು ಸಂಪ್ರೇರಿತಾವಾವಾಂ ವಿಷ್ಣುದೂತೈರಕಲ್ಮಷೈಃ ।
ದಿವ್ಯಂ ವಿಮಾನಮಾರುಹ್ಯ ಸರ್ವಭೋಗಸಮನ್ವಿತಂ ॥ ೩೯ ॥

ದಿವ್ಯದೇಹಧರೌ ಭೂತ್ವಾ ವಿಷ್ಣುಲೋಕಮುಪಾಗತೌ ।
ತತಶ್ಚ ಭೂಮಿಭಾಗೇಷು ದೇವಯೋಗ್ಯೇಷು ವೈ ಕ್ರಮಾತ್ ॥ ೪೦ ॥

ತೇನ ಪುಣ್ಯಪ್ರಭಾವೇನ ಯದೂನಾಂ ವಂಶಸಂಭವಃ ।
ತೇನೈವ ಮೇಽಚ್ಯುತಾ ಸಂಪತ್ತಥಾ ರಾಜ್ಯಮಕಂಟಕಂ ॥ ೪೧ ॥

ಬ್ರಹ್ಮನ್ನಾತ್ಮೋಪಭೋಗಾರ್ಥಮೇವಂ ಶ್ರೇಯೋಹಮಾಪ್ತವಾನ್ ।
ಭಕ್ತ್ಯಾ ಕುರ್ವಂತಿ ಯೇ ಸಂತಸ್ತೇಷಾಂ ಪುಣ್ಯಂ ನ ವೇದ್ಮ್ಯಹಂ ॥ ೪೨ ॥

ತಸ್ಮಾತ್ಸಂಮಾರ್ಜನೇ ನಿತ್ಯಂ ದೀಪದಾನೇ ಚ ಸತ್ತಮ ।
ಯತಿಷ್ಯೇ ಪರಯಾ ಭಕ್ತ್ಯಾ ಹ್ಯಹಂ ಜಾತಿಸ್ಮರೋ ಯತಃ ॥ ೪೩ ॥

---

೩೯-೪೦. ನಿರ್ದೋಷರಾದ ಆ ವಿಷ್ಣುದೂತರ ಪ್ರೇರಣೆಯಂತೆ ನಾವಿಬ್ಬರೂ ದಿವ್ಯಶರೀರವನ್ನು ಧರಿಸಿದವರಾಗಿ ಸಕಲ ಭೋಗಗಳಿಂದ ಯುಕ್ತವಾದ ದಿವ್ಯವಿಮಾನದಲ್ಲಿ ಕುಳಿತು ವಿಷ್ಣುಲೋಕಕ್ಕೆ ಬಂದೆವು.

೪೦-೪೧. ತರುವಾಯ ಕ್ರಮವಾಗಿ ಆ ಪುಣ್ಯಪ್ರಭಾವದಿಂದ ದೇವತೆಗಳಿಗೆ ಯೋಗ್ಯವಾದ ಭೂಭಾಗಗಳಲ್ಲಿ ಯದುವಂಶದಲ್ಲಿ ಹುಟ್ಟಿದೆನು. ಆ ಪುಣ್ಯಪ್ರಭಾವದಿಂದಲೇ ನನಗೆ ಅಕ್ಷಯವಾದ ಸಂಪತ್ತು, ನಿಷ್ಕಂಟಕವಾದ ರಾಜ್ಯ ಇವುಗಳು ದೊರೆತಿವೆ.

೪೨. ಬ್ರಾಹ್ಮಣನೇ! ಆತ್ಮೋಪಭೋಗಾರ್ಥವಾಗಿ ಮಾಡಿದ ಸಂಮಾರ್ಜನೆ ದೀಪ ಇವುಗಳಿಂದಲೇ ಈ ರೀತಿಯಾದ ಶ್ರೇಯಸ್ಸನ್ನು ಹೊಂದಿದೆನು. ಭಕ್ತಿಯಿಂದ ಮಾಡುವ ಸಾಧುಗಳ ಪುಣ್ಯಪ್ರಭಾವವನ್ನು ನಾನು ಅರಿಯೆನು.

೪೩. ಸಾಧುವರ್ಯ! ಈರೀತಿಯಾದ ಜನ್ಮಾಂತರದ ಸ್ಮರಣೆಯುಳ್ಳವನಾದುದರಿಂದ ನಾನು ಉತ್ಕೃಷ್ಟಭಕ್ತಿಯಿಂದ ಸಂಮಾರ್ಜನೆ ದೀಪದಾನ ಇವುಗಳನ್ನು ಮಾಡಲು ಯತ್ನಿಸುತ್ತಿದ್ದೇನೆ.

ಯಃ ಪೂಜಯೇಜ್ಜಗನ್ನಾಥಮೇಕಾಕೀ ವಿಗತಸ್ಪೃಹಃ ।
ಸರ್ವಪಾಪವಿನಿರ್ಮುಕ್ತಃ ಪ್ರಯಾತಿ ಪರಮಂ ಪದಂ ॥ ೪೪ ॥

ಅವಶೇನಾಪಿ ಯತ್ಕರ್ಮ ಕೃತ್ವೇಮಾಂ ಶ್ರಿಯಮಾಗತಃ ।
ಭಕ್ತಿಮದ್ಭಿಃ ಪ್ರಶಾಂತೈಶ್ಚ ಕಿಂ ಪುನಃ ಸಮ್ಯಗರ್ಚನಾತ್ ॥ ೪೫ ॥

ಇತಿ ಭೂಪವಚಃ ಶ್ರುತ್ವಾ ವೀತಿಹೋತ್ರೋ ದ್ವಿಜೋತ್ತಮಃ ।
ಅನಂತತುಷ್ಟಿಮಾಪನ್ನೋ ಹರಿಪೂಜಾಪರೋಽಭವತ್ ॥ ೪೬ ॥

ತಸ್ಮಾಚ್ಛೃಣುಷ್ವ ವಿಪ್ರೇಂದ್ರ ದೇವೋ ನಾರಾಯಣೋಽವ್ಯಯಃ ।
ಜ್ಞಾನತೋಽಜ್ಞಾನತೋ ವಾಽಪಿ ಪೂಜಕಾನಾಂ ವಿಮುಕ್ತಿದಃ ॥ ೪೭ ॥

ಅನಿತ್ಯಾ ಬಾಂಧವಾಃ ಸರ್ವೇ ವಿಭವೋ ನೈವ ಶಾಶ್ವತಃ ।
ನಿತ್ಯಂ ಸನ್ನಿಹಿತೋ ಮೃತ್ಯುಃ ಕರ್ತವ್ಯೋ ಧರ್ಮಸಂಗ್ರಹಃ ॥ ೪೮ ॥

---

೪೪. ನಿಸ್ಪೃಹನಾಗಿ ಒಬ್ಬನೇ ಜಗನ್ನಾಥನನ್ನು ಪೂಜಿಸುವವನು ಪಾಪಗಳನ್ನೆಲ್ಲಾ ಕಳೆದುಕೊಂಡು ಉತ್ತಮ ಪದವಿಯನ್ನು ಹೊಂದುವನು.

೪೫. ಬುದ್ಧಿಪೂರ್ವಕವಲ್ಲದೇ ಮಾಡಿದ ಕರ್ಮದಿಂದಲೇ ಇಂತಹ ಸಂಪತ್ತನ್ನು ಹೊಂದಿದೆನು. ಹೀಗಿರುವಾಗ ಶಮದಮಾದಿಸಂಪನ್ನರಾದ ಭಕ್ತರು ಹರಿಯನ್ನು ಚೆನ್ನಾಗಿ ಪೂಜಿಸಿದರೆ ಶಾಶ್ವತವಾದ ಸಂಪತ್ತುಂಟಾಗುವುದೆಂದು ಹೇಳತಕ್ಕುದೇನು ?

೪೬. ಈ ರಾಜನ ಮಾತನ್ನು ಕೇಳಿ ದ್ವಿಜಶ್ರೇಷ್ಠನಾದ ವೀತಿಹೋತ್ರನು ಅಪಾರವಾಗಿ ಸಂತೋಷಪಟ್ಟು ಹರಿಪೂಜೆಯಲ್ಲಿ ನಿರತನಾದನು.

೪೭. ವಿಪ್ರೇಂದ್ರನೇ ! ಕೇಳು; ಆದಕಾರಣ ನಾಶರಹಿತನಾದ ನಾರಾಯಣನು ತನ್ನನ್ನು ಬುದ್ಧಿಪೂರ್ವಕವಾಗಿ ಅಥವಾ ಅಜ್ಞಾನದಿಂದಲಾದರೂ ಪೂಜಿಸುವವರಿಗೆ ಮೋಕ್ಷಪ್ರದನಾಗುವನು.

೪೮. ಬಂಧುಗಳೆಲ್ಲಾ ಅನಿತ್ಯರು, ಐಶ್ವರ್ಯವು ಶಾಶ್ವತವಾದುದಲ್ಲ, ಯಾವಾಗಲೂ ಮರಣವು ಸಮೀಪದಲ್ಲಿಯೇ ಇರುತ್ತದೆ ಆದುದರಿಂದ ಧರ್ಮವನ್ನು ಸಂಗ್ರಹಿಸಬೇಕು.

**ಅಜ್ಞೋ ಲೋಕೋ ವೃಥಾ ಗರ್ವಂ ಕರಿಷ್ಯತಿ ಮಹೋದ್ಧತಃ ।**
**ಕಾಯಃ ಸನ್ನಿಹಿತಾಪಾಯೋ ಧನಾದೀನಾಂ ಕಿಮುಚ್ಯತೇ ॥ ೪೯ ॥**

**ಜನ್ಮಕೋಟಿಸಹಸ್ರೇಷು ಪುಣ್ಯಂ ಯ್ಯೈಃ ಸಮುಪಾರ್ಜಿತಂ ।**
**ತೇಷಾಂ ಭಕ್ತಿರ್ಭವೇಚ್ಛುದ್ಧಾ ದೇವದೇವೇ ಜನಾರ್ದನೇ ॥ ೫೦ ॥**

**ಸುಲಭಂ ಜಾಹ್ನವೀಸ್ನಾನಂ ತಥೈವಾತಿಥಿಪೂಜನಂ ।**
**ಸುಲಭಾಃ ಸರ್ವಯಜ್ಞಾಶ್ಚ ವಿಷ್ಣುಭಕ್ತಿಸ್ಸುದುರ್ಲಭಾ ॥ ೫೧ ॥**

**ದುರ್ಲಭಾ ತುಲಸೀಸೇವಾ ದುರ್ಲಭಃ ಸಂಗಮಃ ಸತಾಂ ।**
**ಸರ್ವಭೂತದಯಾವಾऽಪಿ ಸುಲಭಾ ಯಸ್ಯ ಕಸ್ಯಚಿತ್ ॥ ೫೨ ॥**

**ಸತ್ಸಂಗಸ್ತುಲಸೀಸೇವಾ ಹರಿಭಕ್ತಿಶ್ಚ ದುರ್ಲಭಾ ।**
**ದುರ್ಲಭಂ ಪ್ರಾಪ್ಯ ಮಾನುಷ್ಯಂ ನ ವೃಥಾ ಗಮಯೇದ್ಬುಧಃ ॥ ೫೩ ॥**

---

೪೯. ಅಜ್ಞಾನಿಜನರು ಮದೋನ್ಮತ್ತರಾಗಿ ಸುಮ್ಮನೇ ಅಹಂಕಾರ ಪಡುತ್ತಾರೆ. ಶರೀರಕ್ಕೇ ಅಪಾಯವು ಯಾವಾಗಲೂ ಬೆನ್ನುಹತ್ತಿರುವುದು. ಹೀಗಿರುವಾಗ ಹಣ ಮುಂತಾದುವುಗಳಿಗೆ ಅಪಾಯವುಂಟೆಂದು ಹೇಳುವುದೇನು ?

೫೦. ಸಾವಿರಾರುಕೋಟಿ ಜನ್ಮಗಳಲ್ಲಿ ಪುಣ್ಯವನ್ನು ಸಂಪಾದಿಸಿದವನಿಗೆ ದೇವೋತ್ತಮನಾದ ಜನಾರ್ದನನಲ್ಲಿ ಪರಿಶುದ್ಧವಾದ ಭಕ್ತಿಯುಂಟಾಗುವುದು.

೫೧. ಗಂಗೆಯಲ್ಲಿ ಸ್ನಾನಮಾಡುವುದು ಸುಲಭ. ಹಾಗೆಯೇ ಅತಿಥಿಗಳನ್ನು ಸತ್ಕರಿಸುವುದೂ ಸುಲಭ. ಸಕಲ ಯಜ್ಞಗಳೂ ಸುಲಭಸಾಧ್ಯಗಳು. ವಿಷ್ಣುಭಕ್ತಿಯಾದರೋ ಅತ್ಯಂತ ಕಷ್ಟಸಾಧ್ಯವು.

೫೨. ಮಾನವನಿಗೆ ತುಲಸೀದೇವಿಯ ಸೇವೆಯು ಲಭಿಸುವುದು ಕಷ್ಟ. ಸಜ್ಜನ ಸಹವಾಸವೂ ದುರ್ಲಭವು. ಸರ್ವಪ್ರಾಣಿಗಳಲ್ಲಿ ದಯೆಯುಂಟಾಗುವುದೂ ಸಹ ಅಪರೂಪವು.

೫೩. ಸತ್ಸಂಗ, ತುಲಸೀಸೇವೆ, ವಿಷ್ಣುಭಕ್ತಿ ಇವುಗಳು ಲಭಿಸುವುದು ಕಷ್ಟ. ಮನುಷ್ಯಜನ್ಮವೂ ದುರ್ಲಭ. ಅಂತಹುದು ಲಭಿಸಿದಾಗಲೂ ವಿವೇಕಿಯು ಹರಿಪೂಜೆಮಾಡದೆ ವ್ಯರ್ಥವಾಗಿ ಕಾಲವನ್ನು ಕಳೆಯಬಾರದು.

**ಅರ್ಚಯೇದ್ಧಿ ಜಗನ್ನಾಥಂ ಸಾರಮೇತದ್ದ್ವಿಜೋತ್ತಮ ।**
**ತರ್ತುಂ ಯದಿಚ್ಛತಿ ಜನೋ ದುಸ್ತರಂ ಭವಸಾಗರಂ ॥ ೫೪ ॥**

**ಹರಿಭಕ್ತಿಪರೋ ಭೂಯಾದೇತದೇವ ರಸಾಯನಂ ।**
**ಭ್ರಾತರಾಶ್ರಯ ಗೋವಿಂದಂ ಮಾ ವಿಲಂಬಂ ಕುರು ಪ್ರಿಯ ॥ ೫೫ ॥**

**ಆಸನ್ನಮೇವ ನಗರಂ ಕೃತಾಂತಸ್ಯ ಹಿ ದೃಶ್ಯತೇ ।**
**ನಾರಾಯಣಂ ಜಗದ್ಯೋನಿಂ ಸರ್ವಕಾರಣಕಾರಣಂ ॥ ೫೬ ॥**

**ಸಮರ್ಚಯಸ್ವ ವಿಪ್ರೇಂದ್ರ ಯದಿ ಮುಕ್ತಿಮಭೀಪ್ಸಸಿ ।**
**ಸರ್ವಾಧಾರಂ ಸರ್ವಯೋನಿಂ ಸರ್ವಾಂತರ್ಯಾಮಿಣಂ ವಿಭುಂ ॥ ೫೭ ॥**

**ಯೇ ಪ್ರಪನ್ನಾ ಮಹಾತ್ಮಾನಃ ತೇ ಕೃತಾರ್ಥಾ ನ ಸಂಶಯಃ ।**
**ತೇ ವಂದ್ಯಾಸ್ತೇ ಪ್ರಪೂಜ್ಯಾಶ್ಚ ನಮಸ್ಕಾರ್ಯಾ ವಿಶೇಷತಃ ॥ ೫೮ ॥**

---

೫೪. ದಾಟಲಶಕ್ಯವಾದ ಸಂಸಾರವೆಂಬ ಸಮುದ್ರವನ್ನು ದಾಟಿ ಮೋಕ್ಷವನ್ನು ಪಡೆಯಲಪೇಕ್ಷಿಸುವ ಜನರು ಜಗದೊಡಯನಾದ ಹರಿಯನ್ನು ಪೂಜಿಸಬೇಕು. ದ್ವಿಜವರ್ಯನೇ! ಇದೇ ಸಾರನಾದ ತತ್ತ್ವ.

೫೫. ಪ್ರಿಯಸಹೋದರನೇ! ಹರಿಭಕ್ತಿನಿರತನಾಗು. ಇದೇ ರಸಾಯನಸ್ಥಾನೀಯವು. ಗೋವಿಂದನನ್ನು ಶರಣುಹೊಂದು- ಸಾವಕಾಶಮಾಡಬೇಡ.

೫೬-೫೭. ಬ್ರಾಹ್ಮಣಶ್ರೇಷ್ಠನೇ! ಯಮಪಟ್ಟಣವು ಸಮೀಪವಾಗಿಯೇ ಕಾಣುತ್ತದೆ. ಆದುದರಿಂದ ಅದನ್ನು ತಪ್ಪಿಸಿಕೊಂಡು ಮುಕ್ತಿಯನ್ನು ಸಂಪಾದಿಸಬೇಕೆಂಬ ಆಶೆಯಿದ್ದರೆ ನೀನು ಸಕಲ ಕಾರಣಗಳಿಗೂ ಶಕ್ತಿಪ್ರದನು ಜಗತ್ಕಾರಣನೂ ಆದ ನಾರಾಯಣನನ್ನು ಚೆನ್ನಾಗಿ ಆರಾಧಿಸು.

೫೭-೫೮. ಸರ್ವಾಧಾರನು, ಸರ್ವಕಾರಣನು, ಸರ್ವಾಂತರ್ಯಾಮಿಯೂ ಆಗಿರುವ ಸ್ವಾಮಿಯನ್ನು ಶರಣುಹೊಂದಿದ ಮಹಾತ್ಮರೇ ಕೃತಾರ್ಥರು. ಸಂದೇ

ಯೇಽರ್ಚಯಂತಿ ಮಹಾವಿಷ್ಣುಂ ಪ್ರಣತಾರ್ತಿಪ್ರಣಾಶನಂ ।
ಯೇ ವಿಷ್ಣುಭಕ್ತಾ ನಿಷ್ಕಾಮಾ ಯಜಂತಿ ಪರಮೇಶ್ವರಂ ॥ ೫೯

ತ್ರಿಃಸಪ್ತಕುಲಸಂಯುಕ್ತಾಸ್ತೇ ಯಾಂತಿ ಹರಿಮಂದಿರಂ ।
ವಿಷ್ಣುಭಕ್ತಾಯ ಯೋ ದದ್ಯಾನ್ನಿಷ್ಕಾಮಾಯ ಮಹಾತ್ಮನೇ ॥ ೬೦ ॥

ಪಾನೀಯಂ ವಾ ಫಲಂ ವಾಽಪಿ ಸ ಏವ ಭಗವತ್ಪ್ರಿಯಃ ।
ವಿಷ್ಣುಭಕ್ತಿಪರಾಣಾಂ ತು ಶುಶ್ರೂಷಾಂ ಕುರ್ವತೇ ತು ಯೇ ॥ ೬೧ ॥

ತೇ ಯಾಂತಿ ವಿಷ್ಣುಭವನಂ ಯಾವದಾಭೂತಸಂಪ್ಲವಂ ।
ಯೇ ಯಜಂತಿ ಸ್ಪೃಹಾಶೂನ್ಯಾ ಹರಿಭಕ್ತಾನ್ಹರಿಂ ತಥಾ ॥ ೬೨ ॥

ತ ಏವ ಭುವನಂ ಸರ್ವಂ ಪುನಂತಿ ಸ್ವಾಂಘ್ರಿಪಾಂಸುನಾ ।
ದೇವಪೂಜಾಪರೋ ಯಸ್ಯ ಗೃಹೇ ವಸತಿ ಸರ್ವದಾ ॥ ೬೩ ॥

---

ಹವಿಲ್ಲ. ಶರಣಾಗತರ ವ್ಯಥೆಯನ್ನು ಪರಿಹರಿಸುವ ಮಹಾವಿಷ್ಣುವನ್ನು ಪೂಜಿಸುವವರೇ ವಂದ್ಯರು. ಅವರೇ ಪೂಜೆಮಾಡಿಸಿಕೊಳ್ಳಲು ಅರ್ಹರು. ವಿಶೇಷವಾಗಿ ಅಂತಹವರೇ ನಮಸ್ಕಾರಕ್ಕೂ ಅರ್ಹರು.

೫೯–೬೦. ಫಲಾಪೇಕ್ಷೆಯಿಲ್ಲದೇ ಪರಮಾತ್ಮನನ್ನು ಪೂಜಿಸುವ ವಿಷ್ಣುಭಕ್ತರು ಇಪ್ಪತ್ತೊಂದು ಕುಲಸಹಿತವಾಗಿ ಹರಿಮಂದಿರ (ವೈಕುಂಠ) ಕ್ಕೆ ಹೋಗುವರು.

೬೦–೬೧. ಫಲಾಪೇಕ್ಷೆಯಿಲ್ಲದೇ ಹರಿಸೇವೆಯನ್ನು ಮಾಡುವ ಮಹಾತ್ಮನಾದ ವಿಷ್ಣುಭಕ್ತನಿಗೆ ಉದಕವನ್ನು ಅಥವಾ ಫಲವನ್ನು ಕೊಡುವವನೇ ಭಗವಂತನ ಪ್ರೀತಿಪಾತ್ರನಾಗುವನು.

೬೧-೬೨. ವಿಷುಭಕ್ತಿನಿಷ್ಠರ ಸೇವೆಮಾಡುವವರು ವಿಷ್ಣುಲೋಕವನ್ನು ಹೊಂದಿ ಭೂತಪ್ರಳಯವಾಗುವವರೆಗೂ ಭೋಗಿಸುವರು.

೬೨–೬೩. ಹರಿಭಕ್ತರನ್ನು ಮತ್ತು ಹರಿಯನ್ನು ನಿಷ್ಕಾಮನೆಯಿಂದ ಪೂಜಿಸುವವರೇ ತಮ್ಮ ಪಾದಧೂಳಿಯಿಂದ ಸಕಲಲೋಕವನ್ನೂ ಶುದ್ಧಿಮಾಡುವರು.

ತತ್ರೈವ ಸರ್ವದೇವಾಶ್ಚ ತಿಷ್ಠಂತಿ ಶ್ರೀಹರಿಸ್ತಥಾ ।
ಪೂಜ್ಯಮಾನಾ ಚ ತುಲಸೀ ಯಸ್ಯ ತಿಷ್ಠತಿ ವೇಶ್ಮನಿ ॥ ೬೪ ॥

ತತ್ರ ಸರ್ವಾಣಿ ಶ್ರೇಯಾಂಸಿ ವರ್ಧಂತ್ಯಹರಹರ್ದ್ವಿಜ ।
ಸಾಲಗ್ರಾಮಶಿಲಾರೂಪೀ ಯತ್ರ ತಿಷ್ಠತಿ ಕೇಶವಃ ॥ ೬೫ ॥

ನ ಬಾಧಂತೇ ಗ್ರಹಾಸ್ತತ್ರ ಭೂತವೇತಾಲಕಾದಯಃ ।
ಸಾಲಗ್ರಾಮಶಿಲಾ ಯತ್ರ ತತ್ತೀರ್ಥಂ ತತ್ತಪೋವನಂ ॥ ೬೬ ॥

ಯತಃ ಸನ್ನಿಹಿತಸ್ತತ್ರ ಭಗವಾನ್ಮಧುಸೂದನಃ ।
ಯದ್ಗೃಹೇ ನಾಸ್ತಿ ದೇವರ್ಷೇ ಸಾಲಗ್ರಾಮಶಿಲಾರ್ಚನಂ ॥ ೬೭ ॥

ಸ್ಮಶಾನಸದೃಶಂ ವಿದ್ಯಾತ್ತದ್ಗೃಹಂ ಶುಭವರ್ಜಿತಂ ।
ಪುರಾಣನ್ಯಾಯಮೀಮಾಂಸಾಧರ್ಮಶಾಸ್ತ್ರಾಣಿ ಚ ದ್ವಿಜ ॥ ೬೮ ॥

---

೬೩–೬೪. ಯಾವಾಗಲೂ ದೇವಪೂಜೆಯಲ್ಲಿ ನಿರತನಾದವನು ವಾಸಿಸುವ ಮನೆಯಲ್ಲಿಯೇ ಸಕಲ ದೇವತೆಗಳು ಮತ್ತು ಶ್ರೀಹರಿಯೂ ಸಹ ಸನ್ನಿಹಿತರಾಗಿರುತ್ತಾರೆ.

೬೪–೬೫. ದ್ವಿಜನೇ ! ತುಲಸೀಪೂಜೆ ನಡೆಯುತ್ತಿರುವ ಮನೆಯಲ್ಲಿ ದಿನದಿನಕ್ಕೂ ಸಕಲ ಶ್ರೇಯಸ್ಸುಗಳೂ ಅಭಿವೃದ್ಧಿಯಾಗುತ್ತವೆ.

೬೫-೬೬. ಸಾಲಿಗ್ರಾಮ ಶಿಲಾರೂಪಿಯಾದ ಕೇಶವನು ಇರುವ ಸ್ಥಳದಲ್ಲಿ ಗ್ರಹಗಳು ಭೂತ ಮತ್ತು ಭೇತಾಲ ಪಿಶಾಚಾದಿಗಳು ಬಾಧಿಸುವುದಿಲ್ಲ.

೬೬–೬೭. ಸಾಲಿಗ್ರಾಮಶಿಲೆಯಿರುವೆಡೆಯಲ್ಲಿ ಮಧುನಾಮಕ ದೈತ್ಯ ಸಂಹಾರಕನಾದ ಭಗವಂತನು ಸನ್ನಿಹಿತನಾಗಿರುವುದರಿಂದ ಅದೇ ತೀರ್ಥವು. ಅದೇ ತಪೋವನವು.

೬೭-೬೮. ಸಾಲಿಗ್ರಾಮಶಿಲಾಪೂಜೆಯಿಲ್ಲದಿರುವ ಮನೆಯು ಸ್ಮಶಾನ ಸಮಾನವು ಮತ್ತು ಶುಭರಹಿತವು ಎಂದು ತಿಳಿಯಬೇಕು.

**ಸಾಂಗಾ ವೇದಾಸ್ತಥಾ ಸರ್ವೇ ವಿಷ್ಣೋ ರೂಪಂ ಪ್ರಕೀರ್ತಿತಂ ।**
**ಭಕ್ತ್ಯಾ ಕುರ್ವಂತಿ ಯೇ ವಿಷ್ಣೋಃ ಪ್ರದಕ್ಷಿಣಚತುಷ್ಟಯಂ ।**
**ತೇಽಪಿ ಯಾಂತಿ ಪರಂ ಸ್ಥಾನಂ ಸರ್ವಕರ್ಮನಿಬರ್ಹಣಂ ॥ ೬೯ ॥**

**ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ ಪ್ರಥಮಪಾದೇ ವಿಷ್ಣುಮಾಹಾತ್ಮ್ಯವರ್ಣನಂ ನಾಮ ಏಕೋನಚತ್ವಾರಿಂಶೋಽಧ್ಯಾಯಃ**

---

೬೮-೬೯. ಪುರಾಣ, ನ್ಯಾಯಶಾಸ್ತ್ರ, ಮೀಮಾಂಸಾ, ಧರ್ಮಶಾಸ್ತ್ರ ಮತ್ತು ಅಂಗಸಹಿತವಾದ ವೇದಗಳು ಇವುಗಳೆಲ್ಲವೂ ವಿಷ್ಣುವಿನ ಮಹಿಮೆಯನ್ನು ನಿರೂಪಿಸುವುದರಿಂದ ಅವನ ಪ್ರತಿಮಾರೂಪವೆಂದು ಉಕ್ತವಾಗಿವೆ.

೬೯. ಭಕ್ತಿಯಿಂದ ವಿಷ್ಣುವಿಗೆ ನಾಲ್ಕು ಪ್ರದಕ್ಷಿಣೆಗಳನ್ನು ಮಾಡುವವರು ಸಕಲ ದುಷ್ಕರ್ಮಗಳನ್ನೂ ನಾಶಮಾಡುವ ಉತ್ತಮಸ್ಥಾನವನ್ನು ಹೊಂದುತ್ತಾರೆ.

ಇಂತು ಶ್ರೀಬೃಹನ್ನಾರದೀಯ ಪುರಾಣದೊಳು ಪೂರ್ವಭಾಗ ಪ್ರಥಮಪಾದದಲ್ಲಿ ವಿಷ್ಣುಮಾಹಾತ್ಮ್ಯವರ್ಣನ ವೆಂಬ ಮೂವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

## ಕಥಾಸಾಂರಾಂಶ

ಸನಕನು ಪುನಃ ಹರಿಮಹಿಮೆಯನ್ನು ಹೇಳತೊಡಗಿ ಹರಿಭಕ್ತನಾದ, ಚಂದ್ರಕುಲದಲ್ಲಿ ಹುಟ್ಟಿದ ಜಯಧ್ವಜನೆಂಬ ರಾಜರ್ಷಿಯ ಚರಿತ್ರೆಯನ್ನು ಹೇಳಿರುವನು. ಜಯಧ್ವಜರಾಜನು ವಿಷ್ಣುದೇವಾಲಯವನ್ನು ರೇವಾತೀರದಲ್ಲಿ ನಿರ್ಮಿಸಿ ಅದರ ಸಂಮಾರ್ಜನೆ ದೀಪದಾನ ಮುಂತಾಗಿ ಹರಿಸೇವೆ ಮಾಡುತ್ತಿದ್ದನು. ಅವನ ಪುರೋಹಿತನಾದ ವೀತಿಹೋತ್ರನೆಂಬ ಬ್ರಾಹ್ಮಣನು ಹರಿಪ್ರೀತಿಕರವಾದ ಅನೇಕ ಕರ್ಮಗಳಿರುವಾಗ ನೀನು ಸಂಮಾರ್ಜನೆ ದೀಪದಾನಗಳನ್ನು ಏಕೆ ಮಾಡುತ್ತಿರುವೆ ? ಅದಕ್ಕೆ ಕಾರಣವೇನು? ಅದರ ವಿಶೇಷಫಲವೇನಾದರೂ ನಿನಗೆ ಜ್ಞಾತವಾಗಿದ್ದರೆ ಹೇಳು ಎಂದು ರಾಜನನ್ನು ಕೇಳಿದನು. ರಾಜನು ತನ್ನ ಪೂರ್ವಜನ್ಮದ ವೃತ್ತಾಂತವನ್ನು ವೀತಿಹೋತ್ರನಿಗೆ ತಿಳಿಸಿದನು. ಹಿಂದಿನ ಸ್ವಾರೋಚಿಷಮನ್ವಂತರದ ಕೃತಯುಗದಲ್ಲಿ ರೈವತನೆಂಬ ಬ್ರಾಹ್ಮಣನಿದ್ದನು. ಅವನು ನಿಷಿದ್ಧಕರ್ಮಗಳನ್ನಾಚರಿಸುತ್ತಾ ಒಂದು ಸಮಯದಲ್ಲಿ ಧನಾರ್ಜನೆಗಾಗಿ ಸಂಚಾರಕ್ಕೆ ಹೊರಟು ನರ್ಮದಾತೀರದಲ್ಲಿ ಮೃತನಾದನು. ಅವನು ಸತ್ತಮೇಲೆ ಬಂಧುಮತಿಯೆಂಬ ಅವನ ಹೆಂಡತಿಯು ಸ್ವೇಚ್ಛಾಚಾರಿಯಾಗಿ ಬಂಧುಗಳಿಂದ ಬಹಿಷ್ಕೃತಳಾಗಿದ್ದಳು. ಆಗ ಅವಳಲ್ಲಿ ನಾನು ದಂಡಕೇತುವೆಂಬ ಹೆಸರಿನಿಂದ ಚಂಡಾಲನಾಗಿ ಹುಟ್ಟಿದೆನು. ನಾನು ಮಹಾಪಾಪಕೃತ್ಯಗಳನ್ನು ಮಾಡುತ್ತಾ ಒಂದು ದಿನ ಪರಸ್ತ್ರೀಸಂಗಮಾಡಲು ಒಂದು ವಿಷ್ಣುದೇವಸ್ಥಾನದಲ್ಲಿ ಸೇರಿ ಅಲ್ಲಿ ಮಲಗುವುದಕ್ಕಾಗಿ ಸ್ವಲ್ಪ ಸ್ಥಳವನ್ನು ಗುಡಿಸಿ ದೀಪಹಚ್ಚಿ ಸಂಭೋಗಿಸಿದೆನು. ಸ್ವಲ್ಪಹೊತ್ತಿನಲ್ಲೇ ಕಾವಲುಗಾರರು ಬಂದು ನನ್ನನ್ನು ಕೊಂದರು. ತಕ್ಷಣದಲ್ಲಿಯೇ ವಿಷ್ಣುದೂತರು ವಿಮಾನವನ್ನು ತಂದು ನನ್ನನ್ನು ಒಯಿದರು. ನಾನು ಆಗಮಾಡಿದ ಸಮ್ಮಾರ್ಜನಾದಿಗಳ ಫಲವಾಗಿ ವಿಷ್ಣುಲೋಕಾದಿಗಳಲ್ಲಿ ಬಹುಕಾಲ ಸುಖಪಟ್ಟು ಈ ಪವಿತ್ರಕುಲದಲ್ಲಿ ಹುಟ್ಟಿದೆನು. ಆದಕಾರಣ ನಾನು ಸಂಮಾರ್ಜನೆ ಮತ್ತು ದೀಪದಾನ ಇವುಗಳ್ನು ವಿಶೇಷವಾಗಿ ಮಾಡುತ್ತಿರುವೆನು ಎಂದು ಹೇಳಿ ಸಾಲಗ್ರಾಮ ತುಲಸೀ ಮಹಿಮೆಯನ್ನು ನಿರೂಪಿಸಿ ವಿಷ್ಣುಭಕ್ತಿಯ ಮಹಿಮಾತಿಶಯವು ವಿಸ್ತಾರವಾಗಿ ಈ ಅಧ್ಯಾಯದಲ್ಲಿ ನಿರೂಪಿತವಾಗಿದೆ.

# ಚತ್ವಾರಿಂಶೋಽಧ್ಯಾಯಃ

ಸನಕ ಉವಾಚ

ಅತಃ ಪರಂ ಪ್ರವಕ್ಷ್ಯಾಮಿ ವಿಭೂತಿಂ ವೈಷ್ಣವೀಂ ಮುನೇ ।
ಯಾಂ ಶೃಣ್ವತಾಂ ಕೀರ್ತಯತಾಂ ಸದ್ಯಃ ಪಾಪಕ್ಷಯೋ ಭವೇತ್ ॥ ೧ ॥

ವೈವಸ್ವತೇಽಂತರೇ ಪೂರ್ವಂ ಶಕ್ರಸ್ಯ ಚ ಬೃಹಸ್ಪತೇಃ ।
ಸಂವಾದಃ ಸುಮಹಾನಾಸೀತ್ತಂ ವಕ್ಷ್ಯಾಮಿ ನಿಶಾಮಯ ॥ ೨ ॥

ಏಕದಾ ಸರ್ವಭೋಗಾಢ್ಯೋ ವಿಬುಧೈಃ ಪರಿವಾರಿತಃ ।
ಅಪ್ಸರೋಗಣಸಂಕೀರ್ಣೋ ಬೃಹಸ್ಪತಿಮಭಾಷತ ॥ ೩ ॥

ಇಂದ್ರ ಉವಾಚ

ಬೃಹಸ್ಪತೇ ಮಹಾಭಾಗ ಸರ್ವತತ್ತ್ವಾರ್ಥಕೋವಿದ ।
ಅತೀತಬ್ರಹ್ಮಣಃ ಕಲ್ಪೇ ಸೃಷ್ಟಿಃ ಕೀದೃಗ್ವಿಧಾ ಪ್ರಭೋ ॥ ೪ ॥

---

## ನಲವತ್ತನೆಯ ಅಧ್ಯಾಯವು

೧. ಸನಕನು ನುಡಿದನು—ನಾರದಮುನಿಯೇ! ಈಗ ಶ್ರವಣ ಕೀರ್ತನೆಗಳನ್ನು ಮಾಡುವವರಿಗೆ ತಕ್ಷಣದಲ್ಲಿಯೇ ಪಾಪವನ್ನು ಪರಿಹರಿಸುವಂತಹ ವಿಷ್ಣುವಿನ ವಿಭೂತಿಯನ್ನು ಹೇಳುವೆನು.

೨. ಹಿಂದೆ ವೈವಸ್ವತಮನ್ವಂತರದಲ್ಲಿ ಇಂದ್ರ ಬೃಹಸ್ಪತಿಗಳಿಗೆ ಬಹು ದೊಡ್ಡ ಸಂವಾದವಾಯಿತು, ಅದನ್ನು ಹೇಳುತ್ತೇನೆ ಕೇಳು.

೩. ಸಕಲ ಭೋಗಗಳಿಂದ ತುಂಬಿದ, ದೇವಪರಿವಾರಯುಕ್ತನಾದ ಅಪ್ಸರಸ್ತ್ರೀ ಸಮೂಹದಿಂದ ಕೂಡಿದ ಇಂದ್ರನು ಒಂದುದಿನ ಬೃಹಸ್ಪತಿಯನ್ನು ಕುರಿತು ಮಾತನಾಡಿದನು.

೪-೫. ಸಕಲ ತತ್ತ್ವಾರ್ಥವಿಜ್ಞಾನಿಯು, ಧನ್ಯನೂ ಆಗಿರುವ ಬೃಹಸ್ಪತಿಯೇ! ಹಿಂದಿನ ಬ್ರಹ್ಮಕಲ್ಪದಲ್ಲಿ ಸೃಷ್ಟಿಪ್ರಕಾರವು ಹೇಗೆ? ಇಂದ್ರನು

ಇಂದ್ರಸ್ತು ಕೀದೃಶಃ ಪ್ರೋಕ್ತೋ ವಿಬುಧಾಃ ಕೀದೃಶಾಃ ಸ್ಮೃತಾಃ ।
ತೇಷಾಂ ಚ ಕೀದೃಶಂ ಕರ್ಮ ಯಥಾವದ್ವಕ್ತುಮರ್ಹಸಿ ॥ ೫ ॥

ಬೃಹಸ್ಪತಿರುವಾಚ

ನ ಜ್ಞಾಯತೇ ಮಯಾ ಶಕ್ರ ಪೂರ್ವೇದ್ಯುಶ್ಚರಿತಂ ವಿಧೇಃ ।
ವರ್ತಮಾನದಿನಸ್ಯಾಪಿ ದುಜ್ಞೇಯಂ ಪ್ರತಿಭಾತಿ ಮೇ ॥ ೬ ॥

ಮನವಃ ಸಮತೀತಾಶ್ಚ ತಾನ್ವಕ್ತುಮಪಿ ನ ಕ್ಷಮಃ ।
ಯೋ ವಿಜಾನಾತಿ ತಂ ತೇಽದ್ಯ ಕಥಯಾಮಿ ನಿಶಾಮಯ ॥ ೭ ॥

ಸುಧರ್ಮ ಇತಿ ವಿಖ್ಯಾತಃ ಕಶ್ಚಿದಾಸ್ತೇ ಪುರೇ ತವ ।
ಭುಂಜಾನೋ ದಿವ್ಯಭೋಗಾಂಶ್ಚ ಬ್ರಹ್ಮಲೋಕಾದಿಹಾಗತಃ ॥ ೮ ॥

ಸ ವಾ ಏತದ್ವಿಜಾನಾತಿ ಕಥಯಾಮಿ ನಿಶಾಮಯ ।
ಏವಮುಕ್ತಸ್ತು ಗುರುಣಾ ಶಕ್ರಸ್ತೇನ ಸಮನ್ವಿತಃ ॥ ೯ ॥
ದೇವತಾಗಣಸಂಕೀರ್ಣಃ ಸುಧರ್ಮನಿಲಯಂ ಯಯೌ ॥ ೧೦ ॥

---

ಯಾರು? ವಿಬುಧರು ಎಂತಹವರು? ಅವರ ವ್ಯಾಪಾರವು ಎಂತಹುದು? ಇವುಗಳನ್ನೆಲ್ಲಾ ಯಥಾವತ್ತಾಗಿ ಹೇಳು ಎಂದು ಇಂದ್ರನು ಕೇಳಿದನು.

೬. ಬೃಹಸ್ಪತಿಯು ಹೇಳಿದನು—ಇಂದ್ರನೇ! ಬ್ರಹ್ಮನ ನಿನ್ನೆಯದಿನದ ವೃತ್ತಾಂತವೇ ನನಗೆ ತಿಳಿಯದು. ಇಂದಿನ ದಿನದ ವೃತ್ತಾಂತವೂ ಸಹ ತಿಳಿಯಲಶಕ್ಯವಾಗಿ ನನಗೆ ತೋರುತ್ತಿದೆ.

೭. ಹಿಂದೆ ಕಳೆದ ಮನುಗಳನ್ನು ಹೇಳಲು ನಾನು ಸಮರ್ಥನಲ್ಲ. ಅದನ್ನು ತಿಳಿದಿರುವವನಾರೆಂಬುದನ್ನು ಮಾತ್ರ ಹೇಳುವೆನು ಕೇಳು.

೮. ನಿನ್ನ ಪಟ್ಟಣದಲ್ಲಿ ಬ್ರಹ್ಮಲೋಕದಿಂದ ಇಲ್ಲಿಗೆ ಬಂದು ದಿವ್ಯಭೋಗಗಳನ್ನು ಅನುಭವಿಸುತ್ತಿರುವ ಸುಧರ್ಮನೆಂದು ಪ್ರಸಿದ್ಧನಾದವನೊಬ್ಬನಿದ್ದಾನೆ.

೯-೧೦. ಅವನಾದರೆ ಇದನ್ನು ತಿಳಿದಿರುವನು ಎಂದು ಗುರುಗಳಾದ ಬೃಹಸ್ಪತ್ಯಾಚಾರ್ಯರು ಹೇಳಿದುದನ್ನು ಕೇಳಿ ಇಂದ್ರನು ಬೃಹಸ್ಪತಿ, ದೇವಸಮೂಹ ಇವರುಗಳೊಡನೆ ಸುಧರ್ಮನ ಮನೆಗೆ ಹೋದನು.

ಸಮಾಗತಂ ದೇವಪತಿಂ ಬೃಹಸ್ಪತಿಸಮನ್ವಿತಂ ।
ದೃಷ್ಟ್ವಾ ಯಥಾರ್ಹಂ ದೇವರ್ಷೇ ಪೂಜಯಾಮಾಸ ಸಾದರಂ ॥ ೧೧ ॥
ಸುಧರ್ಮಣಾನ್ವಿತಃ ಶಕ್ರೋ ದೃಷ್ಟ್ವಾ ತಚ್ಛ್ರಿಯಮುತ್ತಮಾಂ ।
ಮನಸಾ ವಿಸ್ಮಯಾವಿಷ್ಟಃ ಪ್ರೋವಾಚ ವಿನಯಾನ್ವಿತಃ ॥ ೧೨ ॥

ಇಂದ್ರ ಉವಾಚ

ಅತೀತಬ್ರಹ್ಮಕಲ್ಪಸ್ಯ ವೃತ್ತಾಂತಂ ವೇತ್ಸಿ ಚೇದ್ವದ ।
ತದಾಖ್ಯಾಹಿ ಸಮಾಯಾತಃ ಏತತ್ಪ್ರಷ್ಟುಂ ಸ ಯಾಜಕಃ ॥ ೧೩ ॥

ಗತನಿದ್ರಾಂಶ್ಚ ದೇವಾಂಶ್ಚ ಯೇನ ಜಾನಾಸಿ ಸುವ್ರತ ।
ತದ್ವದಸ್ವಾಧಿಕಃ ಕಸ್ಮಾದಸ್ಮದ್ಭ್ಯೋಽಪಿ ದಿವಿ ಸ್ಥಿತಃ ॥ ೧೪ ॥

ತೇಜಸಾ ಯಶಸಾ ಕೀರ್ತ್ಯಾ ಜ್ಞಾನೇನ ಚ ಪರಂತಪ ।
ದಾನೇನ ವಾ ತಪೋಭಿರ್ವಾ ಕಥಮೇತಾದೃಶಃ ಪ್ರಭೋ ॥ ೧೫ ॥

---

೧೧. ನಾರದನೇ! ಕೇಳು, ಬೃಹಸ್ಪತಿಯೊಡನೆ ಬಂದ ದೇವೇಂದ್ರನನ್ನು ನೋಡಿ ಸುಧರ್ಮನು ವಿಶ್ವಾಸಪೂರ್ವಕವಾಗಿ ಯೋಗ್ಯತಾನುಸಾರ ಪೂಜಿಸಿದನು.

೧೨. ಇಂದ್ರನು ಉತ್ಕೃಷ್ಟವಾದ ಅವನ ಐಶ್ವರ್ಯವನ್ನು ನೋಡಿ ಮನಸ್ಸಿನಲ್ಲಿಯೇ ಆಶ್ಚರ್ಯಗೊಂಡವನಾಗಿ ಸುಧರ್ಮನ ಸಂಗಡ ವಿನಯದಿಂದ ಮಾತನಾಡಿದನು.

೧೩. ಇಂದ್ರನು ಹೇಳಿದನು—ಹಿಂದಿನ ಬ್ರಹ್ಮಕಲ್ಪದ ವೃತ್ತಾಂತವನ್ನು ನೀನು ತಿಳಿದಿರುವೆಯಾ ? ತಿಳಿದಿದ್ದರೆ ಹೇಳು. ಇದನ್ನು ಕೇಳುವುದಕ್ಕಾಗಿ ಗುರುಗಳೊಡನೆ ಬಂದಿರುವೆನು. ಆ ವೃತ್ತಾಂತವೇನು ?

೧೪. ಸುಧರ್ಮನೇ! ನಿದ್ರೆಯಿಲ್ಲದ ದೇವತೆಗಳ ವ್ಯಾಪಾರವನ್ನು ತಿಳಿದು ನೀನು ನಮಗಿಂತಲೂ ಮೇಲಾಗಿರುವೆ. ಅದಕ್ಕೆ ಕಾರಣವಾದ ಪುಣ್ಯವನ್ನು ಹೇಳು.

೧೫. ಸ್ವಾಮಿಯೇ! ನೀನು ತೇಜಸ್ಸು, ಯಶಸ್ಸು, ಕೀರ್ತಿ, ಜ್ಞಾನ, ದಾನ ಅಥವಾ ತಪಸ್ಸು ಇವುಗಳಲ್ಲಾವುದರಿಂದ ಈ ಮಹಿಮೆಯುಳ್ಳವನಾಗಿರುವೆ ?

ಇತ್ಯುಕ್ತೋ ದೇವರಾಜೇನ ಸುಧರ್ಮಾ ಪ್ರಹಸಂಸ್ತದಾ ।
ಪ್ರೋವಾಚ ವಿನಯಾವಿಷ್ಟಃ ಪೂರ್ವವೃತ್ತಂ ಯಥಾವಿಧಿ ॥ ೧೬ ॥

ಸುಧರ್ಮಾ ಉವಾಚ

ಚತುರ್ಯುಗಸಹಸ್ರಾಣಿ ಬ್ರಹ್ಮಣೋ ದಿನಮುಚ್ಯತೇ ।
ಏಕಸ್ಮಿನ್ ದಿವಸೇ ಶಕ್ರ ಮನವಶ್ಚ ಚತುರ್ದಶ ॥ ೧೭ ॥

ಇಂದ್ರಾಶ್ಚತುರ್ದಶಪ್ರೋಕ್ತಾ ದೇವಾಶ್ಚ ವಿವಿಧಾಃ ಪೃಥಕ್ ।
ಇಂದ್ರಾಣಾಂ ಚೈವ ಸರ್ವೇಷಾಂ ಮನ್ವಾದೀನಾಂ ಚ ವಾಸವ ॥ ೧೮ ॥

ತುಲ್ಯತಾ ತೇಜಸಾ ಲಕ್ಷ್ಮ್ಯಾ ಪ್ರಭಾವೇಣ ಬಲೇನ ಚ ।
ತೇಷಾಂ ನಾಮಾನಿ ವಕ್ಷ್ಯಾಮಿ ಶೃಣುಷ್ವ ಸುಸಮಾಹಿತಃ ॥ ೧೯ ॥

ಸ್ವಾಯಂಭುವೋ ಮನುಃ ಪೂರ್ವಂ ತತಃ ಸ್ವಾರೋಚಿಷಸ್ತಥಾ ।
ಉತ್ತಮಸ್ತಾಮಸಶ್ಚೈವ ರೈವತಶ್ಚಾಕ್ಷುಷಸ್ತಥಾ ॥ ೨೦ ॥

---

೧೬. ದೇವೇಂದ್ರನು ಹೀಗೆ ಹೇಳಿದುದನ್ನು ಕೇಳಿ ಸುಧರ್ಮನು ನಕ್ಕು ವಿನಯದಿಂದ ಪೂರ್ವ ವೃತ್ತಾಂತವನ್ನು ಕ್ರಮವಾಗಿ ಹೇಳಿದನು.

೧೭-೧೯. ಸುಧರ್ಮನು ಹೇಳಿದನು—ಇಂದ್ರನೇ! ಒಂದು ಸಾವಿರ ಚತುರ್ಯುಗಗಳು ಚತುರ್ಮುಖಬ್ರಹ್ಮನಿಗೆ ಒಂದು ದಿನವಾಗುವುದು. ಒಂದೊಂದು ದಿನದಲ್ಲಿಯೂ ಹದಿನಾಲ್ಕು ಮನುಗಳು, ಹದಿನಾಲ್ಕು ಇಂದ್ರರು, ನಾನಾವಿಧ ದೇವತೆಗಳು ಬೇರೆಬೇರೆಯಾಗಿರುವರು. ಎಲ್ಲಾ ಇಂದ್ರರು ಮತ್ತು ಮನ್ವಾದಿಗಳು ತೇಜಸ್ಸು, ಪ್ರತಾಪ, ಐಶ್ವರ್ಯ ಮತ್ತು ಶಕ್ತಿ ಇವುಗಳಲ್ಲಿ ಸಮಾನರು. ಅವರ ಹೆಸರನ್ನು ಹೇಳುವೆನು ಸಮಾಧಾನಚಿತ್ತನಾಗಿ ಕೇಳು.

೨೦-೨೨. ಮೊದಲು ಸ್ವಾಯಂಭುವಮನುವು, ಅನಂತರ ಸ್ವಾರೋಚಿಷ, ಉತ್ತಮ, ತಾಮಸ, ರೈವತ, ಚಾಕ್ಷುಷ, ವೈವಸ್ವತಮನು, ಸೂರ್ಯಸಾವರ್ಣಿ ಮನು, ಸಕಲವರ್ಣದವರಿಗೂ ಉಪಕಾರಕನಾದ ದಕ್ಷಸಾವರ್ಣಿಮನು,

ವೈವಸ್ವತೋ ಮನುಶ್ಚೈವ ಸೂರ್ಯಸಾವರ್ಣಿರಷ್ಟಮಃ ।
ನವಮೋ ದಕ್ಷಸಾವರ್ಣಿಃ ಸರ್ವವರ್ಣಹಿತೇ ರತಃ ॥ ೨೧ ॥

ದಶಮೋ ಬ್ರಹ್ಮಸಾವರ್ಣಿರ್ಧರ್ಮಸಾವರ್ಣಿಕಸ್ತಥಾ ।
ತತಸ್ತು ರುದ್ರಸಾವರ್ಣೀ ರೋಚಮಾನಸ್ತತಸ್ಮೃತಃ ॥ ೨೨ ॥

ಭೌತ್ಯಶ್ಚತುರ್ದಶಃ ಪ್ರೋಕ್ತ ಏತೇ ಹಿ ಮನವಃ ಸ್ಮೃತಾಃ ।
ದೇವಾನಿಂದ್ರಾಂಶ್ಚ ವಕ್ಷ್ಯಾಮಿ ಶೃಣುಷ್ವ ವಿಬುಧರ್ಷಭ ॥ ೨೩ ॥

ಯಾಮಾ ಇತಿ ಸಮಾಖ್ಯಾತಾ ದೇವಾಃ ಸ್ವಾಯಂಭುವೇಂತರೇ ।
ಶಚೀಪತೇಃ ಸಮಾಖ್ಯಾತಸ್ತೇಷಾಮಿಂದ್ರೋ ಮಹಾಮತಿಃ ॥ ೨೪ ॥

ಪಾರಾವತಾಶ್ಚ ತುಷಿತಾ ದೇವಾಃ ಸ್ವಾರೋಚಿಷೇಂತರೇ ।
ವಿಪಶ್ಚಿನ್ನಾಮ ದೇವೇಂದ್ರಃ ಸರ್ವಸಂಪತ್ಸಮನ್ವಿತಃ ॥ ೨೫ ॥

ಸುಧಾಮನಸ್ತಥಾ ಸತ್ಯಾಃ ಶಿವಾಶ್ಚಾಥ ಪ್ರಕೀರ್ತಿತಾಃ ।
ತೇಷಾಮಿಂದ್ರಃ ಸುಶಾಂತಿಶ್ಚ ತೃತೀಯೋ ಪರಿಕೀರ್ತಿತಃ ॥ ೨೬ ॥

---

ಹತ್ತನೆಯವನಾದ ಬ್ರಹ್ಮಸಾವರ್ಣಿಮನು, ತರುವಾಯ ರುದ್ರಸಾವರ್ಣಿ, ರೋಚಮಾನ ಮತ್ತು ಭೌತ್ಯ ಎಂಬ ಹೆಸರುಗಳಿಂದ ಕ್ರಮವಾಗಿ ಹದಿನಾಲ್ಕು ಮನುಗಳು ಉಕ್ತರಾಗಿದ್ದಾರೆ. ದೇವೇಂದ್ರನೇ! ದೇವತೆಗಳನ್ನೂ ಇಂದ್ರರನ್ನೂ ಹೇಳುತ್ತೇನೆ ಕೇಳು.

೨೪. ಶಚೀಪತಿಯೇ! ಸ್ವಾಯಂಭುವಮನ್ವಂತರದಲ್ಲಿ ಯಾಮ ಎನ್ನುವವರೇ ದೇವತೆಗಳು. ಅವರಿಗೆ ಮಹಾಮತಿಯು (ಯಜ್ಞ) ಇಂದ್ರನೆಂದು ಉಕ್ತನಾಗಿದ್ದಾನೆ.

೨೫. ಸ್ವಾರೋಚಿಷಮನ್ವಂತರದಲ್ಲಿ ತುಷಿತರು ಮತ್ತು ಪಾರಾವತರು ದೇವತೆಗಳು. ಸಕಲೈಶ್ವರ್ಯಸಂಪನ್ನನಾದ ವಿಪಶ್ಚಿತ್ ಎಂಬುವನು ದೇವೇಂದ್ರನು.

೨೬. ಮೂರನೆಯದಾದ ಉತ್ತಮ ಮನ್ವಂತರದಲ್ಲಿ ಸುಧಾಮ, ಸತ್ಯ, ಶಿವ ಇವರುಗಳು ದೇವತೆಗಳು. ಅವರಿಗೆ ಸುಶಾಂತಿ ಎಂಬುವನೇ ಇಂದ್ರನು ಎಂದು ಉಕ್ತವಾಗಿದೆ.

ಸುತಾಃ ಪರಾಹರಾಶ್ಚೈವ ಸುತ್ಯಾಶ್ಚ ಸುಧಿಯಸ್ತಥಾ ।
ತೇಷಾಮಿಂದ್ರಃ ಶಿವಃ ಪ್ರೋಕ್ತಃ ಚತುರ್ಥೇ ಪರಿಕೀರ್ತಿತಃ ॥ ೨೭ ॥

ಅಮಿತಾಭಾದಯೋ ದೇವಾಃ ಷಷ್ಠೇಪಿ ಚ ತಥಾ ಶೃಣು ।
ಆರ್ಯಾದ್ಯಾ ವಿಬುಧಾಃ ಪ್ರೋಕ್ತಾಸ್ತೇಷಾಮಿಂದ್ರೋ ಮನೋಜವಃ ॥ ೨೮ ॥

ಆದಿತ್ಯವಸುರುದ್ರಾದ್ಯಾ ದೇವಾ ವೈವಸ್ವತೇಂತರೇ ।
ಇಂದ್ರಃ ಪುರಂದರಃ ಪ್ರೋಕ್ತಃ ಸರ್ವಕಾಮಸಮನ್ವಿತಃ ॥ ೨೯ ॥

ಅಷ್ಟಮೇ ಚಾಪಿ ವಿಬುಧಾಃ ಸುತಪಾದ್ಯಾಃ ಪ್ರಕೀರ್ತಿತಾಃ ।
ವಿಷ್ಣುಪೂಜಾಪ್ರಭಾವೇಣ ತೇಷಾಮಿಂದ್ರೋ ಬಲಿಃ ಸ್ಮೃತಃ ॥ ೩೦ ॥

ಪರಾದ್ಯಾ ನವಮೇ ದೇವಾ ಇಂದ್ರಶ್ಚಾದ್ಭುತ ಉಚ್ಯತೇ ।
ಸುವಾಮನಾದ್ಯಾ ವಿಬುಧಾಃ ದಶಮೇ ಪರಿಕೀರ್ತಿತಾಃ ॥ ೩೧ ॥

---

೨೭-೨೮. ನಾಲ್ಕನೆಯ ಮನ್ವಂತರದಲ್ಲಿ ಸುತ, ಪರಾಹರ, ಸುತ್ಯ, ಸುಧೀ ಇವರು ದೇವತೆಗಳು. ಅವರಿಗೆ ಶಿವನು ಇಂದ್ರನು. ಐದನೆಯ ಮನ್ವಂತರದಲ್ಲಿ ಋಭುನಾಮಕನು ದೇವೇಂದ್ರನು. ಅಮಿತಾಭ ಮುಂತಾದವರು ದೇವತೆಗಳು.

೨೮. ಆರನೆಯ ಮನ್ವಂತರದಲ್ಲಿ ಆರ್ಯಾದಿಗಳು ದೇವತೆಗಳು. ಅವರಿಗೆ ಇಂದ್ರನು ಮನೋಜವನು.

೨೯. ವೈವಸ್ವತಮನ್ವಂತರದಲ್ಲಿ ಆದಿತ್ಯ, ವಸು, ರುದ್ರ ಮುಂತಾದವರು ದೇವತೆಗಳು. ಸರ್ವೇಷ್ಟಸಮೃದ್ಧನಾದ ಪುರಂದರನೇ ಇಂದ್ರನು.

೩೦. ಎಂಟನೆಯ ಮನ್ವಂತರದಲ್ಲಿ ಸುತಪಾದಿಗಳು ದೇವತೆಗಳು. ಅವರಿಗೆ ವಿಷ್ಣುಪೂಜೆಯ ಪ್ರಭಾವದಿಂದ ಬಲಿಯು ಇಂದ್ರನೆಂದು ಉಕ್ತವಾಗಿದೆ.

೩೧. ಒಂಭತ್ತನೆಯ ಮನ್ವಂತರದಲ್ಲಿ ಪರಾದಿಗಳು ದೇವತೆಗಳು. ಅದ್ಭುತನೇ ಇಂದ್ರನು. ಹತ್ತನೆಯದರಲ್ಲಿ ಸುವಾಮನಾದಿಗಳು ದೇವತೆಗಳು ಎಂದು ಉಕ್ತವಾಗಿದೆ.

ಶಾಂತಿರ್ನಾಮ ಚ ತತ್ರೇಂದ್ರಃ ಸರ್ವಭೋಗಸಮನ್ವಿತಃ ।
ವಿಹಂಗಮಾದ್ಯಾ ದೇವಾಶ್ಚ ತೇಷಾಮಿಂದ್ರೋ ವೃಷಃ ಸ್ಮೃತಃ ॥ ೩೨ ॥

ಏಕಾದಶೇ ದ್ವಾದಶೇ ತು ನಿಬೋಧ ಕಥಯಾಮಿ ತೇ ।
ಋತು ನಾಮ ಚ ದೇವೇಂದ್ರೋ ಹರಿನಾಭಾಸ್ತಥಾಸುರಾಃ ॥ ೩೩ ॥

ಸುತ್ರಾಮಾದ್ಯಾಸ್ತಥಾ ದೇವಾಸ್ತ್ರಯೋದಶತಮೇಂತರೇ ।
ದಿವಸ್ಪತಿರ್ಮಹಾವೀರ್ಯಸ್ತೇಷಾಮಿಂದ್ರಃ ಪ್ರಕೀರ್ತಿತಃ ॥ ೩೪ ॥

ಚತುರ್ದಶೇ ಚಾಕ್ಷುಷಾದ್ಯಾ ದೇವಾ ಇಂದ್ರಃ ಶುಚಿಃ ಸ್ಮೃತಃ ।
ಏವಂ ತೇ ಮನವಃ ಪ್ರೋಕ್ತಾ ಇಂದ್ರಾ ದೇವಾಶ್ಚ ತತ್ವತಃ ॥ ೩೫ ॥

ಏಕಸ್ಮಿನ್ ಬ್ರಹ್ಮದಿವಸೇ ಸ್ವಾಧಿಕಾರಾತ್ಪ್ರಮುಂಚತೇ ।
ಲೋಕೇಶಸರ್ವಸರ್ಗೇಷು ಸೃಷ್ಟಿರೇಕವಿಧಾ ಸ್ಮೃತಾ ॥ ೩೬ ॥

---

೩೨. ಅಲ್ಲಿ ಸಕಲ ಭೋಗಯುಕ್ತನಾದ ಶಾಂತಿನಾಮಕನು ಇಂದ್ರನು. ಹನ್ನೊಂದನೆಯ ಮನ್ವಂತರದಲ್ಲಿ ವಿಹಂಗಮಾದಿಗಳು ದೇವತೆಗಳು. ವೃಷನಾಮಕನು ಇಂದ್ರನು.

೩೩. ಹನ್ನೆರಡನೆಯದರಲ್ಲಿ ಋತುನಾಮಕನು ಇಂದ್ರನು. ಹರಿನಾಭರು ದೇವತೆಗಳು ಎಂದು ತಿಳಿ.

೩೪. ಹದಿಮೂರನೆಯ ಮನ್ವಂತರದಲ್ಲಿ ಸುತ್ರಾಮಾದಿಗಳೇ ದೇವತೆಗಳು. ಮಹಾಪರಾಕ್ರಮಿಯಾದ ದಿವಸ್ಪತಿಯು ಅವರಿಗೆ ಇಂದ್ರನೆಂದು ಉಕ್ತವಾಗಿದೆ.

೩೫. ಹದಿನಾಲ್ಕನೆಯ ಮನ್ವಂತರದಲ್ಲಿಚಾಕ್ಷುಷಾದಿಗಳೇ ದೇವತೆಗಳು. ಶುಚಿಯು ಇಂದ್ರನು. ಈರೀತಿ ನಿನಗೆ ಮನು, ಇಂದ್ರ, ದೇವತೆ ಇವರುಗಳನ್ನು ಯಥಾವತ್ತಾಗಿ ಹೇಳಿರುವೆನು.

೩೬- ಒಂದೊಂದು ಬ್ರಹ್ಮದಿನದಲ್ಲಿ ಮಾತ್ರ ಒಬ್ಬೊಬ್ಬ ಮನ್ವಾದಿಗಳಿಗೆ ಅಧಿಕಾರವಿರುತ್ತದೆ. ಆದಿನ ಮುಗಿದಕೂಡಲೇ ಆಮನ್ವಾದಿಗಳ ಅಧಿಕಾರವು ನಿವೃತ್ತಿಯಾಗುತ್ತದೆ. ಜಗದೀಶನು ಮಾಡುವ ಸಕಲ ಸರ್ಗಗಳಲ್ಲಿಯೂ ಸೃಷ್ಟಿಯು ಒಂದೇ ವಿಧವೆಂದು ಉಕ್ತವಾಗಿದೆ.

ಕರ್ತಾರೋ ಬಹವಃ ಸಂತಿ ತತ್ಸಂಖ್ಯಾಂ ವೇತ್ತಿ ಕೋವಿದಃ ।
ಮಯಿ ಸ್ಥಿತೇ ಬ್ರಹ್ಮಲೋಕೇ ಬ್ರಹ್ಮಾಣೋ ಬಹವೋ ಗತಾಃ ॥ ೩೭ ॥

ತೇಷಾಂ ಸಂಖ್ಯಾಂ ನ ಸಂಖ್ಯಾತುಂ ಶಕ್ತೋಽಸ್ಮ್ಯದ್ಯ ದ್ವಿಜೋತ್ತಮ ।
ಸ್ವರ್ಗಲೋಕಮಪಿ ಪ್ರಾಪ್ಯ ಯಾವತ್ಕಾಲಂ ಶೃಣುಷ್ವ ಮೇ ॥ ೩೮ ॥

ಚತ್ವಾರೋ ಮನವೋಽತೀತಾ ಮಮ ಶ್ರೀಶ್ಚಾತಿವಿಸ್ತರಾ ।
ಸ್ಥಾತವ್ಯಂ ಚ ಮಯಾಽತ್ರೈವ ಯುಗಕೋಟಿಶತಂ ಪ್ರಭೋ ॥ ೩೯ ॥

ತತಃ ಪರಂ ಗಮಿಷ್ಯಾಮಿ ಕರ್ಮಭೂಮಿಂ ಶೃಣುಷ್ವ ಮೇ ।
ಮಯಾ ಕೃತಂ ಪುರಾ ಕರ್ಮ ವಕ್ಷ್ಯಾಮಿ ತವ ಸುವ್ರತ ॥ ೪೦ ॥

ವದತಾಂ ಶೃಣ್ವತಾಂ ಚೈವ ಸರ್ವಪಾಪಪ್ರಣಾಶನಂ ।
ಅಹಮಾಸಂ ಪುರಾ ಶಕ್ರ ಗೃಧ್ರಃ ಪಾಪೋ ವಿಶೇಷತಃ ॥ ೪೧ ॥

---

೩೭. ಸೃಷ್ಟಿಕರ್ತರಾದ ಪ್ರಜೇಶ್ವರರು ಬಹಳವಾಗಿದ್ದಾರೆ. ಅವರ ಸಂಖ್ಯೆಯನ್ನು ಜ್ಞಾನಿಯು ತಿಳಿಯುವನು. ನಾನು ಬ್ರಹ್ಮಲೋಕದಲ್ಲಿರುವಾಗಲೇ ಬಹುಬ್ರಹ್ಮರು ಕಳೆದುಹೋದರು.

೩೮. ದ್ವಿಜೋತ್ತಮನೇ! ಅವರ ಸಂಖ್ಯೆಯನ್ನು ಪರಿಗಣಿಸಲು ಈಗ ನಾನು ಸಮರ್ಥನಗಿಲ್ಲ. ನಾನು ಸ್ವರ್ಗಲೋಕಕ್ಕೆ ಬಂದು ಎಷ್ಟುಕಾಲವಾಯಿತೆಂಬುದನ್ನು ಹೇಳುತ್ತೇನೆ ಕೇಳು.

೩೯. ಸ್ವಾಮಿ! ನನ್ನ ಜೀವಿತ ಕಾಲದಲ್ಲಿ ನಾಲ್ಕು ಮನುಗಳು ಅಧಿಕಾರಮಾಡಿಹೋದರು. ನನ್ನ ಐಶ್ವರ್ಯವು ಬಹು ವಿಸ್ತೃತವಾಗಿದೆ. ನಾನು ಇಲ್ಲಿಯೇ ನೂರುಕೋಟಿ ಯುಗಗಳವರೆಗೆ ಇರಬೇಕು.

೪೦. ಅನಂತರ ಕರ್ಮಭೂಮಿಗೆ ಹೋಗುವೆನು. ಸುವ್ರತನಾದ ಇಂದ್ರನೇ! ನಾನು ಹಿಂದೆ ಮಾಡಿದ ಕರ್ಮವನ್ನು ನಿನಗೆ ಹೇಳುವೆನು ಕೇಳು.

೪೧. ಅದನ್ನು ಶ್ರವಣ ಪಠನ ಮಾಡುವವರಿಗೆ ಸಕಲಪಾಪಗಳೂ ಹೋಗುವುವು. ಇಂದ್ರನೇ! ಪೂರ್ವದಲ್ಲಿ ನಾನು ಹದ್ದಾಗಿ ಹುಟ್ಟಿ ಅತ್ಯಧಿಕವಾಗಿ ಪಾಪಕೃತ್ಯವನ್ನು ಮಾಡುತ್ತಿದ್ದೆನು.

ಸ್ಥಿತಶ್ಚ ಭೂಮಿಭಾಗೇ ವೈ ಅಮೇಧ್ಯಾಮಿಷಭೋಜನಃ ।
ಏಕದಾಽಹಂ ವಿಷ್ಣುಗೃಹೇ ಪ್ರಾಕಾರೇ ಸಂಸ್ಥಿತಃ ಪ್ರಭೋ ॥ ೪೨ ॥

ಪತಿತೋ ವ್ಯಾಧಶಸ್ತ್ರೇಣ ಸಾಯಂ ವಿಷ್ಣೋಃ ಗೃಹಾಂಗಣೇ ।
ಮಯಿ ಕಂಠಗತಪ್ರಾಣೇ ಭಷಕೋ ಮಾಂಸಲೋಲುಪಃ ॥ ೪೩ ॥

ಜಗ್ರಾಹ ಮಾಂ ಸ್ವವಕ್ತ್ರೇಣ ಶ್ವಭಿರನ್ಯೈಶ್ಚರನ್ದ್ರುತಃ ।
ವಹನ್ಮಾಂ ಸ್ವಮುಖೇನೈವ ಭೀತೋಽನ್ಯೈರ್ಭಷಕೈಸ್ತಥಾ ॥ ೪೪ ॥

ಗತಃ ಪ್ರದಕ್ಷಿಣಾಕಾರಂ ವಿಷ್ಣೋಸ್ತನ್ಮಂದಿರಂ ಪ್ರಭೋ ।
ತೇನೈವ ತುಷ್ಟಿಮಾಪನ್ನೋ ಹ್ಯಂತರಾತ್ಮಾ ಜಗನ್ಮಯಃ ॥ ೪೫ ॥

ಮಮ ಚಾಪಿ ಶುನಶ್ಚಾಪಿ ದತ್ತವಾನ್ಪರಮಂ ಪದಂ ।
ಪ್ರದಕ್ಷಿಣಾಕಾರತಯಾ ಗತಸ್ಯಾಪೀದೃಶಂ ಫಲಂ ॥ ೪೬ ॥

---

೪೨. ಆಗ ನಾನು ಅಮೇಧ್ಯ, ಮಾಂಸ ಇವುಗಳನ್ನು ತಿನ್ನುತ್ತಾ ಭೂಮಿಯಲ್ಲಿ ಜೀವಿಸುತ್ತಿದ್ದೆನು. ಸ್ವಾಮಿಯೇ! ನಾನು ಒಂದುದಿನ ಸಾಯಂ ಕಾಲದಲ್ಲಿ ವಿಷ್ಣುದೇವಾಲಯದ ಪ್ರಾಕಾರದ ಮೇಲೆ ಕುಳಿತಿದ್ದೆನು.

೪೩-೪೪. ಆಗ ಒಬ್ಬ ವ್ಯಾಧನು ನನ್ನನ್ನು ಶಸ್ತ್ರದಿಂದ ಹೊಡೆದನು. ಅದರಿಂದ ನಾನು ಆ ದೇವಾಲಯದ ಅಂಗಳದಲ್ಲಿ ಬಿದ್ದೆನು. ನನಗೆ ಪ್ರಾಣವು ಕುತ್ತಿಗೆಗೆ ಒರಲು ಒಂದು ನಾಯಿಯು ಮಾಂಸದ ಆಶೆಯಿಂದ ನನ್ನನ್ನು ಬಾಯಿ ಯಲ್ಲಿ ಕಚ್ಚಿಕೊಂಡಿತು.

೪೪-೪೫. ಆಗ ಇತರ ನಾಯಿಗಳು ಅದನ್ನು ಹಿಂಬಾಲಿಸಿ ಓಡಿಬರಲು ಆ ನಾಯಿಯು ಭಯಪಟ್ಟು ನನ್ನನ್ನು ಬಾಯಲ್ಲಿಯೇ ಕಚ್ಚಿಕೊಂಡು ಇತರ ನಾಯಿಗಳೊಡನೆ ಆ ವಿಷ್ಣುಮಂದಿರವನ್ನು ಪ್ರದಕ್ಷಿಣಾಕಾರವಾಗಿ ಸುತ್ತಿತು.

೪೫-೪೬. ಅದರಿಂದಲೇ ಜಗನ್ನಿಯಾಮಕನಾದ ಅಂತರಾತ್ಮನು ಸಂತೋಷಪಟ್ಟು ನನಗೆ ಮತ್ತು ನಾಯಿಗೂ ಸಹ ಉತ್ತಮ ಸ್ಥಾನವನ್ನು ಕೊಟ್ಟನು.

ಸಂಪ್ರಾಪ್ತಂ ವಿಬುಧಶ್ರೇಷ್ಠ ಕಿಂ ಪುನಃ ಸಮ್ಯಗರ್ಚನಾತ್ ।
ಇತ್ಯುಕ್ತೋ ದೇವರಾಜಸ್ತು ಸುಧರ್ಮೇಣ ಮಹಾತ್ಮನಾ ॥ ೪೭ ॥

ಮನಸಾ ಪ್ರೀತಿಮಾಪನ್ನೋ ಹರಿಪೂಜಾರತೋಽಭವತ್ ।
ಅದ್ಯಾಪಿ ನಿರ್ಜರಾಸ್ಸರ್ವೇ ಭಾರತೇ ಜನ್ಮಲಿಪ್ಸವಃ ॥ ೪೮ ॥

ಸಮರ್ಚಯಂತಿ ದೇವೇಶಂ ನಾರಾಯಣಮನಾಮಯಂ ।
ಯೇ ಯಜಂತಿ ಸದಾ ಭಕ್ತ್ಯಾ ನಾರಾಯಣಮನಾಮಯಂ ।
ತಾನರ್ಚಯಂತಿ ಸತತಂ ಬ್ರಹ್ಮಾದ್ಯಾ ದೇವತಾಗಣಾಃ ॥ ೪೯ ॥

ನಾರಾಯಣಾನುಸ್ಮರಣೋದ್ಯತಾನಾಂ
ಮಹಾತ್ಮನಾಂ ತ್ಯಕ್ತಪರಿಗ್ರಹಾಣಾಂ ।
ಕಥಂ ಭವತ್ಯುಗ್ರಭವಸ್ಯ ಬಂಧ-
ಸ್ತತ್ಸಂಗಲುಬ್ಧಾ ಅಪಿ ಮುಕ್ತಿಭಾಜಃ ॥ ೫೦ ॥

---

೪೬-೪೭. ಮನಃಪೂರ್ವಕವಲ್ಲದೇ ಪ್ರದಕ್ಷಿಣಾಕಾರವಾಗಿ ಹೋದವನಿಗೂ ಸಹ ಇಂತಹ ಫಲವು ಬಂದಿತು. ದೇವೇಂದ್ರನೇ! ಜನಾರ್ದನನ್ನು ಚೆನ್ನಾಗಿ ಪೂಜಿಸುವುದರಿಂದ ಉತ್ಕೃಷ್ಟ ಫಲವಾಗುತ್ತದೆಂದು ಹೇಳಬೇಕೇ ಏನು?

೪೭-೪೮. ಈರೀತಿ ಮಹಾತ್ಮನಾದ ಸುಧರ್ಮನಿಂದ ಉಕ್ತವಾದುದನ್ನು ಕೇಳಿ ದೇವೇಂದ್ರನು ಮನಸ್ಸಿನಲ್ಲಿ ಸಂತೋಷಪಟ್ಟು ಹರಿಪೂಜೆಯಲ್ಲಿ ನಿರತನಾದನು.

೪೮-೪೯. ಈಗಲೂ ಸಹ ದೇವತೆಗಳೆಲ್ಲಾ ಭರತಖಂಡದಲ್ಲಿ ಜನ್ಮವನ್ನಪೇಕ್ಷಿಸುವವರಾಗಿ ದೇವಸ್ವಾಮಿಯು, ನಿರ್ದೋಷನೂ ಆದ ನಾರಾಯಣನನ್ನು ಪೂಜಿಸುತ್ತಾರೆ.

೪೯. ಯಾವಾಗಲೂ ನಿರ್ದೋಷನಾದ ನಾರಾಯಣನನ್ನು ಭಕ್ತಿಯಿಂದ ಆರಾಧಿಸುವವರನ್ನು ಬ್ರಹ್ಮಾದಿ ದೇವಗಣಗಳೂ ಸಹ ಸರ್ವದಾ ಸತ್ಕರಿಸುವುವು.

೫೦. ನಾರಾಯಣ ಧ್ಯಾನದಲ್ಲಿ ಉದ್ಯುಕ್ತರಾದ, ಪರಿಗ್ರಹವನ್ನು ಬಿಟ್ಟಿರುವ ಮಹಾತ್ಮರಿಗೆ ಭಯಂಕರವಾದ ಸಂಸಾರಬಂಧವು ಹೇಗಾದೀತು? ಅಂತಹವರ ಸಹವಾಸವನ್ನು ಆಶಿಸುವವರೂ ಸಹ ಮುಕ್ತಿಭಾಗಿಗಳಾಗುವರು.

ಯೇ ಮಾನವಾಃ ಪ್ರತಿದಿನಂ ಪರಿಮುಕ್ತಸಂಗಾ
ನಾರಾಯಣಂ ಗರುಡವಾಹನಮರ್ಚಯಂತಿ ।
ತೇ ಸರ್ವಪಾಪನಿಕರೈಃ ಪರಿತೋ ವಿಮುಕ್ತಾ
ವಿಷ್ಣೋಃ ಪದಂ ಶುಭತರಂ ಪ್ರತಿಯಾಂತಿ ಹೃಷ್ಟಾಃ ॥ ೫೧ ॥

ಯೇ ಮಾನವಾ ವಿಗತರಾಗಪರಾವರಜ್ಞಾ
ನಾರಾಯಣಂ ಸುರಗುರುಂ ಸತತಂ ಸ್ಮರಂತಿ ।
ಧ್ಯಾನೇನ ತೇನ ಹತಕಿಲ್ಬಿಷಚೇತನಾಸ್ತೇ
ಮಾತುಃ ಪಯೋಧರರಸಂ ನ ಪುನಃ ಪಿಬಂತಿ ॥ ೫೨ ॥

ಯೇ ಮಾನವಾ ಹರಿಕಥಾಶ್ರವಣಾಸ್ತದೋಷಾಃ
ಕೃಷ್ಣಾಂಘ್ರಿಪದ್ಮಭಜನೇ ರತಚೇತನಾಶ್ಚ ।
ತೇ ವೈ ಪುನಂತಿ ಚ ಜಗಂತಿ ಶರೀರಸಂಗಾ
ತ್ಸಂಭಾಷಣಾದಪಿ ತತೋ ಹರಿರೇವ ಪೂಜ್ಯಃ ॥ ೫೩ ॥

---

೫೧. ಪ್ರತಿದಿನವೂ ನಿಷ್ಕಾಮರಾಗಿ ಗರುಡವಾಹನನಾದ ನಾರಾಯಣನನ್ನು ಪೂಜಿಸುವ ಮನುಷ್ಯರು ಸಕಲ ಪಾಪಸಮೂಹಗಳನ್ನೂ ನಿಶ್ಶೇಷವಾಗಿ ಕಳೆದುಕೊಂಡು ಅತಿಮಂಗಳಕರವಾದ ವಿಷ್ಣುಲೋಕವನ್ನು ಹೊಂದಿ ಸಂತೋಷಿಸುವರು.

೫೨. ರಾಗಾದಿ ದೋಷಗಳನ್ನು ಬಿಟ್ಟು ಪರಾಪರ ತತ್ವಜ್ಞರಾಗಿ ದೇವಗುರುವಾದ ನಾರಾಯಣನನ್ನು ಯಾವಾಗಲೂ ಧ್ಯಾನಿಸುವ ಮನುಷ್ಯರು ಆ ಧ್ಯಾನದಿಂದ ತಮ್ಮ ಪಾಪಗಳನ್ನು ಪರಿಹರಿಸಿಕೊಳ್ಳುವರು. ಅವರು ಪುನಃ ತಾಯಿಯ ಸ್ತನ್ಯಪಾನಮಾಡುವುದಿಲ್ಲ ಎಂದರೆ ಪುನರ್ಜನ್ಮರಹಿತವಾದ ಮುಕ್ತಿಸ್ಥಾನವನ್ನು ಹೊಂದುತ್ತಾರೆಂದು ತಾತ್ಪರ್ಯ.

೫೩. ಹರಿಕಥೆಯ ಶ್ರವಣದಿಂದ ದೋಷಗಳನ್ನು ಹೋಗಲಾಡಿಸಿಕೊಂಡು, ಕೃಷ್ಣನ ಪಾದಕಮಲ ಭಜನೆಮಾಡುವುದರಲ್ಲಿ ಆಸಕ್ತವಾದ ಬುದ್ಧಿಯುಳ್ಳ ಮನುಷ್ಯರು ತಮ್ಮ ಶರೀರಸಂಬಂಧ, ಸಂಭಾಷಣೆ ಮುಂತಾದುವುಗಳಿಂದ ಲೋಕಗಳನ್ನು ಪವಿತ್ರಮಾಡುತ್ತಾರೆ. ಆದುದರಿಂದ ಹರಿಯೇ ಪೂಜ್ಯನು.

**ಹರಿಪೂಜಾಪರಾ ಯತ್ರ ಮಹಾಂತಶ್ಶುದ್ಧಬುದ್ಧಯಃ ।**
**ತತ್ರೈವ ಸಕಲಂ ಭದ್ರಂ ಯಥಾ ನಿಮ್ನೇ ಜಲಂ ದ್ವಿಜ ॥ ೫೪ ॥**

**ಹರಿರೇವ ಪರೋ ಬಂಧುರ್ಹರಿರೇವ ಪರಾ ಗತಿಃ ।**
**ಹರಿರೇವ ತತಃ ಪೂಜ್ಯೋ ಯತಶ್ಚೈತನ್ಯಕಾರಣಂ ॥ ೫೫ ॥**

**ಸ್ವರ್ಗಾಪವರ್ಗಫಲದಂ ಸದಾನಂದಂ ನಿರಾಮಯಂ ।**
**ಪೂಜಯಸ್ವ ಮುನಿಶ್ರೇಷ್ಠ ಪರಂ ಶ್ರೇಯೋ ಭವಿಷ್ಯತಿ ॥ ೫೬ ॥**

**ಪೂಜಯಂತಿ ಹರಿಂ ಯೇ ತು ನಿಷ್ಕಾಮಾಃ ಶುದ್ಧಮಾನಸಾಃ ।**
**ತೇಷಾಂ ವಿಷ್ಣುಃ ಪ್ರಸನ್ನಾತ್ಮಾ ಸರ್ವಾನ್ಕಾಮಾನ್ಪ್ರಯಚ್ಛತಿ ॥ ೫೭ ॥**

**ಯಸ್ತ್ವೇತಚ್ಛೃಣುಯಾದ್ವಾಪಿ ಪಠೇದ್ವಾ ಸುಸಮಾಹಿತಃ ।**
**ಸ ಪ್ರಾಪ್ನೋತ್ಯಶ್ವಮೇಧಸ್ಯ ಫಲಂ ಮುನಿವರೋತ್ತಮ ॥ ೫೮ ॥**

---

೫೪. ದ್ವಿಜನೇ! ತಗ್ಗಿನಪ್ರದೇಶಕ್ಕೆ ನೀರು ಸ್ವತಃ ಹರಿದುಹೋಗುವಂತೆ ಹರಿಪೂಜೆಯಲ್ಲಿ ನಿರತರು, ನಿರ್ಮಲಾಂತಃಕರಣರೂ ಆಗಿರುವ ಮಹಾತ್ಮರು ಇರುವೆಡೆಯಲ್ಲಿಯೇ ಸಕಲ ಮಂಗಳವೂ ಬರುತ್ತದೆ.

೫೫. ಹರಿಯೇ ಉತ್ತಮಬಂಧುವು, ಹರಿಯೇ ಉತ್ಕೃಷ್ಟವಾದ ಗಮ್ಯಸ್ಥಾನವು, ಅವನೇ ಜ್ಞಾನಪ್ರದನು, ಆದುದರಿಂದ ಹರಿಯೇ ಪೂಜ್ಯನು.

೫೬. ಮುನಿವರ್ಯನೇ! ಸ್ವರ್ಗ ಮೋಕ್ಷಗಳೆಂಬ ಫಲವನ್ನು ಕೊಡುವವನು, ನಿರ್ದುಃಖಾನಂದರೂಪನು, ದೋಷರಹಿತನೂ ಆಗಿರುವ ಹರಿಯನ್ನು ಪೂಜಿಸುವವರಿಗೆ ಅವನು ಪ್ರಸನ್ನನಾಗಿ ಇಷ್ಟಾರ್ಥಗಳನ್ನೆಲ್ಲಾ ಕೊಡುವನು.

೫೮. ಮುನಿಪ್ರವರನೇ! ಈ ಉಪಾಖ್ಯಾನವನ್ನು ಸಮಾಧಾನ ಮನಸ್ಸಿನಿಂದ ಶ್ರವಣ ಪಠನ ಮಾಡುವವರಿಗೆ ಅಶ್ವಮೇಧಯಜ್ಞದ ಫಲವು ಲಭಿಸುತ್ತದೆ.

**ಇತ್ಯೇತತ್ತೇ ಸಮಾಖ್ಯಾತಂ ಹರಿಪೂಜಾಫಲಂ ದ್ವಿಜ ।**
**ಸಂಕೋಚವಿಸ್ತಾರಾಭ್ಯಾಂ ತು ಕಿಮನ್ಯತ್ಕಥಯಾಮಿ ತೇ ॥ ೫೯ ॥**

**ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ ಪ್ರಥಮಪಾದೇ ವಿಷ್ಣುಮಾಹಾತ್ಮ್ಯೇ ಚತ್ವಾರಿಂಶೋಽಧ್ಯಾಯಃ**

---

೫೯. ಈ ಪ್ರಕಾರ ನಿನಗಾಗಿ ಹರಿಪೂಜೆಯ ಫಲವು ಸಂಕೋಚ ವಿಸ್ತಾರಗಳಿಂದ ಹೇಳಲ್ಪಟ್ಟಿತು. ಇನ್ನೇನನ್ನು ಹೇಳಲಿ?

ಇಂತು ಶ್ರೀಬೃಹನ್ನಾರದೀಯಪುರಾಣದೊಳು ಪೂರ್ವಭಾಗ ಪ್ರಥಮಪಾದದಲ್ಲಿ ವಿಷ್ಣುಮಾಹಾತ್ಮ್ಯೆಯ ಪ್ರಕರಣದಲ್ಲಿ ನಲವತ್ತನೆಯ ಅಧ್ಯಾಯವು ಮುಗಿದುದು.

## ಕಥಾಸಾರಾಂಶ

ವೈವಸ್ವತಮನ್ವಂತರದಲ್ಲಿ ಇಂದ್ರಬೃಹಸ್ಪತಿಗಳಿಗೆ ನಡೆದ ಸಂವಾದವು ಉಕ್ತವಾಗಿದೆ. ಒಂದಾನೊಂದುದಿನ ಇಂದ್ರನು ಬೃಹಸ್ಪತ್ಯಾಚಾರ್ಯರನ್ನು ಕುರಿತು ಹಿಂದಿನ ಬ್ರಹ್ಮಕಲ್ಪದಲ್ಲಿ ಸೃಷ್ಟಿಪ್ರಕಾರವು ಎಂತಹುದು? ಆಗ ಇಂದ್ರರು, ದೇವತೆಗಳೂ ಯಾರು? ಎಂಬುದಾಗಿ ಪ್ರಶ್ನೆ ಮಾಡಿದನು. ಬೃಹಸ್ಪತ್ಯಾಚಾರ್ಯರು ಈ ವಿಷಯವು ನನಗೆ ತಿಳಿಯದು. ಈ ಸ್ವರ್ಗಲೋಕದಲ್ಲಿ ಸುಧರ್ಮನೆಂಬ ಒಬ್ಬ ಬ್ರಾಹ್ಮಣನಿರುವನು. ಆತನಿಗೆ ಇವೆಲ್ಲಾ ತಿಳಿದಿದೆ ಎಂದು ಹೇಳಿದನು. ಕೂಡಲೇ ಗುರುಗಳ ಸಹಿತವಾಗಿ ಇಂದ್ರನು ಸುಧರ್ಮನ ಮನೆಗೆ ಬಂದು ಅವನ ವೈಭವವನ್ನು ನೋಡಿ ಆಶ್ಚರ್ಯಚಕಿತನಾಗಿ ಹಿಂದಿನ ಸೃಷ್ಟಿ ಮುಂತಾದ ವಿಷಯದಲ್ಲಿ ಪ್ರಶ್ನೆಮಾಡಿದನು. ಸುಧರ್ಮನು ನಕ್ಕು ಚತುರ್ದಶಮನ್ವಂತರಗಳು, ಅವುಗಳಲ್ಲಿ ದೇವತೆಗಳು, ಇಂದ್ರರು ಇವುಗಳನ್ನೆಲ್ಲಾ ವಿಸ್ತಾರವಾಗಿ ಹೇಳಿ ತನ್ನ ಪೂರ್ವಜನ್ಮ ವೃತ್ತಾಂತವನ್ನು ಸಹ ತಿಳಿಸಿ ತನಗೆ ಐಶ್ವರ್ಯ ಬಂದ ಬಗೆಯನ್ನು ವಿವರಿಸಿ ಹೇಳಿದನು. ಸುಧರ್ಮನು ಹಿಂದೆ ಹದ್ದಾಗಿ ಹುಟ್ಟಿ ವಿಷ್ಣುದೇವಾಲಯದ ಪ್ರಾಕಾರದ ಮೇಲೆ ಕುಳಿತಿರುವಾಗ ಒಂದುದಿನ ಸಾಯಂಕಾಲ ಅದನ್ನು ಒಬ್ಬ ಬೇಡನು ಶಸ್ತ್ರದಿಂದ ಹೊಡೆದನು. ಅದು ದೇವಾಲಯದ ಅಂಗಳದಲ್ಲಿ ಬಿದ್ದಿತು. ಅಲ್ಲಿದ್ದ ನಾಯಿಯು ಮಾಂಸದ ಆಶೆಯಿಂದ ಸಾಯುತ್ತಿರುವ ಹದ್ದನ್ನು ಬಾಯಿಯಲ್ಲಿ ಕಚ್ಚಿಕೊಂಡಿತು. ಮಾಂಸದ ಆಶೆಯಿಂದ ಇತರ ನಾಯಿಗಳು ಅದನ್ನು ಅಟ್ಟಿಸಿಕೊಂಡು ಬರಲು ಅದು ಹಾಗೆಯೇ ದೇವಾಲಯವನ್ನು ಪ್ರದಕ್ಷಿಣಾಕಾರವಾಗಿ ಸುತ್ತಿತು. ತಕ್ಷಣದಲ್ಲಿಯೇ ನಾನು ಸಾಯಲು ವಿಷ್ಣುದೂತರು ಬಂದು ನನ್ನನ್ನು ವಿಷ್ಣುಲೋಕಕ್ಕೆ ಕರೆದುಕೊಂಡು ಹೋದರು. ಅಲ್ಲಿ ಬಹುಕಾಲವಿದ್ದು ಇಲ್ಲಿಗೆ ಬಂದಿರುವೆನು. ಈ ನನ್ನ ಐಶ್ವರ್ಯವೆಲ್ಲವೂ ಆ ಪ್ರದಕ್ಷಿಣೆಯ ಮಹಿಮೆಯು. ಆದುದರಿಂದ ನೀನೂ ವಿಷ್ಣುಪೂಜಾನಿರತನಾಗು ಎಂದು ಸುಧರ್ಮನು ಇಂದ್ರನಿಗೆ ಹೇಳಿದನು. ಈ ಕಥೆಯನ್ನು ಶ್ರವಣ, ಪಠನ ಮಾಡುವವರಿಗೆ ಅಶ್ವಮೇಧಯಜ್ಞದ ಫಲವು ಬರುತ್ತದೆಂದು ಹೇಳಿ ಈ ಅಧ್ಯಾಯವು ಮುಕ್ತಾಯಗೊಂಡಿದೆ.

# ಏಕಚತ್ವಾರಿಂಶೋಽಧ್ಯಾಯಃ

---

ನಾರದ ಉವಾಚ

ಆಖ್ಯಾತಂ ಭವತಾ ಸರ್ವಂ ಮುನೇ ತತ್ವಾರ್ಥಕೋವಿದ ।
ಇದಾನೀಂ ಶ್ರೋತುಮಿಚ್ಛಾಮಿ ಯುಗಾನಾಂ ಸ್ಥಿತಿಲಕ್ಷಣಂ ॥ ೧ ॥

ಸನಕ ಉವಾಚ

ಸಾಧು ಸಾಧು ಮಹಾಪ್ರಾಜ್ಞ ಮುನೇ ಲೋಕೋಪಕಾರಕ ।
ಯುಗಧರ್ಮಾನ್ಪ್ರವಕ್ಷ್ಯಾಮಿ ಸರ್ವಲೋಕೋಪಕಾರಕಾ ॥ ೨ ॥

ಧರ್ಮೋ ವಿವೃದ್ಧಿಮಾಯಾತಿ ಕಾಲೇ ಕಸ್ಮಿಂಶ್ಚಿದುತ್ತಮ ।
ತಥಾ ವಿನಾಶಮಾಯಾತಿ ಧರ್ಮ ಏವ ಮಹೀತಲೇ ೩ ॥

---

## ನಲವತ್ತೊಂದನೆಯ ಅಧ್ಯಾಯವು

೧. ನಾರದನು ಹೇಳಿದನು–ತತ್ವಾರ್ಥಜ್ಞಾನಿಯಾದ ಸನಕಮುನಿಯೇ! ನಿನ್ನಿಂದ ಸಕಲವೂ ಹೇಳಲ್ಪಟ್ಟಿತು. ಈಗ ಯುಗಗಳ ಸ್ಥಿತಿ ಪ್ರಕಾರವನ್ನು ತಿಳಿದುಕೊಳ್ಳಲು ಅಪೇಕ್ಷೆಯಾಗಿದೆ.

೨. ಸನಕನು ಹೇಳಿದನು—ಮಹಾಜ್ಞಾನಿಯು, ಲೋಕೋಪಕಾರ ಕರ್ತನೂ ಆಗಿರುವ ನಾರದನೇ! ಒಳ್ಳೆಯದು, ಒಳ್ಳೆಯದು. ಲೋಕಕ್ಕೆಲ್ಲಾ ಹಿತ ಕರವಾದ ಯುಗಧರ್ಮಗಳನ್ನು ಹೇಳುತ್ತೇನೆ.

೩. ನಾರದ! ಭೂಲೋಕದಲ್ಲಿ ಒಂದುಕಾಲದಲ್ಲಿ ಧರ್ಮವು ಅಭಿವೃದ್ಧಿ ಯಾಗುತ್ತದೆ; ಇನ್ನೊಂದು ಕಾಲದಲ್ಲಿ ಕ್ಷೀಣವಾಗುತ್ತದೆ.

ಕೃತಂ ತ್ರೇತಾ ದ್ವಾಪರಂ ಚ ಕಲಿಶ್ಚೇತಿ ಚತುರ್ಯುಗಂ ।
ದಿವ್ಯೈರ್ದ್ವಾದಶಭಿರ್ಜ್ಞೇಯಂ ಸಹಸ್ರೈಸ್ತಚ್ಚ ಸತ್ತಮ ॥ ೪ ॥

ಸಂಧ್ಯಾಸಂಧ್ಯಾಂಶಯುಕ್ತಾನಿ ಯುಗಾನಿ ಸದೃಶಾನಿ ವೈ ।
ಕಾಲತೋ ವೇದಿತವ್ಯಾನಿ ಇತ್ಯುಕ್ತಂ ತತ್ತ್ವದರ್ಶಿಭಿಃ ॥ ೫ ॥

ಆದ್ಯಂ ಕೃತಯುಗಂ ಪ್ರಾಹುಸ್ತತಸ್ತ್ರೇತಾಭಿಧಾಯಿನಂ ।
ತತಶ್ಚ ದ್ವಾಪರಂ ಪ್ರಾಹುಃ ಕಲಿಮಂತ್ಯಂ ವಿದುಃ ಕ್ರಮಾತ್ ॥ ೬ ॥

ದೇವದಾನವಗಂಧರ್ವಾ ಯಕ್ಷರಾಕ್ಷಸಪನ್ನಗಾಃ ।
ನಾಸನ್ಕೃತಯುಗೇ ವಿಪ್ರ ಸರ್ವೇ ದೇವಸಮಾಃ ಸ್ಮೃತಾಃ ॥ ೭ ॥

ಸರ್ವೇ ಹೃಷ್ಟಾಶ್ಚ ಧರ್ಮಿಷ್ಠಾ ನ ತತ್ರ ಕ್ರಯವಿಕ್ರಯೌ ।
ವೇದಾನಾಂ ಚ ವಿಭಾಗಶ್ಚ ನ ಯುಗೇ ಕೃತಸಂಜ್ಞಕೇ ॥ ೮ ॥

---

೪. ಕೃತ, ತ್ರೇತಾ, ದ್ವಾಪರ, ಮತ್ತು ಕಲಿ ಎಂಬುದಾಗಿ ಯುಗಗಳು ನಾಲ್ಕು. ಸಾಧೂತ್ತಮ! ದೇವಮಾನದ ಹನ್ನೆರಡು ಸಹಸ್ರ ವರ್ಷಗಳು ಮನುಷ್ಯರ ಚತುರ್ಯುಗವೆಂದು ತಿಳಿಯಬೇಕು.

೫. ಸಂಧಿ, ಸಂಧ್ಯಂಶ ಇವುಗಳಿಂದ ಸಹಿತವಾಗಿ ನಾಲ್ಕು ಯುಗಗಳೂ ಕಾಲತಃ ಸಮಾನಗಳೆಂದು ತಿಳಿಯಬೇಕು ಎಂಬುದಾಗಿ ತತ್ತ್ವಜ್ಞಾನಿಗಳಿಂದ ಉಕ್ತವಾಗಿದೆ.

೬. ಮೊದಲನೆಯದು ಕೃತಯುಗ, ಅನಂತರ ತ್ರೇತಾಯುಗ, ತರುವಾಯ ದ್ವಾಪರ, ಕಲಿಯುಗವು ಕೊನೆಯದು. ಈ ರೀತಿ ಕ್ರಮವಾಗಿ ನಾಲ್ಕು ಯುಗಗಳು ಬರುವುವು.

೭. ಎಲೈ ಬ್ರಾಹ್ಮಣನಾದ! ನಾರದನೇ! ಕೃತಯುಗದಲ್ಲಿ ದೇವ, ದಾನವ, ಗಂಧರ್ವ, ಯಕ್ಷ, ರಾಕ್ಷಸ, ಪನ್ನಗ ಎಂಬೀ ವಿಭಾಗಗಳಿರಲಿಲ್ಲ. ಸರ್ವರೂ ದೇವಸಮಾನರಾಗಿದ್ದರು.

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಃ ಸ್ವಾಚಾರತತ್ಪರಾಃ ।
ಸದಾ ನಾರಾಯಣಪರಾಸ್ತಪೋಧ್ಯಾನಪರಾಯಣಾಃ ॥ ೯ ॥

ಕಾಮಾದಿ ದೋಷನಿರ್ಮುಕ್ತಾಃ ಶಮಾದಿಗುಣತತ್ಪರಾಃ ।
ಧರ್ಮಸಾಧನಚಿತ್ತಾಶ್ಚ ಗತಾಸೂಯಾ ಅದಾಂಭಿಕಾಃ ॥ ೧೦ ॥

ಸತ್ಯವಾಕ್ಯರತಾಸ್ಸರ್ವೇ ಚತುರಾಶ್ರಮಧರ್ಮಿಣಃ ।
ವೇದಾಧ್ಯಯನಸಂಪನ್ನಾಃ ಸರ್ವಶಾಸ್ತ್ರವಿಚಕ್ಷಣಾಃ ॥ ೧೧ ॥

ಚತುರಾಶ್ರಮಯುಕ್ತೇನ ಕರ್ಮಣಾ ಕಾಲಯೋನಿನಾ ।
ಅಕಾಮಫಲಸಂಯೋಗಾಃ ಪ್ರಯಾಂತಿ ಪರಮಾಂ ಗತಿಂ ॥ ೧೨ ॥

ನಾರಾಯಣಃ ಕೃತಯುಗೇ ಶುಕ್ಲವರ್ಣಃ ಸುನಿರ್ಮಲಃ ।
ತ್ರೇತಾಧರ್ಮಾನ್ಪ್ರವಕ್ಷ್ಯಾಮಿ ಶೃಣುಷ್ವ ಸುಸಮಾಹಿತಃ ॥ ೧೩ ॥

---

೮. ಆ ಕೃತಯುಗದಲ್ಲಿ ಎಲ್ಲರೂ ಸಂತೋಷಚಿತ್ತರೂ, ಧರ್ಮಿಷ್ಠರೂ ಆಗಿದ್ದರು. ಕ್ರಯ, ವಿಕ್ರಯ ಮತ್ತು ವೇದವಿಭಾಗ ಇವುಗಳು ಆಗ ಇರಲಿಲ್ಲ.

೯-೧೨. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ಜಾತಿಯವರೂ ತಮ್ಮತಮ್ಮ ಜಾತಿಧರ್ಮದಲ್ಲಿ ನಿರತರು, ಸರ್ವದಾ ನಾರಾಯಣ ನಿಷ್ಠರಾಗಿ ತಪಸ್ಸು, ಧ್ಯಾನ ಇವುಗಳಲ್ಲಿಯೇ ಆಸಕ್ತರು, ಧರ್ಮಸಾಧನಮನಸ್ಕರು, ಅಸೂಯೆಯಿಲ್ಲದವರು, ಜಂಭವಿಲ್ಲದವರು, ನಿಜವನ್ನೇ ಹೇಳುವವರು, ಎಲ್ಲರೂ ನಾಲ್ಕು ಆಶ್ರಮಧರ್ಮಗಳನ್ನು ಅನುಷ್ಠಾನಮಾಡುವವರು, ವೇದಾಧ್ಯಯನ ಸಂಪನ್ನರು, ಸಕಲಶಾಸ್ತ್ರತತ್ವಜ್ಞರೂ ಆಗಿ ಆಯಾಯಾ ಕಾಲಗಳಲ್ಲಿ ಪ್ರಾಪ್ತವಾಗುವ ನಾಲ್ಕು ಆಶ್ರಮಗಳ ವಿಹಿತಕರ್ಮಗಳನ್ನು ಫಲಾಶೆಯಿಲ್ಲದೇ ಮಾಡುತ್ತಾ ಉತ್ತಮಗತಿಯನ್ನು ಹೊಂದುತ್ತಾರೆ.

೧೩. ಕೃತಯುಗದಲ್ಲಿ ನಾರಾಯಣನು ಅತ್ಯಂತ ಪರಿಶುದ್ಧವಾದ ಬಿಳಿಯಬಣ್ಣದಿಂದ ಕೂಡಿರುವನು. ತ್ರೇತಾಯುಗದ ಧರ್ಮಗಳನ್ನು ಹೇಳುವೆನು ಸಮಾಧಾನಚಿತ್ತದಿಂದ ಕೇಳು.

ಧರ್ಮಃ ಪಾಂಡುರತಾಂ ಯಾತಿ ತ್ರೇತಾಯಾಂ ಮುನಿಸತ್ತಮ ।
ಹರಿಸ್ತು ರಕ್ತತಾಂ ಯಾತಿ ಕಿಂಚಿತ್ಕ್ಲೇಶಾನ್ವಿತಾ ಜನಾಃ ॥ ೧೪ ॥

ಕ್ರಿಯಾಯೋಗರತಾಃ ಸರ್ವೇ ಯಜ್ಞಕರ್ಮಸುನಿಷ್ಠಿತಾಃ ।
ಸತ್ಯವ್ರತಾ ಧ್ಯಾನಪರಾಃ ಸದಾ ಧ್ಯಾನಪರಾಯಣಾಃ ॥ ೧೫ ॥

ದ್ವಿಪಾದೋ ವರ್ತತೇ ಧರ್ಮೋ ದ್ವಾಪರೇ ಚ ಮುನೀಶ್ವರ ।
ಹರಿಃ ಪೀತತ್ವಮಾಯಾತಿ ವೇದಶ್ಚಾಪಿ ವಿಭಜ್ಯತೇ ॥ ೧೬ ॥

ಅಸತ್ಯನಿರತಶ್ಚಾಪಿ ಕೇಚಿತ್ತತ್ರ ದ್ವಿಜೋತ್ತಮಾಃ ।
ಬ್ರಾಹ್ಮಣಾದ್ಯಾಶ್ಚ ವರ್ಣಾಃ ಸ್ಯುಃ ಕೇಚಿದ್ರಾಗಾದಿದುರ್ಗುಣಾಃ ॥ ೧೭ ॥

ಕೇಚಿತ್ಸ್ವರ್ಗಾಪವರ್ಗಾರ್ಥಂ ವಿಪ್ರ ಯಜ್ಞಾನ್ಪ್ರಕುರ್ವತೇ ।
ಕೇಚಿದ್ಧನಾದಿಕಾಮಾಶ್ಚ ಕೇಚಿತ್ಕಲ್ಮಷಚೇತಸಃ ॥ ೧೮ ॥

---

೧೪. ಮುನಿವರ್ಯ! ತ್ರೇತಾಯುಗದಲ್ಲಿ ಧರ್ಮವು ಸ್ವಲ್ಪ ಹಳದಿಮಿಶ್ರವಾದ ಬಿಳಿಯಬಣ್ಣವಾಗಿರುತ್ತದೆ. ಹರಿಯು ಕೆಂಪು ಬಣ್ಣವನ್ನು ಹೊಂದುವನು. ಜನರು ಸ್ವಲ್ಪ ಕ್ಲೇಶಯುಕ್ತರಾಗುವರು.

೧೫. ಎಲ್ಲರೂ ಕರ್ಮಯೋಗನಿರತರು, ಯಜ್ಞಕರ್ಮಗಳಲ್ಲಿ ನಿಷ್ಠರು, ಸತ್ಯವನ್ನು ಹೇಳುವವರು, ಧ್ಯಾನಪರರು, ಸರ್ವದಾ ಹರಿಧ್ಯಾನನಿರತರೂ ಆಗಿರುವರು.

೧೬. ದ್ವಾಪರಯುಗದಲ್ಲಿ ಧರ್ಮವು ಅರ್ಧಭಾಗವಿರುವುದು. ಹರಿಯು ಹಳದಿ ಬಣ್ಣವನ್ನು ಧರಿಸುವನು. ವೇದವೂ ಸಹ ವಿಭಾಗಿಸಲ್ಪಡುತ್ತದೆ.

೧೭. ಕೆಲವು ದ್ವಿಜರು ಅಸತ್ಯನಿತರಾಗುವರು. ಬ್ರಾಹ್ಮಣ ಮುಂತಾದವರೂ ಸಹ ಕೆಲವರು ರಾಗ ದ್ವೇಷಾದಿ ದುರ್ಗುಣಗಳನ್ನು ಹೊಂದುವರು.

೧೮. ಬ್ರಾಹ್ಮಣನೇ! ಕೆಲವರು ಸ್ವರ್ಗ, ಮೋಕ್ಷಗಳಿಗೋಸ್ಕರ ಯಜ್ಞಗಳನ್ನು ಮಾಡುವರು. ಕಲ್ಮಷಚಿತ್ತರಾದ ಕೆಲವರು ಧನ ಮುಂತಾದವುಗಳಿಗಾಗಿ ಯಜ್ಞಗಳನ್ನು ಮಾಡುವರು.

ಧರ್ಮಾಧರ್ಮೌ ಸಮೌ ಸ್ಯಾತಾಂ ದ್ವಾಪರೇ ವಿಪ್ರಸತ್ತಮ ।
ಅಧರ್ಮಸ್ಯ ಪ್ರಭಾವೇಣ ಕ್ಷೀಯಂತೇ ಚ ಪ್ರಜಾಸ್ತಥಾ ॥ ೧೯ ॥

ಅಲ್ಪಾಯುಷೋ ಭವಿಷ್ಯಂತಿ ಕೇಚಿಚ್ಚಾಪಿ ಮುನೀಶ್ವರ ।
ಕೇಚಿತ್ಪುಣ್ಯರತಾನ್ದೃಷ್ಟ್ವಾ ಅಸೂಯಾಂ ವಿಪ್ರ ಕುರ್ವತೇ ॥ ೨೦ ॥

ಕಲಿಸ್ಥಿತಿಂ ಪ್ರವಕ್ಷ್ಯಾಮಿ ತಚ್ಛೃಣುಷ್ವ ಸಮಾಹಿತಃ ।
ಧರ್ಮಃ ಕಲಿಯುಗೇ ಪ್ರಾಪ್ತೇ ಪಾದೇನೈಕೇನ ವರ್ತತೇ ॥ ೨೧ ॥

ತಾಮಸಂ ಯುಗಮಾಸಾದ್ಯ ಹರಿಃ ಕೃಷ್ಣತ್ವಮೇತಿ ಚ ।
ಯಃ ಕಶ್ಚಿದಪಿ ಧರ್ಮಾತ್ಮಾ ಯಜ್ಞಾಚಾರಾನ್ಕರೋತಿ ಚ ॥ ೨೨ ॥

ಯಃ ಕಶ್ಚಿದಪಿ ಪುಣ್ಯಾತ್ಮಾ ಕ್ರಿಯಾಯೋಗರತೋ ಭವೇತ್ ।
ನರಂ ಧರ್ಮರತಂ ದೃಷ್ಟ್ವಾ ಸರ್ವೇಽಸೂಯಾಂ ಪ್ರಕುರ್ವತೇ ॥ ೨೩ ॥

---

೧೯. ಬ್ರಾಹ್ಮಣೋತ್ತಮನೇ! ದ್ವಾಪರಯುಗದಲ್ಲಿ ಧರ್ಮ, ಅಧರ್ಮ ಇವುಗಳು ಸಮಾನವಾಗುವುವು. ಅಧರ್ಮಪ್ರಭಾವದಿಂದ ಪ್ರಜೆಗಳು ನಾಶವಾಗುತ್ತಾರೆ

೨೦. ಬ್ರಾಹ್ಮಣನಾದ ಮುನೀಶ್ವರನೇ! ಕೆಲವರು ಅಲ್ಪಾಯುಷ್ಕರಾಗುವರು. ಕೆಲವರು ಪುಣ್ಯಕಾರ್ಯದಲ್ಲಿ ನಿರತರನ್ನು ನೋಡಿ ಹೊಟ್ಟೆಕಿಚ್ಚುಪಡುವರು.

೨೧. ಕಲಿಯುಗದ ವಿದ್ಯಮಾನವನ್ನು ಹೇಳುವೆನು ಸಮಾಧಾನದಿಂದ ಅದನ್ನು ಕೇಳು. ಕಲಿಯುಗದಲ್ಲಿ ಧರ್ಮವು ಕಾಲುಭಾಗ ಮಾತ್ರವೇ ಉಳಿದಿರುತ್ತದೆ.

೨೨. ತಮೋಗುಣಮಯವಾದ ಕಲಿಯುಗದಲ್ಲ ಹರಿಯು ಕೃಷ್ಣವರ್ಣವನ್ನು ಹೊಂದುವನು. ಯಾವನಾದರೊಬ್ಬ ಧರ್ಮಾತ್ಮನು ಯಜ್ಞ ಮತ್ತು ಸದಾಚಾರಗಳನ್ನು ಮಾಡುವನು.

೨೩. ಯಾವನಾದರೊಬ್ಬ ಪುಣ್ಯಾತ್ಮನು ಕರ್ಮಯೋಗನಿರತನಾಗುವನು. ಧರ್ಮಕಾರ್ಯದಲ್ಲಿ ನಿರತನಾದ ಮನುಷ್ಯನನ್ನು ನೋಡಿ ಎಲ್ಲರೂ ಹೊಟ್ಟೇಕಿಚ್ಚುಪಡುವರು.

**ವ್ರತಾಚಾರಾಃ ಪ್ರಣಶ್ಯಂತಿ ಜ್ಞಾನಯಜ್ಞಾದಯಸ್ತಥಾ ।**
**ಉಪದ್ರವಾ ಭವಿಷ್ಯಂತಿ ಹ್ಯಧರ್ಮಸ್ಯ ಪ್ರವರ್ತನಾತ್ ॥ ೨೪ ॥**

**ಅಸೂಯಾನಿರತಾಃ ಸರ್ವೇ ದಂಭಾಚಾರಪರಾಯಣಾಃ ।**
**ಪ್ರಜಾಶ್ಚಾಲ್ಪಾಯುಷಃ ಸರ್ವಾ ಭವಿಷ್ಯಂತಿ ಕಲೌ ಯುಗೇ ॥ ೨೫ ॥**

**ನಾರದ ಉವಾಚ**

**ಯುಗಧರ್ಮಾಃ ಸಮಾಖ್ಯಾತಾಸ್ತ್ವಯಾ ಸಂಕ್ಷೇಪತೋ ಮುನೇ ।**
**ಕಲಿಂ ವಿಸ್ತರತೋ ಬ್ರೂಹಿ ತ್ವಂ ಹಿ ಧರ್ಮವಿದಾಂ ವರಃ ॥ ೨೬ ॥**

**ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಶೂದ್ರಾಶ್ಚ ಮುನಿಸತ್ತಮ**
**ಕಿಮಾಹಾರಾಃ ಕಿಮಾಚಾರಾಃ ಭವಿಷ್ಯಂತಿ ಕಲೌ ಯುಗೇ ॥ ೨೭ ॥**

**ಸನಕ ಉವಾಚ**

**ಶೃಣುಷ್ವ ಮುನಿಶಾರ್ದೂಲ ಸರ್ವಲೋಕೋಪಕಾರಕ ।**
**ಕಲಿಧರ್ಮಾನ್ಪ್ರವಕ್ಷ್ಯಾಮಿ ವಿಸ್ತರೇಣ ಯಥಾತಥಂ ॥ ೨೮ ॥**

---

೨೪. ವ್ರತ, ಧರ್ಮ, ಜ್ಞಾನ, ಯಜ್ಞ ಮುಂತಾದುವುಗಳು ನಾಶವಾಗುತ್ತವೆ. ಅಧರ್ಮಪ್ರವರ್ತನೆಯಿಂದ ತೊಂದರೆಗಳೂ ಉಂಟಾಗುವುವು.

೨೫. ಕಲಿಯುಗದಲ್ಲಿ ಪ್ರಜೆಗಳು ಹೊಟ್ಟೇಕಿಚ್ಚು, ಡಂಭಾಚಾರ ಇವುಗಳಲ್ಲಿ ನಿರತರಾಗಿ ಅಲ್ಪಾಯುಷ್ಕರಾಗಿ ಹೋಗುವರು.

೨೬. ನಾರದನು ಹೇಳಿದನು–ಸನಕಮುನಿಯೇ! ಸಂಕ್ಷೇಪವಾಗಿ ಯುಗಧರ್ಮಗಳು ಉಕ್ತವಾದುವು. ನೀನು ಧರ್ಮಜ್ಞಾನಿಗಳಲ್ಲಿ ಉತ್ತಮನು. ಕಲಿಧರ್ಮವನ್ನು ವಿಸ್ತಾರವಾಗಿ ಹೇಳು.

೨೭. ಮುನಿವರ್ಯನೇ! ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಮತ್ತು ಶೂದ್ರರು ಕಲಿಯುಗದಲ್ಲಿ ಯಾವ ಆಹಾರವನ್ನು ತಿನ್ನುವರು? ಯಾವ ಧರ್ಮವನ್ನಾಚರಿಸುವರು? ಇವುಗಳನ್ನು ವಿಶದವಾಗಿ ಹೇಳು.

೨೮. ಸನಕನು ಹೇಳಿದನು—ಲೋಕಕ್ಕೆಲ್ಲಾ ಉಪಕಾರಮಾಡುವ ಮುನಿಶ್ರೇಷ್ಠನೇ! ಕಲಿಧರ್ಮಗಳನ್ನು ಯಥಾವತ್ತಾಗಿ ವಿಸ್ತರಿಸಿ ಹೇಳುವೆನು ಕೇಳು.

**ಸರ್ವೇ ಧರ್ಮಾ ವಿನಶ್ಯಂತಿ ಕೃಷ್ಣೇ ಕೃಷ್ಣತ್ವಮಾಗತೇ ।**
**ತಸ್ಮಾತ್ಕಲಿರ್ಮಹಾಘೋರಃ ಸರ್ವಪಾತಕಸಂಕರಃ ॥ ೨೯ ॥**

**ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾ ಧರ್ಮಪರಾಙ್ಮುಖಾಃ ।**
**ಘೋರೇ ಕಲಿಯುಗೇ ಪ್ರಾಪ್ತೇ ದ್ವಿಜಾ ವೇದಪರಾಙ್ಮುಖಾಃ ॥ ೩೦ ॥**

**ವ್ಯಾಜಧರ್ಮರತಾಸ್ಸರ್ವೇ ಅಸೂಯಾನಿರತಾಸ್ತಥಾ ।**
**ವೃಥಾಽಹಂಕಾರದುಷ್ಟಾಶ್ಚ ಸತ್ಯಹೀನಾಶ್ಚ ಪಂಡಿತಾಃ ॥ ೩೧ ॥**

**ಅಹಮೇವಾಧಿಕ ಇತಿ ಸರ್ವೇಽಪಿ ವಿವದಂತಿ ಚ ।**
**ಅಧರ್ಮಲೋಲುಪಾಃ ಸರ್ವೇ ತಥಾ ವೈತಂಡಿಕಾ ನರಾಃ ॥ ೩೨ ॥**

**ಅತಃ ಸ್ವಲ್ಪಾಯುಷಃ ಸರ್ವೇ ಭವಿಷ್ಯಂತಿ ಕಲೌ ಯುಗೇ ।**
**ಅಲ್ಪಾಯುಷ್ಟ್ವಾನ್ಮನುಷ್ಯಾಣಾಂ ನ ವಿದ್ಯಾಗ್ರಹಣಂ ದ್ವಿಜ ॥ ೩೩ ॥**

---

೨೯. ಕಾಲಬಲದಿಂದ ಕೃಷ್ಣನು ಕೃಷ್ಣತ್ವ (ಕಪ್ಪುಬಣ್ಣ)ವನ್ನು ಹೊಂದಲು ಧರ್ಮಗಳೆಲ್ಲಾ ಹಾಳಾಗುತ್ತವೆ. ಆದಕಾರಣ ಕಲಿಯುಗವು ಸಕಲ ಪಾಪಗಳೂ ಒಟ್ಟಾಗಿ ಸೇರಿರುವ ಮಹಾಭಯಂಕರಕಾಲವು.

೩೦. ಉಗ್ರಕಲಿಯುಗವು ಬಂದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಇವರು ವಿಹಿತಧರ್ಮವನ್ನು ಬಿಡುವರು. ದ್ವಿಜರು ವೇದವನ್ನು ಉದಾಸೀನಮಾಡುವರು.

೩೧. ಎಲ್ಲರೂ ಕಪಟಧರ್ಮಪರರು, ಹೊಟ್ಟೇಕಿಚ್ಚುಪಡುವವರೂ ಆಗುವರು. ಪಂಡಿತರು ಸುಮ್ಮನೆ ಗರ್ವಪಡುತ್ತಾ ದುಷ್ಟರಾಗಿ ಸತ್ಯಮಾರ್ಗವನ್ನು ಬಿಡುವರು.

೩೨. ನಾನೇ ದೊಡ್ಡವನೆಂದು ಎಲ್ಲರೂ ಜಗಳವಾಡುವರು. ಎಲ್ಲಾ ಮನುಷ್ಯರೂ ಅಧರ್ಮದಲ್ಲಿ ಆಸಕ್ತರಾಗಿ ವಿತಂಡಾವಾದವನ್ನು ಮಾಡುವರು.

೩೩. ಆದ್ದರಿಂದ ಕಲಿಯುಗದಲ್ಲಿ ಎಲ್ಲರೂ ಅಲ್ಪಾಯುಸ್ಸುಳ್ಳವರಾಗುವರು. ದ್ವಿಜನೇ! ಆಯುಸ್ಸೇ ಕಡಿಮೆಯಾಗಿರುವುದರಿಂದ ಮನುಷ್ಯರಿಗೆ ವಿದ್ಯಾಧ್ಯಯನವೇ ಆಗುವುದಿಲ್ಲ.

ವಿದ್ಯಾಗ್ರಹಣಶೂನ್ಯತ್ವಾದಧರ್ಮೋ ವರ್ತತೇ ಪುನಃ ।
ವ್ಯುತ್ಕ್ರಮೇಣ ಪ್ರಜಾಃ ಸರ್ವಾ ಮ್ರಿಯಂತೇ ಪಾಪತತ್ಪರಾಃ ॥ ೩೪ ॥

ಬ್ರಾಹ್ಮಣಾದ್ಯಾಸ್ತಥಾ ವರ್ಣಾ ಸಂಕೀರ್ಯಂತೇ ಪರಸ್ಪರಂ ।
ಕಾಮಕ್ರೋಧಪರಾ ಮೂಢಾ ವೃಥಾ ಸಂತಾಪಪೀಡಿತಾಃ ॥ ೩೫ ॥

ಶೂದ್ರತುಲ್ಯಾ ಭವಿಷ್ಯಂತಿ ಸರ್ವೇ ವರ್ಣಾಃ ಕಲೌ ಯುಗೇ ।
ಉತ್ತಮಾ ನೀಚತಾಂ ಯಾಂತಿ ನೀಚಾಶ್ಚೋತ್ತಮತಾಂ ತಥಾ ॥ ೩೬ ॥

ರಾಜಾನೋ ದ್ರವ್ಯನಿರತಾಸ್ತಥಾ ಹ್ಯನ್ಯಾಯವರ್ತಿನಃ ।
ಪೀಡಯಂತಿ ಪ್ರಜಾಶ್ಚೈವ ಕರೈರತ್ಯರ್ಥಯೋಜಿತೈಃ ॥ ೩೭ ॥

ಶವವಾಹಾ ಭವಿಷ್ಯಂತಿ ಶೂದ್ರಾಣಾಂ ಚ ದ್ವಿಜಾತಯಃ ।
ಧರ್ಮಸ್ತ್ರಿಯಂ ನ ಗಚ್ಛಂತಿ ಪತಯೋ ಜಾರಧರ್ಮಿಣಃ ॥ ೩೮ ॥

---

೩೪. ವಿದ್ಯಾಧ್ಯಯನವಿಲ್ಲದಿರುವುದರಿಂದ ಪುನಃ ಅಧರ್ಮವೇ ಹಿಂಬಾಲಿಸುವುದು. ಸಕಲ ಪ್ರಜೆಗಳೂ ಪಾಪಕೃತ್ಯಮಾಡುತ್ತಾ ಕ್ರಮತಪ್ಪಿ ಸಾಯುವರು. (ದೊಡ್ಡವರು ಮೊದಲು, ಚಿಕ್ಕವರು ಅನಂತರ ಸಾಯುವರು).

೩೫. ಬ್ರಾಹ್ಮಣಾದಿ ವರ್ಣಗಳು ಪರಸ್ಪರವಾಗಿ ಸಂಕೀರ್ಣವಾಗುತ್ತವೆ. ಅಜ್ಞರು, ಕಾಮ ಕ್ರೋಧಪರರೂ ಆಗಿ ಸುಮ್ಮನೆ ದುಃಖದಿಂದ ಬಳಲುವರು.

೩೬. ಕಲಿಯುಗದಲ್ಲಿ ಎಲ್ಲಾ ವರ್ಣದವರೂ ಶೂದ್ರರಿಗೆ ಸಮಾನರಾಗುವರು. ಉತ್ತಮರು ನೀಚರಾಗುವರು. ನೀಚರು ಉತ್ತಮರಾಗುವರು.

೩೭. ದೊರೆಗಳು ದ್ರವ್ಯಾಶೆಯಿಂದ ಅನ್ಯಾಯಮಾರ್ಗದಲ್ಲಿ ವರ್ತಿಸುತ್ತಾ ಕಂದಾಯ ಮುಂತಾದುವದ್ನು ಹೆಚ್ಚಿಸಿ ಪ್ರಜೆಗಳಿಗೆ ಬಾಧೆಕೊಡುವರು.

೩೮. ದ್ವಿಜರು ಶೂದ್ರರ ಹೆಣವನ್ನು ಹೊರುವರು. ಗಂಡಂದಿರು ಪರಸ್ತ್ರೀಸಂಗಮಾಡುವವರಾಗಿ ಧರ್ಮಪತ್ನಿಯ ಸಂಗೆವನ್ನು ಮಾಡುವುದಿಲ್ಲ.

ದ್ವಿಷಂತಿ ಪಿತರಂ ಪುತ್ರಾ ಭರ್ತಾರಂ ಚ ಸ್ತ್ರಿಯೋಽಖಿಲಾಃ ।
ಪರಸ್ತ್ರೀನಿರತಾಃ ಸರ್ವೇ ಪರದ್ರವ್ಯಪರಾಯಣಾಃ ॥ ೩೯ ॥

ಮತ್ಸ್ಯಾಮಿಷೇಣ ಜೀವಂತಿ ದುಹಂತಿ ಚಾಪ್ಯಜಾವಿಕಾನ್ ।
ಘೋರೇ ಕಲಿಯುಗೇ ವಿಪ್ರ ಸರ್ವೇ ಪಾಪರತಾ ಜನಾಃ ॥ ೪೦ ॥

ಸತಾಮಸೂಯನಿರತಾ ಉಪಹಾಸಂ ಪ್ರಕುರ್ವತೇ ।
ಸರಿತ್ತೀರೇಷು ಕುದ್ದಾಲೈರ್ವಾಪಯಿಷ್ಯಂತಿ ಚೌಷಧೀಃ ॥ ೪೧ ॥

ಪೃಥ್ವೀ ನಿಷ್ಫಲತಾಂ ಯಾತಿ ಉಪ್ತಂ ಬೀಜಂ ವಿನಶ್ಯತಿ ।
ವೇಶ್ಯಾಲಾವಣ್ಯಶೀಲೇಷು ಸ್ಪೃಹಾಂ ಕುರ್ವಂತಿ ಯೋಷಿತಃ ॥ ೪೨ ॥

ಧರ್ಮವಿಕ್ರಯಿಣೋ ವಿಪ್ರಾಃ ಸ್ತ್ರಿಯಶ್ಚ ಭಗವಿಕ್ರಯಾಃ ।
ವೇದವಿಕ್ರಯಕಾಶ್ಚಾನ್ಯೇ ಶೂದ್ರಾಚಾರರತಾ ದ್ವಿಜಾಃ ॥ ೪೩ ॥

---

೩೯. ಮಕ್ಕಳು ತಂದೆಯನ್ನೂ, ಸ್ತ್ರೀಯರೆಲ್ಲಾ ಗಂಡನನ್ನೂ ದ್ವೇಷಿಸುವರು. ಎಲ್ಲರೂ ಪರಸ್ತ್ರೀಲೋಲುಪರು, ಪರದ್ರವ್ಯವನ್ನು ಅಪಹರಿಸುವವರೂ ಆಗುವರು.

೪೦. ಭಯಂಕರ ಕಲಿಯುಗದಲ್ಲಿ ಮೀನನ್ನು, ಮಾಂಸವನ್ನೂ ಸಹ ತಿಂದು ಜೀವಿಸುವರು. ಮೇಕೆ, ಕುರಿ ಇವುಗಳಲ್ಲಿ ಹಾಲುಕರೆಯುವರು. ಈ ರೀತಿಯಾಗಿ ಎಲ್ಲರೂ ಪಾಪಕೃತ್ಯಗಳಲ್ಲಿ ನಿರತರಾಗುವರು.

೪೧. ಸಾಧುಗಳನ್ನು ನೋಡಿ ಹೊಟ್ಟೇಕಿಚ್ಚಿನಿಂದ ಅಪಹಾಸ್ಯಮಾಡುವರು. ನದೀತೀರಗಳಲ್ಲಿ ಕಾಲುವೆಗಳನ್ನು ತೋಡಿ ಅದರಿಂದ ಧಾನ್ಯಗಳನ್ನು ಬೆಳೆಯುವರು.

೪೨. ಭೂಮಿಯು ನಿಷ್ಫಲವಾಗುವುದು. ಬಿತ್ತ (ನಟ್ಟ) ಬೀಜವು ಹಾಳಾಗುವುದು. ಹೆಂಗಸರು ಸೂಳೆಗಳಂತೆ ಲಾವಣ್ಯಗಳನ್ನು ಬಯಸುವರು.

೪೩. ಬ್ರಾಹ್ಮಣರು ಧರ್ಮವನ್ನು ಮಾರುವರು. ಹೆಂಗಸರು ದೇಹವನ್ನು ಮಾರುವರು. ಕೆಲವರು ವೇದವನ್ನು ಮಾರುವರು. ದ್ವಿಜರು ಶೂದ್ರಧರ್ಮದಲ್ಲಿ ನಿರತರಾಗುವರು.

ಸಾಧೂನಾಂ ವಿಧವಾನಾಂ ಚ ವಿತ್ತಾನ್ಯಪಹರಂತಿ ಚ ।
ನ ವ್ರತಾನಿ ಚರಿಷ್ಯಂತಿ ಬ್ರಾಹ್ಮಣಾ ದ್ರವ್ಯಲೋಲುಪಾಃ ॥ ೪೪ ॥

ಧರ್ಮಾಚಾರಂ ಪರಿತ್ಯಜ್ಯ ವೃಥಾ ವಾದೈರ್ವಿಷಜ್ಜಿತಾಃ ।
ದ್ವಿಜಾಃ ಕುರ್ವಂತಿ ದಂಭಾರ್ಥಂ ಪಿತೃಶ್ರಾದ್ಧಾದಿಕಾಃ ಕ್ರಿಯಾಃ ॥ ೪೫ ॥

ಅಪಾತ್ರೇಷ್ವೇವ ದಾನಾನಿ ಪ್ರಯಚ್ಛಂತಿ ನರಾಧಮಾಃ ।
ದುಗ್ಧಲೋಭನಿಮಿತ್ತೇನ ಗೋಷು ಪ್ರೀತಿಂ ಚ ಕುರ್ವತೇ ॥ ೪೬ ॥

ನ ಕುರ್ವಂತಿ ತಥಾ ವಿಪ್ರಾ ಸ್ನಾನಶೌಚಾದಿಕಾಃ ಕ್ರಿಯಾಃ ।
ಅಕಾಲೇ ಕರ್ಮನಿರತಾ ಭವಿಷ್ಯಂತಿ ದ್ವಿಜಾಧಮಾಃ ॥ ೪೭ ॥

ಸಾಧುನಿಂದಾಪರಾಶ್ಚೈವ ವಿಪ್ರನಿಂದಾಪರಾಸ್ತಥಾ ।
ನ ಕಸ್ಯಾಪಿ ಮನೋ ವಿಪ್ರ ವಿಷ್ಣುಭಕ್ತಿಪರಂ ಭವೇತ್ ॥ ೪೮ ॥

---

೪೪. ಬ್ರಾಹ್ಮಣರು ದ್ರವ್ಯಾಸಂಪಾದನೆಯಲ್ಲಿಯೇ ನಿರತರಾಗಿ ಸಾಧುಗಳ ಮತ್ತು ವಿಧವೆಯರ ಹಣವನ್ನು ಅಪಹರಿಸುವರು. ವಿಹಿತವ್ರತಗಳನ್ನು ಮಾಡುವುದಿಲ್ಲ.

೪೫. ಧರ್ಮಾಚಾರವನ್ನು ಬಿಟ್ಟು ಸುಮ್ಮನೆ ವಾದಮಾಡುವರು. ದ್ವಿಜರು ತಾಯಿತಂದೆಗಳ ಶ್ರಾದ್ಧ ಮುಂತಾದ ಕರ್ತವ್ಯವ್ಯಾಪಾರಗಳನ್ನು ಜಂಭಕ್ಕಾಗಿ ಮಾಡುವರು.

೪೬. ನೀಚಮನುಷ್ಯರು ಅಪಾತ್ರಗಳಲ್ಲಿಯೇ ದಾನಕೊಡುತ್ತಾರೆ. ಹಾಲಿನ ಆಶೆಯಿಂದ ಗೋವುಗಳಲ್ಲಿ ವಿಶ್ವಾಸಮಾಡುತ್ತಾರೆ.

೪೭. ಬ್ರಾಹ್ಮಣರು ಸ್ನಾನಶೌಚಾದಿ ಕರ್ಮಗಳನ್ನು ಮಾಡುವುದಿಲ್ಲ. ನೀಚದ್ವಿಜರು ನಿಷಿದ್ಧಸಮಯದಲ್ಲಿ ಕರ್ಮಮಾಡುವರು.

೪೮. ಸಾಧುಗಳ ಮತ್ತು ಬ್ರಾಹ್ಮಣರ ದೂಷಣೆಯಲ್ಲಿ ನಿರತರಾಗುವರು. ಯಾವನ ಮನಸ್ಸೂ ವಿಷ್ಣುಭಕ್ತಿಮಾಡುವುದರಲ್ಲಿ ಪ್ರವರ್ತಿಸುವುದಿಲ್ಲ.

ಯಜಿನಶ್ಚ ದ್ವಿಜಾ ನೈವ ಧನಾರ್ಥಂ ರಾಜಕಿಂಕರಾಃ ।
ತಾಡಯಂತಿ ದ್ವಿಜಾನ್ದುಷ್ಟಾಃ ಕೃಷ್ಣೇ ಕೃಷ್ಣತ್ವಮಾಗತೇ ॥ ೪೯ ॥

ದಾನಹೀನಾ ನರಾಃ ಸರ್ವೇ ಘೋರೇ ಕಲಿಯುಗೇ ಮುನೇ ।
ಪ್ರತಿಗ್ರಹಂ ಪ್ರಕುರ್ವಂತಿ ಪತಿತಾನಾಮಪಿ ದ್ವಿಜಾಃ ॥ ೫೦ ॥

ಕಲೇಃ ಪ್ರಥಮಪಾದೇಪಿ ವಿನಿಂದಂತಿ ಹರಿಂ ನರಾಃ ।
ಶೂದ್ರಸ್ತ್ರೀಸಂಗನಿರತಾ ವಿಧವಾಸಂಗಲೋಲುಪಾಃ ॥ ೫೧ ॥

ಶೂದ್ರಾನ್ನಭೋಗನಿರತಾ ಭವಿಷ್ಯಂತಿ ಕಲೌ ದ್ವಿಜಾಃ ।
ಧರ್ಮಾನ್ಗೃಹ್ಣಂತಿ ಪಾಷಂಡಾ ದ್ವಿಜಲಿಂಗಧರಾಧಮಾಃ ॥ ೫೨ ॥

ಕಾಷಾಯಪರಿವೀತಾಶ್ಚ ಜಟಿಲಾ ಭಸ್ಮಧೂಲಿತಾಃ ।
ವಿಹಾಯ ವೇದಸನ್ಮಾರ್ಗಂ ಕುಪಥಾಚಾರಸಂಗತಾಃ ॥ ೫೩ ॥

---

೪೯. ಕಲಿಯುಗದಲ್ಲಿ ದ್ವಿಜರು ಯಾಗಮಾಡುವುದಿಲ್ಲ. ದುಷ್ಟರಾದ ರಾಜಭೃತ್ಯರು ಹಣಕ್ಕಾಗಿ ದ್ವಿಜರನ್ನು ಹಿಂಸಿಸುತ್ತಾರೆ.

೫೦. ನಾರದಮುನಿಯೇ! ಭಯಂಕರ ಕಲಿಯುಗದಲ್ಲಿ ವಿಹಿತದಾನಮಾಡುವವರೇ ಇರುವುದಿಲ್ಲ. ದ್ವಿಜರು ಪತಿತರಿಂದಲೂ ದಾನವನ್ನು ಸ್ವೀಕರಿಸುವರು.

೫೧. ಕಲಿಯುಗದ ಮೊದಲನೆಯ ಪಾದದಲ್ಲಿಯೇ ಜನರು ಹರಿಯನ್ನು ದೂಷಿಸುವರು. ಶೂದ್ರಸ್ತ್ರೀ ಮತ್ತು ವಿಧವೆ ಇವರ ಸಂಗದಲ್ಲಿ ಆಸಕ್ತರಾಗುವರು.

೫೨. ದ್ವಿಜನಾದ ನಾರದನೇ! ಕಲಿಯುಗದಲ್ಲಿ ದ್ವಿಜರು ಶೂದ್ರರ ಅನ್ನವನ್ನು ಭೋಜನಮಾಡುವರು. ಅಧಮಪಾಷಂಡರು ದ್ವಿಜರ ಚಿನ್ಹೆಗಳನ್ನು ಧರಿಸಿ ಧರ್ಮಗಳನ್ನು ಪರಿಗ್ರಹಿಸುವರು.

೫೩. ಕಾವಿಬಟ್ಟೆಯನ್ನುಟ್ಟು, ಜಟಾಧಾರಿಗಳಾಗಿ, ಭಸ್ಮವನ್ನು ಹಚ್ಚಿಕೊಂಡು ವೇದೋಕ್ತವಾದ ಸನ್ಮಾರ್ಗವನ್ನು ಬಿಟ್ಟು ಕುಮಾರ್ಗವನ್ನು ಅವಲಂಬಿಸುವರು.

**ಪಾಷಂಡಾಶ್ಚ ಭವಿಷ್ಯಂತಿ ಚತುರಾಶ್ರಮನಿಂದಕಾಃ ।**
**ನ ಚ ದ್ವಿಜಾತಿಶುಶ್ರೂಷಾಂ ಕುರ್ವಂತಿ ಚರಣೋದ್ಭವಾಃ ॥ ೫೪ ॥**

**ಶೂದ್ರಾ ಧರ್ಮಾನ್ಪ್ರವಕ್ಷ್ಯಂತಿ ಕೂಟಯುಕ್ತಿಪರಾಯಣಾಃ ।**
**ದ್ವಿಜಾಃ ಸ್ವಾಚಾರಮುತ್ಸೃಜ್ಯ ಪರಪಾಕಾನ್ನಭೋಜಿನಃ ॥ ೫೫ ॥**

**ಭವಿಷ್ಯಂತಿ ದುರಾತ್ಮಾನಃ ಶೂದ್ರಾಃ ಪ್ರವ್ರಜಿತಾಸ್ತಥಾ ।**
**ಉತ್ಕೋಚಜೀವಿನಸ್ತತ್ರ ಭವಿಷ್ಯಂತಿ ಕಲೌ ಮುನೇ ॥ ೫೬ ॥**

**ಭವಿಷ್ಯಂತ್ಯಥ ಪಾಷಂಡಾಃ ಕಾಪಾಲಾ ಭಿಕ್ಷವೋಽಧಮಾಃ ।**
**ಧರ್ಮವಿಧ್ವಂಸಶೀಲಾನಾಂ ದ್ವಿಜಾನಾಂ ದ್ವಿಜಸತ್ತಮ ॥ ೫೭ ॥**

**ಶೂದ್ರಾಧರ್ಮಾನ್ಪ್ರವಕ್ಷ್ಯಂತಿ ಆರುಹ್ಯೋತ್ತಮಮಾಸನಂ ।**
**ಏತೇಚಾನ್ಯೇ ಚ ಬಹವೋ ನಗ್ನರಕ್ತಪಟಾದಿಕಾಃ ॥ ೫೮ ॥**

**ಪಾಷಂಡಾಃ ಪ್ರಚರಿಷ್ಯಂತಿ ಪ್ರಾಯೋ ವೇದವಿದೂಷಕಾಃ ।**
**ಗೀತವಾದಿತ್ರಕುಶಲಾಃ ಕ್ಷುದ್ರಧರ್ಮಸಮಾಶ್ರಯಾಃ ॥ ೫೯ ॥**

---

೫೪. ಪಾಷಂಡರು ನಾಲ್ಕು ಆಶ್ರಮಗಳನ್ನು ದೂಷಿಸುತ್ತಾರೆ. ಶೂದ್ರರು ದ್ವಿಜರ ಸೇವೆಯನ್ನು ಮಾಡುವುದಿಲ್ಲ.

೫೫. ದ್ವಿಜರು ಕುಯುಕ್ತಿನಿರತರಾಗಿ ಸ್ವಧರ್ಮಗಳನ್ನು ಬಿಟ್ಟು ಪರಾನ್ನ ತಿನ್ನುತ್ತಾ ಶೂದ್ರಧರ್ಮಗಳನ್ನೇ ಹೊಗಳುವರು.

೫೬. ಕಲಿಯುಗದಲ್ಲಿ ದುರಾತ್ಮರಾದ ಶೂದ್ರರು ಸನ್ಯಾಸಿಗಳಾಗುವರು. ಜನರು ಲಂಚದಿಂದ ಜೀವಿಸುವರು.

೫೭-೫೯. ಅಧಮರಾದ ಪಾಷಂಡರು ಕಪಾಲಧಾರಿಗಳಾಗಿ ಭಿಕ್ಷುಗಳಾಗುವರು. ದ್ವಿಜಶ್ರೇಷ್ಠನೇ! ಶೂದ್ರರು ಉತ್ತಮಪೀಠದಲ್ಲಿ ಕುಳಿತು ಧರ್ಮನಾಶಕರಾದ ದ್ವಿಜರಿಗೆ ಧರ್ಮಗಳನ್ನು ಉಪದೇಶಿಸುವರು. ಇವರು ಮತ್ತು ನಗ್ನರು ರಕ್ತವಸ್ತ್ರಧಾರಿಗಳೇ ಮುಂತಾಗಿ ಬಹುಸಂಖ್ಯಾತರಾದ ಪಾಷಂಡಿಗಳು ಸಂಚರಿಸುತ್ತಿರುವರು. ಇವರೆಲ್ಲರೂ ಪ್ರಾಯಶಃ ವೇದನಿಂದಕರು, ಸಂಗೀತ ವಾದ್ಯ ಇವುಗಳಲ್ಲಿ ಕುಶಲರೂ ಆಗಿ ಕ್ಷುದ್ರಧರ್ಮಗಳನ್ನಾಶ್ರಯಿಸುವರು.

ಭವಿಷ್ಯಂತಿ ಕಲೌ ಪ್ರಾಯೋ ಧರ್ಮವಿಧ್ವಂಸಕಾ ನರಾಃ ।
ಅಲ್ಪದ್ರವ್ಯಾ ವೃಥಾ ಲಿಂಗಾ ವೃಥಾಹಂಕಾರದೂಷಿತಾಃ ॥ ೬೦ ॥

ಹರ್ತಾರಃ ಪರವಿತ್ತಾನಾಂ ಭವಿತಾರೋ ನರಾಧಮಾಃ ।
ಪ್ರತಿಗ್ರಹಪರಾ ನಿತ್ಯಂ ಜಗದುನ್ಮಾರ್ಗಶಾಲಿನಃ ॥ ೬೧ ॥

ಆತ್ಮಸ್ತುತಿಪರಾಃ ಸರ್ವೇ ಪರನಿಂದಾಪರಾಸ್ತಥಾ ।
ವಿಶ್ವಸ್ತಘಾತಿನಃ ಕ್ರೂರಾಃ ದಯಾಧರ್ಮವಿವರ್ಜಿತಾಃ ॥ ೬೨ ॥

ಭವಿಷ್ಯಂತಿ ನರಾ ವಿಪ್ರ ಕಲೌ ಚಾಧರ್ಮಬಾಂಧವಾಃ ।
ಪರಮಾಯುಶ್ಚ ಭವಿತಾ ತದಾ ವರ್ಷಾಣಿ ಷೋಡಶ ॥ ೬೩ ॥

ಘೋರೇ ಕಲಿಯುಗೇ ವಿಪ್ರ ಪಂಚವರ್ಷಾ ಪ್ರಸೂಯತೇ ।
ಸಪ್ತವರ್ಷಾಷ್ಟವರ್ಷಾಶ್ಚ ಯುವಾನೋತಃಪರಂ ಜರಾ ॥ ೬೪ ॥

---

೬೦. ಕಲಿಯುಗದಲ್ಲಿ ಜನರು ಪ್ರಾಯಶಃ ಧರ್ಮನಾಶಕರಾಗುವರು. ಅಲ್ಪದ್ರವ್ಯವಂತರು ಸಾಧುವೇಷವನ್ನು ಧರಿಸಿರುವವರೂ ಆಗಿ ಕಾರಣವಿಲ್ಲದೆ ಅಹಂಕಾರದಿಂದ ದೂಷಿತರಾಗುವರು.

೬೧-೬೨. ನೀಚಮನುಷ್ಯರು ಪರದ್ರವ್ಯವನ್ನು ಅಪಹರಿಸುವವರು, ಸರ್ವದಾ ಪ್ರತಿಗ್ರಹನಿರತರು, ಲೋಕಮರ್ಯಾದೆಯನ್ನು ಮೀರಿ ಅಪಮಾರ್ಗದಲ್ಲಿ ನಡೆಯುವವರು, ತನ್ನನ್ನು ತಾನೇ ಹೊಗಳಿಕೊಳ್ಳುವವರು, ಪರದೂಷಣೆಯಲ್ಲಿ ನಿರತರು, ಭಯಂಕರರು, ದಯಾಧರ್ಮವಿಲ್ಲದವರೂ ಆಗಿ ವಿಶ್ವಾಸಘಾತಕ ರಾಗುವರು.

೬೩. ಬ್ರಾಹ್ಮಣನಾದ ನಾರದನೇ! ಕಲಿಯುಗದಲ್ಲಿ ಮನುಷ್ಯರು ಅಧರ್ಮಬಂಧುಗಳಾಗುವರು. ಆಗ ಜನರಿಗೆ ಹದಿನಾರು ವರ್ಷಗಳೇ ಪೂರ್ಣಾ ಯುಸ್ಸು.

೬೪. ಭಯಂಕರ ಕಲಿಯುಗದಲ್ಲಿ ಐದು ವರ್ಷ ವಯಸ್ಸಿನ ಕನ್ಯೆಯು ಪ್ರಸವಿಸುವಳು. ಏಳು ಎಂಟು ವರ್ಷಗಳಿಗೆ ಯೌವನವು, ಆಮೇಲೆ ಮುದಿ ತನವು.

ಸ್ವಕರ್ಮತ್ಯಾಗಿನಃ ಸರ್ವೇ ಕೃತಘ್ನಾ ಭಿನ್ನವೃತ್ತಯಃ ।
ಯಾಚಕಾಶ್ಚ ದ್ವಿಜಾ ನಿತ್ಯಂ ಭವಿಷ್ಯಂತಿ ಕಲೌ ಯುಗೇ ॥ ೬೫ ॥

ಪರಾವಮಾನನಿರತಾಃ ಪ್ರಹೃಷ್ಟಾಃ ಪರವೇಶ್ಮತಃ ।
ತತ್ರೈವ ನಿಂದಾನಿರತಾ ವೃಥಾ ವಿಶ್ರಂಭಿಣೋ ಜನಾಃ ॥ ೬೬ ॥

ನಿಂದಾಂ ಕುರ್ವಂತಿ ಸತತಂ ಪಿತೃಮಾತೃಸುತೇಷು ಚ ।
ವದಂತಿ ವಾಚಾ ಧರ್ಮಾಂಶ್ಚ ಚೇತಸಾ ಪಾಪಲೋಲುಪಾಃ ॥ ೬೭ ॥

ಧನವಿದ್ಯಾವಯೋಮತ್ತಾಃ ಸರ್ವದುಃಖಪರಾಯಣಾಃ ।
ವ್ಯಾಧಿತಸ್ಕರದುರ್ಭಿಕ್ಷೈಃ ಪೀಡಿತಾ ಅತಿಮಾಯಿನಃ ॥ ೬೮ ॥

ಪ್ರಪುಷ್ಯಂತಿ ತಥೈವಾಮೀ ನ ವಿಚಾರ್ಯ ಚ ದುಷ್ಕೃತಂ ।
ಧರ್ಮಮಾರ್ಗಪ್ರಣೇತಾರಂ ತಿರಸ್ಕುರ್ವಂತಿ ಪಾಪಿನಃ ॥ ೬೯ ॥

---

೬೫. ಕಲಿಯುಗದಲ್ಲಿ ಎಲ್ಲರೂ ತಮ್ಮ ವಿಹಿತಕರ್ಮವನ್ನು ಬಿಡುವರು. ಉಪಕಾರವನ್ನು ಸ್ಮರಿಸುವುದಿಲ್ಲ. ಜಾತ್ಯಂತರದವರ ಧರ್ಮವನ್ನವಲಂಬಿಸುವರು. ದ್ವಿಜರು ಯಾವಾಗಲೂ ಭಿಕ್ಷೆಗಾರರಾಗುವರು.

೬೬. ಜನರು ಇತರರಿಗೆ ಅವಮಾನಮಾಡುವುದರಲ್ಲಿಯೇ ಆಸಕ್ತರಾಗುವರು. ಪರಗೃಹದಲ್ಲಿ ಸಂತೋಷಪಡುವರು. ಅಲ್ಲಿಯೇ ದೂಷಣೆಯನ್ನೂ ಮಾಡುತ್ತಿರುವರು. ವಿಶ್ವಾಸವನ್ನು ನಟಿಸುವರು.

೬೭. ತಂದೆ, ತಾಯಿ, ಮಕ್ಕಳು ಇವರುಗಳನ್ನು ಯಾವಾಗಲೂ ನಿಂದಿಸುವರು. ಬಾಯಿಂದ ಧರ್ಮಹೇಳುವರು; ಮನಸ್ಸಿನಲ್ಲಿ ಪಾಪವನ್ನು ಚಿಂತಿಸುವರು.

೬೮. ಹಣ, ವಿದ್ಯೆ, ವಯಸ್ಸು ಇವುಗಳಿಂದ ಕೊಬ್ಬಿ ಸಕಲದುಃಖನಿರತರಾಗುವರು. ರೋಗ, ಕಳ್ಳರು, ಕ್ಷಾಮ, ಇವುಗಳಿಂದ ಬಳಲುವರು. ಅತ್ಯಂತ ವಂಚಕರಾಗುವರು.

೬೯. ಇವರು ದುಷ್ಕರ್ಮಗಳನ್ನು ಲೆಕ್ಕಿಸದೇ ಹಾಗೆಯೇ ಬೆಳೆಯುವರು. ಪಾಪಿಷ್ಠರು ಧರ್ಮಮಾರ್ಗಪ್ರವರ್ತಕರನ್ನು ತಿರಸ್ಕರಿಸುವರು.

ಧರ್ಮಕಾರ್ಯೇ ರತಂ ಚೈವ ವೃಥಾ ವಿಶ್ರಂಭಿಣೋ ಜನಾಃ ।
ಭವಿಷ್ಯಂತಿ ಕಲೌ ಪ್ರಾಪ್ತೇ ರಾಜಾನೋ ಮ್ಲೇಚ್ಛಜಾತಯಃ ॥ ೭೦ ॥

ಶೂದ್ರಾ ಭೈಕ್ಷ್ಯರತಾಶ್ಚೈವ ತೇಷಾಂ ಶುಶ್ರೂಷಣೇ ದ್ವಿಜಾಃ ।
ನ ಶಿಷ್ಯೋ ನ ಗುರುಃ ಕಶ್ಚಿನ್ನ ಪುತ್ರೋ ನ ಪಿತಾ ತಥಾ ॥ ೭೧ ॥

ನ ಭಾರ್ಯಾ ನ ಪತಿಶ್ಚೈವ ಭವಿತಾರೋ ನ ಸಂಕರೇ ।
ಕಲೌ ಗತೇ ಭವಿಷ್ಯಂತಿ ಧನಾಢ್ಯಾ ಅಪಿ ಯಾಚಕಾಃ ॥ ೭೨ ॥

ರಸವಿಕ್ರಯಿಣಶ್ಚಾಪಿ ಭವಿಷ್ಯಂತಿ ದ್ವಿಜಾತಯಃ ।
ಧರ್ಮಕಂಚುಕಸಂಪೀತಾ ಮುನಿವೇಷಧರಾ ದ್ವಿಜಾಃ ॥ ೭೩ ॥

ಅಪಣ್ಯವಿಕ್ರಯರತಾ ಅಗಮ್ಯಾಗಾಮಿನಸ್ತಥಾ ।
ವೇದನಿಂದಾಪರಾಶ್ಚೈವ ಧರ್ಮಶಾಸ್ತ್ರವಿನಿಂದಕಾಃ ॥ ೭೪ ॥

---

೭೦. ಕಲಿಯುಗದಲ್ಲಿ ಜನರು ಧರ್ಮಕಾರ್ಯದಲ್ಲಿ ನಿರತನಾದವನನ್ನು ವ್ಯರ್ಥವಾಗಿ ಹಿಂಸಿಸುವರು. ತುರುಷ್ಕ ಮುಂತಾದ ಮ್ಲೇಚ್ಛಜಾತಿಯವರು ರಾಜರಾಗುವರು.

೭೧-೭೨. ಶೂದ್ರರು ಭಿಕ್ಷಾಟನೆಯಲ್ಲಿ ನಿರತರಾಗುವರು. ಅವರ ಸೇವೆಯನ್ನು ದ್ವಿಜರು ಮಾಡುವರು. ಕಲಿಯುಗದಲ್ಲಿ ಶಿಷ್ಯ, ಗುರು, ಮಗ, ತಂದೆ, ಹೆಂಡತಿ, ಗಂಡ ಇವರು ತಮ್ಮ ತಮ್ಮ ಧರ್ಮವನ್ನು ಅವಲಂಬಿಸುವುದಿಲ್ಲ. ಕಲಿಯುಗದಲ್ಲಿ ಧನಿಕರೂ ಸಹ ಯಾಚಕರಾಗುವರು.

೭೩. ದ್ವಿಜರು (ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು) ರಸಪದಾರ್ಥ (ತುಪ್ಪ ಎಣ್ಣೆ ಮುಂತಾದವು)ಗಳನ್ನೂ ಸಹ ಮಾರುವರು ಮತ್ತು ಧರ್ಮವೆಂಬ ಕವಚ ತೊಟ್ಟು ಮುನಿವೇಷಧಾರಿಗಳಾಗುವರು.

೭೪. ನಿಷಿದ್ಧವಸ್ತುಗಳನ್ನು ಮಾರುವುದರಲ್ಲಿ ಆಸಕ್ತರಾಗಿ ಅಗಮ್ಯಾಗಮನ ಮಾಡುತ್ತಾ ವೇದದೂಷಕರು ಮತ್ತು ಧರ್ಮಶಾಸ್ತ್ರನಿಂದಕರೂ ಆಗುವರು.

ಶೂದ್ರವೃತ್ತ್ಯೈವ ಜೀವಂತಿ ನರಕಾರ್ಹಾ ದ್ವಿಜಾ ಮುನೇ ।
ಅನಾವೃಷ್ಟಿಭಯಂ ಪ್ರಾಪ್ತಾ ಗಗನಾಸಕ್ತದೃಷ್ಟಯಃ ॥ ೭೫ ॥

ಭವಿಷ್ಯಂತಿ ಕಲೌ ಮರ್ತ್ಯಾಃ ಸರ್ವೇ ಕ್ಷುದ್ಭಯಕಾತರಾಃ ।
ಕಂದಪರ್ಣಫಲಾಹಾರಾಸ್ತಾಪಸಾ ಇವ ಮಾನವಾಃ ॥ ೭೬ ॥

ಆತ್ಮಾನಂ ಘಾತಯಿಷ್ಯಂತಿ ಅನಾವೃಷ್ಟ್ಯಾತಿದುಃಖಿತಾಃ ।
ಕಾಮಾರ್ತಾ ಹ್ರಸ್ವದೇಹಾಶ್ಚ ಲುಬ್ಧಾಶ್ಚಾಽಧರ್ಮತತ್ಪರಾಃ ॥ ೭೭ ॥

ಕಲೌ ಸರ್ವೇ ಭವಿಷ್ಯಂತಿ ಸ್ವಲ್ಪಭಾಗ್ಯಾ ಬಹುಪ್ರಜಾಃ ।
ಸ್ತ್ರಿಯಃ ಸ್ವಪೋಷಣಪರಾ ವೇಶ್ಯಾಲಾವಣ್ಯಶೀಲಕಾಃ ॥ ೭೮ ॥

ಪತಿವಾಕ್ಯಮನಾದೃತ್ಯ ಸದಾನ್ಯಗೃಹತತ್ಪರಾಃ ।
ದುಃಶೀಲಾ ದುಷ್ಟಶೀಲೇಷು ಕರಿಷ್ಯಂತಿ ಸದಾ ಸ್ಪೃಹಾಂ ॥ ೭೯ ॥

---

೭೫. ನಾರದಮುನಿಯೇ ! ದ್ವಿಜರು ನರಕಕ್ಕೆ ಹೋಗಲು ಅರ್ಹರಾಗಿ ಶೂದ್ರವೃತ್ತಿಯಿಂದಲೇ ಜೀವಿಸುವರು. ಮಳೆಯಿಲ್ಲದೇ ಭಯಪಟ್ಟು ಆಕಾಶ ವನ್ನು ನೋಡುತ್ತಿರುವರು.

೭೬. ಕಲಿಯುಗದಲ್ಲಿ ಮನುಷ್ಯರೆಲ್ಲರೂ ಹಸಿವಿನಿಂದ ಭಯಪಟ್ಟು ಮುನಿಗಳಂತೆ ಗೆಡ್ಡೆ, ಗೆಣಸು, ಎಲೆ, ಹಣ್ಣು ಇವುಗಳನ್ನು ತಿಂದು ಹೊಟ್ಟೆ ತುಂಬಿ ಕೊಳ್ಳುವರು.

೭೭. ಕಲಿಯುಗದಲ್ಲಿ ಮಳೆ ಬೆಳೆಯಿಲ್ಲದೆ ಅತ್ಯಂತ ದುಃಖಪಟ್ಟು ಆತ್ಮಹತ್ಯೆಯನ್ನು ಮಾಡಿಕೊಳ್ಳುವರು. ಕಾಮಪೀಡಿತರು, ಗಿಡ್ಡಾದ ದೇಹ ವುಳ್ಳವರು, ಲೋಭಿಗಳು, ಅಧರ್ಮದಲ್ಲಿ ನಿರತರೂ ಆಗುವರು.

೭೮-೭೯. ಎಲ್ಲರೂ ಅಲ್ಪಭಾಗ್ಯರು. ಬಹು ಮಕ್ಕಳನ್ನು ಪಡೆಯುವರು. ಹೆಂಗಸರು ತಮ್ಮ ದೇಹಪೋಷಣೆಯಲ್ಲಿ ನಿರತರಾಗಿ ವೇಶ್ಯೆಯರಂತೆ ಅಲಂಕರಿಸಿ ಕೊಳ್ಳುವವರಾಗಿ ಗಂಡನ ಮಾತನ್ನು ಅನಾದರಮಾಡಿ ಯಾವಾಗಲೂ ಇತರರ ಮನೆಯಲ್ಲಿಯೇ ಇರುತ್ತಾ ದುರ್ನಡತೆಯುಳ್ಳವರಾಗಿ ದುಷ್ಟರಲ್ಲಿಯೇ ಸ್ನೇಹ ಮಾಡುವರು.

**ಅಸದ್ವೃತ್ತಾ ಭವಿಷ್ಯಂತಿ ಪುರುಷೇಷು ಕುಲಾಂಗನಾಃ ।**
**ಚೋರಾದಿಭಯಭೀತಾಶ್ಚ ಕಾಷ್ಠಯಂತ್ರಾಣಿ ಕುರ್ವತೇ ॥ ೮೦ ॥**

**ದುರ್ಭಿಕ್ಷಕರಪೀಡಾಭಿರತೀವೋಪದ್ರುತಾ ಜನಾಃ ।**
**ಗೋಧೂಮಾನ್ನಯವಾನ್ನಾಢ್ಯಂ ದೇಶಂ ಯಾಸ್ಯಂತಿ ದುಃಖಿತಾಃ ॥ ೮೧ ॥**

**ನಿಧಾಯ ಹೃದ್ಯಕರ್ಮಾಣಿ ಪ್ರೇರಯಂತಿ ವಚಃ ಶುಭಂ ।**
**ಸ್ವಕಾರ್ಯಸಿದ್ಧಿಪರ್ಯಂತಂ ಬಂಧುತಾಂ ಕುರ್ವತೇ ಜನಾಃ ॥ ೮೨ ॥**

**ಭಿಕ್ಷವಶ್ಚಾಪಿ ಮಿತ್ರಾದಿಸ್ನೇಹಸಂಬಂಧಯಂತ್ರಿತಾಃ ।**
**ಅನ್ನೋಪಾಧಿನಿಮಿತ್ತೇನ ಶಿಷ್ಯಾನ್ಗೃಹ್ಣಂತಿ ಭಿಕ್ಷವಃ ॥ ೮೩ ॥**

**ಉಭಾಭ್ಯಾಮಥ ಪಾಣಿಭ್ಯಾಂ ಶಿರಃ ಕಂಡೂಯನಂ ಸ್ತ್ರಿಯಃ ।**
**ಕುರ್ವಂತ್ಯೋ ಗುರುಭರ್ತ್ರೂಣಾಮಾಜ್ಞಾಮುಲ್ಲಂಘಯಂತಿ ಚ ॥ ೮೪ ॥**

---

೮೦. ಕುಲಸ್ತ್ರೀಯರು ಪುರುಷರ ವಿಷಯದಲ್ಲಿ ದುರ್ವೃತ್ತರಾಗುವರು. ಕಳ್ಳಕಾಕರಭೀತಿಯಿಂದ ಕಾಷ್ಠಯಂತ್ರಗಳನ್ನು ಮಾಡಿಕೊಳ್ಳುವರು.

೮೧. ಜನರು ಕ್ಷಾಮ, ತೆರಿಗೆ, ಕಂದಾಯ ಇವುಗಳಿಂದ ಅತ್ಯಂತ ಹಿಂಸೆಪಡುತ್ತಾ ಗೋಧಿ, ಅಕ್ಕಿ ಇವುಗಳು ಸಮೃದ್ಧಿಯಾಗಿರುವ ದೇಶಕ್ಕೆ ಹೋಗುವರು.

೮೨. ಜನರು ಕೆಟ್ಟದ್ದನ್ನು ಮನಸ್ಸಿನಲ್ಲಿಟ್ಟು ಮೇಲೆ ಒಳ್ಳೆಯ ಮಾತನ್ನೇ ಹೇಳುತ್ತಾ ತಮ್ಮ ಕಾರ್ಯವಾಗುವವರೆಗೆ ಬಂಧುಗಳಂತೆ ನಟಿಸುವರು.

೮೩. ಸನ್ಯಾಸಿಗಳೂ ಸಹ ಸ್ನೇಹ ಮುಂತಾದ ಸಂಬಂಧದಿಂದ ಬದ್ಧರಾಗಿ ಅನ್ನಾದಿಗಳಿಗೋಸ್ಕರವಾಗಿ ಶಿಷ್ಯರನ್ನು ಪರಿಗ್ರಹಿಸುವರು.

೮೪. ಹೆಂಗಸರು ಎರಡು ಕೈಗಳಿಂದಲೂ ತಲೆಯನ್ನು ತುರಿಸುತ್ತಾ, ಗುರು, ಗಂಡ ಇವರ ಅಪ್ಪಣೆಯನ್ನು ಮೀರುವರು.

ಪಾಷಂಡಾಲಾಪನಿರತಾಃ ಪಾಷಂಡಜನಸಂಗಿನಃ ।
ಯದಾ ದ್ವಿಜಾ ಭವಿಷ್ಯಂತಿ ತದಾ ವೃದ್ಧಿಂ ಕಲಿರ್ವ್ರಜೇತ್ ॥ ೮೫ ॥

ಯದಾ ಪ್ರಜಾ ನ ಯಜಂತಿ ನ ಹೋಷ್ಯಂತಿ ದ್ವಿಜಾತಯಃ ।
ತದೈವ ತು ಕಲೇರ್ವೃದ್ಧಿರನುಮೇಯಾ ವಿಚಕ್ಷಣೈಃ ॥ ೮೬ ॥

ಅಧರ್ಮವೃದ್ಧಿರ್ಭವಿತಾ ಬಾಲಮೃತ್ಯುರಪಿ ದ್ವಿಜ ।
ಸರ್ವಧರ್ಮೇಷು ನಷ್ಟೇಷು ಯಾತಿ ನಿಃಶ್ರೀಕತಾಂ ಜಗತ್ ॥ ೮೭ ॥

ಏವಂ ಕಲೇಃ ಸ್ವರೂಪಂ ತೇ ಕಥಿತಂ ವಿಪ್ರಸತ್ತಮ ।
ಹರಿಭಕ್ತಿಪರಾನೇಷ ನ ಕಲಿರ್ಬಾಧತೇ ಕ್ವಚಿತ್ ॥ ೮೮ ॥

ತಪಃ ಪರಂ ಕೃತಯುಗೇ ತ್ರೇತಾಯಾಂ ಧ್ಯಾನಮೇವ ಚ ।
ದ್ವಾಪರೇ ಯಜ್ಞಮೇವಾಹುರ್ದಾನಮೇಕಂ ಕಲೌಯುಗೇ ॥ ೮೯ ॥

---

೮೫. ದ್ವಿಜರು ಪಾಷಂಡರೊಡನೆ ಸಂಭಾಷಣೆಮಾಡುತ್ತಾ ಪಾಷಂಡಜನ ಸಹವಾಸಿಗಳಾದಾಗ ಕಲಿಯು ವೃದ್ಧಿಹೊಂದುವನು.

೮೬. ದ್ವಿಜರು ಯಜ್ಞಗಳನ್ನೂ ಹೋಮವನ್ನೂ ಮಾಡದೇ ಬಿಟ್ಟಾಗ ಕಲಿಯು ವೃದ್ಧಿಹೊಂದಿರುವನೆಂದು ವಿವೇಚನಶೀಲರು ಊಹೆಮಾಡಬೇಕು.

೮೭. ಕಲಿಯು ಅಭಿವೃದ್ಧಿಯಾದಾಗ ಅಧರ್ಮವು ಹೆಚ್ಚುವುದು ಜನರಿಗೆ ಚಿಕ್ಕವಯಸ್ಸಿನಲ್ಲಿಯೇ ಮರಣವುಂಟಾಗುವುದು. ಹೀಗೆ ಸಕಲಧರ್ಮಗಳೂ ನಷ್ಟವಾದಾಗ ಜಗತ್ತೇ ಐಶ್ವರ್ಯರಹಿತವಾಗುತ್ತದೆ.

೮೮. ಬ್ರಾಹ್ಮಣೋತ್ತಮನಾದ ನಾರದನೇ! ಹೀಗೆ ನಿನಗಾಗಿ ಕಲಿ ಸ್ವರೂಪವನ್ನು ಹೇಳಿರುವೆನು. ಹರಿಭಕ್ತಿನಿಷ್ಠರಾದವರನ್ನು ಕಲಿಯು ಯಾವಾಗಲೂ ಬಾಧಿಸಲಾರನು.

೮೯. ಕೃತಯುಗದಲ್ಲಿ ತಪಸ್ಸು, ತ್ರೇತಾಯುಗದಲ್ಲಿ ಧ್ಯಾನವು, ದ್ವಾಪರ ಯುಗದಲ್ಲಿ ಯಜ್ಞವು, ಕಲಿಯುಗದಲ್ಲಿ ದಾನವು ಪ್ರಶಸ್ತವೆಂದು ಹೇಳಿರುತ್ತಾರೆ.

**ಯತ್ಕೃತೇ ದಶಭಿರ್ವರ್ಷೈಸ್ತ್ರೇತಾಯಾಂ ಶರದಾ ಚ ಯತ್ ।**
**ದ್ವಾಪರೇ ಯಚ್ಚ ಮಾಸೇನ ಹ್ಯಹೋರಾತ್ರೇಣ ತತ್ಕಲೌ ॥ ೯೦ ॥**

**ಧ್ಯಾಯನ್ಕೃತೇ ಯಜನ್ಯಜ್ಞೈಸ್ತ್ರೇತಾಯಾಂ ದ್ವಾಪರೇಽರ್ಚಯನ್ ।**
**ಯದಾಪ್ನೋತಿ ತದಾಪ್ನೋತಿ ಕಲೌ ಸಂಕೀರ್ತ್ಯ ಕೇಶವಂ ॥ ೯೧ ॥**

**ಅಹೋರಾತ್ರಂ ಹರೇರ್ನಾಮ ಕೀರ್ತಯಂತಿ ಚ ಯೇ ನರಾಃ ।**
**ಕುರ್ವಂತಿ ಹರಿಪೂಜಾಂ ವಾ ನ ಕಲಿರ್ಬಾಧತೇ ಚ ತಾನ್ ॥ ೯೨ ॥**

**ನಮೋ ನಾರಾಯಣಾಯೇತಿ ಕೀರ್ತಯಂತಿ ಚ ಯೇ ನರಾಃ ।**
**ನಿಷ್ಕಾಮಾ ವಾ ಸಕಾಮಾ ವಾ ನ ಕಲಿರ್ಬಾಧತೇ ಚ ತಾನ್ ॥ ೯೩ ॥**

**ಹರಿನಾಮಪರಾ ಯೇ ತು ಘೋರೇ ಕಲಿಯುಗೇ ದ್ವಿಜ ।**
**ತ ಏವ ಕೃತಕೃತ್ಯಾಶ್ಚ ನ ಕಲಿರ್ಬಾಧತೇ ಹಿ ತಾನ್ ॥ ೯೪ ॥**

---

೯೦. ಕೃತಯುಗದಲ್ಲಿ ಹತ್ತುವರ್ಷ ಮಾಡುವಕರ್ಮವು, ತ್ರೇತಾಯುಗದಲ್ಲಿ ಒಂದು ವರ್ಷ ಮಾಡುವ ಕರ್ಮವು, ದ್ವಾಪರದಲ್ಲಿ ಒಂದು ತಿಂಗಳು ಮಾಡುವ ಕರ್ಮವೂ ಸಹ ಕಲಿಯುಗದಲ್ಲಿ ಒಂದು ದಿನದಲ್ಲಿ ಮಾಡುವ ಕರ್ಮಕ್ಕೆ ಸಮಾನವು.

೯೧. ಕೃತಯುಗದಲ್ಲಿ ದಾನದಿಂದ, ತ್ರೇತಾಯುಗದಲ್ಲಿ ಯಜ್ಞಗಳಿಂದ, ದ್ವಾಪರಯುಗದಲ್ಲಿ ಪೂಜೆಯಿಂದ ಬರುವ ಫಲವು ಕಲಿಯುಗದಲ್ಲಿ ಕೇಶವನಾಮ ಸಂಕೀರ್ತನದಿಂದಲೇ ಬರುತ್ತದೆ.

೯೨. ಹಗಲು ರಾತ್ರಿ ಹರಿನಾಮವನ್ನು ಕೀರ್ತನೆಮಾಡುವ ಅಥವಾ ಹರಿಪೂಜೆಮಾಡುವ ಜನರನ್ನು ಕಲಿಯು ಬಾಧಿಸಲಾರನು.

೯೩. 'ನಮೋ ನಾರಾಯಣಾಯ' ನಾರಾಯಣನಿಗೆ ನಮಸ್ಕಾರ ಎಂಬುದಾಗಿ ಫಲಾಪೇಕ್ಷೆಯಿಂದಲೋ ಅಥವಾ ಇಲ್ಲದೆಯೋ ಹೇಳುವವರನ್ನು ಕಲಿಯು ಬಾಧಿಸಲಾರನು.

೯೪. ದ್ವಿಜನೇ! ಘೋರಕಲಿಯುಗದಲ್ಲಿ ಹರಿನಾಮಸಂಕೀರ್ತನೆಮಾಡುವವರು ಕೃತಾರ್ಥರು. ಅಂತಹವರನ್ನು ಕಲಿಯು ಬಾಧಿಸಲಾರನು.

ಹರಿಪೂಜಾಪರಾ ಯೇ ಚ ಹರಿನಾಮಪರಾಯಣಾಃ ।
ತ ಏವ ಶಿವತುಲ್ಯಾಶ್ಚ ನಾತ್ರ ಕಾರ್ಯಾ ವಿಚಾರಣಾ ॥ ೯೫ ॥

ಸಮಸ್ತಜಗದಾಧಾರಂ ಪರಮಾರ್ಥಸ್ವರೂಪಿಣಂ ।
ಘೋರೇ ಕಲಿಯುಗೇ ಪ್ರಾಪ್ತೇ ವಿಷ್ಣುಂ ಧ್ಯಾಯನ್ನ ಸೀದತಿ ॥ ೯೬ ॥

ಅಹೋಽತೀವ ಸುಭಾಗ್ಯಾಸ್ತೇ ಸಕೃದ್ವೈ ಕೇಶವಾರ್ಚಕಾಃ ।
ಘೋರೇ ಕಲಿಯುಗೇ ಪ್ರಾಪ್ತೇ ಸರ್ವಧರ್ಮವಿವರ್ಜಿತೇ ॥ ೯೭ ॥

ನ್ಯೂನಾತಿರಿಕ್ತದೋಷಾಣಾಂ ಕಲೌ ವೇದೋಕ್ತಕರ್ಮಣಾಂ ।
ಹರಿಸ್ಮರಣಮೇವಾತ್ರ ಸಂಪೂರ್ಣತ್ವವಿಧಾಯಕಂ ॥ ೯೮ ॥

ಹರೇ ಕೇಶವ ಗೋವಿಂದ ವಾಸುದೇವ ಜಗನ್ಮಯ ।
ಇತೀರಯಂತಿ ಯೇ ನಿತ್ಯಂ ನ ಹಿ ತಾನ್ಬಾಧತೇ ಕಲಿಃ ॥ ೯೯ ॥

---

೯೫. ವಿಷ್ಣುಪೂಜಾಪರರು, ವಿಷ್ಣುನಾಮಸಂಕೀರ್ತನೆಯಲ್ಲಿ ನಿರತರೂ ಆಗಿರುವವರು ಶಿವನಿಗೆ ಸಮಾನರು. ಈ ವಿಷಯದಲ್ಲಿ ಸಂದೇಹಪಡಬಾರದು.

೯೬. ಜಗತ್ತಿಗೆಲ್ಲಾ ಆಧಾರನು, ಉತ್ತಮಾರ್ಥಸ್ವರೂಪಿಯೂ ಆದ ವಿಷ್ಣುವನ್ನು ಧ್ಯಾನಿಸುವವನು ಘೋರಕಲಿಯುಗದಲ್ಲಿಯೂ ಸಹ ಕ್ಲೇಶಕ್ಕೀಡಾಗುವುದಿಲ್ಲ.

೯೭. ಸಕಲಧರ್ಮರಹಿತವಾದ ಭಯಂಕರ ಕಲಿಯುಗವು ಬಂದಾಗ್ಯೂ ಒಂದಾವರ್ತಿಯಾದರೂ ವಿಷ್ಣುವನ್ನು ಪೂಜಿಸುವವರು ಬಹು ಪುಣ್ಯವಂತರಾಗಿರುವರು. ಆಶ್ಚರ್ಯ !

೯೮. ಕಲಿಯುಗದಲ್ಲಿ ವೇದೋಕ್ತ ಕರ್ಮಗಳ ಅನುಷ್ಠಾನದಲ್ಲಿ ಪ್ರಸಕ್ತವಾಗುವ ನ್ಯೂನಾತಿರಿಕ್ತದೋಷಗಳನ್ನು ಹರಿಸ್ಮರಣೆಯು ಪರಿಹಾರಮಾಡಿ ಕರ್ಮಗಳನ್ನು ಪೂರ್ಣಗೊಳಿಸುವುದು.

೯೯. ಹರಿ, ಕೇಶವ, ಗೋವಿಂದ, ವಾಸುದೇವ, ಜಗದಂತರ್ಯಾಮಿ ಎಂಬುದಾಗಿ ಯಾವಾಗಲೂ ಹೇಳುತ್ತಿರುವವರನ್ನು ಕಲಿಯು ಬಾಧಿಸುವುದಿಲ್ಲ.

**ಶಿವ ಶಂಕರ ರುದ್ರೇಶ ನೀಲಕಂಠ ತ್ರಿಲೋಚನ ।**
**ಇತಿ ಜಲ್ಪಂತಿ ಯೇ ವ್ಯಾಪಿ ಕಲಿಸ್ತಾನ್ನಾಪಿ ಬಾಧತೇ ॥ ೧೦೦ ॥**

**ಮಹಾದೇವ ವಿರೂಪಾಕ್ಷ ಗಂಗಾಧರ ಮೃಡಾವ್ಯಯ ।**
**ಇತ್ಥಂ ವದಂತಿ ಯೇ ವಿಪ್ರ ತೇ ಕೃತಾರ್ಥಾ ನ ಸಂಶಯಃ ॥ ೧೦೧ ॥**

**ಜನಾರ್ದನ ಜಗನ್ನಾಥ ಪೀತಾಂಬರಧರಾಚ್ಯುತ ।**
**ಇತಿ ವಾಪ್ಯುಚ್ಚರಂತೀಹ ನ ಚ ತೇಷಾಂ ಕಲೇರ್ಭಯಂ ॥ ೧೦೨ ॥**

**ಸಂಸಾರೇ ಸುಲಭಾಃ ಪುಂಸಾಂ ಪುತ್ರದಾರಧನಾದಯಃ ।**
**ಘೋರೇ ಕಲಿಯುಗೇ ವಿಪ್ರ ಹರಿಭಕ್ತಿಸ್ತು ದುರ್ಲಭಾ ॥ ೧೦೩ ॥**

**ಕರ್ಮಶ್ರದ್ಧಾವಿಹೀನಾ ಯೇ ಪಾಷಂಡಾ ವೇದನಿಂದಕಾಃ ।**
**ಅಧರ್ಮನಿರತಾ ನೈವ ನರಕಾರ್ಹಾ ಹರಿಸ್ಮೃತೇಃ ॥ ೧೦೪ ॥**

---

೧೦೦. ಶಿವ, ಶಂಕರ, ರುದ್ರ, ಈಶ, ನೀಲಕಂಠ, ತ್ರಿಲೋಚನ ಎಂಬುದಾಗಿಯಾದರೂ ಹೇಳುವವರನ್ನು ಕಲಿಯು ಬಾಧಿಸುವುದಿಲ್ಲ.

೧೦೧. ಮಹಾದೇವ, ವಿರೂಪಾಕ್ಷ, ಗಂಗಾಧರ, ಮೃಡ, ಅವ್ಯಯ ಎಂಬುದಾಗಿ ಹೇಳುವವರು ಕೃತಾರ್ಥರು. ಸಂದೇಹವಿಲ್ಲ.

೧೦೨. ಜನಾರ್ದನ, ಜಗನ್ನಾಥ, ಪೀತಾಂಬರಧರ, ಅಚ್ಯುತ ಎಂಬ ನಾಮಧೇಯಗಳನ್ನು ಉಚ್ಚರಿಸುವವರಿಗೆ ಕಲಿಯ ಭಯವಿಲ್ಲ.

೧೦೩. ಸಂಸಾರದಲ್ಲಿ ಜನರಿಗೆ ಮಕ್ಕಳು, ಹೆಂಡತಿ, ಹಣ ಮುಂತಾದುವುಗಳು ಸುಲಭವಾಗಿ ದೊರೆಯುವುವು. ಬ್ರಾಹ್ಮಣನೇ! ಕೇಳು. ಭಯಂಕರವಾದ ಕಲಿಯುಗದಲ್ಲಿ ಹರಿಭಕ್ತಿಯು ದೊರೆಯುವುದು ಕಷ್ಟ.

೧೦೪. ವೇದೋಕ್ತ ಕರ್ಮಗಳಲ್ಲಿ ಶ್ರದ್ಧೆಯಿಲ್ಲದೇ ವೇದವನ್ನು ನಿಂದಿಸುತ್ತಾ ಅಧರ್ಮನಿರತರಾದ ಪಾಷಂಡಿಗಳೂ ಸಹ ಹರಿಸ್ಮರಣೆಮಾಡಿದರೆ ನರಕಕ್ಕೆ ಹೋಗುವುದಿಲ್ಲ. ಅವರಿಗೂ ಸದ್ಗತಿಯಾಗುವುದೆಂದು ಭಾವ.

ವೇದಮಾರ್ಗಬಹಿಷ್ಕಾನಾಂ ಜನಾನಾಂ ಪಾಪಕರ್ಮಣಾಂ ।
ಮನಃಶುದ್ಧಿವಿಹೀನಾನಾಂ ಹರಿನಾಮ್ನೈವ ನಿಷ್ಕೃತಿಃ ॥ ೧೦೫ ॥

ದೈವಾಧೀನಂ ಜಗತ್ಸರ್ವಮಿದಂ ಸ್ಥಾವರಜಂಗಮಂ ।
ಯಥಾ ಪ್ರೇರಿತಮೇತೇನ ತಥೈವ ಕುರುತೇ ದ್ವಿಜ ॥ ೧೦೬ ॥

ಶಕ್ತಿತಃ ಸರ್ವಕರ್ಮಾಣಿ ವೇದೋಕ್ತಾನಿ ವಿಧಾಯ ಚ ।
ಸಮರ್ಪಯೇನ್ಮಹಾವಿಷ್ಣೌ ನಾರಾಯಣಪರಾಯಣಃ ॥ ೧೦೭ ॥

ಸಮರ್ಪಿತಾನಿ ಕರ್ಮಾಣಿ ಮಹಾವಿಷ್ಣೌ ಪರಾತ್ಮನಿ ।
ಸಂಪೂರ್ಣತಾಂ ಪ್ರಯಾಂತ್ಯೇವ ಹರಿಸ್ಮರಣಮಾತ್ರತಃ ॥ ೧೦೮ ॥

ಹರಿಭಕ್ತಿರತಾನಾಂ ಚ ಪಾಪಬಂಧೋ ನ ಜಾಯತೇ ।
ಅತೋಽತಿದುರ್ಲಭಾ ಲೋಕೇ ಹರಿಭಕ್ತಿರ್ದುರಾತ್ಮನಾಂ ॥ ೧೦೯ ॥

---

೧೦೫. ವೇದವಿಹಿತವಾದ ಮಾರ್ಗವನ್ನು ದೂರಮಾಡಿರುವ, ಪಾಪ ಕರ್ಮಗಳನ್ನೇ ಮಾಡುತ್ತಿರುವ, ಚಿತ್ತಶುದ್ಧಿಯಿಲ್ಲದ ಜನರಿಗೆ ಹರಿನಾಮಸ್ಮರಣೆಯೇ ತಾರಕವು.

೧೦೬. ದ್ವಿಜನಾದ ನಾರದನೇ! ಈ ಚರಾಚರಾತ್ಮಕ ಸಕಲಪ್ರಪಂಚವು ದೈವಾಧೀನವು. ದೈವಪ್ರೇರಣೆಯಿಂದಲೇ ಎಲ್ಲರೂ ಕರ್ಮಮಾಡುವರು.

೧೦೭. ತನ್ನ ಶಕ್ತ್ಯನುಸಾರ ವೇದೋಕ್ತ ಸಕಲಕರ್ಮವನ್ನೂ ಮಾಡಿ ನಾರಾಯಣಧ್ಯಾನನಿರತನಾಗಿ ಮಹಾವಿಷ್ಣುವಿನಲ್ಲಿ ಸಮರ್ಪಿಸಬೇಕು.

೧೦೮. ಉತ್ತಮನಾದ ಮಹಾವಿಷ್ಣುವಿನಲ್ಲಿ ಸಮರ್ಪಿಸಲ್ಪಟ್ಟ ಕರ್ಮಗಳು ಹರಿಸ್ಮರಣೆ ಮಾಡಿದಮಾತ್ರದಿಂದ ಪರಿಪೂರ್ಣವಾಗುತ್ತವೆ.

೧೦೯. ಹರಿಭಕ್ತಿನಿರತರಿಗೆ ಪಾಪವು ಬಂಧಕವಾಗುವುದಿಲ್ಲ. ಆದುದರಿಂದ ಲೋಕದಲ್ಲಿ ದುರಾತ್ಮರಿಗೆ ಹರಿಭಕ್ತಿಯು ಲಭಿಸುವುದು ಕಷ್ಟ.

ಅಹೋ ಹರಿಪರಾ ಯೇ ತು ಕಲೌ ಘೋರೇ ಭಯಂಕರೇ ।
ತೇ ಸುಭಾಗ್ಯಾ ಮಹಾತ್ಮಾನಃ ಸತ್ಸಂಗರಹಿತಾ ಅಪಿ ॥ ೧೧೦ ॥

ಹರಿಸ್ಮರಣನಿಷ್ಠಾನಾಂ ಶಿವನಾಮರತಾತ್ಮನಾಂ ।
ಸತ್ಯಂ ಸಮಸ್ತಕರ್ಮಾಣಿ ಯಾಂತಿ ಸಂಪೂರ್ಣತಾಂ ದ್ವಿಜ ॥ ೧೧೧ ॥

ಅಹೋ ಭಾಗ್ಯಮಹೋ ಭಾಗ್ಯಂ ಹರಿನಾಮರತಾತ್ಮನಾಂ ।
ತ್ರಿದಶೈರಪಿ ತೇ ಪೂಜ್ಯಾಃ ಕಿಮನ್ಯೈರ್ಬಹುಭಾಷಿತೈಃ ॥ ೧೧೨ ॥

ತಸ್ಮಾತ್ಸಮಸ್ತಲೋಕಾನಾಂ ಹಿತಮೇವ ಮಯೋಚ್ಯತೇ ।
ಹರಿನಾಮಪರಾನ್ಮರ್ತ್ಯಾನ್ನ ಕಲಿರ್ಬಾಧತೇ ಕ್ವಚಿತ್ ॥ ೧೧೩ ॥

ಹರೇರ್ನಾಮೈವ ನಾಮೈವ ನಾಮೈವ ಮಮ ಜೀವನಂ ।
ಕಲೌ ನಾಸ್ತ್ಯೇವ ನಾಸ್ತ್ಯೇವ ನಾಸ್ತ್ಯೇವ ಗತಿರನ್ಯಥಾ ॥ ೧೧೪ ॥

---

೧೧೦. ಭಯಂಕರವಾದ ಘೋರಕಲಿಯುಗದಲ್ಲಿ ಸಜ್ಜನಸಂಗವಿಲ್ಲದಿದ್ದಾಗ್ಯೂ ಹರಿಭಕ್ತರು ಸೌಭಾಗ್ಯವಂತರಾದ ಮಹಾತ್ಮರಾಗುವರು.

೧೧೧. ದ್ವಿಜನಾದ ನಾರದನೇ! ಹರಿಸ್ಮರಣೆನಿಷ್ಠರಾಗಿ ಶಿವ ಮುಂತಾದ ನಾಮಗಳನ್ನು ಸ್ಮರಿಸುವವರಿಂದ ಕೃತವಾದ ಸಮಸ್ತ ಕರ್ಮಗಳೂ ಸಹ ನಿಜವಾಗಿಯೂ ಸಂಪೂರ್ಣವಾಗುವುವು.

೧೧೨. ಹರಿನಾಮಧ್ಯಾನನಿರತರಾದವರ ಭಾಗ್ಯವು ಅದ್ಭುತವಾದುದು. ಅವರ ಭಾಗ್ಯವು ಆಶ್ಚರ್ಯಕರವು! ಹೆಚ್ಚು ಮಾತುಗಳಿಂದೇನು? ಅವರು ದೇವತೆಗಳಿಂದಲೂ ಸತ್ಕರಿಸಲ್ಪಡುವರು.

೧೧೩. ಆದಕಾರಣ ಲೋಕಕ್ಕೆಲ್ಲಾ ಹಿತವಾದುದನ್ನೇ ಹೇಳಿದ್ದೇನೆ. ಹರಿನಾಮಸಂಕೀರ್ತನಪರರಾದ ಮನುಷ್ಯರನ್ನು ಕಲಿಯು ಯಾವ ದೇಶಕಾಲಗಳಲ್ಲಿಯೂ ಹಿಂಸಿಸುವುದಿಲ್ಲ.

೧೧೪. ಹರಿನಾಮಸಂಕೀರ್ತನೆ, ನಾಮಸ್ಮರಣೆ, ಧ್ಯಾನ ಇವುಗಳೇ ನನಗೆ ಜೀವನವು. ಕಲಿಯುಗದಲ್ಲಿ ಬೇರೆ ಗತಿಯಿಲ್ಲ. ಇಲ್ಲ. ಇಲ್ಲ.

**ಸೂತ ಉವಾಚ**

**ಏವಂ ಸ ನಾರದೋ ವಿಪ್ರಾಃ ಸನಕೇನ ಪ್ರಬೋಧಿತಃ ।**
**ಪರಾಂ ನಿರ್ವೃತಿಮಾಪನ್ನಃ ಪುನರೇತದುವಾಚ ಹ ॥ ೧೧೫ ॥**

**ನಾರದ ಉವಾಚ**

**ಭಗವನ್ಸರ್ವಶಾಸ್ತ್ರಜ್ಞ ತ್ವಯಾತಿಕರುಣಾತ್ಮನಾ ।**
**ಪ್ರಕಾಶಿತಂ ಜಗಜ್ಜ್ಯೋತಿಃ ಪರಂ ಬ್ರಹ್ಮ ಸನಾತನಂ ॥ ೧೧೬ ॥**

**ಏತದೇವ ಪರಂ ಪುಣ್ಯಮೇತದೇವ ಪರಂ ತಪಃ ।**
**ಯಃ ಸ್ಮರೇತ್ಪುಂಡರೀಕಾಕ್ಷಂ ಸರ್ವಪಾಪವಿನಾಶನಂ ॥ ೧೧೭ ॥**

**ಬ್ರಹ್ಮನ್ನಾನಾಜಗಚ್ಚೈತದೇಕಸ್ಮಿನ್ಸಂಪ್ರಕಾಶಿತಂ ।**
**ತ್ವಯೋಕ್ತಂ ತತ್ಪ್ರತೀಯೇಽಹಂ ಕಥಂ ದೃಷ್ಟಾಂತಮಂತರಾ ॥ ೧೧೮ ॥**

**ತಸ್ಮಾದ್ಯೇನ ಯಥಾ ಬ್ರಹ್ಮ ಪ್ರತೀತಂ ಬೋಧಿತೇನ ತು ।**
**ತದಾಖ್ಯಾಹಿ ಯಥಾ ಚಿತ್ತಂ ಸೀದತ್ಸ್ಥಿತಿಮವಾಪ್ನುಯಾತ್ ॥ ೧೧೯ ॥**

---

೧೧೫. ಸೂತನು ಹೇಳಿದನು—ಶೌನಕಾದಿ ಬ್ರಾಹ್ಮಣರೇ! ಈ ಪ್ರಕಾರವಾಗಿ ನಾರದನು ಸನಕನಿಂದ ಉಪದೇಶಿಸಲ್ಪಟ್ಟವನಾಗಿ, ಉತ್ಕೃಷ್ಟಾನಂದವನ್ನು ಹೊಂದಿ, ಪುನಃ ಹೀಗೆ ಮಾತನಾಡಿದನು.

೧೧೬. ನಾರದನು ಹೇಳಿದನು—ಶಾಸ್ತ್ರತತ್ವವನ್ನೆಲ್ಲಾ ತಿಳಿದ ಪೂಜ್ಯನಾದ ಸನಕನೇ! ಅತಿದಯಾಳುವಾದ ನಿನ್ನಿಂದ ಜಗತ್ಪ್ರಕಾಶಕನಾದ ಅನಾದಿ ಪರಬ್ರಹ್ಮನು ಪ್ರಕಾಶಿಸಲ್ಪಟ್ಟನು.

೧೧೭. ಸಕಲ ಪಾಪಪರಿಹಾರಕರನಾದ ಪುಂಡರೀಕಾಕ್ಷನನ್ನು ಸ್ಮರಿಸುವುದೇ ಮಹಾಪುಣ್ಯಸಾಧನವು. ಇದೇ ಉತ್ತಮವಾದ ತಪಸ್ಸು.

೧೧೮. ಬ್ರಹ್ಮಜ್ಞಾನಿಯಾದ ಸನಕನೇ! ನಾನಾವಿಧವಾದ ಈ ಜಗತ್ತು ಒಬ್ಬ ಪರಬ್ರಹ್ಮನಲ್ಲಿದೆಯೆಂದು ನಿನ್ನಿಂದ ಪ್ರಕಾಶಿತವಾಯಿತು. ಅದನ್ನು ದೃಷ್ಟಾಂತವಿಲ್ಲದೇ ನಾನು ಹೇಗೆ ತಿಳಿಯಲಿ?

೧೧೯. ಆದಕಾರಣ ನೀನು ನಿರೂಪಿಸಿದ ಬ್ರಹ್ಮಸ್ವರೂಪವನ್ನು ಯಾರು ಹೇಗೆ ತಿಳಿದುಕೊಂಡರು. ಅದು ನನ್ನ ಮನಸ್ಸಿನಲ್ಲಿ ಸ್ಥಿರವಾಗಿ ನಿಲ್ಲುವಂತೆ ಬೋಧಿಸು.

ಏತಚ್ಛ್ರುತ್ವಾ ವಚೋ ವಿಪ್ರ ನಾರದಸ್ಯ ಮಹಾತ್ಮನಃ ।
ಸನಕಃ ಪ್ರತ್ಯುವಾಚೇದಂ ಸ್ಮರನ್ನಾರಾಯಣಂ ಪರಂ ॥ ೧೨೦ ॥

ಸನಕ ಉವಾಚ

ಬ್ರಹ್ಮನ್ನಹಂ ಧ್ಯಾನಪರೋ ಭವೇಯಂ
ಸನಂದನಂ ಪೃಚ್ಛ ಯಥಾಭಿಲಾಷಂ ।
ವೇದಾಂತಶಾಸ್ತ್ರೇ ಕುಶಲಸ್ತ್ವಸಾಯಂ
ನಿವರ್ತಯೇದ್ಧ್ವಾಪರಮಾರ್ಯವಂದ್ಯಃ ॥ ೧೨೧ ॥

ಇತೀರಿತಂ ಸಮಾಕರ್ಣ್ಯ ಸನಕಸ್ಯ ಸ ನಾರದಃ ।
ಸನಂದನಂ ಮೋಕ್ಷಧರ್ಮಾನ್ಪ್ರಷ್ಟುಂ ಸಮುಪಚಕ್ರಮೇ ॥ ೧೨೨ ॥

ಇತಿ ಶ್ರೀಬೃಹನ್ನಾರದೀಯಪುರಾಣೇ ಪೂರ್ವಭಾಗೇ ಪ್ರಥಮಪಾದೇ
ನಾಮಮಾಹಾತ್ಮ್ಯಂ ನಾಮೈಕಚತ್ವಾರಿಂಶೋಽಧ್ಯಾಯಃ
ಪ್ರಥಮಪಾದಃ ಸಮಾಪ್ತಃ

---

೧೨೦. ಬ್ರಾಹ್ಮಣನೇ! ಮಹಾತ್ಮನಾದ ನಾರದನ ಈ ಮಾತನ್ನು ಕೇಳಿ, ಸರ್ವೋತ್ತಮನಾದ ನಾರಾಯಣನನ್ನು ಸ್ಮರಿಸಿ ಸನಕನು ಉತ್ತರವನ್ನು ಹೇಳಿದನು.

೧೨೧. ಸನಕನು ಹೇಳಿದನು—ಬ್ರಾಹ್ಮಣನಾದ ನಾರದನೇ! ನಾನು ಇನ್ನು ಧ್ಯಾನನಿಷ್ಠನಾಗುವೆನು. ಆರ್ಯರಿಗೆ ಪೂಜ್ಯನಾದ ಸನಂದನನ್ನು ಯಥೇಷ್ಟವಾಗಿ ಪ್ರಶ್ನೆಮಾಡು. ಅವನು ವೇದಾಂತಶಾಸ್ತ್ರದಲ್ಲಿ ಬುದ್ಧಿವಂತನು, ನಿನ್ನ ಸಂಶಯಗಳನ್ನು ಪರಿಹರಿಸುವನು ಎಂದು ಸನಕನು ಉತ್ತರ ಹೇಳಿದನು.

೧೨೨. ಈ ರೀತಿ ಹೇಳಿದ ಸನಕನ ಮಾತನ್ನು ಆ ನಾರದನು ಕೇಳಿ ಸನಂದನನನ್ನು ಮೋಕ್ಷಧರ್ಮವಿಷಯದಲ್ಲಿ ಪ್ರಶ್ನೆಮಾಡಲಾರಂಭಿಸಿದನು.

ಇಂತು ಶ್ರೀನಾರದೀಯಪುರಾಣದೊಳು ಪೂರ್ವಭಾಗ ಪ್ರಥಮಪಾದದಲ್ಲಿ
ನಾಮಮಾಹಾತ್ಮ್ಯೆಯ ವರ್ಣನೆಯೆಂಬ ನಲವತ್ತೊಂದನೆಯ
ಅಧ್ಯಾಯವು ಮುಗಿದುದು.

## ಕಥಾಸಾರಾಂಶ

ಯುಗಗಳ ಸ್ಥಿತಿಯನ್ನು ಸನಕನು ವಿವರಿಸಿದನು. ಯುಗವಿಭಾಗ, ಅವುಗಳಪರಿಮಾಣಗಳನ್ನು ಹೇಳಿದಮೇಲೆ ಪ್ರತ್ಯೇಕವಾಗಿ ಒಂದೊಂದು ಯುಗಗಳ ಸ್ಥಿತಿಯೂ ಸಂಗ್ರಹಿಸಲ್ಪಟ್ಟಿದೆ. ತರುವಾಯು ನಾರದನು ಕಲಿಯುಗದ ಸ್ಥಿತಿಯನ್ನು ವಿಸ್ತಾರವಾಗಿ ಹೇಳಬೇಕೆಂದು ಕೇಳಿದ್ದರಿಂದ ಅದನ್ನು ವಿಶದಪಡಿಸಿದೆ. ಇಂತಹ ಘೋರಕಲಿಯುಗದಲ್ಲಿ ಜನ್ಮವೆತ್ತಿದವನಿಗೆ ಸದ್ಗತಿಯಾಗುವ ಬಗೆ ಹೇಗೆ? ಕಲಿಯ ಬಾಧೆಯು ತಪ್ಪುವ ಬಗೆ ಹೇಗೆ? ಎಂಬುದನ್ನೂ ಉಪದೇಶಿಸಿ ಇತರ ಯುಗಗಳಿಗಿಂತಲೂ, ಕಲಿಯುಗದಲ್ಲಿ ಸ್ವಲ್ಪ ಸಾಧನೆಯಿಂದ ಹೆಚು ಫಲವು ಲಭಿಸುವುದು. ಈಯುಗದಲ್ಲಿ ಭಗವನ್ನಾಮಸಂಕೀರ್ತನೆಯು ಮುಖ್ಯಸಾಧನೆಯು. ಅದರಿಂದ ಸದ್ಗತಿಯನ್ನು ಪಡೆಯಬಹುದು. ಅದನ್ನು ಮಾಡುತ್ತಿರುವವರನ್ನು ಕಲಿಯು ಬಾಧಿಸಲಾರನು ಮುಂತಾಗಿ ಹರಿನಾಮಮಹಿಮೆಯು ವರ್ಣಿತವಾಗಿದೆ. ಇದನ್ನೆಲ್ಲಾ ಕೇಳಿ ಪರಮಾನಂದಭರಿತನಾಗಿ ನಾರದನು ಇನ್ನೂ ವಿವರಗಳನ್ನು ಮೋಕ್ಷಧರ್ಮಗಳನ್ನೂ ಸಹ ಪುನಃ ಕೇಳಲು ಸನಕನನು ನಾನು ಇನ್ನು ಧ್ಯಾನಪರನಾಗುವೆನು. ಜ್ಞಾನಿವರ್ಯನಾದ ಸನಂದನನನ್ನು ಕೇಳು. ಆವನು ಎಲ್ಲವನ್ನೂ ಉಪದೇಶಿಸಿ ನಿನ್ನ ಸಂಶಯಗಳನ್ನು ಪರಿಹರಿಸುವನು ಎಂದು ಹೇಳಿದನು. ತರುವಾಯು ನಾರದನು ಸನಂದನನ್ನು ಪ್ರಶ್ನೆ ಮಾಡಲು ಉದ್ಯುಕ್ತನಾದನು.

|| ಮಂಗಳಂ ||

**ಇಂತು ಪ್ರಥಮಪಾದವು ಕೊನೆಗಂಡಿತು.**



Printed by Y. R. Ranga Rao, Proprietor,
Sri Chamundeswari Electric Press, Mysore.